# ಹೊರಡುವ ಮುನ್ನ

1973 ರಲ್ಲಿ ನನ್ನ ಕೊನೆಯ ಮಗ ರಾಮು, "ಅಮೆರಿಕಕ್ಕೆ ಬಂದು ನಾಲ್ಕು ತಿಂಗಳಿದ್ದು ಹೋಗು" ಎಂದು ಕಾಗದ ಬರೆದ, ಆಗ ಅವನಿದ್ದುದು ಷಿಕಾಗೋವಿನ ಉಪನಗರವಾದ ನೈಲ್ಸ್ (Niles)ನಲ್ಲಿ. 20-30 ವರ್ಷಗಳ ಕೆಳಗೆ ಇಂಥ ಆಹ್ವಾನ ಬಂದಿದ್ದರೆ ಹಿಂದೆಮುಂದೆ ನೋಡದೆ ಒಪ್ಪಿಕೊಳ್ಳುತ್ತಿದ್ದೆ. ಆಗ ನನಗೆ ಪ್ರಯಾಣದ ಹುಚ್ಚು ಬಲವಾಗಿಯೇ ಹಿಡಿದಿತ್ತು. ರೊಮ್ಯಾಂಟಿಕ್ ಮನೋವೃತ್ತಿಯು ದೂರದೇಶಗಳಿಗೆ ಎಲ್ಲೂ ಇಲ್ಲದ ಪ್ರಭೆಯನ್ನೂ ವರ್ಣಸಂಪತ್ತನ್ನೂ—the light that never was on sea or land (ನೆಲದ ಮೇಲೂ, ಜಲದ ಮೇಲೂ ಎಂದೂ ಇರದಿದ್ದ ಕಾಂತಿಯನ್ನು) ತಂದು ಒದಗಿಸುತ್ತದೆಯಷ್ಟೆ. ಪಾಶ್ಚಾತ್ಯ ಸಾಹಿತ್ಯಕ್ಕೆ ಬಹುಮಟ್ಟಿಗೆ ಮತ್ತು ಸಂಸ್ಕೃತಿಗೆ ಸ್ವಲ್ಪ ಮಟ್ಟಿಗೆ ಒಲಿದ ನನ್ನ ಮನಸ್ಸಿನಲ್ಲಿ ಪಶ್ಚಿಮದ ಸೌಂದರ್ಯ ನೂರು ಪಾಲು ಹೆಚ್ಚಿತ್ತು. ನಾನು ನೋಡದಿರುವ ಇಂಗ್ಲೆಂಡಿನ ಮತ್ತೂ ಯೂರೋಪಿನ ಆಕರ್ಷಣೆ ಇಂದೂ ಬಹುಮಟ್ಟಿಗೆ ಹಿಂದಿನಂತೆಯೇ ಉಳಿದಿದೆ.

ಆದರೂ ವಯಸ್ಸಿನ ಮಹಿಮೆಯಿಂದಾಗಿ ಈಗ ಪ್ರಯಾಣದ ವಿಷಯದಲ್ಲಿ ಉತ್ಸಾಹವಿಲ್ಲ. ಅಲ್ಲದೆ ಪರದೇಶದ ಪ್ರಯಾಣವೆಂದರೆ ಒಂದು ಟ್ರಂಕು ಒಂದು ಚೀಲ ಕೈಯಲ್ಲಿ ಹಿಡಿದು 'ಜಯ ಪರಮೇಶ್ವರಿ' ಮಂತ್ರವನ್ನು ಜಪಿಸಿ ಹಾರಿಹೋಗುವಂತಿಲ್ಲ; ಪಾಸ್‌ಪೋರ್ಟ್ ಪಡೆಯಬೇಕು; ಅದಕ್ಕಾಗಿ ಹತ್ತಾರು ಕಾಗದ ಪತ್ರಗಳನ್ನು ಹೊಂದಿಸಿಕೊಳ್ಳಬೇಕು. "ಇವನು ಭಾರತದ ಮಾನ ಕಳೆಯುವಂಥ ಠಕ್ಕನಲ್ಲ" ಎಂದು ಪೋಲೀಸಿನವರಿಂದ ಸರ್ಟಿಫಿಕೇಟು ಪಡೆಯಬೇಕು. "ನಾನು ಪರದೇಶದಲ್ಲಿ ಸತ್ತರೆ ನನ್ನ ಹೆಣವನ್ನು ಸಾಗಿಸಿ ದಫನ್ ಮಾಡುವುದಕ್ಕೆ ತಗಲುವ ಹಣ ನನ್ನ ಆಸ್ತಿಯಿಂದಲೇ ಏಳುತ್ತದೆ, ಅಷ್ಟು ಆಸ್ತಿ ನನಗಿದೆ" ಎಂದು ಮುಚ್ಚಳಿಕೆ ಬರೆದುಕೊಡಬೇಕು; ಅಥವಾ ನನ್ನ ಹೆಣದ ವಿಷಯದಲ್ಲಿ ಅಷ್ಟು ಆಸ್ಥೆ ವಹಿಸುವ ಮತ್ತೊಬ್ಬರಿಂದ ಬರೆಸಿಕೊಡಬೇಕು. ಅದನ್ನು ತೆಗೆದುಕೊಂಡು ಹೋಗಿ ಗುಮಾಸ್ತನೊಬ್ಬನ ಮೇಜಿನ ಮುಂದೆ ಅವನು ಪ್ರಸನ್ನನಾಗಿ ನನ್ನ ಕಡೆ ತಿರುಗುವವರೆಗೆ—ಅಂದರೆ ನಾನು ಕಸಕ್ಕಿಂತ ಕಡೆ ಎಂಬ ವಿಷಯ ನನಗೆ ಮಂದಟ್ಟಾಗುವವರೆಗೆ—ಕಾದು ನಿಲ್ಲಬೇಕು, ಆಮೇಲೆ ಗುಮಾಸ್ತನಿಂದ ಆಫೀಸರ ಬಳಿಗೆ, ಆಫೀಸರಿಂದ ಗುಮಾಸ್ತನ ಬಳಿಗೆ

ಲಾಳಿ ಹಾಕುತ್ತ ಎರಡು–ಮೂರು ತಿಂಗಳು ಕಳೆದರೆ ಪಾಸ್‌ಪೋರ್ಟ್ ಸಿಕ್ಕೀತು. ಇತ್ತೀಚೆಗೇನೊ ಈ ಕೆಲಸ ಸುಲಭ ಸಾಧ್ಯವಾಗಿದೆಯಂತೆ—ದೇವರು ದೊಡ್ಡವನು!

ಇದೆಲ್ಲಾ ಆದ ಮೇಲೆ ವೀಸಾ ಪಡೆಯುವ ಕೆಲಸ. ಅದಕ್ಕೂ ಕಾಗದ ಪತ್ರಗಳನ್ನು ಹೊಂದಿಸಿಕೊಳ್ಳಬೇಕು. ಕೆಲವು ವರ್ಷಗಳ ಹಿಂದಿದ್ದ ನಿಯಮಗಳ ಪ್ರಕಾರ "ನಿಮ್ಮ ದೇಶದ ಅಧ್ಯಕ್ಷರನ್ನು ಖೂನಿ ಮಾಡುವ ಉದ್ದೇಶವೇನೂ ನನಗಿಲ್ಲ; ಹಾಗೆ ಮಾಡಲು ನಾನು ಪ್ರಯತ್ನಿಸುವುದಿಲ್ಲ" ಎಂದು ಮತ್ತೊಂದು ಮುಚ್ಚಳಿಕೆಯನ್ನು ಬರೆದುಕೊಡಬೇಕಾಗಿತ್ತೆಂದು ಕೇಳಿದ್ದೇನೆ.

ವೀಸಾ ವಿಷಯದಲ್ಲಿ ನನ್ನ ಮೊದಲ ಅನುಭವ—1964ರ ಮಾತು—ಉತ್ಸಾಹಕರ ಎನ್ನಲಾಗದಿದ್ದರೂ ಅಹಿತವಾದದ್ದಲ್ಲ. ಆಗ ನಾನು ಪೂರ್ವದೇಶವೊಂದಕ್ಕೆ ಹೊರಟಿದ್ದೆ. ನಾನು ಮಾತಾಡಿದ್ದು ಆ ದೇಶದ ಕಾನ್ಸಲ್ ನೊಡನೋ ಅಥವಾ ಗುಮಾಸ್ತನೊಡನೋ ಇಂದಿಗೂ ನನಗೆ ತಿಳಿಯದು. ಆತ ತಾನೇ ಆ ಕಚೇರಿಯ ಕಾನ್ಸಲ್ ಎಂಬಂತೆ ಮಾತಾಡಿದ:

"ನೀವು ನಮ್ಮ ದೇಶಕ್ಕೆ ಹೋಗುವುದು ಯಾತಕ್ಕೆ?"

"ನನ್ನ ಮಗನ ಜೊತೆ ಸ್ವಲ್ಪ ಕಾಲ ಇರುವುದಕ್ಕೆ."

"ಅವರೇತಕ್ಕೆ ಅಲ್ಲಿಗೆ ಹೋದರು?"

"ಯೂನೋ (U.N.O.) ತಜ್ಞರಾಗಿ ಅಲ್ಲಿ ಕೆಲಸದಲ್ಲಿದ್ದಾರೆ."

"ನಿಮ್ಮ ಯೋಗಕ್ಷೇಮ ಅವರೇ ನೋಡಿಕೊಳ್ಳುತ್ತಾರೆ ಅಂತ ಖಾತರಿಯುಂಟೊ?"

"ಉಂಟು. ಇಗೋ ನನ್ನ ಮಗ್ಗುಲಲ್ಲೇ ನಿಂತಿದ್ದಾರೆ. ಅವರನ್ನೇ ಕೇಳಿ." ಇದೆಲ್ಲ ನಮ್ಮ ಅರ್ಜಿಯಲ್ಲಿ ಕಾಣಿಸಿದ್ದ ವಿಷಯವೇ. ಆದರೆ ಆತನಿಗೆ ದರ್ಪ ತೋರಿಸುವುದಕ್ಕೂ "ನೀನು ಬದುಕಿದರೆ ನನ್ನ ಕೃಪೆಯಿಂದ ಬದುಕಬೇಕು" ಎಂದು ಸ್ಪಷ್ಟಪಡಿಸುವುದಕ್ಕೂ ಅವಕಾಶ ಬೇಕಲ್ಲ! ನಿಯಮಾವಳಿಯ ಪುಸ್ತಕವೊಂದನ್ನು ನಮ್ಮ ಕಣ್ಣಮುಂದೆ ಹಿಡಿದು ಹೇಳಿದ:

"You see the rule is ಎಗೆನ್‌ಸ್ತ್ (against) you. (ನೋಡಿದಿರಾ? ನಮ್ಮ ನಿಯಮ ನಿಮಗೆ ವಿರುದ್ಧವಾಗಿದೆ.) ನಾನು ಆ ನಿಯಮವನ್ನು ಓದಲೇ ಇಲ್ಲ, ಅವನ ಬಾಯಲ್ಲಿ 'ಟ'ಕಾರ 'ಡ'ಕಾರಗಳು 'ತ'ಕಾರ 'ದ' ಕಾರಗಳಾಗಿ ಮಾರ್ಪಾಟಾಗುತ್ತಿದ್ದ ವೈಖರಿಯ ಮೇಲೇ ನನ್ನ ಗಮನ. 'ಬತ್ ಐ ದೋಂತ್ ವಾಂತ್ ತು ಸ್ತ್ಯಾಂದ್ ಬಿತ್ವೀನ್ ಫಾದರ್ ಎಂದ್ ಸನ್, ಐ ಷಲ್ ಪುತ್ ದಿಸ್ ಆ್ಯಸ್ ಎ ಸ್ಪೆಷಲ್ ಕೇಸ್ ಬಿಫೋರ್ ಎ ಕಮಿತಿ!

ಯು ಕಮ್ ತೂಮಾರೊ.' (But I don't want to stand between father and son. I shall put this as a special case before a committee. You come tomorrow. "ತಂದೆ ಮಕ್ಕಳ ನಡುವೆ ಅಡ್ಡ ನಿಲ್ಲಲು ನನಗೆ ಇಷ್ಟವಿಲ್ಲ. ಇದೊಂದು ವಿಶೇಷ ಸಂದರ್ಭ ಎಂದು ಪರಿಗಣಿಸಿ ಇದನ್ನು ಒಂದು ಸಮಿತಿಯ ಮುಂದೆ ಇಡುತ್ತೇನೆ. ನೀವು ನಾಳೆ ಬನ್ನಿ.")

ಮಾರನೆಯ ದಿನ ಹೋದಾಗ ಆ (ಕಾಲ್ಪನಿಕ?) ಕಮಿಟಿ ಆಗ ತಾನೆ ಸೇರುವುದರಲ್ಲಿತ್ತಂತೆ. "Please come ತೂಮಾರೊ. ("ದಯವಿಟ್ಟು ನಾಳೆ ಬನ್ನಿ.")

ತುಮಾರೊ ಹೋದಾಗ (ಆ ವೇಳೆಗೆ U.N.O. ಕಚೇರಿಯಿಂದ ಆತನಿಗೆ ಸಂದೇಶವೊಂದು ಹೋಗಿತ್ತು.) ಆತ ಕಿವಿಯಿಂದ ಕಿವಿಯವರೆಗೆ ಬೃಹತ್ಪ್ರಮಾಣದ ಮುಗುಳುನಗೆಯನ್ನು ನಗುತ್ತ, "I am ಗ್ಲ್ಯಾಡ್ (glad). Have a pleasanತ್ ಟೈಮ್ with your son." (ಬಹಳ ಸಂತೋಷ. ನಿಮ್ಮ ಮಗನೊಡನೆ ನೀವಿರುವ ಕಾಲ ಆನಂದದಾಯಕವಾಗಲಿ.) ಎಂದು ಹೇಳಿ ವೀಸಾವನ್ನು ಕೈಯಲ್ಲಿಟ್ಟ. ಪಾಸ್‌ಪೋರ್ಟಿಗಾಗಿ ಪಟ್ಟಷ್ಟು ಪಾಡು ಇಲ್ಲಿ ಪಡಬೇಕಾಗಲಿಲ್ಲ. ಕಾನ್ಸುಲೇಟ್‌ಗೆ ಮೂರು ಬಾರಿಗಿಂತ ಹೆಚ್ಚಾಗಿ ತಿರುಗಬೇಕಾಗಲಿಲ್ಲ; ಅಲ್ಲದೆ ಆತನ ಮಾತಿನಲ್ಲಿ ಸಭ್ಯ ಮರ್ಯಾದೆಯಿತ್ತು.

ರಾಮುವಿನ ಆಹ್ವಾನ ಬಂದಾಗ ಇದೆಲ್ಲ ನೆನಪಿಗೆ ಬಂತು. "ಈ ಪರದಾಟ ನನ್ನಿಂದ ಸಾಧ್ಯವಿಲ್ಲ. ಇಷ್ಟು ದಿನ ನನ್ನ ಭೇಟಿಯಿಲ್ಲದಿದ್ದರೂ ಅಮೆರಿಕನ್ನರು ಹೇಗೊ ಬದುಕನ್ನು ನೂಕುತ್ತಿದ್ದರಲ್ಲವೆ? ಇನ್ನು ಮುಂದೂ ಹಾಗೇ ನೂಕಲಿ!" ಎಂದು ಕಾಗದ ಬರೆದುಬಿಡೋಣ ಎನ್ನಿಸಿತು. ಆದರೆ ನನ್ನ ಎರಡನೆಯ ಸೊಸೆ ನ್ಯಾನ್ಸಿಗೆ (Nancy) ನಾನು ಆಹ್ವಾನವನ್ನು ಒಪ್ಪಿಕೊಳ್ಳಲಿ ಎಂದು ಅಪೇಕ್ಷೆ. ನನಗೂ ನನ್ನ ಮೊಮ್ಮಗ ಸುನೀಲನನ್ನು ನೋಡಬೇಕೆಂದು ಆಸೆ—ಅದನ್ನು ನ್ಯಾನ್ಸಿ ಬಲ್ಲಳು! ನನ್ನ ಆಸಕ್ತಿಯನ್ನು ಕೆರಳಿಸಲು,

"ನಿಮ್ಮ ಮೊಮ್ಮಗನನ್ನು ನೋಡಬೇಡವೆ? ಡಯಾನಳ (Diana—ನನ್ನ ಕೊನೆಯ ಸೊಸೆ) ಮನೆಯಲ್ಲಿ ಕೆಲವು ದಿನ ಇರಬೇಡವೆ? ಹೋಗಿಬನ್ನಿ" ಎಂದಳು.

"ಸರಿಯೆ. ನಿನ್ನ ತಂದೆತಾಯಿಯರ ಪರಿಚಯ ಮಾಡಿಕೊಳ್ಳುವುದು ಅಷ್ಟೇನೂ ಮುಖ್ಯವಲ್ಲ ಅನ್ನು!"

"ಹಾಗೆಂದೆನೆ! ಆ ಮಾತು ನಿಮ್ಮಿಂದಲೇ ಬರಲಿ ಎಂದು ಕಾದಿದ್ದೆ."

ನ್ಯಾನ್ಸಿ ತನ್ನ ತಂದೆತಾಯಿಯರನ್ನು ನೋಡಿ 8–9 ವರ್ಷಗಳಾಗಿದ್ದವು. ಹಲವಾರು ಕಾರಣಗಳಿಂದಾಗಿ ಅವಳೇ ಅಮೆರಿಕಕ್ಕೆ ಹೋಗಿಬರುವುದು ಸಾಧ್ಯವಿರಲಿಲ್ಲ. ನಾನು ಹೋದರೆ ಎರಡೊಂದು ಕೆಲಸವಾದಂತೆ; ನಾನು ಮಗನ ಮನೆಯಲ್ಲಿದ್ದದೂ ಆಗುತ್ತದೆ, ಆವಳ ತಂದೆತಾಯಿಯರ ಯೋಗಕ್ಷೇಮವನ್ನು ಸ್ವತಃ ತಿಳಿದು ಬರಬಹುದು ಎಂದು ಅವಳ ಯೋಚನೆ. ನಾನು ರಾಮುವಿನ ಮಗ ಮೂರು ವರ್ಷದ ಸುಸೀಲನನ್ನು ನೋಡಿಯೇ ಇರಲಿಲ್ಲ. ಅವನು ಇಂಗ್ಲೆಂಡಿನಲ್ಲಿ ಹುಟ್ಟಿದವನು. ನಾನು ಕರ್ನಾಟಕದ ಗಡಿ ದಾಟುವ ಹೊತ್ತಿಗೆ ನನಗೆ ಮೂವತ್ತು ವರ್ಷ. ನನ್ನ ಮೊಮ್ಮಕ್ಕಳಿಬ್ಬರು ನಡೆಯುವುದನ್ನು ಕಲಿಯುವುದಕ್ಕೆ ಮುಂಚೆಯೇ ಇಂಗ್ಲೆಂಡು, ಅಮೆರಿಕ, ಎಲ್ಲಾ ಮುಗಿಸಿಬಿಟ್ಟಿದ್ದಾರೆ. ಇದನ್ನು ನೆನೆದ ನನ್ನ ಮನಸ್ಸಿನಲ್ಲಿ ಮಾತ್ಸರ್ಯದ ಎಳೆಯೂ ಒಂದಿತ್ತೇನೊ. ಅಂತೂ ಹೊರಡಬೇಕೆಂದು ನಿಶ್ಚಯಿಸಿದೆ.

ಈ ಸಾರಿಯೇನೋ ಪಾಸ್‌ಪೋರ್ಟಿಗಾಗಲಿ ವೀಸಾವಿಗಾಗಲಿ ಹೆಚ್ಚು ತೊಂದರೆಯಾಗಲಿಲ್ಲ. ಸರ್ಕಾರದವರು ಪಾಸ್‌ಪೋರ್ಟಿನ ನಿಯಮಗಳನ್ನು ಸ್ವಲ್ಪ ಸಡಿಲಿಸಿದ್ದರು; ಅಲ್ಲದೆ ಮಿತ್ರರೊಬ್ಬರ ನೆರವಿನಿಂದ ಕೆಲಸ ಸುಲಭವಾಯಿತು. ಪಾಸ್‌ಪೋರ್ಟನ್ನೂ ವೀಸಾ ಅರ್ಜಿಯನ್ನೂ ಅಮೆರಿಕನ್ ಕಾನ್ಸುಲೇಟ್‌ಗೆ ಕಳಿಸಿದ ಒಂದು ವಾರದೊಳಗಾಗಿ ವೀಸಾ ಮನೆಯ ಬಾಗಿಲಿಗೇ ಬಂತು. “ಕಾಯುಲಾರೆನೊ ಕೃಷ್ಣ ಕಂಡವರ ಬಾಗಿಲನು” ಎಂದು ಅಳಬೇಕಾಗಲಿಲ್ಲ!

## ನ್ಯೂಯಾರ್ಕಿನಲ್ಲಿ

ನಾನು ಪ್ರಯಾಣ ಹೊರಟದ್ದು ದೊಡ್ಡದೊಂದು ಶಸ್ತ್ರಚಿಕಿತ್ಸೆ ಮಾಡಿಸಿಕೊಂಡ ತರುಣದಲ್ಲಿ. ದೇಹದಲ್ಲಿ ನಿಶ್ಶಕ್ತಿ; ದಾರಿಯಲ್ಲೇನಾದರೂ ತೊಂದರೆಯಾದರೇನು ಗತಿ ಎಂಬ ಭಯವೂ ಕಾಡುತ್ತಿತ್ತು. ಸಾಮಾನ್ಯವಾಗಿ ಮನುಷ್ಯನ ಜೀವಮಾನಕಾಲ ಎಪ್ಪತ್ತು ವರ್ಷ (‘three score and ten,’) ಎಂದು ಕ್ರೈಸ್ತರ ಸತ್ಯವೇದ ಹೇಳುತ್ತದೆ. ಆ ವೇಳೆಗಾಗಲೇ ನಾನು ವಿಧಿಯ ಕಣ್ಣು ಮರಸಿ ಮೂರು ವರ್ಷ ಕೊಸರನ್ನು ಬಳಸಿಕೊಂಡಾಗಿತ್ತು. ಇನ್ನು ಯಾವ ಘಳಿಗೆಯಲ್ಲಿ ಏನಾದರೇನಂತೆ! ಅಮೆರಿಕಕ್ಕಾದರೂ ಸಿದ್ಧ, ಅಪರಕರ್ಮಕ್ಕಾದರೂ ಸಿದ್ಧ ಎಂದು ಸಮಾಧಾನ ಹೇಳಿಕೊಂಡೆನಾದರೂ ಮನಸ್ಸಿನ ಸ್ಥಿತಿ ಇಳಿಮುಖವಾಗಿಯೇ ಇತ್ತು. ಪ್ಲೇನು ಹೊರಡುವ ಮುನ್ನ ಗಗನಸಖಿ

ಎಲ್ಲರಿಗೂ ಪೆಪ್ಪರಮೆಂಟು ಹಂಚುವುದುಂಟಷ್ಟೆ. ಅದನ್ನು ಬಾಯಿಗೆ ಹಾಕಿಕೊಂಡು 10 ಸೆಕೆಂಡು ಕಳೆಯುವುದರೊಳಗೆ ನನ್ನ ದುಮ್ಮಾನ ಮಂತ್ರಶಕ್ತಿಯಿಂದಲೋ ಎಂಬಂತೆ ಹರಿದುಹೋಯಿತು. ನನ್ನ ದೇಹದಲ್ಲಿ ಸಕ್ಕರೆಯ ಕೊರತೆಯಿದ್ದು ಅದರಿಂದ ಮನಸ್ಸು ದುರ್ಬಲವಾಗಿದ್ದಿರಬೇಕು !

ವಿಮಾನಯಾನದಲ್ಲಿ ವೇಗ ಹೆಚ್ಚು, ಅದು ಬೇಗ ಮುಗಿಯುತ್ತದೆ. ಅದುರಾಟ ಉರುಲಾಟಗಳಿಂದ ಮೈ ಜರ್ಝರಿತವಾಗುವುದಿಲ್ಲ. ಇದಿಷ್ಟೇ ಅದರಲ್ಲಿರುವ ಗುಣ. ಆ ಕಡೆ, ಈ ಕಡೆ, ಮೇಲ್ಗಡೆ ಕೆಳಗಡೆ ಏನೂ ಕಾಣುವುದಿಲ್ಲ; ವಿಮಾನ ಚಲಿಸುತ್ತಿದೆಯೆಂಬುದರ ಅನುಭವವೂ ಆಗುವುದಿಲ್ಲ. ಲಂಡನ್ ಬಿಟ್ಟು ನ್ಯೂಯಾರ್ಕನ್ನು ತಲಪುವವರೆಗೆ ವಿಮಾನ ಎಲ್ಲೂ ನಿಲ್ಲುವುದು ಕೂಡಾ ಇಲ್ಲವಷ್ಟೆ. ಆ ಏಳು ಘಂಟೆಯ ಕಾಲ ಮುಗಿಯುವುದರೊಳಗೆ ನನಗೆ ಮೈಪರಚಿಕೊಳ್ಳುವಷ್ಟು ಬೇಸರವಾಗಿತ್ತು. ನ್ಯೂಯಾರ್ಕ್ ಷಿಕಾಗೊ ಮುಂತಾದ ಭಾರಿ ವಿಮಾನ ಬಂದರುಗಳಲ್ಲಿ ನೀವು ವಿಮಾನದಿಂದ ಮೆಟ್ಟಲಿಳಿದು ಟಾರ್‌ಮ್ಯಾಕಿನ ಮೇಲೆ ಹೋಗಬೇಕಾದ ಅವಶ್ಯಕತೆಯಿಲ್ಲ. ಒಂದು ಕೊಠಡಿಯಿಂದ ಮತ್ತೊಂದಕ್ಕೆ ಹೋಗುವ ಹಾಗೆ ನೇರವಾಗಿ ವಿಮಾನದಿಂದ ಕಟ್ಟಡದೊಳಕ್ಕೆ ಹೆಜ್ಜೆಯಿಡುವಂತೆ ವ್ಯವಸ್ಥೆಮಾಡಿದ್ದಾರೆ. ಲಗೇಜು ಬಂದಮೇಲೆ ಒಂದುಕೈಯಲ್ಲಿ ಸೂಟ್‌ಕೇಸನ್ನೂ ಇನ್ನೊಂದರಲ್ಲಿ ಚೀಲವನ್ನೂ ಹೊತ್ತು—ಸಾಮಾನ್ಯವಾಗಿ ಅಲ್ಲಿ ಯಾರೂ ಪೋರ್ಟರುಗಳಿಗೆ ಹಣ ತೆರುವುದಿಲ್ಲ—ತೆರಿಗೆಯ ಉಕ್ಕಡದ ಕಡೆಗೆ ಸಾಗಿದೆ, ಅಲ್ಲಿ ಎಷ್ಟು ಹೊತ್ತು ಕಾಯಬೇಕಾಗುತ್ತೋ ಎಂದು ಹೆದರುತ್ತ. ನನ್ನ ಸರದಿ ಬಂದಾಗ ತೆರಿಗೆಯ ಅಧಿಕಾರಿಗೆ ಸೂಟ್‌ಕೇಸಿನ ಬೀಗದಕೈಯನ್ನು ಕೊಡಹೋದೆ. ಆತ ಒಂದು ಕ್ಷಣ ಮುಖ ನೋಡಿ "you are not the type" ಎಂದು ನಕ್ಕು ಹೋಗಬಹುದೆಂದು ಸನ್ನೆ ಮಾಡಿದ. ನನ್ನಂಥ ಪ್ರಾಣಿಗೆ ಕಳ್ಳಸಾಗಾಣಿಕೆ ಮಾಡುವಷ್ಟು ದಾಷತ್ತು ಎಲ್ಲಿಂದ ಬರಬೇಕು ಎಂದುಕೊಂಡನೇನೊ! ಅವನ ಸೌಜನ್ಯಕ್ಕಾಗಿ ವಂದಿಸಿ ಹೊರಡುವುದರಲ್ಲಿದ್ದಾಗ ಆತ ಜ್ಞಾಪಿಸಿಕೊಂಡು "ನೀವು ಗಿಡ, ಬೀಜ ಮುಂತಾದ್ದೇನನ್ನೂ ತಂದಿಲ್ಲವಷ್ಟೆ?" ಎಂದು ಕೇಳಿದ. "ಏನೂ ಇಲ್ಲ" ಎಂದು ತಲೆ ಅಲ್ಲಾಡಿಸಿ ಲೌಂಜಿನ ಬಳಿಗೆ ಬಂದೆ. ಆ ವೇಳೆಗೆ ನಾನು ಕಟ್ಟಡದೊಳಗೇ ಅರ್ಧ ಮೈಲಿ ನಡೆದಿದ್ದಿರಬಹುದು!

ನನ್ನ ತಂಗಿಯ ಮಗಳು ಡಾಕ್ಟರ್ ಗಿರಿಜ, ಅವಳ ಗಂಡ ಡಾಕ್ಟರ್ ಗೋಪಾಲಸ್ವಾಮಿ, ಇಬ್ಬರೂ ಬಂದು ನನ್ನ ಕೈಯಿಂದ ಸೂಟ್‌ಕೇಸನ್ನೂ ಚೀಲವನ್ನೂ—ನಾನು ಅರೆಮನಸ್ಸಿನಿಂದ ಕೇವಲ ಮರ್ಯಾದೆಗಾಗಿ 'ಬೇಡ ಬೇಡ' ಎಂದದ್ದನ್ನು ಲೆಕ್ಕಿಸದೆ—ಕಸಿದುಕೊಂಡು ಕಾರಿನ ಬಳಿಗೆ ಕರೆ

ದೊಯ್ದರು. ನ್ಯೂಯಾರ್ಕಿನಲ್ಲಿ ನನ್ನ ಮೊಟ್ಟಮೊದಲ ಅನುಭವ—ನಿದ್ದೆ! ನಾನು ಅಲ್ಲಿಗೆ ತಲಪಿದ್ದು ಮಧ್ಯಾಹ್ನ ಮೂರೂಕಾಲು ಘಂಟೆಗೆ, ನನ್ನ ಮನಸ್ಸಿಗೇನೊ ಆ ಕಾಲದ ಅರಿವಿತ್ತು. ಆದರೆ ನನ್ನ ದೇಹಕ್ಕಿದ್ದ ಅರಿವು ಇಂಡಿಯದ ಕಾಲದ್ದು—ಇಂಡಿಯದಲ್ಲಿ ಆಗ ಬೆಳಗಿನ ಜಾವ! ಕಾರಿನಲ್ಲಿ ಕುಳಿತದ್ದೇ ತಡ, ತೂಕಡಿಸುವುದಕ್ಕೆ ಷುರು. "ನೀವು ನ್ಯೂಯಾರ್ಕಿಗೆ ಬಂದದ್ದು ತಕ್ಕಡಿ ತೂಗುವುದಕ್ಕಲ್ಲ, ಕಣ್ಣು ಬಿಡಿ" ಎಂದು ಗೋಪಾಲಸ್ವಾಮಿ ನಕ್ಕರಂತೆ. ಅದು ನನಗೆ ತಿಳಿದದ್ದು ಕೂಡ ಮನೆಗೆ ಹೋಗಿ ಕಾಫಿ ಕುಡಿದ ಮೇಲೆ.

ಅವರಿದ್ದದ್ದು ಬ್ರುಕ್ಲಿನ್‌ನ ಏಳೆಂಟು ಅಂತಸ್ತುಳ್ಳ ಅಪಾರ್ಟ್‌ಮೆಂಟ್ ಮನೆಯೊಂದರಲ್ಲಿ. ಕಾಫಿ ಕುಡಿಯುತ್ತಿದ್ದಾಗ ಗಿರಿಜ "ನಿಮಗೆ ಈ ಮನೆ ನೋಡಿ ಬೇಸರವಾಗುತ್ತೇನೊ. ಬೇರೆ ಮನೆ ಹುಡುಕುತ್ತಿದ್ದೇವೆ" ಎಂದಳು. ನನಗೆ ನಗು ಬಂತು. "ಅಮೆರಿಕಕ್ಕೆ ಬಂದ ಮೇಲೆ ನೀನು ಕೊಬ್ಬಿಹೋಗಿದ್ದೀಯೆ. ಬೆಂಗಳೂರಿನ ನಮ್ಮ ಮನೆಯನ್ನೂ ರಾಯಚೂರಿನ ನಿಮ್ಮಪ್ಪನ ಮನೆಯನ್ನೂ ಜ್ಞಾಪಿಸಿಕೊ" ಎಂದೆ.

ಗೋಪಾಲಸ್ವಾಮಿ ನನ್ನ ಕಡೆಗೇ ಮಾತಾಡಿದರು: "ನೀವು ಹೇಳಿದ್ದು ಸರಿ. ಇಲ್ಲಿಯ ಮನೆ ಎಷ್ಟು ಚೆನ್ನಾಗಿದೆ ಅಂತ ಜಂಬ ಕೊಚ್ಕೋದಕ್ಕೆ ಇವಳು ಆ ಮಾತು ತೆಗೆದದ್ದು!"

ವಿಶಾಲವಾದ ದಿವಾನಖಾನೆ, ಕೊಠಡಿಗಳು, ಮಿರಮಿರನೆ ಮಿಂಚುವ ಅಡಿಗೆಮನೆ ಮತ್ತು ಸ್ನಾನದ ಮನೆ—ಅಮೆರಿಕನ್ನರ ಕಣ್ಣಿಗೆ ಹೇಗಾದರೂ ಕಾಣಲಿ, ನನಗೇನೋ ಮನೆ ಚೆನ್ನಾಗಿಯೇ ಕಂಡಿತು. ಬ್ರುಕ್ಲಿನ್‌ನಲ್ಲಿ ಆಗಾಗ ಕಳ್ಳತನ, ದರೋಡೆ, ಖೂನಿ, ನಡೆಯುವುದುಂಟಂತೆ. ಅದಕ್ಕೋಸ್ಕರ ಗೋಪಾಲಸ್ವಾಮಿ ಬೇರೆ ಕಡೆ ಮನೆ ಮಾಡುವ ಯೋಚನೆಯಲ್ಲಿದ್ದರು.

ಸಂಜೆ ನಾನು ನ್ಯೂಯಾರ್ಕ್ ತಲಪಿದ ವಿಷಯವನ್ನು ರಾಮುವಿಗೆ ತಿಳಿಸಿದ್ದಾಯಿತು; ಫೋನಿನಲ್ಲಿ ಸುನೀಲನ ದನಿಯನ್ನು ಕೇಳಿದ್ದಾಯಿತು. ಮಾರನೆಯ ದಿನ ಭಾನುವಾರ. ಊರೊಳಗೆ ಇರುವ ಹಿಂದೂ ದೇವಾಲಯಕ್ಕೆ ಹೋಗುವ ಕಾರ್ಯಕ್ರಮ. ಅದು ಇರುವ ಭಾಗದ ಹೆಸರು ಮರೆತುಹೋಗಿದೆ. (ನಾನು ನ್ಯೂಯಾರ್ಕ್ ವಿಷಯ ಬರೆಯುತ್ತಿರುವುದು ಅದನ್ನು ಬಿಟ್ಟು ಆರು ತಿಂಗಳಾದ ಮೇಲೆ). ಅವತ್ತು ಅಲ್ಲಿ ಗೋಪಾಲಸ್ವಾಮಿಯದೇ ಸೇವಾರ್ಥ; ಕಡಲೆಗುಗ್ಗರಿ ಮಾಡಿಸಿದ್ದರು. ಕರ್ಣಾಟಕದ ಗಣಪತಿ ಮಂಗಳಾರತಿಯ ನೆನಪು ತಂದ ಈ ಹಳೆಯ ಕಾಲದ ಚರಪು ನನಗೆ ಯಾವ ಪಂಚಭಕ್ಷ್ಯ ಪರಮಾನ್ನಕ್ಕಿಂತ ಹಿತವಾಗಿತ್ತು. ಅಲ್ಲಿಗೆ ಬಂದಿದ್ದವರು ಸುಮಾರು 40–50 ಜನ.

ಎಲ್ಲರೂ ಅರ್ಧ ಘಂಟೆ ಭಜನೆ ಮಾಡಿದರು. ಯಾರೋ ಒಬ್ಬಾಕೆ ಪುರಂದರ ದಾಸರ ಕೃತಿಯೊಂದನ್ನು ಇಂಪಾಗಿ ಹಾಡಿದರು. ಭಜನೆಯಾದ ಮೇಲೆ ಕೆಲವು ಶ್ಲೋಕಗಳ ಪಠನ. 'ವಸುದೇವಸುತಂ ದೇವಂ,' ಎಂಬುದರಿಂದ ಮೊದಲು ಮಾಡಿಕೊಂಡು ಪ್ರತಿ ಶ್ಲೋಕದ ಕೊನೆಯಲ್ಲೂ 'ಕೃಷ್ಣಂ ವಂದೇ ಜಗದ್ಗುರುಂ' ಎಂದು ಹೇಳುವ ಪರಿಪಾಠ. ಮೊದಲು ಒಬ್ಬರು

ವಸುದೇವಸುತಂ ದೇವಂ ಕಂಸಚಾಣೂರಮರ್ದನಂ ।
ದೇವಕೀಪರಮಾನಂದಂ.........

ಇದಿಷ್ಟನ್ನು ಶ್ಲೋಕ ಹೇಳುವ ರೀತಿಯಲ್ಲಿ ಗಮಕಿಸುವುದು, ಆಮೇಲೆ ಎಲ್ಲರೂ ಒಟ್ಟಿಗೆ "ಕೃಷ್ಣಂ। ವಂದೇ। ಜಗದ್। ಗುರುಂ।" ಎಂದು ತಾಳ ಕುಟ್ಟಿಕೊಂಡು ಹಾಡುವುದು—ಸ್ವಲ್ಪ ನಗೆ ಬರಿಸಿದ ಈ ವೈಖರಿ ಇನ್ನೂ ನೆನಪಿನಲ್ಲಿದೆ.

ಆ ಗುಡಿಗೆ ಗೋಪುರವೇನೂ ಇಲ್ಲ; ಸಾಧಾರಣವಾದ ಮನೆಯಂತಿದೆ. ದೊಡ್ಡದು ಮಾಡಿ ಗೋಪುರ ಕಟ್ಟಬೇಕೆಂದಿದ್ದಾರೆಯಂತೆ. ಅಂತೂ ತಲೆತುರಿಸಿಕೊಳ್ಳಲು ವ್ಯವಧಾನವಿಲ್ಲದ ಈ ದೇಶದಲ್ಲಿ ವಾರಕ್ಕೊಂದು ಸಲವಾದರೂ ಜನರನ್ನು ವ್ಯವಹಾರದಿಂದ ನಮ್ಮ ಧರ್ಮದ ಕಡೆಗೆ ಎಳೆಯುವಂಥ ಸಂಸ್ಥೆಯೊಂದು ಏರ್ಪಟ್ಟಿದೆಯಲ್ಲ, ಅದನ್ನು ಕಂಡು ಆನಂದವಾಯಿತು.

ಅಂದು ಸಂಜೆ ಡಾ|| ಎಚ್. ಕೆ. ಚಂದ್ರಶೇಖರರ ಆತಿಥ್ಯ. ಚಂದ್ರಶೇಖರ ಎಂದರೆ—ಚಿಕ್ಕಮಗುವಾಗಿದ್ದಾಗಿನಿಂದಲೂ ನನಗೆ ಪರಿಚಿತನಾದ ಶೇಖರಿ; ಅರ್ಧ ಶತಮಾನದ ಕಾಲ ನನ್ನ ಆಪ್ತಮಿತ್ರರಾಗಿದ್ದು ಸ್ವಲ್ಪ ಕಾಲದ ಕೆಳಗೆ ತೀರಿಕೊಂಡ ಎಚ್. ಸಿ. ಕೆ. ಭಟ್ಟರ ಮಗ, ಭಟ್ಟರದ್ದೂ ನನ್ನದೂ ವೈಯಕ್ತಿಕ ಸ್ನೇಹ ಮಾತ್ರವಲ್ಲ, ಮನೆತನದ ಸ್ನೇಹ. ಅವರು ನನ್ನಲ್ಲಿಟ್ಟಿದ್ದ ವಿಶ್ವಾಸವನ್ನು ಶೇಖರಿ ಹಾಗೆಯೇ ಮುಂದುವರಿಸಿಕೊಂಡು ಬಂದಿದ್ದಾನೆ. ಅವನನ್ನೂ ಅವನ ಪತ್ನಿ ಶ್ರೀದೇವಿಯವರನ್ನೂ ಕಾಣುವುದೆಂದರೆ ನನಗೆ ಬಹಳ ಆನಂದದ ವಿಷಯ. ಅವರ ಮನೆಯಲ್ಲಿ ಮಾತುಕಥೆ ನಡೆಯುತ್ತಿದ್ದಾಗಲೇ ಅಮೆರಿಕ ಪ್ರವಾಸದ ದಿನಚರಿ ಬರೆಯಬೇಕೆಂಬ ಯೋಚನೆ ಬಂತು. ಆದರೆ ಬರೆಯುವಷ್ಟು ತ್ರಾಣವಿರಲಿಲ್ಲ. ಅಲ್ಲದೆ ಹಗಲೆಲ್ಲ ನಿದ್ದೆಗಣ್ಣು. ಅರೆನಿದ್ದೆಯಲ್ಲೇ ನ್ಯೂಯಾರ್ಕಿನಲ್ಲಿ ನೋಡಬೇಕಾದವರನ್ನೆಲ್ಲ ನೋಡಿದೆ, ಅವರ ಆತಿಥ್ಯವನ್ನು ಸವಿದೆ. ಗೋಪಾಲಸ್ವಾಮಿ ನನ್ನನ್ನು ಊರಿನಲ್ಲೆಲ್ಲ ಸುತ್ತಿಸಿದರು—ಹಾಗೆಂದು ಅವರ ಮತ್ತು ಗಿರಿಜೆಯ ಹೇಳಿಕೆ; ಅವರು ಸುಳ್ಳು ಹೇಳುವವರಲ್ಲವಾದ್ದರಿಂದ ನಂಬಬಹುದು. ಕಾರಿನಲ್ಲಿ ಕುಳಿತದ್ದು, ಆಗಿಂದಾಗ ಗೋಪಾಲಸ್ವಾಮಿ ಎಚ್ಚರಿಸಿದ್ದು, ರೇಡಿಯೋ ಸಿಟಿಗೆ ಹೋಗಿ ಆಗತಾನೆ ಬಿಡುಗಡೆಯಾಗಿದ್ದ 'ಟಾಮ್ ಸಾಯರ್' ಚಿತ್ರವನ್ನು

ನೋಡಿದ್ದು—ಇಷ್ಟು ಮಾತ್ರ ನನ್ನ ಸ್ವಂತ ಅನುಭವ.

ನ್ಯೂಯಾರ್ಕಿನಲ್ಲಿ ನೋಡಲೇಬೇಕಾದ ದೃಶ್ಯಗಳು ಎರಡಿವೆ. ಮೊದಲನೆಯದು ಎಂಪೈರ್ ಸ್ಟೇಟ್ ಕಟ್ಟಡ. ಇದು ಮೊನ್ನೆ ಮೊನ್ನೆಯವರೆಗೂ ಪ್ರಪಂಚದಲ್ಲಿ ಅತ್ಯುನ್ನತವಾದ ಕಟ್ಟಡ ಎನ್ನಿಸಿಕೊಂಡಿದ್ದು ಈಗ ಆ ಸ್ಥಾನವನ್ನು ಷಿಕಾಗೋವಿನ ಸಿಯರ್ಸ್ (Sears) ಗಗನಚುಂಬಿಗೆ ಬಿಟ್ಟುಕೊಟ್ಟಿದೆ. ಕಟ್ಟಡಕ್ಕಿಂತ ಹೆಚ್ಚಾಗಿ ಅದರ ಕೊನೆಯ ಮಾಡದಿಂದ ರಾತ್ರಿ ಕಾಣುವ ನ್ಯೂಯಾರ್ಕಿನ ವಿಹಂಗಮ ದೃಶ್ಯ ನೋಡಬೇಕಾದದ್ದು. ಕೆಂಪು ಹಾವುಗಳಂತೆ ಸಂತತವಾಗಿ ಚಲಿಸುತ್ತಿರುವ ಸಾವಿರಾರು ಕಾರುಗಳ ಹಿಂದೀಪಗಳ ತುದಿ ಮೊದಲಿಲ್ಲದ ಸಾಲು; ಹತ್ತಾರು ಬಣ್ಣಗಳ ನಿಯಾನ್ ಸೈನುಗಳು; ಸಾವಿರಾರು ಅಡಿ ಮೇಲಕ್ಕೆ ಎದ್ದು ಅಂತರಿಕ್ಷವನ್ನು ಬೆಳಕುಮಾಡಿರುವ ವಿದ್ಯುದ್ದೀಪಗಳ ಪ್ರಭೆ—ಅದೊಂದು ಯಕ್ಷ ಪ್ರಪಂಚ. ಅದರ ಪ್ರಸ್ತಾಪ ಬಂದಾಗ ಸಿಡ್ನಿ ಲೊ (Sidney Low) ರಚಿಸಿದ ವ್ಯಂಗ್ಯ ಚಿತ್ರವೊಂದರ ನೆನಪಾಗುತ್ತದೆ. ಆ ನಗರದ ಜನರೆಲ್ಲರಿಗೂ ಪಾಪಜೀವನವನ್ನು ಕಲಿಸಿ ಉತ್ತರೋತ್ತರ ಅವರನ್ನು ನರಕಕ್ಕೆ ಸೆಳೆದುಕೊಳ್ಳಬೇಕೆಂದು ಸೈತಾನ ಒಂದು ರಾತ್ರಿ ಹಾರಿ ಬಂದು ಎಂಪೈರ್ ಸ್ಟೇಟ್ ಕಟ್ಟಡದ ಶಿಖರದಲ್ಲಿ ಕುಳಿತ; ಅಲ್ಲಿಯ ನಿಶಾಜೀವನವನ್ನು ನೋಡಿದ. ನೋಡುತ್ತ ನೋಡುತ್ತ ಕೇಡಿಗರಲ್ಲಿ ತಾನೇ ಅಗ್ರಗಣ್ಯ ಎಂಬ ಆತನ ಹೆಮ್ಮೆ ಕರಗಿ ಹೋಯಿತು. ಅಚ್ಚರಿಗೊಂಡು, ನಮ್ರನಾಗಿ, "Well, live and learn, live and learn!" (ಬದುಕು, ಕಲಿ; ಬದುಕು, ಕಲಿ!) ಬದುಕಿದ್ದಷ್ಟೂ ಇನ್ನೂ ಕಲಿಯಬೇಕಾದದ್ದು ಗೋಚರಿಸುತ್ತಲೇ ಇರುತ್ತದೆ ಎಂದು, ಇದರ ಭಾವಾರ್ಥ) ಎಂದುಕೊಂಡು ಅಲ್ಲಿಂದ ಹಾರಿಹೋದ. ಕೇಡಿಗತನದಲ್ಲಿ ನ್ಯೂಯಾರ್ಕಿನವರು ಅವನಿಂದ ಕಲಿಯಬೇಕಾದ್ದು ಏನೂ ಇರಲಿಲ್ಲ, ಸೈತಾನನೇ ಅವರಿಂದ ಕಲಿಯಬೇಕು!

ಅಲ್ಲಿ ನೋಡಬೇಕಾದ ಇನ್ನೊಂದು ದೃಶ್ಯ: ನ್ಯೂಯಾರ್ಕ್ ಕೊಲ್ಲಿಯಲ್ಲಿರುವ ಬೆಡ್ಲೊ (Bedloe, ಇದಕ್ಕೆ ಸ್ವಾತಂತ್ರ್ಯ ದ್ವೀಪ ಎಂಬ ಹೆಸರೂ ಉಂಟು) ದ್ವೀಪದ ಮೇಲಿರುವ ಸ್ವಾತಂತ್ರ್ಯದೇವಿಯ ಪ್ರತಿಮೆ. ಮೇಲೆತ್ತಿರುವ ಬಲಗೈಯಲ್ಲಿ ಸ್ವಾತಂತ್ರ್ಯ ಜ್ಯೋತಿಯನ್ನು ಹಿಡಿದು ಹೆಮ್ಮೆಯಿಂದ ನಿಂತಿರುವ ಭವ್ಯ ಸ್ತ್ರೀಮೂರ್ತಿ, ಅದು. ನಕ್ಷತ್ರದಿಂದ ಕಿರಣಗಳು ಹೊರಡುವಂತೆ ಅದರ ಕಿರೀಟದಿಂದ ಶಲ್ಯಗಳು ಹೊರಟುಕೊಂಡಿವೆ. ಇದಕ್ಕಿಂತ ದೊಡ್ಡ ಪ್ರಮಾಣದ ಪ್ರತಿಮೆ ಪ್ರಪಂಚದಲ್ಲೆಲ್ಲೂ ಇಲ್ಲವಂತೆ. ಈ ಪ್ರತಿಮೆಯ ಎತ್ತರ 151 ಅಡಿ. ಪೀಠವೂ ಸೇರಿ ಮೇಲಕ್ಕೆ ಚಾಚಿರುವ ಕೈಯ ತುದಿಯವರೆಗಿನ ಎತ್ತರ 305

ಅಡಿ. ಅಲ್ಲಿಯವರೆಗೂ ಹತ್ತಿ ಹೋಗುವಂತೆ ಒಳಗೇ ಮೆಟ್ಟಲುಗಳಿವೆ. ಪ್ರತಿಮೆಯ ತಲೆಯ ಮೇಲೆ 50 ಜನ ಏಕಕಾಲದಲ್ಲಿ ನಿಲ್ಲಬಹುದು.

ಅಮೆರಿಕದ ದಿನದಿನದ ಜೀವನದಲ್ಲಿ ನಿಜವಾದ ಸ್ವಾತಂತ್ರ್ಯ ಎಷ್ಟಿದೆಯೋ ನಾನು ಅಳೆದು ನೋಡಿಲ್ಲ—ಬಹುಶಃ ಭಾರತದ ಇಂದಿನ ದಿನದಿನದ ಜೀವನ ದಲ್ಲಿ ಆಧ್ಯಾತ್ಮಿಕತೆ ಎಷ್ಟು ಉಳಿದಿದೆಯೋ ಅದಕ್ಕಿಂತ ಹೆಚ್ಚೇ ಇರಬಹುದು. ಅದು ಹೇಗಾದರೂ ಇರಲಿ, ಸ್ವಾತಂತ್ರ್ಯದ ಆದರ್ಶವಾದರೂ ಜೀವಂತ ವಾಗಿದೆಯೆಂಬುದರ ಪ್ರತೀಕ, ಆ ಪ್ರತಿಮೆ. ಆ ಭವ್ಯಮೂರ್ತಿಯನ್ನು ನೋಡಿ ದವರಲ್ಲಿ ಸ್ವಾತಂತ್ರ್ಯಪ್ರೇಮ ಉಕ್ಕಿ ಬರದಿದ್ದರೆ ಆಶ್ಚರ್ಯ. ಅದನ್ನು ನೋಡ ದವರು ಪಾಪಿಗಳು, ಅಂಥ ಪಾಪಿಗಳಲ್ಲಿ ನಾನೂ ಒಬ್ಬ.

ನ್ಯೂಯಾರ್ಕಿನಲ್ಲಿ ನನಗೆ ಎಲ್ಲಕ್ಕಿಂತ ಹೆಚ್ಚು ತೃಪ್ತಿಕೊಟ್ಟ ಅನುಭವ— ಅದಕ್ಕೂ ಆ ನಗರಕ್ಕೂ ಸಂಬಂಧವೇ ಇಲ್ಲ—ಗಿರಿಜಳೊಡನೆಯೂ ಗೋಪಾಲ ಸ್ವಾಮಿಯೊಡನೆಯೂ ಮನದಣಿಯ ಆಡಿದ ಮಾತು. ಅವರಿಬ್ಬರೂ ಭಾರತ ವನ್ನು ಬಿಟ್ಟು ಕೆಲವು ವರ್ಷಗಳು ಕಳೆದಿದ್ದವು. ಆ ಅವಧಿಯಲ್ಲಿ ನಮ್ಮ ನಮ್ಮ ಸಂಸಾರಕ್ಕೆ ಸಂಬಂಧಪಟ್ಟಂತೆ ತೀರ ದಾರುಣವಾದ ಕೆಲವು ಘಟನೆಗಳು ನಡೆದುಹೋದವು. ನನ್ನ ಹೆಂಡತಿ ತೀರಿಕೊಂಡಳು; ನನ್ನ ಭಾವ (ಗಿರಿಜಳ ತಂದೆ) ತೀರಿಕೊಂಡ; ನನ್ನ ಕೊನೆಯ ತಮ್ಮ ತೀರಿಕೊಂಡ. ಇವರೆಲ್ಲರದೂ ಅಕಾಲ ಮರಣ. ಎಲ್ಲರೂ ಪರಿಶುದ್ಧವಾದ ಜೀವನ ನಡಸಿದವರು; ಅನುಕಂಪ ತುಂಬಿದಹೃದಯವುಳ್ಳವರು; ಕೈಯೊಡ್ಡಿ ಬೇಡಿದವರಲ್ಲ, ಕೈಯೆತ್ತಿ ಕೊಟ್ಟವರು; ತಮ್ಮ ಸುತ್ತ ಪ್ರೇಮದ ರಾಜ್ಯವನ್ನೇ ಸ್ಥಾಪಿಸಿದವರು. ನಾನು ನ್ಯೂಯಾರ್ಕಿ ನಲ್ಲಿದ್ದ ಒಂದು ವಾರವೂ ನಮ್ಮ ಮಾತಿನಲ್ಲಿ ಬಹುಭಾಗ ಅವರ ಸದ್ಗುಣಗಳ, ಸತ್ಕಾರ್ಯಗಳ, ಸರಳ ಮಾನವತೆಯ ನೆನಪಿಗೆ ಮೀಸಲಾಯಿತು

ನಾವು ಇತರರ ಜೊತೆಯಲ್ಲಿರುವಾಗ ಅವರಿಗೆ ದುಃಖದ ನೆನಪು ತರು ವಂಥ ಮಾತನ್ನು ಆಡಬಾರದೆಂಬ ಭಾವನೆ ಪಾಶ್ಚಾತ್ಯರಲ್ಲಿದೆ. ಆದರೆ ಅದು ಎಲ್ಲ ಸಂದರ್ಭಗಳಲ್ಲೂ ಸರಿಯೆಂದು ಹೇಳಲಾಗುವುದಿಲ್ಲ. ನನಗೆ ಅಮೆರಿಕದಲ್ಲಿ ಎಲ್ಲ ಹೊಸದು. ಹೊಸದನ್ನು ನೋಡುವುದರಲ್ಲಿ ಆನಂದವುಂಟು; ಗಿರಿಜಳನ್ನೂ ಗೋಪಾಲಸ್ವಾಮಿಯನ್ನೂ ಕಂಡು ಬಹಳ ವರ್ಷಗಳಾಗಿದ್ದವು—ಮತ್ತೆ ಸಂಧಿ ಸಿದಾಗ ನನಗೂ ಅವರಿಗೂ ಆನಂದವಾಗಬೇಕು, ಆಗಿಯೂ ಆಯಿತು. ಆ ಆನಂದದ ಸಮಯದಲ್ಲಿ ಮರೆಯಬೇಕಾದ ದುಃಖವನ್ನು ಏತಕ್ಕೆ ಬರಮಾಡಿ ಕೊಂಡೆವೊ! ಜೀವನದ ವೈಚಿತ್ರ್ಯಗಳಲ್ಲಿ ಇದೂ ಒಂದು: ಆ ನೆನಪುಗಳೂ ದುಃಖವೂ ಮರುಕಳಿಸಿ ಬರದಿದ್ದರೆ ನಮ್ಮ ಆನಂದ ಅಪೂರ್ಣವಾಗುತ್ತಿತ್ತು!

# ಷಿಕಾಗೊ–ನೈಲ್ಸ್

ನ್ಯೂಯಾರ್ಕ್‌ನಲ್ಲಿ ಮೇ ತಿಂಗಳ ಹವ ಹಿತವಾಗಿಯೇ ಇರುವಂತೆ ತೋರುತ್ತದೆ. ಹವದ ಗುಣವೋ ನನ್ನ ಸೋದರಸೊಸೆಯ ಆತಿಥ್ಯದ ಪ್ರಭಾವವೋ– ಅಂತೂ ಅಲ್ಲಿದ್ದ ಒಂದು ವಾರ ಮುಗಿಯುವುದರೊಳಗೆ ಆರೋಗ್ಯದ ವಿಷಯದಲ್ಲಿ ನನಗಿದ್ದ ಅಳುಕು ಮಾಯವಾಗಿತ್ತು. ನನಗೊಂದು ದೇಹವಿದೆ ಎಂಬ ಭಾವನೆ ಪದೇಪದೇ ಬರುತ್ತಿದ್ದರೆ ಏನೋ ರೋಗವಿದೆ ಎಂದರ್ಥ; ದೇಹದ ಇರುವಿಕೆಯನ್ನು ಮರೆಯುವುದು ಸಾಧ್ಯವಾದರೆ ಅದೇ ಆರೋಗ್ಯ. ಈಗ ನಾನು ಈ ಎರಡನೆಯ ಸ್ಥಿತಿಯನ್ನು ತಲಪುತ್ತಿದ್ದೇನೆ.

ಇಲ್ಲಿಗೆ ಮೊನ್ನೆ 13ನೆಯ ತಾರೀಖು ಬಂದೆ. ವೇಳಾಪಟ್ಟಿಯ ಪ್ರಕಾರ ನ್ಯೂಯಾರ್ಕ್‌ನಿಂದ ಷಿಕಾಗೋವಿಗೆ ಕೇವಲ ಒಂದು ಘಂಟೆಯ ಪ್ರಯಾಣ —11 ಘಂಟೆಗೆ ಅಲ್ಲಿ ಬಿಟ್ಟು 12ಕ್ಕೆ ಇಲ್ಲಿಗೆ ತಲಪಬಹುದು. ಆದರೆ ಷಿಕಾಗೋವಿನಲ್ಲಿ ಚಾಲತಿಯಲ್ಲಿರುವುದು ಮಧ್ಯಪಶ್ಚಿಮ (mid–west) ಕಾಲ. ಇಲ್ಲಿ ಹನ್ನೆರಡು ಎನ್ನುವುದು ನ್ಯೂಯಾರ್ಕಿನ ಒಂದು ಘಂಟೆ.

ಲೌಂಜಿನ (lounge) ಬಳಿ ರಾಮು ಸುನೀಲ ಡಯಾನ ಎಲ್ಲ ಕಾದಿದ್ದರು; ಸಾಮಾನುಗಳನ್ನು ಮಾತ್ರವಲ್ಲದೆ ನನ್ನನ್ನೂ ತಮ್ಮ ವಶಕ್ಕೆ ತೆಗೆದುಕೊಂಡರು. ಈ ವಯಸ್ಸಿನಲ್ಲಿ ಹೀಗೆ ನಮ್ಮನ್ನು ಯಾರಾದರೂ ವಶಕ್ಕೆ ತೆಗೆದುಕೊಂಡರೆ ಹಿತವೆಂದೇ ಹೇಳಬೇಕು. ನಾವು ದೇಹದ ಬಿಗುಪನ್ನು ಸಡಿಲಿಸಿ ಮನಸ್ಸನ್ನು ನಿರಾಳವಾಗಿ ಹರಿಯಬಿಡಬಹುದು.

ಷಿಕಾಗೋವಿನಲ್ಲಿ ಇನ್ನೂ ಸ್ವಲ್ಪ ಚಳಿ; ಹವಾನಿಯಂತ್ರಣವುಳ್ಳ ಕಾರಿನಲ್ಲಿ ಕೂರುವವರೆಗೂ ನಡುಕವೇ. ಅದುವರೆಗೂ ನನ್ನನ್ನು ಸಂಶಯದೃಷ್ಟಿಯಿಂದ ದಿಟ್ಟಿಸಿ "ಇದು ನೆಚ್ಚತಕ್ಕ ಪ್ರಾಣಿಯೊ ಅಥವಾ.....?" ಎಂದು ತೂಗಿ ನೋಡುತ್ತಿದ್ದ ಸುನೀಲ—ಅವನನ್ನು ನನ್ನ ಮಗ್ಗುಲಲ್ಲೇ ಕೂರಿಸಿದ್ದರು— ನನ್ನ ಕೈಯನ್ನು ತಟ್ಟಿ "you are Tata" (ನೀನು ತಾತ!) ಎಂದ. ಸದ್ಯ, ನನಗೆ ಪರೀಕ್ಷೆಯಲ್ಲಿ ಪಾಸಾಯಿತು! ರಾಮುವೂ ಡಯಾನಳೂ ಅವನಿಗೆ ನನ್ನ ವಿಷಯ ಹೇಳಿಯೇ ಇದ್ದಿರಬೇಕು. ಆದರೆ ಅವನು ಹೇಳಿಕೆಯ (hearsay) ಮಾತನ್ನು ನಂಬುವವನಲ್ಲ, 'ಸ್ವಾನುಭೂತ್ಯೇಕ ಮಾನ!'

ಅವನು ಇಂಗ್ಲಿಷಿನಲ್ಲಿ ಮಾತಾಡಿದ್ದನ್ನು ಕೇಳಿ ಮನಸ್ಸಿನ ಮೂಲೆಯೊಂದರಲ್ಲಿ ಅಸಮಾಧಾನ ಕಾಣಿಸಿಕೊಂಡಿತು. ನನ್ನ ಭಾಷಾಭಕ್ತಿ ಅಷ್ಟೇನೂ

ಹೊಗಳಿಕೊಳ್ಳುವಂಥದಲ್ಲ. ಕೈಲಾಸಂ ಲೇವಡಿಮಾಡಿರುವ (ಕನ್ನಡ ಇಂಗ್ಲಿಷು ಗಳನ್ನು ಬೆರೆಸಿ ಮಾತಾಡುವ) ರೋಗ ಅವರಿಗಿದ್ದಂತೆ ನನಗೂ ಇದೆ—ಪ್ರಾಸ ವಿನಾ, ಆದರೂ ನನ್ನ ಎರಡು ವರ್ಷದ ಮೊಮ್ಮಗ ಇಂಗ್ಲಿಷಿನಲ್ಲಿ ಮಾತಾಡಿಸಿದರೆ, ಮತ್ತು ಅವನನ್ನು ಇಂಗ್ಲಿಷಿನಲ್ಲಿ ಮುದ್ದುಮಾಡಬೇಕಾಗಿ ಬಂದರೆ ಮನಸ್ಸಿಗೆ ಹಿತವಾದೀತೆ? ಅವನದ್ದೇನೂ ತಪ್ಪಿಲ್ಲ, ನನ್ನ ಮಗ ಸೊಸೆಯರದ್ದೂ ತಪ್ಪಿಲ್ಲ; ಪರಿಸ್ಥಿತಿ ಇದ್ದದ್ದು ಹಾಗೆ, ಅಷ್ಟೆ. ಸುನೀಲ ಹುಟ್ಟಿದ್ದು ಇಂಗ್ಲೆಂಡಿನಲ್ಲಿ, ತಾಯಿ ಆಂಗ್ಲಳು; ಇಲ್ಲಿ ಮನೆಯೊಳಗೂ ಹೊರಗೂ ಅವನ ಕಿವಿಗೆ ಸದಾ ಬೀಳುತ್ತಿರುವುದು ಇಂಗ್ಲಿಷು....ಆಯಿತು. ನಾಲ್ಕು ದಿನ ಕಳೆದಮೇಲೆ ಅವನ ಇಂಗ್ಲಿಷ್ ನನಗೆ ಒಪ್ಪಿಹೋಗುತ್ತದೆ; ಅಥವಾ ಅವನಿಗೆ ಕನ್ನಡದ ಋಣವೇನಾದರೂ ಇದ್ದರೆ ಅವನು ಕನ್ನಡ ಕಲಿಯುತ್ತಾನೆ. ನನ್ನ ಅಸಮಾಧಾನವನ್ನು ಹಾಗೇ ಅದುಮಿಕೊಂಡೆ. ರಾಮು, "ನೀನಿರುವಾಗ ಡಯಾನ ಸುನೀಲರಿಬ್ಬರಿಗೂ ಸ್ವಲ್ಪ ಕನ್ನಡ ಕಲಿಸು" ಎಂದ. ಆದರೆ ಅವರು ಇಂಡಿಯಕ್ಕೆ ಬರುವವರೆಗೂ ಅದು ಸಾಧ್ಯವಲ್ಲವೆಂದು ನನಗೆ ಗೊತ್ತು. ಸುನೀಲನೇನೊ ನನ್ನಿಂದ 'ಸಾಕು' ಎಂಬ ಒಂದು ಕನ್ನಡ ಮಾತು ಕಲಿತ. ಅದನ್ನು ಉಪಯೋಗಿಸುತ್ತಿದ್ದ ರೀತಿಗೆ ಒಂದು ಉದಾಹರಣೆ: "ಸಾಕು, give me some more !" (ಸಾಕು, ಇನ್ನು ಸ್ವಲ್ಪ ಕೊಡು !)

ಅವತ್ತೆಲ್ಲ ಮನೆ ಬಿಟ್ಟು ಹೊರಡಲಿಲ್ಲ. ಊಟವಾದ ಮೇಲೆ ಬಿಸಿಲಿನಲ್ಲಿ ಕುರ್ಚಿ ಹಾಕಿಕೊಂಡು ಕುಳಿತು ಹರಟೆ ಬಡಿದೆವು. ನೆರೆಯವರು ಒಬ್ಬಿಬ್ಬರು ಬಂದು ಮಾತಾಡಿಸಿದರು. ಇಲ್ಲಿಗೆ ಬಂದೊಡನೆ ಮೊದಲು ನನ್ನ ಗಮನವನ್ನು ಸೆಳೆದದ್ದು: ರಸ್ತೆ, ಕಾರ್ ಪಾರ್ಕುಮಾಡುವ ಜಾಗ, ತಿರುಗಾಡುವ ಕಾಲು ದಾರಿ, ಮನೆಗಳು, ಮಕ್ಕಳು ಆಡುವ ಸ್ಥಳ, ಹೂವು ಹಸುರುಗಳು—ಇವೆಲ್ಲದರ ವ್ಯವಸ್ಥೆ; ಇವುಗಳ ಪರಸ್ಪರ ಸಂಬಂಧ ಹೇಗಿರಬೇಕೆಂದು ಸಾವಧಾನವಾಗಿ ಆಲೋಚಿಸಿ ಸ್ಥಳವನ್ನು ವಿಂಗಡಿಸಿರುವ ವಿಚಕ್ಷಣೆ. ಇಲ್ಲಿ—ಅಂದರೆ ಅಮೆರಿಕ ದಲ್ಲೆಲ್ಲ ಎಂದರ್ಥವಲ್ಲ; ನೈಲ್ಸ್‌ನ ಈ ಭಾಗದಲ್ಲಿ—ರಸ್ತೆಯ ಉದ್ದಕ್ಕೂ ಎಡ ಬಲಗಳಲ್ಲಿ ಮನೆಗಳಿಗೆ ಬದಲಾಗಿ ರಸ್ತೆಯ ಕಡೆ ಮುಖಮಾಡಿ ಕಾರುಗಳನ್ನು ನಿಲ್ಲಿಸುವ ವ್ಯವಸ್ಥೆ ಮಾಡಿದ್ದಾರೆ. ಒಂದೊಂದು ಮನೆಯವರಿಗೂ ಎರಡೆರಡು ಕಾರು ನಿಲ್ಲಿಸಲು ಅನುಕೂಲವಿರುತ್ತದೆ. ಆ ಸ್ಥಳದಲ್ಲಿ ಮನೆಯ ನಂಬರನ್ನು ಬರೆದಿರುವುದರಿಂದ ಪಾರ್ಕ್ ಮಾಡುವ ಸ್ಥಳಕ್ಕಾಗಿ ಜಗಳ ಬರುವಂತಿಲ್ಲ. ಕಾರನ್ನು ನಿರ್ದಿಷ್ಟ ಸ್ಥಾನದಲ್ಲಿ ನಿಲ್ಲಿಸಿ ಪಾರ್ಕ್ ಮಾಡುವ ಓಣಿಯನ್ನು (parking lane) ದಾಟಿ ಆರು ಅಡಿ ಅಗಲದ ಕಾಲು ದಾರಿಯಲ್ಲಿ ಮನೆಗಳಿಗೆ

ಹೋಗಬೇಕು. ಆ ದಾರಿ ಮನೆಗಳ ಮತ್ತು ಅವುಗಳ ಮುಂದಿರುವ ಹುಲ್ಲು ಗಾವಲಿನ ನಡುವೆ ಹೋಗುತ್ತದೆ. ಮನೆಗಳ ಪಕ್ಕದಲ್ಲೂ ಹುಲ್ಲುಗಾವಲು, ಹೂವಿನ ಗಿಡಗಳು. ಯಾವ ಮನೆಗೂ ಸುತ್ತುಗೋಡೆ ಇಲ್ಲದಿರುವುದರಿಂದ ಹುಲ್ಲುಗಾವಲು ವಿಶಾಲವಾಗಿ ಕಾಣುತ್ತದೆ. ಇಂಥ ಬ್ಲಾಕುಗಳಲ್ಲಿ ಎದುರು ಬದುರಾಗಿ ಆರಾರು ಡೂಪ್ಲೆಕ್ಸ್ ಮನೆಗಳಿರುತ್ತವೆ. ಡೂಪ್ಲೆಕ್ಸ್ ಮನೆಯೆಂದರೆ ಎರಡು ಮನೆಗಳ ಒಂದು ಯೂನಿಟ್. ಬ್ಲಾಕಿನೊಳಗೆ ದಾರಿಯ ಅಗಲ ಆರಡಿ ಮಾತ್ರ ಇರುವುದರಿಂದ ಕಾರು ಅಲ್ಲಿಗೆ ಬರುವ ಮಾತೇ ಇಲ್ಲ. ಅಲ್ಲಿರುವುವೆಂದರೆ ಮಕ್ಕಳ ಟ್ರೈಸಿಕಲ್, ಆಟದ ಮೋಟಾರುಗಳು, ಪ್ಲೇನುಗಳು, ಅವುಗಳನ್ನು ಓಡಾಡಿಸುತ್ತ ಕುಣಿದು ಕುಪ್ಪಳಿಸಿ ಕೆಲೆದು ನಕ್ಕು ನಲಿಯುತ್ತಿರುವ ಮಕ್ಕಳು. ಅವಕ್ಕೆ ಬಣ್ಣಬಣ್ಣದ ಸ್ವೆಟರ್ ಮತ್ತು ಟೋಪಿಗಳನ್ನು ಹಾಕಿರುವುದರಿಂದ ಹುಲ್ಲುಗಾವಲಿನ ಹಿನ್ನೆಲೆಯ ಜೊತೆಗೆ ಈ ವರ್ಣವೈವಿಧ್ಯದ ಸೊಬಗೂ ಸೇರುತ್ತದೆ, ಎರಡರ ಸೌಂದರ್ಯವೂ ಇಮ್ಮಡಿಯಾಗುತ್ತದೆ.

ನಾನು ವಿಮಾನಬಂದರಿನಿಂದ ನೈಲ್ಸ್‌ಗೆ ಬಂದು ಈ ಬ್ಲಾಕಿನೊಳಕ್ಕೆ ಪ್ರವೇಶಿಸಿದಾಗ ಹಠಾತ್ತಾಗಿ ಕಣ್ಣಿಗೆ ಬಿದ್ದದ್ದು ಈ ಮನೋಹರ ದೃಶ್ಯ. ಅಲ್ಲಿದ್ದದ್ದು ಮಕ್ಕಳ ಸಂದಣಿಯಲ್ಲ, ತೋಟದ ಹೂವುಗಳೆಲ್ಲ ಜೀವತಳೆದು ಹಬ್ಬ ಮಾಡಿಕೊಂಡು ನಲಿದಾಡುತ್ತಿವೆ, ಎನ್ನಿಸಿತು; ನೆರೆಯವರೊಬ್ಬರು ಬಂದು ಸ್ವಾಗತಿಸಿ "ನಮ್ಮ ದೇಶ ನಿಮಗೆ ಹಿತವೆನ್ನಿಸಲಿ" ಎಂದಾಗ ನಾನು ಈ ದೃಶ್ಯದ ಕಡೆಗೆ ಕೈಬೀಸಿ "ಹಿತವೆನ್ನಿಸದಿರುವುದು ಹೇಗೆ ಸಾಧ್ಯ?" ಎಂದು ಉತ್ತರಕೊಟ್ಟೆ. ಶಿಲ್ಪಿಗಳು ನಗರದ ಯೋಜನೆಯನ್ನು ರಚಿಸುವಾಗ ಈ ಮಾದರಿಯನ್ನನುಸರಿಸಿದರೆ ಜನಜೀವನ ಈಗಿಗಿಂತ ಹತ್ತುಪಾಲು ಸಂತೋಷ ಕರವಾದೀತು. ಈ ವ್ಯವಸ್ಥೆಯಿದ್ದರೆ ಮನೆಗಳ ಬಳಿ ವಾಹನದ ಸಂಚಾರ ವಿರುವುದಿಲ್ಲ: ಪೆಟ್ರೋಲಿನ ವಾಸನೆಯಿಲ್ಲ, ಧೂಳಿಲ್ಲ; ಮಕ್ಕಳು ಸುರಕ್ಷಿತವಾಗಿ ಓಡಾಡಬಹುದು; ಸುತ್ತಲೂ ಕಣ್ಣಿಗೆ ತಂಪಾಗಿ ಹಸುರಿರುತ್ತದೆ. ಮನೆಗಳ ನಡುವೆ ವಿಶಾಲವಾದ ಜಾಗವಿದ್ದರೂ ಕಾಂಪೌಂಡ್ ಗೋಡೆ ಇಲ್ಲದ್ದರಿಂದ ನೆರೆಹೊರೆಯವರಲ್ಲಿ ಸ್ನೇಹ ಬೆಳೆಯಲು ಅವಕಾಶವುಂಟು. ಈ ವ್ಯವಸ್ಥೆ ಎಲ್ಲ ಕಡೆಯಲ್ಲೂ ಇಲ್ಲವಂತೆ. ಬಹುಶಃ ಹತ್ತು ಹದಿನೈದು ವರ್ಷಗಳಿಂದೀಚೆಗೆ ಹುಟ್ಟಿದ ಬಡಾವಣೆಗಳಲ್ಲಿ ಮಾತ್ರ ಇದನ್ನು ಅನುಸರಿಸಬಹುದು. ನನಗೇನೋ ಇದು ಬಹು ಸೊಗಸಾದ ಏರ್ಪಾಡು ಎನ್ನಿಸಿತು.

ಇಲ್ಲಿರುವ ಮನೆಗಳು ಭವನಶಿಲ್ಪದ ದೃಷ್ಟಿಯಿಂದ ಹೊಗಳಿಸಿಕೊಳ್ಳು ವಂಥವಲ್ಲ; ನಮ್ಮ ಹಳ್ಳಿಗಳಲ್ಲಿ ಎಲ್ಲೆಂದರೆ ಅಲ್ಲಿ ಕಾಣಬಹುದಾದ ಕವಳಿಗೆ

ಮನೆಗಳನ್ನು ಹೋಲುತ್ತವೆ. ನೈಲ್ಸ್‌ನಲ್ಲಿ ಗಗನಚುಂಬಿಗಳಿಲ್ಲ. ಬಲವರ್ಧಿತ ಕಾಂಕ್ರೀಟ್ ತಾರಸಿಯ ಮನೆಗಳು ಅಪರೂಪ. ಬೆಂಗಳೂರಿನ ಬಡಾವಣೆಗಳಲ್ಲಿ ಕಾಣುವ ನಾಲ್ಕಾರು ಚೆಜ್ಜಗಳು, ತಾರಸಿಯ ಮೇಲೆ ಅಲಂಕಾರಕ್ಕಾಗಿ ನಾಡು ಹೆಂಚನ್ನು ಅನುಕರಿಸುವ ತಂತ್ರ, ಸೂರ್ಯನಿರೋಧಿಗಳು (sun-breakers), ಇಲ್ಲೊಂದು ಅಲ್ಲೊಂದು ಮುಂಚಾಚಿಕೊಂಡಿರುವ ಕೊಠಡಿ ಅಥವಾ ವರಾಂಡ, ಅಲಂಕಾರಿಕ ಸ್ತಂಭಗಳು—ಇಂಥ ಅಡಾವುಡಿ ಇಲ್ಲಿ ಕಾಣುವುದೇ ಇಲ್ಲ. ಇದನ್ನೆಲ್ಲ ನೋಡಿದರೆ ನಮ್ಮವರು 'ಇದೇನು ಕಾರ್ಪಣ್ಯ!' ಎಂದರೂ ಎನ್ನಬಹುದು. ಆದರೆ ನಿಜವಾಗಿ ನೋಡಿದರೆ ಇದು ಕಾರ್ಪಣ್ಯ ವಲ್ಲ ; ಸರಳತೆ, ಆಡಂಬರದ ಅಭಾವ.

ಇಲ್ಲಿ ಪ್ರತಿಯೊಂದು ಮನೆಗೂ ನೆಲಮಾಳಿಗೆಯಿದೆಯಂತೆ. ನನಗೆ ಬಿಟ್ಟು ಕೊಟ್ಟಿರುವ ಕೊಠಡಿ ನೆಲಮಾಳಿಗೆಯದೇ. ಹೊರಗಿನ ನೆಲಕ್ಕಿಂತ ಒಂದಡಿ ಎತ್ತರದಲ್ಲಿ, ಒಳಗಿನ ನೆಲಕ್ಕೆ ಸುಮಾರು 4½–5 ಅಡಿ ಎತ್ತರದಲ್ಲಿ ಕಿಟಕಿಗಳಿವೆ. ಗಾಳಿ ಬೆಳಕುಗಳಿಗೆ ಅಭಾವವೇನಿಲ್ಲ. ಅಮೆರಿಕನ್ನರಿಗೆ ನೆಲಮಾಳಿಗೆ ಬಹಳ ಪ್ರಿಯವಿರಬೇಕು. ವೃತ್ತಪತ್ರಿಕೆಗಳಲ್ಲಿ ಈಗ ಎರಡು ಮೂರು ದಿನದಿಂದಲೂ 'ಪೂರ್ತಿ ನೆಲಮಾಳಿಗೆ ಅರ್ಧ ನೆಲಮಾಳಿಗೆ' ಎಂದು ಜಾಹೀರಾತುಗಳು ಕಣ್ಣಿಗೆ ಬೀಳುತ್ತಿವೆ. ನೆಲಮಾಳಿಗೆ ಇರುವ ಮನೆಗಳಿಗೆ ಬೆಲೆ ಹೆಚ್ಚು, ಬಾಡಿಗೆಯೂ ಹೆಚ್ಚು.

ಈ ಮನೆಯಲ್ಲಿ ಮುಖ್ಯವಾಗಿ ನನ್ನ ಗಮನವನ್ನು ಸೆಳೆದ ಭಾಗ ದಿವಾನ ಖಾನೆಯಲ್ಲ, ಸ್ಟಡಿ ಅಲ್ಲ,—ಒಚ್ಚಲ ಮನೆ ಮತ್ತು ಕಕ್ಕಸ! ಅಮೆರಿಕನ್ನರು ಮನೆ ಕಟ್ಟುವಾಗ ಎಲ್ಲಕ್ಕಿಂತ ಹೆಚ್ಚಾಗಿ ಈ ಭಾಗದ ವಿಷಯದಲ್ಲಿ ಜಾಗರೂಕತೆ ವಹಿಸುತ್ತಾರೆ. ಅವರ ಶೌಚಾಗಾರದಲ್ಲಿ ನಾನು ಮೆಚ್ಚುವುದು ಶುಭ್ರತೆಯನ್ನು ಮಾತ್ರ ; ಇತರ ವ್ಯವಸ್ಥೆ ನನಗೆ ಒಗ್ಗದು. ಆ ವಿಷಯದಲ್ಲಿ ನಾನು ಭಾರತೀಯ ನಾಗಿಯೇ ಉಳಿದು 'ಹಿಂದುಸ್ತಾನ್' ವ್ಯವಸ್ಥೆಯೇ ಸರಿ ಎನ್ನುವವನು. ಆದರೆ ಆ ಕೊಠಡಿಯ ಶುಭ್ರತೆ ಹೊಗಳಿಕೆಗೆ ಮೀರಿದ್ದು. ಮಿರಮಿರನೆ ಮಿಂಚುವ ಪೋರ್ಸಿಲೇನ್ ಹೆಂಚು ಕಟ್ಟಿದ ಗೋಡೆ, ತೊಟ್ಟಿ, ಶೌಚ ಕೂಪ. ದೃಷ್ಟಿಯ ಬೊಟ್ಟಾಗಿ ಬಿಟ್ಟದ್ದು ಎನ್ನುವಂಥ ಸಣ್ಣದೊಂದು ಕೊಳೆಯ ಕಲೆಯೂ ಅಲ್ಲಿ ಕಾಣುವುದಿಲ್ಲ. ಇಷ್ಟು ಪರಿಶುದ್ಧವಾಗಿರುವ ಕೊಠಡಿಯಲ್ಲಿ ಕೈ ತೊಳೆದು ಅದನ್ನು ಮಲಿನಮಾಡಬಹುದೆ ಎಂದು ಹಿಂಜರಿಯುವಂತಾಗುತ್ತದೆ. ಅಲ್ಲಿ ನೆಲದ ಮೇಲೆ ಒಂದೇ ಒಂದು ತೊಟ್ಟು ನೀರು ಕಾಣದು. ಸ್ನಾನಮಾಡುವಾಗ ಎರಚ ಲಿಚಲಾಗಿ ನೀರು ಬೀಳದಂತೆ ಸ್ನಾನದ ತೊಟ್ಟಿಯ ಅಂಚಿನ ಮೇಲೆಯೇ

ಗಾಜಿನ ಜಾರುಬಾಗಿಲುಗಳನ್ನು ಕಿಟಕಿಗಳಿಗೆ ನಾವು ಹಾಕಿಸುವ ಜಾರುಬಾಗಿಲು ಗಳಂತೆ—ಹಾಕಿಸಿರುತ್ತಾರೆ. ಅವನ್ನು ಜಾರಿಸಿ ಮುಚ್ಚಿದರಾಯಿತು, ಒಂದು ಹನಿ ನೀರೂ ಹೊರಗೆ ಬೀಳುವುದಿಲ್ಲ.

1940ರ ಸುಮಾರಿನಲ್ಲಿ ಮಲೆನಾಡಿನ ಸಾಹುಕಾರರೊಬ್ಬರು ನನಗೆ ತಮ್ಮ ಮನೆಯ ಸ್ನಾನದ ತೊಟ್ಟಿಯನ್ನು ತೋರಿಸಿದ್ದರು. ಅದು ಸುಮಾರು ಏಳೆಂಟು ಅಡಿ ಚೌಕದ, ಎರಡಡಿ ಆಳದ ತೊಟ್ಟಿ; ಗ್ರ್ಯಾನಿಟ್ ಕಲ್ಲಿನಲ್ಲಿ ಕಟ್ಟಿದ್ದು. ಅವರ ಪೂರ್ವಿಕರು—ಅವರು ಟೈಟನ್ ಜಾತಿಯ ದೈತ್ಯರಿದ್ದಿರ ಬೇಕು!—ಆ ತೊಟ್ಟಿಯ ತುಂಬ ಬಿಸಿನೀರು ತುಂಬಿಕೊಂಡು ಸ್ನಾನಮಾಡು ತ್ತಿದ್ದರಂತೆ. ಪಾಶ್ಚಾತ್ಯರ ಪೋರ್ಸಿಲೇನ್ ತೊಟ್ಟಿಗಳು ಈ ದೈತ್ಯ ಪ್ರಮಾಣ ದವಲ್ಲ. ಅವುಗಳ ಬಣ್ಣ ಸಾಮಾನ್ಯವಾಗಿ 'ಶರಚ್ಚಂದ್ರ ಚಂದ್ರಿಕಾಧವಳ.' ಒಂದೆರಡು ಮನೆಗಳಲ್ಲಿ ಗುಲಾಬಿಗೆಂಪಿನ ಬಣ್ಣವನ್ನೂ ನೋಡಿದ್ದೇನೆ—ಬಹು ಸುಂದರವಾಗಿ ಕಾಣುತ್ತವೆ. ಬಿಸಿನೀರಿನ ಮತ್ತು ತಣ್ಣೀರಿನ ನಲ್ಲಿಗಳನ್ನು ತಿರು ಗಿಸಿಕೊಂಡು ನಿಮಗೆ ಬೇಕಾದ ಹದದ ಬಿಸಿನೀರನ್ನು ತುಂಬಿಕೊಳ್ಳಬಹುದು. ನಾನು ಮೊದಲು ಈ ಬಗೆಯ ಸ್ನಾನ ತಮ್ಮ ಕೊಳೆಯಲ್ಲಿ ತಾವೇ ಬಿದ್ದು ಹೊರಳಾಡುವುದು ಎಂದುಕೊಂಡಿದ್ದೆ. ಪಾಶ್ಚಾತ್ಯರ ಸ್ನಾನಕ್ರಮವೇನೋ ಇಂದಿಗೂ ನನಗೆ ತಿಳಿಯದು. ಅದರ ವಿಷಯ ಪ್ರಶ್ನೆ ಕೇಳಬಹುದೋ ಬಾರದೊ! ಏಕೆಂದರೆ ಇಲ್ಲಿ ಯಾವುದು ಸಭ್ಯ ಯಾವುದು ಅಸಭ್ಯ ಎಂಬುದನ್ನು ನಿರ್ಣ ಯಿಸುವುದು ಕೆಲವು ವೇಳೆ ಕಷ್ಟ. ಹೆಂಗಸರು ಬಿಕಿನಿ ಧರಿಸಿ ಮುಕ್ಕಾಲು ನಗ್ನ ರಾಗಿರಬಹುದಾದ ದೇಶದಲ್ಲಿ ಗಂಡಸರು ಹಿಮ್ಮಡಿ ಮುಚ್ಚ ಪಂಚೆ ಉಟ್ಟು ಕೊಂಡು ಹೊರಟರೆ ಅದು 'ಅಸಭ್ಯ ಪ್ರದರ್ಶನ' (indecent exposure) ಆಗುತ್ತದಂತೆ! ಕೆಲವು ವರ್ಷಗಳ ಕೆಳಗೆ ಹಾಗೆ ಹೊರಟ ಭಾರತೀಯನೊಬ್ಬ ನನ್ನು ದಸ್ತಗಿರಿ ಮಾಡಿದ್ದರಂತೆ—ನಿಜವೊ ಸುಳ್ಳೊ ಕಾಣೆ. ಆದ್ದರಿಂದ ನಾನು ಈ ವಿಷಯ ಪ್ರಶ್ನೆ ಕೇಳಲಿಲ್ಲ.

ಅದು ಹೇಗಾದರೂ ಇರಲಿ. ನಾನು ನನ್ನದೇ ಒಂದು ಸ್ನಾನ ಕ್ರಮವನ್ನು (ಅದು ಹಿಂದೆಯೇ ಪೇಟೆಂಟಾಗಿದ್ದಿರಬಹುದಾದರೂ ನನ್ನ ಸ್ವಂತ ಪ್ರತಿಭೆಗೆ ಹೊಳೆದದ್ದು) ಮೊದಲಬಾರಿಗೇ ಆಚರಣೆಗೆ ತಂದೆ. ತೊಟ್ಟಿಯಲ್ಲಿ ಮೈ ಮುಳುಗುವಷ್ಟು ನೀರು ತುಂಬುವುದು; ಉಷ್ಣತೆ ಯಥಾ ಸುಖಂ. ಆಮೇಲೆ ಗಡಿಯಾರದ ಕಡೆ ತಿರುಗದೆ ಮೈಬೆವರುವವರೆಗೆ, ಮೈಯಿನ ಜಡರೂ ಮನಸ್ಸಿನ ಆಲಸ್ಯವೂ ಕಳೆಯುವವರೆಗೆ ನೀರು ತಣ್ಣಗಾದಂತೆಲ್ಲ ಬಿಸಿನೀರು ಸೇರಿಸುತ್ತ ಮಲಗಿರುವುದು; ಆಮೇಲೆ ಆ ನೀರನ್ನೆಲ್ಲ ಬಿಟ್ಟು ಸಾಬೂನು ಉಜ್ಜಿಕೊಂಡು

ತುಂತುರು ನಲ್ಲಿಯನ್ನು (ಷವರ್) ತಿರುಗಿಸಿ ಕಾಲು ಘಂಟೆ ಅದರ ಕೆಳಗೆ ಕೂತಿರುವುದು; ಒರಸಿಕೊಂಡು ಅರ್ಧ ಘಂಟೆ ಹಾಸಿಗೆಯಲ್ಲಿ ಅಡ್ಡಂಕಿ ಹಾಕಿ ನಿದ್ದೆ ಮಾಡಿಬಿಡುವುದು. ಶ್ರೀ ಕುವೆಂಪು ಅವರು ಕಣ್ಣಿಗೆ ಕಟ್ಟುವಂತೆ ಬಣ್ಣಿಸಿರುವ 'ಅಜ್ಜಯ್ಯನ ಅಭ್ಯಂಜನ' ಈಗ ಸುಲಭಸಾಧ್ಯವಲ್ಲ—ಹಿಂದಿನ ಅಜ್ಜಯ್ಯಗಳು ತಮ್ಮ ಅಭ್ಯಂಜನಕ್ಕಾಗಿ ಮಲೆನಾಡಿನ ಕಾಡುಗಳನ್ನೆಲ್ಲ ಸುಟ್ಟುಹಾಕಿದ್ದಾರೆ. ಅದನ್ನು ಬಿಟ್ಟರೆ ಎರಡನೆಯ ಸ್ಥಾನ ನಾನು ಹೇಳಿದ ಸ್ನಾನ ಕ್ರಮಕ್ಕೆ ಸಲ್ಲಬೇಕು. ಅದು ತೀರ ಸರಳವಾದ ಕ್ರಮ; ಆದರೂ ಸ್ನಾನವಾದ ಮೇಲೆ ಮೈಯಿನ ಬಿಗುಪೆಲ್ಲ ಇಳಿದುಹೋಗುತ್ತದೆ; ನರಗಳು ಸಡಿಲವಾಗುತ್ತವೆ; ಮಲಗಿದೊಡನೆ ನಿದ್ದೆ ಬರುತ್ತದೆ; ಆಲಸ್ಯವೆಲ್ಲ ಕಳೆದು ಮೈಮನಗಳೆರಡೂ ಮತ್ತೊಂದು ಒಬ್ಬೆ ಆಲಸ್ಯಕ್ಕೆ ಸಿದ್ಧವಾಗುತ್ತವೆ. ನಾನು ಇನ್ನೊಂದು ಬಾರಿ ಮನೆ ಕಟ್ಟಿದರೆ, ಅದಕ್ಕಾಗಿ ಸಾಲ ಮಾಡುವುದು ಸಾಧ್ಯವಾದರೆ, ಮತ್ತು ಸಾಲವನ್ನು ತೀರಿಸುವುದು ಅನವಶ್ಯಕವಾದರೆ—ಮೇಲೆ ಬಣ್ಣಿಸಿದಂಥ ಬಚ್ಚಲ ಮನೆಯನ್ನು ಕಟ್ಟಲೇಬೇಕು!

ಬಂದ ದಿನ ಸಂಜೆಯ ಊಟದ ವೇಳೆಗೆ ಸುನೀಲನೊಡನೆ ಸಲಿಗೆ ಚೆನ್ನಾಗಿಯೇ ಬೆಳೆಯಿತು. ಅವನು ತನ್ನ ವಯಸ್ಸಿನ ಮಕ್ಕಳೊಡನೆ ಬೆರೆಯುವುದಕ್ಕಿಂತ ಸುಲಭವಾಗಿ ದೊಡ್ಡವರಲ್ಲಿ ಸಲಿಗೆ ಬೆಳಸುತ್ತಾನೆ. ಮೈಸೂರಿನಲ್ಲಿರುವ ನನ್ನ ನಾಲ್ಕು ವರ್ಷದ ಮೊಮ್ಮಗಳು ಆಶಾ ಪ್ರೀತಿ ತೋರಿಸುವ ವಿಧಾನಕ್ಕೂ ಸುನೀಲನ ವಿಧಾನಕ್ಕೂ ಸ್ಪಷ್ಟವಾಗಿ ಕಾಣುವಂಥ ವ್ಯತ್ಯಾಸವಿದೆ. ಆಶಾ ಕ್ಷಣಮಾತ್ರದಲ್ಲಿ ನನಗೆ ಅನ್ನಸಾರು ಹುಳಿ ಪಲ್ಯ ಒಬ್ಬಟ್ಟು ಪಾಯಸ—ಇವುಗಳ ಭಾರಿ ಔತನ ಮಾಡಿಬಿಡುತ್ತಾಳೆ. ನಳಮಹಾರಾಜ ಕೈಯಲ್ಲಿ ಕಟ್ಟಿಗೆ ಹಿಡಿದರೆ ಬೆಂಕಿ ಹತ್ತುತ್ತಿತ್ತಂತೆ, ಪಾತ್ರೆ ಹಿಡಿದರೆ ನೀರು ತುಂಬುತ್ತಿತ್ತಂತೆ, ದ್ರೌಪದಿ ಅಕ್ಷಯ ಪಾತ್ರೆ ಪಡೆದಿದ್ದಳಂತೆ, ಅವರಿಬ್ಬರನ್ನೂ ಆಶಾ ನಾಚಿಸುತ್ತಾಳೆ. ಅವಳಿಗೆ ಅಕ್ಷಯ ಪಾತ್ರೆಯೂ ಬೇಕಿಲ್ಲ, ಬೆಂಕಿ ನೀರು ಅಕ್ಕಿ ಬೇಳೆ ಮುಂತಾದವೂ ಬೇಕಿಲ್ಲ. 'ಪಾಯಸಾ ಬೇಕಾ?' ಎನ್ನುತ್ತಾ ನನ್ನ ಕಡೆಗೆ ಕೈನೀಡಿದರೆ ಸಾಕು, ನನಗೆ ಪಾಯಸದ ಔತನವಾಯಿತು! ಅದು ಅರೇಬಿಯನ್ ನೈಟ್ಸ್‌ನ ಬಾರ್ಮೆಸೈಡ್ ಮಾದರಿಯ ಔತನ, ನಿಜ. ಆದರೂ ಹೇಗೊ ತೃಪ್ತಿ ಕೊಡುತ್ತದೆ. ಸುನೀಲ ನನಗೇನನ್ನೂ ಬಡಿಸಲಿಲ್ಲ. ತನ್ನ ಟ್ರೈಸಿಕಲ್ಲು, ಅಗ್ನಿಶಾಮಕ ಯಂತ್ರ, ಚೆಂಡು ಇತ್ಯಾದಿಗಳನ್ನು ತಂದು ನನ್ನೆದುರಿಗೆ ಪ್ರದರ್ಶಿಸಿದ. ಆಮೇಲೆ ಟ್ರೈಸಿಕಲ್ ಸವಾರಿಮಾಡುತ್ತ "ಆತಂಕಪಡಬೇಡ ತಾತ, ನಾನು ಕರಕೊಂಡು ಹೋಗ್ತೀನಿ. ಒಂದು ನಿಮಿಷದಲ್ಲಿ ಬಂದು ಬಿಡತೀನಿ!"

("Don't worry Tata, I shall pick you up. I shall be back in a minute!") ಎಂದು ರಕ್ಷಣೆಯ ಆಶ್ವಾಸನೆ ಕೊಟ್ಟ. ಹುಟ್ಟಿದ ಘಳಿಗೆಯಲ್ಲೇ ಗಂಡು ಹೆಣ್ಣುಗಳು ಬೇರೆ ಬೇರೆ ದಾರಿ ಹಿಡಿಯುತ್ತವೇನೊ.

ಊಟವಾದ ಮೇಲೆ ಮೆಕ್‌ಮಿಲನ್ ದಂಪತಿಗಳನ್ನು (ನ್ಯಾನ್ಸಿಯ ತಂದೆ ತಾಯಿಯರು) 'ಕರೆದೆವು'—ಅಮೆರಿಕನ್ನರು 'ಫೋನ್ ಮಾಡು'ವುದಿಲ್ಲ. 'ಕರೆಯು'ತ್ತಾರೆ. ಅವರ ಮಗಳ ಅಳಿಯನ ಮತ್ತು ಮೊಮ್ಮಕ್ಕಳ ಯೋಗ ಕ್ಷೇಮ ತಿಳಿಸಿದ್ದಾಯಿತು. ಈ ತಿಂಗಳು ಕೊನೆಯ ವಾರ ನಾವೆಲ್ಲ ಅವರ ಊರಾದ ಲಿಂಕನ್‌ಗೆ ಹೋಗುವುದೆಂದು ಗೊತ್ತಾಯಿತು.

* * *

ಇಲ್ಲಿಯ ಜೀವನಕ್ರಮದ ಪರಿಚಯ ಹೆಚ್ಚಿದಂತೆ ಇದು ಹೇಗೋ ಅದು ಹೇಗೋ ಎಂಬ ಅನಿಶ್ಚಿತತೆ, ಮನಸ್ಸಿನ ಅಸ್ಥಿರತೆ, ಕಡಿಮೆಯಾಗಿ ನನ್ನ ದೈನಂದಿನ ಕಾರ್ಯಕ್ರಮ ರೂಪುಗೊಳ್ಳುತ್ತಿದೆ. ಇದುವರೆಗೆ ಬೆಳಗ್ಗೆ ಎದ್ದು ಏನು ಮಾಡಬೇಕು ಎಂಬುದೇ ತೋರುತ್ತಿರಲಿಲ್ಲ. ಬಂದು ಒಂದು ವಾರವಾಯಿತಾದರೂ ಇದುವರೆಗೂ ಒಂದು ಟೀವಿ ಕಾರ್ಯಕ್ರಮ ನೋಡಬೇಕೆಂದು ಕೂಡ ಅನ್ನಿಸಿಲ್ಲ! ಅಮೇರಿಕಕ್ಕೆ ಬರುವ ಮುನ್ನ ಬೊಂಬಾಯಿಯಲ್ಲಿ ಕೆಲವು ದಿನ ಇದ್ದೆ. ಅಲ್ಲಿ ನನ್ನ ಮಿತ್ರರೊಬ್ಬರು, ಚಿಕ್ಕಂದಿನಲ್ಲಿ ನನ್ನ ಒಡನಾಡಿಯಾಗಿದ್ದವರು, ತಮ್ಮ ಮನೆಗೆ ಆಹ್ವಾನಿಸಿದರು. ಅವರೊಡನೆ ಆರು ದಶಕಗಳ ಹಿಂದಿನ ನೆನಪುಗಳನ್ನು ಮೆಲಕುಹಾಕುತ್ತ ಸಂಜೆಯನ್ನು ಕಳೆಯಬಹುದೆಂದು ನನ್ನ ನಿರೀಕ್ಷೆ. ಆದರೆ ಅವರು ಹೊಸದಾಗಿ ಈ ಟೀವಿ ಭೂತವನ್ನು ಬರಮಾಡಿಕೊಂಡಿದ್ದರು. ಅಲ್ಲಿದ್ದ ಎರಡು ಘಂಟೆ ಕಾಲ ಒಬ್ಬರೂ ಪಿಟಗುಟ್ಟಲಿಲ್ಲ, ಅತ್ತ ಇತ್ತ ನೋಡಲಿಲ್ಲ, ನಗಲಿಲ್ಲ, ಯೋಗಕ್ಷೇಮ ವಿಚಾರಿಸಲಿಲ್ಲ. ತೀರ ಸಾಮಾನ್ಯವಾದ, ಬಾಲಿಶವಾದ ಎಂದರೂ ತಡೆಯುವಂಥ ಟೀವಿ (T. V.) ಕಾರ್ಯಕ್ರಮ ನೋಡಿದ್ದೂ ನೋಡಿದ್ದೇ. ಟೀವಿ ಮೆಟ್ಟಿಕೊಂಡರೆ ಮನೆಯ ಗತಿ ಏನಾಗುತ್ತದೆಂದು ಹಿಂದೆ ಕೇಳಿದ್ದೆ, ಅವತ್ತು ಪ್ರತ್ಯಕ್ಷಾನುಭವ ಪಡೆದಂತಾಯಿತು, ಅದ್ದರಿಂದ ಟೀವಿ ನೋಡುವ ಕುತೂಹಲ ಏನೇನೂ ಉಳಿದಿರಲಿಲ್ಲ.

ಆದರೆ ಸುನೀಲ 'ಸಿಸೆಮಿ ಸ್ಟ್ರೀಟ್, ಸಿಸೆಮಿ ಸ್ಟ್ರೀಟ್' ಎಂದು ಕಾಡಲಾರಂಭಿಸಿದ. ಯಾವ ಯಾವ ಗುಂಡಿಗಳನ್ನೋ ಹಿಂದು ಮುಂದು ತಿರುಗಿಸಿ ಕೊನೆಗೆ ಅದರ ರಹಸ್ಯವನ್ನು ಪತ್ತೆಮಾಡಿ ಅವನಿಗೆ ಸಿಸೆಮಿ ಸ್ಟ್ರೀಟ್ ಕಾರ್ಯಕ್ರಮವನ್ನು ಒದಗಿಸಿ ಕೊಟ್ಟೆ. ಮಕ್ಕಳಿಗೆ ಆ ಕಾರ್ಯಕ್ರಮ ಒಳ್ಳೆಯದು ಎನ್ನಿಸಿತು. ಅದರಲ್ಲಿ ಮುಖ್ಯಪಾತ್ರ ವಹಿಸುವವನು 'ನಾಳೆ, ಮತ್ತೊಮ್ಮೆ,

ನಾಳೆ' (Tomorrow and Tomorrow) ಎಂದು ಹಾಡಿಕೊಳ್ಳುತ್ತ ಬಂದು 'ಐದು' ಎಂಬ ಸಂಖ್ಯೆಯ ಮಾತನ್ನೆತ್ತುತ್ತಾನೆ; ಸೇವಕನೊಬ್ಬ ಐದು ರೊಟ್ಟಿಗಳನ್ನು ತರುತ್ತಾ ಎಡವಿ ರೊಟ್ಟಿಗಳು ಬೀಳದಂತೆ ಪ್ರಯತ್ನಿಸುವುದರಲ್ಲಿ ಒಂದೊಂದಾಗಿ ಆ ಐದನ್ನೂ ಕೆಡವುತ್ತಾನೆ. ಒಂದು ಹಕ್ಕಿ ಬಂದು ಐದು ತುಣುಕುಗಳನ್ನು ತಿನ್ನುತ್ತದೆ—ಹೀಗೆ ನಾಲ್ಕಾರು ರೀತಿಯಲ್ಲಿ ಆ ಸಂಖ್ಯೆ ಮಕ್ಕಳ ಮನಸ್ಸಿಗೆ ತಟ್ಟುವಂತಾಗುತ್ತದೆ. ಕಾರ್ಯಕ್ರಮ ಚೆನ್ನಾಗಿದ್ದದ್ದು ನಿಜ. ಆದರೂ ಒಂದು ಒಂದೂವರೆ ಘಂಟೆ ಹೊತ್ತು ಮಕ್ಕಳು ಟೀವಿಯ ಮುಂದೆ ಬಾಯಿ ಬಿಟ್ಟುಕೊಂಡು ಎವೆ ಮುಚ್ಚದೆ ನೋಡುತ್ತ ಕುಳಿತಿರುವುದು ಬೆಳವಣಿಗೆಗೆ ಒಳ್ಳೆಯದಲ್ಲ ಎಂದು ತೋರಿತು.

ದಿನವೆಲ್ಲ ನಿದ್ದೆಯಲ್ಲೇ ಕಳೆಯಿತು. ಅಮೆರಿಕಕ್ಕೂ ಇಂಡಿಯಕ್ಕೂ ಇರುವ ಕಾಲವ್ಯತ್ಯಾಸ ಇನ್ನೂ ನನ್ನ ದೇಹಕ್ಕೆ ಪೂರ್ತಿ ಅರಿವಾಗಿಲ್ಲ. ಸಂಜೆ ರಾಮು ಬಂದಮೇಲೆ ಊಟಮಾಡಿ, ಎಲ್ಲಾದರೂ ಸುತ್ತೋಣ ಎಂದು ಹೊರಟೆವು. ಇಲ್ಲಿ ಸಂಜೆ 9 ಘಂಟೆಯವರೆಗೂ ಬೆಳಕು ಇರುತ್ತದಾದ್ದರಿಂದ ಹೊತ್ತಾಗಿ ಹೋಯಿತು ಎನ್ನಿಸುವುದಿಲ್ಲ. ಸಂಜೆಯೆಲ್ಲ ಷಿಕಾಗೊ ಊರನ್ನು ನೋಡುವುದರಲ್ಲಿ ಕಳೆಯಿತು. ನಾನು ಮನಸ್ಸಿನಲ್ಲಿ ಕಲ್ಪಿಸಿಕೊಂಡಿದ್ದ ಷಿಕಾಗೊ ಅಲ್ಲ, ಇದು. ಕೈಗಾರಿಕೆಯ ಬೆಳವಣಿಗೆಯಲ್ಲಿ ಅಮೆರಿಕಕ್ಕಿಂತ ಭಾರತ ಎಷ್ಟೋ ಪಾಲು ಹಿಂದಿದೆ. ಆದರೂ ಈ ಜನ—ಅವರು ಸಾಕಾದಷ್ಟು ಪರಿಸರವನ್ನು ಕೆಡಿಸಿದ್ದಾರೆಂಬುದು ನಿಜವಾದರೂ—ಪ್ರಕೃತಿ ಸೌಂದರ್ಯವನ್ನು ಉಳಿಸಿಕೊಂಡಿರುವಷ್ಟು ಮಟ್ಟಿಗೆ ನಾವು ಉಳಿಸಿಕೊಂಡಿಲ್ಲ. ನಾನು ಹೊಗಳುತ್ತಿರುವುದು ಇಲ್ಲಿಯ ಪರ್ವತಪ್ರಾಂತದ ಅಥವಾ ನದಿ ಸರೋವರಗಳ ಸೌಂದರ್ಯವನ್ನಲ್ಲ—ಅದನ್ನು ನಾನು ಇನ್ನೂ ನೋಡಿಯೇ ಇಲ್ಲ—ಷಿಕಾಗೋ ನಗರದ ಮಧ್ಯೆ ಕೆಲವು ಕಡೆಗಳಲ್ಲೂ ಅದರ ಹೊರವಲಯದಲ್ಲಿಯೂ ಇರುವ ರಕ್ಷಿತ ನಗರವನಗಳ (urban forests) ಹಸುರು ಸಂಪತ್ತನ್ನು. ಈಚೆಗೆ ನವದೆಹಲಿಯ ನಡುವೆ ಅಲ್ಲಲ್ಲಿ ಇಂಥ ನಗರವನಗಳು ಬೆಳೆದಿವೆಯೆನ್ನುವುದು ಸಂತೋಷದ ವಿಷಯ. ಷಿಕಾಗೊ ಬಹು ದೊಡ್ಡ ಕೈಗಾರಿಕೆಯ ಮತ್ತು ವ್ಯಾಪಾರದ ಕೇಂದ್ರ, ಪಾತಕಿಗಳ ಸಂಸ್ಥೆಗಳಿಗೂ ಕೇಂದ್ರವಂತೆ. ಇಂಥ ಊರಿನಲ್ಲಿ ಇಷ್ಟೊಂದು ಹಸುರು ಕಾಣುವುದು ಆಶ್ಚರ್ಯ. ಈ ವಿಶೇಷವನ್ನು ನ್ಯೂಯಾರ್ಕಿನ ಕೆಲವು ಭಾಗಗಳಲ್ಲೂ ಕಂಡಿದ್ದೆ; ಕನೆಕ್ಟಿಕಟ್‌ನ ಹಾರ್ಟ್‌ಫರ್ಡ್‌ನಲ್ಲೂ ನೋಡಿದ್ದೆ —ಅಲ್ಲಿಯ ಸುಂದರವಾದ ವನವೊಂದರ ಸುತ್ತಳತೆ ಏಳೆಂಟು ಮೈಲಿಯಂತೆ, —ರಾಮು ನನ್ನ ಹೊಗಳಿಕೆಯನ್ನು ಕೇಳಿ, "ಸ್ವಲ್ಪ ತಾಳು, ನೀನಿನ್ನೂ

ನ್ಯೂಯಾರ್ಕನ್ನಾಗಲೀ ಷಿಕಾಗೋವನ್ನಾಗಲೀ ಪೂರ್ತಿ ನೋಡಿಲ್ಲ!" ಎಂದ.

ನನಗೆ ವಯಸ್ಸಾದ ಮೇಲೂ ಉಳಿದು ಬಂದಿರುವ ಸಂತೋಷವೆಂದರೆ ಬೆಳಗ್ಗೆ ಹೊತ್ತಿಗೆ ಮುಂಚೆ ಹೊರಟು ಜನಸಂದಣಿಯಿಲ್ಲದೆ, ಗಿಡಮರಗಳು ಇರುವ ಕಡೆ ನಾಲ್ಕೈದು ಮೈಲಿ ಸುತ್ತಿಕೊಂಡು ಬರುವುದು. ಬೆಂಗಳೂರಿನಲ್ಲಿ ಇದಕ್ಕೆ ಅನುಕೂಲವಿಲ್ಲ. ಲಾಲ್‌ಬಾಗನ್ನೋ ಕಬ್ಬನ್‌ಪಾರ್ಕನ್ನೋ ತಲಪ ಬೇಕಾದರೆ ಮೂರು ನಾಲ್ಕು ಮೈಲಿ ದೂರ ಪೆಟ್ರೋಲ್ ಹೊಗೆಯನ್ನು ಕುಡಿಯುತ್ತ ಹೋಗಬೇಕು. ಇಲ್ಲಿಯ ಪಾರ್ಕುಗಳನ್ನು ನೋಡಿದಾಗ ತಿರು ಗಾಟಕ್ಕೆ ಇದು ಸೊಗಸಾದ ಸ್ಥಳ ಎನ್ನಿಸಿತು. ಆದರೆ ಇಲ್ಲಿ ವಿವಿಕ್ತವಾದ ಸ್ಥಳ ಗಳಲ್ಲಿ ಒಬ್ಬೊಬ್ಬರೇ ತಿರುಗುವುದು ಅಪಾಯಕರವಂತೆ. ಈಗ ಇನ್ನೂ ಮೇ ತಿಂಗಳು; ಚಳಿಯು ಶೇಷ ಉಳಿದಿದೆಯಾದ್ದರಿಂದ ಪಾರ್ಕುಗಳಲ್ಲಿ ಜನರ ಓಡಾಟ ಕಡಿಮೆ. ಅಲ್ಲಿಗೆ ಹೋದರೆ ಡ್ರಗ್ ಪಿಶಾಚಿಗಳಿಗೋ ಕುಡುಕರಿಗೋ ಸಮಾಜದ ಮೇಲೆ ದಂಗೆಯೆದ್ದ ಲಂಗುಲಗಾಮಿಲ್ಲದ ಹದಿವಯಸ್ಕರಿಗೋ (teen-agers) ಯಾವ ಉದ್ದೇಶವೂ ಇಲ್ಲದೆ ಫಲಾಪೇಕ್ಷೆಯಿಲ್ಲದೆ ಕೊಲೆ ಮಾಡುವ ನಿಷ್ಕಾಮಕರ್ಮಿ ಕೊಲೆಗಾರರಿಗೋ ಬಲಿಯಾಗುವ ಸಂಭವವುಂಟು ಎಂದು ಜನ ನನಗೆ ಎಚ್ಚರಿಕೆಕೊಟ್ಟಿದ್ದಾರೆ.

ಆದ್ದರಿಂದ ನನ್ನ ಸಂಚಾರಕ್ಕೆ ಬೇರೆ ಸ್ಥಳ ಪತ್ತೆಮಾಡಿಕೊಂಡಿದ್ದೇನೆ. ನೈಲ್ಸ್‌ನಲ್ಲಿ ನಮ್ಮ ಮನೆಯ ಹತ್ತಿರ—10 ನಿಮಿಷ ದೂರದಲ್ಲಿ—ಗಾಲ್ಫ್ ಮಿಲ್ಸ್ ಷಾಪಿಂಗ್ ಸೆಂಟರ್ ಇದೆ. ನಾನು ಬೆಳಗ್ಗೆ ಹೊರಡುವ ಹೊತ್ತಿನಲ್ಲಿ ಅಲ್ಲಿಯ ಸ್ಟೋರುಗಳು ತೆರೆದಿರುವುದಿಲ್ಲ; ಕಾರುಗಳ ಓಡಾಟವೂ ಕಡಿಮೆ, ಎಲ್ಲೋ 30-40 ನಿಂತಿರುತ್ತವೆ. ಆ ಸೆಂಟರನ್ನು ಒಂದು ಸುತ್ತು ಹಾಕಿದರೆ ಎರಡು ಮೈಲಿಯಾಗುತ್ತದೆ. ಎರಡು ಸಲ ಪ್ರದಕ್ಷಿಣೆ ಮಾಡಿದರೆ ನನ್ನ ಆರೋಗ್ಯಸಂಚಾರ (constitutional) ಮುಗಿಯಿತು.

ಷಿಕಾಗೋವಿನ ಓಹೇರ್ ವಾಯು ಬಂದರು ಇಲ್ಲಿಗೆ ಕೆಲವೇ ಮೈಲಿ ದೂರದಲ್ಲಿದೆ. ಅಲ್ಲಿಗೆ ಬರುವ ವಿಮಾನಗಳೆಲ್ಲ ಈ ದಾರಿಯಲ್ಲೇ ಬರುತ್ತವೆ ಯೋನೊ; ಅಥವಾ ಯಾವುದಾದರೂ ಸಿಗ್ನಲ್ ಪಡೆಯಲು ಈ ಕಡೆಗೆ ಬರ ಬೇಕೆಂಬ ನಿಯಮವಿರಬಹುದು. ಮೊನ್ನೆ ಸಂಜೆ ರಾಮು ಬರುವುದನ್ನು ಇದಿರು ನೋಡುತ್ತ ಕುಳಿತಿದ್ದಾಗ ಬೇರೆ ಕೆಲಸವಿಲ್ಲದೆ ಸ್ವಲ್ಪ ಹೊತ್ತು 'ಬಂದ ವಿಮಾನ ಗಳ ಸಂಖ್ಯೆಯನ್ನು ಎಣಿಸಿದೆ; ಮೂವತ್ತಾದ ಮೇಲೆ ಬೇಸರವಾಗಿ ಗಮನ ಬೇರೆ ಕಡೆಗೆ ತಿರುಗಿತು—ಆ ವೇಳೆಗೆ ಒಂದು ಘಂಟೆ ಕೂಡ ಕಳೆದಿರಲಿಲ್ಲ. ಷಿಕಾಗೋವಿನ ವಾಯುಬಂದರಿಗೆ ಬಂದು ಹೋಗುವಷ್ಟು ವಿಮಾನಗಳು

ಪ್ರಪಂಚದ ಮತ್ತೆ ಯಾವ ವಾಯುಬಂದರಿಗೂ ಬರುವುದಿಲ್ಲವಂತೆ. ಪ್ರತಿ ನಿಮಿಷವೂ ವಿಮಾನಗಳು ಇಳಿಯುತ್ತವೆ, ಅಥವಾ ಹಾರುತ್ತವೆ.

ಅವತ್ತೇ ನನಗೆ ಇಲ್ಲಿಯ ಸರೋವರಗಳ ಮೊದಲ ಪರಿಚಯ, ನೈಲ್ಸ್, ಓಕ್ ಪಾರ್ಕ್, ಮುಂತಾದ ಉಪನಗರಗಳ ಹೊರವಲಯದಲ್ಲೇ ಐದಾರು ಸರೋವರಗಳು ಕಂಡವು. ನಾನು ಇನ್ನೂ ಮಿಷಿಗನ್ ತೀರಕ್ಕೆ ಹೋಗಿಲ್ಲ. ಇವೆಲ್ಲ ಸಣ್ಣ ಸಣ್ಣ ಸರೋವರಗಳು. ಸುತ್ತ ಕಾಡು; ಜಿಂಕೆಗಳು ಓಡಾಡುವ ಜಾಗ—ಎಂದು ಅಲ್ಲಲ್ಲೇ ಬೋರ್ಡು ಹಾಕಿದ್ದಾರೆ. ಷಿಕಾಗೋವಿನಂಥ ನಗರಕ್ಕೆ ಇಷ್ಟು ಹತ್ತಿರದಲ್ಲಿ ಇಂಥ ಸುಂದರವಾದ ಸ್ಥಳಗಳಿವೆಯೆಂದು ನಂಬುವುದೇ ಕಷ್ಟ. ಇಲ್ಲಿಯ ಭೂರಮೆ ಅದೆಷ್ಟು ಬಗೆಯ ರತ್ನಗಳನ್ನು ತರಿಸಿ ಅಲಂಕರಿಸಿಕೊಂಡಿದ್ದಾಳೆಯೊ! ಕಾಡಿನ ಹಿನ್ನೆಲೆಯುಳ್ಳ ಸರೋವರಗಳಲ್ಲಿ ಸಂಧ್ಯಾದಾಗ ಪ್ರತಿಬಿಂಬಿತವಾದ ಕಡೆ ಎರಡು ಮೂರು ಬಗೆಯ ಕೆಂಪು, ಇಂದ್ರನೀಲ, ಪಚ್ಚೆ—ಈ ಬಣ್ಣದ ಸಿರಿ ನನ್ನಿಂದ ಆನಂದದ ಉದ್ಗಾರ ಹೊರಡಿಸಿತು. ಇಲ್ಲಿಯವರು ಹೇಳುವ ಪ್ರಕಾರ ನಿಜವಾಗಿ ಬಣ್ಣದ ವೈವಿಧ್ಯವನ್ನೂ ವೈಭವವನ್ನೂ ನೋಡಬೇಕಾದರೆ ಇಲ್ಲಿಗೆ 'ಫಾಲ್' (fall)ನಲ್ಲಿ ಅಂದರೆ ಶರತ್ಕಾಲದಲ್ಲಿ, ಅಕ್ಟೋಬರ್ ತಿಂಗಳ ಸುಮಾರಿನಲ್ಲಿ ಬರಬೇಕು. ಅದನ್ನು ನೋಡುವ ಯೋಗವಿದೆಯೋ ಇಲ್ಲವೋ ಕಾಣೆ.

* * *

## ಡಿಪಾರ್ಟ್‌ಮೆಂಟ್ ಸ್ಟೋರ್

ದಿನಚರಿ ಬರೆಯುವ ವಿಷಯದಲ್ಲಿ ಇಲ್ಲಿಗೆ ಬಂದ ದಿನ ಇದ್ದ ಉತ್ಸಾಹ ಬಹುಬೇಗ ಇಂಗಿಹೋಯಿತು. ವಾರಗಟ್ಟಲೆ ಅದರ ನೆನಪೇ ಬರುವುದಿಲ್ಲ. ನಿನ್ನೆ ಪೆನ್ನಿಯವರ (Penneys) ಸ್ಟೋರಿಗೆ ಹೋದಾಗ ನೆನಪು ಬಂತು, ದಿನಚರಿ ಹಿಂದೆ ಬಿದ್ದಿದೆಯೆಂದು.

ನಾನು ದೆಹಲಿಯಲ್ಲೂ ಕಲ್ಕತ್ತೆಯಲ್ಲೂ ದೊಡ್ಡ ದೊಡ್ಡ ಅಂಗಡಿಗಳನ್ನು ನೋಡಿದ್ದೇನೆ. ಆದರೆ ಇಲ್ಲಿರುವಂಥ ಬೃಹತ್ಪ್ರಮಾಣದ ಸ್ಟೋರುಗಳನ್ನು ಇದುವರೆಗೆ ನೋಡಿರಲಿಲ್ಲ. ಸಿಯರ್ಸ್, ವಾಲ್‌ಗ್ರೀನ್ಸ್, ಜುಯೆಲ್, ಪೆನ್ನಿ (Sears, Walgreens, Jewell, Penney)—ಇಂಥ ಸ್ಟೋರುಗಳನ್ನು ದೈತ್ಯವರ್ತಕರು ದೈತ್ಯಗಿರಾಕಿಗಳಿಗಾಗಿ ಸ್ಥಾಪಿಸಿರಬೇಕು ಎನ್ನಿಸುತ್ತದೆ. ನಿನ್ನೆ ನಾವು ಹೋದದ್ದು ಪೆನ್ನಿ ಸ್ಟೋರಿಗೆ. ಅದು ನಮ್ಮ ಮನೆಯ ಹತ್ತಿರದಲ್ಲಿರುವ ವ್ಯಾಪಾರಕೇಂದ್ರದಲ್ಲಿದೆ. ಈ ಡಿಪಾರ್ಟ್‌ಮೆಂಟ್ ಸ್ಟೋರು ಸುಮಾರು 500

ಅಡಿ ಉದ್ದ 500 ಅಡಿ ಅಗಲ ಇರಬಹುದು! ಅದಿರುವುದು ಷಿಕಾಗೋ ನಗರದ ಮಧ್ಯದಲ್ಲಲ್ಲ, ಅಲ್ಲಿಗೆ 15 ಮೈಲಿ ದೂರದಲ್ಲಿರುವ ಉಪನಗರದಲ್ಲಿ. ಉಪನಗರದ ಜನಸಂಖ್ಯೆ ಸುಮಾರು 45,000. ಅದನ್ನು ನೈಲ್ಸ್‌ಹಳ್ಳಿ— The village of Niles—ಎಂದು ಕರೆಯುತ್ತಾರೆ. ಅಮೆರಿಕದ ಆಡಳಿತ ಪರಿಭಾಷೆಯಲ್ಲಿ village ಎಂಬ ಪದ ಜನ ಸಂಖ್ಯೆಯನ್ನು ಮಾತ್ರ ಸೂಚಿಸುತ್ತದೆಯಂತೆ. ಈ ಸಣ್ಣ ಊರಿನಲ್ಲಿ ಮೇಲೆ ಹೆಸರಿಸಿದುವಲ್ಲದೆ ಕೆ ಮಾರ್ಟ್, ಗೋಲ್ಡ್ ಬ್ಲಾಟ್ಸ್ ಮುಂತಾದ ಬೃಹತ್ಪ್ರಮಾಣದ ಸ್ಟೋರುಗಳು ಹತ್ತಾರು ಇವೆ. ಇಲ್ಲಿಯ ಜನರ ಕೊಳ್ಳುವ ಶಕ್ತಿ ಎಷ್ಟಿವೆಯೆಂಬುದನ್ನು ಇದರಿಂದ ಊಹಿಸಬಹುದು.

ಇಲ್ಲಿ ಸಣ್ಣ ಪ್ರಮಾಣದ ಅಂಗಡಿಗಳಿವೆಯೋ ಇಲ್ಲವೋ! ಕಾಣೆ, (ಕೆಲವು ತಿಂಡಿಯ ಪದಾರ್ಥಗಳನ್ನು—ಪೀಟ್ಸ, ಪ್ಯಾನ್ ಕೇಕ್, ಕೆಂಟಕಿ ಕರಿದ ಕೋಳಿಮರಿ ಇತ್ಯಾದಿಗಳನ್ನು ಮಾತ್ರ ಮಾರುವ 'ಹಟ್' (hut) ಗಳನ್ನು ನೋಡಿದ್ದೇನೆ.) ಅಲ್ಲಲ್ಲೇ ಕೆಲವು ಇರಬೇಕೇನೊ. ಇಲ್ಲದಿದ್ದರೆ, ಅಮೆರಿಕನ್ ಮಾಸಪತ್ರಿಕೆಗಳಲ್ಲಿ ಆಗಾಗ ಬರುವ ಜಯೋಪಾಖ್ಯಾನಗಳಿಗೆ (success stories) ಸಾಮಾಗ್ರಿ ಹೇಗೆ ಒದಗಬೇಕು! ಆದರೆ ಅಂಥವು ಇದ್ದರೂ ಕೂಡ ಅವುಗಳ ಬಾಳು ಬಹುಶಃ ಇತರರಲ್ಲಿ ಮಾತ್ಸರ್ಯವನ್ನು ಕೆರಳಿಸುವಂಥದಲ್ಲ. ಇಲ್ಲಿ ಯಾವ ಉದ್ಯಮವಾಗಲಿ ಯಾವ ಬಗೆಯ ಜೀವನವಾಗಲಿ, ಅದು ಒಂದಲ್ಲ ಒಂದು ರೀತಿಯಲ್ಲಿ ಮೋಟಾರ್ ಕಾರನ್ನು ಅವಲಂಬಿಸಿ ನಿಲ್ಲಬೇಕು. 'ಎಲ್ಲವೂ ಚಲಿಸುವುದು ಅದರ ಸುತ್ತ' ಅಥವಾ 'ಎಲ್ಲವೂ ಚಲಿಸುವುದು ಅದರಿಂದಾಗಿ'. ಅಂಗಡಿ ಇಡುವವರು ಇದನ್ನು ಮರೆಯುವಂತಿಲ್ಲ. ಕಾರ್ ನಿಲ್ಲಿಸಲು ಸ್ಥಳವಿಲ್ಲದಿದ್ದರೆ ನಿಮ್ಮ ಅಂಗಡಿಗೆ ಯಾರು ಬರುತ್ತಾರೆ! ಗಾಲ್ಫ್‌ಮಿಲ್ಸ್ ಷಾಪಿಂಗ್ ಕೇಂದ್ರದ ಸುತ್ತ ಸುಮಾರು ಸಾವಿರ ಕಾರುಗಳನ್ನು ನಿಲ್ಲಿಸುವಷ್ಟು ಸ್ಥಳ—ಉದ್ದೇಶಪೂರ್ವಕವಾಗಿ ಅದಕ್ಕಾಗಿಯೇ ಕಾದಿಟ್ಟಿರುವ ಸ್ಥಳ—ಇದೆ. ಇಷ್ಟಾದರೂ ಕೆಲವು ವೇಳೆ ಜಾಗ ಸಿಕ್ಕದೆ ಇರುವುದುಂಟು!

ಹೀಗೆ ಪಾರ್ಕಿಂಗ್ ಸ್ಥಳದ ಅವಶ್ಯಕತೆ ಒಂದು ಕಡೆ; ಮತ್ತೊಂದು ಕಡೆ ಅಮೆರಿಕದಲ್ಲೆಲ್ಲ ಕಂಡುಬರುವ ಒಂದು ಪ್ರವೃತ್ತಿ : ಎಲ್ಲ ಸಂಸ್ಥೆಗಳೂ ಬೃಹತ್ಪ್ರಮಾಣಕ್ಕೆ ಬೆಳೆದು ಸಣ್ಣ ಸಣ್ಣವನ್ನು ಹಿಂದೆ ಹಾಕುವ, ನಾಶ ಮಾಡುವ, ಅಥವಾ ತಮ್ಮ ಸೇವೆಗೆ ಬಳಸಿಕೊಳ್ಳುವ ಪ್ರವೃತ್ತಿ, ಇವೆರಡರಿಂದಾಗಿ ಇಲ್ಲಿ ಈ ಭಾರಿ ಸಂಸ್ಥೆಗಳ ಚಟುವಟಿಕೆಯೇ ಹೆಚ್ಚು. ಹಣದ ಅಭಾವವಿಲ್ಲದ್ದರಿಂದ ಅವು ತಮಗೆ ಅನುಕೂಲವಾದ ಸ್ಥಳದಲ್ಲಿ ಝುಂಡಾ

ಹಾಕಬಹುದು; ಲಾಭನಷ್ಟದ ಏರುಪೇರುಗಳನ್ನು ತಡೆಯಬಹುದು; ಟೀವಿ, ರೇಡಿಯೋ ಮುಂತಾದ ಸಾಧನಗಳನ್ನು ಉಪಯೋಗಿಸಿಕೊಂಡು ಘಂಟೆಯೊಂದಕ್ಕೆ ಒಂದು ಮಿಲಿಯನ್ ಡಾಲರುಗಳನ್ನಾದರೂ ಕೊಟ್ಟು ಜಾಹಿರಾತು ಮಾಡಬಹುದು; ತಮ್ಮ ಪ್ರಭಾವವನ್ನು (ಆ ಪ್ರಭಾವ ವ್ಯಾಪಾರಕ್ಕೆ ಸೀಮಿತವಾಗದೆ ರಾಜಕೀಯಕ್ಕೂ ಹಬ್ಬುತ್ತದೆ, ಆ ಮೂಲಕ ವ್ಯಾಪಾರ ಸೌಲಭ್ಯಗಳನ್ನು ಹೆಚ್ಚಿಸಿಕೊಳ್ಳುತ್ತದೆ) ನಾಡಿನಾದ್ಯಂತ ಮಾತ್ರವಲ್ಲ, ಇತರ ದೇಶಗಳಿಗೂ ಬೀರಬಹುದು. ಸಂಯುಕ್ತ ಸಂಸ್ಥಾನಗಳಲ್ಲಿ ಪೆನ್ನಿ ಸಂಸ್ಥೆಯ ಸ್ಟೋರುಗಳು 1600 ಇವೆಯಂತೆ—ಅವರ ಜಾಹಿರಾತುಗಳಲ್ಲಿ ಇದನ್ನು ಕಾಣಿಸುತ್ತಾರೆ. ವುಲ್‌ವರ್ತ್ ಸಂಸ್ಥೆಯ ಸ್ಟೋರು ಇಂಗ್ಲೆಂಡಿನಲ್ಲೂ ಇವೆಯಂತೆ.

ಈ ಸ್ಟೋರುಗಳ ಹೊರಗೆ ಅಲ್ಯುಮಿನಿಯಮ್ ಕೊಳವೆಗಳಿಂದ ತಯಾರುಮಾಡಿ ರಬ್ಬರ್ ಟೈರ್ ಹಾಕಿರುವ ನೂರಾರು ಕೈಗಾಡಿಗಳನ್ನು ಪೇರಿಸಿರುತ್ತಾರೆ. ಗಿರಾಕಿ ಕಾರ್ ನಿಲ್ಲಿಸಿದ ಮೇಲೆ ಇಂಥ ಗಾಡಿಯೊಂದನ್ನು—ಅದನ್ನು ಉಪಯೋಗಿಸುವುದಕ್ಕೆ ಯಾರ ಅಪ್ಪಣೆಯೂ ಬೇಕಿಲ್ಲ, ಯಾವ ಫಾರಮ್ಮನ್ನೂ ತುಂಬಿಸಿಕೊಡಬೇಕಾಗಿಲ್ಲ—ಸ್ಟೋರಿನೊಳಕ್ಕೆ ತಳ್ಳಿಕೊಂಡು ಹೋಗಿ ತನಗೆ ಬೇಕಾದ ಸಾಮಾನನ್ನು ಆರಿಸಿ ಅದರಲ್ಲಿ ತುಂಬಿಕೊಂಡು ಹೊರಕ್ಕೆ ಹೋಗುವ ಬಾಗಿಲಿಗೆ ಬಂದರೆ ಅಲ್ಲಿರುವಾತ (ಅಥವಾ ಆಕೆ) ಅವುಗಳನ್ನು ನೋಡಿ, ಯಂತ್ರವೊಂದರ ಗುಂಡಿಗಳನ್ನೊತ್ತಿ ಬಿಲ್ ಕೊಡುತ್ತಾನೆ. ಅದನ್ನು ಪಾವತಿಮಾಡಿ ಕೈಗಾಡಿಯನ್ನು ಕಾರಿನ ಬಳಿಗೆ ತಳ್ಳಿಕೊಂಡು ಹೋಗಿ ಸಾಮಾನುಗಳನ್ನು ಕಾರಿಗೆ ವರ್ಗಾಯಿಸುವುದು, ಹೊರಡುವುದು. 'ಕೈಗಾಡಿಯನ್ನು ಪಾರ್ಕಿಂಗ್ ಸ್ಥಳದಲ್ಲಿ ಬಿಡಬೇಡಿ' ಎಂದು ಬೋರ್ಡು ಹಾಕಿದ್ದಾರಾದರೂ ಅನೇಕರು ಹಾಗೆಯೇ ಬಿಡುವುದುಂಟು. ನಾನು ಬೆಳಗಿನ ಸಂಚಾರಕ್ಕೆ ಹೋದಾಗ ಈ ಗಾಡಿಗಳು ಅಲ್ಲಲ್ಲಿ ನಿಂತಿದ್ದನ್ನು ನೋಡಿದ್ದೇನೆ. ಆದರೆ ಸಾಮಾನ್ಯವಾಗಿ ಸ್ಟೋರಿನವರು ಅದನ್ನು ಒಂದು ಕಡೆ ತೆಗೆದಿಡುತ್ತಾರೆ.

'ನಿಮ್ಮಲ್ಲಿ ಇಂಥ ಸಾಮಾನು ಇದೆಯೆ' ಎಂದು ಪ್ರಶ್ನೆ ಹಾಕುವ ಸಂದರ್ಭ ಬರುವುದೇ ಅಪರೂಪ. ಬಟ್ಟೆಬರೆ, ಪಾದರಕ್ಷೆ, ರತ್ನಕಂಬಳಿ, ಪರದೆ, ಕಿರಾಣಿ ಸಾಮಾನು, ಸಿದ್ಧವಾದ ಆಹಾರಪದಾರ್ಥ, ನಿಮಗೆ ಬೇಕಾದ ಅಳತೆಯ ಹಲಗೆ, ಮಕ್ಕಳ ಆಟದ ಸಾಮಾನು—ಎಲ್ಲ 'ಡಿಪಾರ್ಟ್‌ಮೆಂಟು'ಗಳೂ ಉಂಟು. ಇದು ಅಂಗಡಿಯಲ್ಲ, ದೊಡ್ಡ ಮಾರುಕಟ್ಟೆ, ಆದರೂ ಅಲ್ಲಿ ಹೆಚ್ಚು ಸದ್ದು ಕೇಳಿಬರುವುದಿಲ್ಲ. ಅಂಗಡಿಯವನ ಕೃಪಾದೃಷ್ಟಿ ನಮ್ಮ ಮೇಲೆ ಬೀಳುತ್ತದೆ ಎಂದು ನಾವು ಕಾಯಬೇಕಾಗಿಲ್ಲ; ಆ ದೃಷ್ಟಿ ಬಿದ್ದ ಮೇಲೆ ಅವನಿಂದ

ತಾಳ್ಮೆಗೆಟ್ಟ ಬಿರುಸುಮಾತನ್ನು ಕೇಳಬೇಕಾಗಿಲ್ಲ; ಚೌಕಶಿ ಮಾಡುವುದು, ತೂಗುವುದು, ಅಳೆಯುವುದು ಪೊಟ್ಟಣ ಕಟ್ಟುವುದು—ಒಂದೂ ಇಲ್ಲ; ಅತ್ತ ಮಾರುವವನಿಗೂ ಮತ್ತೊಬ್ಬ ಗಿರಾಕಿ ಕಾಯುತ್ತಿದ್ದಾನಲ್ಲ ಎಂಬ ಆತಂಕವಿಲ್ಲ. ಯಾವ ತೊಂದರೆಯೂ ಇಲ್ಲದೆ ಗಿರಾಕಿಗಳೇ ತಮ್ಮ ಕೆಲಸ ತಾವು ನೋಡಿ ಕೊಳ್ಳುತ್ತಾರೆ. ಪ್ರತಿಯೊಂದು ಇಲಾಖೆಯಲ್ಲೂ ಒಬ್ಬ (ಒಬ್ಬಳು) ಕೂತಿರು ತ್ತಾನೆ, ನಮ್ಮನ್ನು ಮುಗುಳುನಗೆಯಿಂದ ಸ್ವಾಗತಿಸುತ್ತಾನೆ. ನೀವು ಅನುಮಾ ನಿಸುವುದೋ ಹುಡುಕಾಡುವುದೋ ಕಂಡರೆ ಮಾತ್ರ ನಿಮ್ಮ ಬಳಿಗೆ ಬಂದು "ನನ್ನ ಸಹಾಯವೇನಾದರೂ ಬೇಕೆ?" ಎಂದು ಕೇಳುತ್ತಾನೆ, ಬೇಕಾದರೆ ಸಹಾಯ ಮಾಡುತ್ತಾನೆ. ಗಿರಾಕಿಗಳ ಮನೋವೃತ್ತಿಯನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅವರಿಗೆ ತೊಂದರೆಯಾಗದಂತೆ, ಅನುಕೂಲವಾಗುವಂತೆ, ಅಚ್ಚು ಕಟ್ಟಾದ ವ್ಯವಸ್ಥೆ ಮಾಡಿರುವುದರಿಂದ ಆತನ ಸಹಾಯ ಬೇಕಾಗುವುದು ಅಪ ರೂಪ. ಈ ಬಗೆಯ ಸುವ್ಯವಸ್ಥೆ ಈಚೀಚೆಗೆ ನಮ್ಮಲ್ಲೂ ಕಾಣಬರುತ್ತಿದೆ. ಆದರೂ ಅವರ ಸಮಕ್ಕೆ ಬರಬೇಕಾದರೆ ಬಹುದೂರ ಹೋಗಬೇಕು.

ಗಿರಾಕಿಗಳು ಸ್ವತಂತ್ರವಾಗಿ ಎಲ್ಲೆಂದರೆ ಅಲ್ಲಿ ಓಡಾಡಿ ಸಾಮಾನು ಗಳನ್ನು ಎತ್ತುವುದು ಇಡುವುದು ಗಾಡಿಗೆ ಹಾಕಿಕೊಳ್ಳುವುದು ಎಲ್ಲಾ ಮಾಡುತ್ತಿರುವಾಗ ಕಳ್ಳತನವಾಗುವುದಿಲ್ಲವೆ, ಎಂದು ನಾನು ಆಶ್ಚರ್ಯ ಪಡುತ್ತಿದ್ದೆ. ಆಗುತ್ತದಂತೆ; ಅದನ್ನು ನಿರೀಕ್ಷಿಸಿ ಸ್ಟೋರಿನವರು ಜಾಗರೂಕ ರಾಗಿಯೂ ಇರುತ್ತಾರಂತೆ—ಅದು ಗಿರಾಕಿಗಳಿಗೆ ತಿಳಿಯುವುದಿಲ್ಲ, ಅಷ್ಟೆ. ಅವರ ಮೇಲೆ ಮನುಷ್ಯರ ಕಣ್ಣು ಮಾತ್ರವಲ್ಲ, ಕ್ಯಾಮರದ ಕಣ್ಣು ಇರುತ್ತ ದಂತೆ, ಸಂದೇಹ ಬಂದಾಗ ಗಿರಾಕಿಯ ಅರಿವಿಲ್ಲದೆ ಅವನ ಚಲನವಲನಗಳ ಚಿತ್ರವನ್ನು ಸ್ವಯಂಚಾಲಿತವಾದ ಕ್ಯಾಮರಗಳಿಂದ ತೆಗೆಯುವ ವ್ಯವಸ್ಥೆಯಿದೆ. ಆದರೂ ಸ್ಟೋರಿನವರು ಚಾಪೆಯ ಕೆಳಗೆ ನುಸಿದರೆ ಕಳ್ಳ ರಂಗೋಲಿಯ ಕೆಳಗೆ ನುಸಿಯುತ್ತಾನೆ. 1972 ರಲ್ಲಿ ಒಟ್ಟು ಒಂದು ಬಿಲಿಯನ್ ಡಾಲರಿನಷ್ಟು ಬೆಲೆ ಬಾಳುವ ಸಾಮಾನು ಕಳುವಾಯಿತೆಂದು ಯಾವುದೋ ಪತ್ರಿಕೆಯಲ್ಲಿ ಓದಿದ ನೆನಪಿದೆ.

ನಂಬಿಕೆಗೆ ಅರ್ಹರೆಂದು ತೋರಿದ ಜನರಿಗೆ ಈ ದೊಡ್ಡ ಸ್ಟೋರು ಗಳವರೂ ಬ್ಯಾಂಕಿನವರೂ 'ಛಾರ್ಜ್ ಕಾರ್ಡ್', 'ಕ್ರೆಡಿಟ್ ಕಾರ್ಡ್' ಎಂಬುವನ್ನು ಕೊಡುವ ಪದ್ಧತಿಯಿದೆ. ಸ್ಟೋರಿನ ಕಾರ್ಡನ್ನು ಪಡೆದವರು ಸಂ. ಸಂಸ್ಥಾನಗಳಲ್ಲಿ ಆ ಕಂಪೆನಿಯ ಯಾವ ಸ್ಟೋರಿನಲ್ಲಾದರೂ ತಮಗೆ ಬೇಕಾದ ಸಾಮಾನನ್ನು ಪಡೆದು ರುಜು ಮಾಡಬಹುದು; ಆಗಲೇ ಹಣ ಕೊಡಬೇಕಾಗಿಲ್ಲ.

ಆಮೇಲೆ ಕಂಪೆನಿಯವರು ನಮ್ಮಿಂದ ಪಡೆಯುತ್ತಾರೆ. ಬ್ಯಾಂಕಿನ ಕಾರ್ಡು ಇದ್ದರಂತೂ ದೇಶದ ಯಾವ ಮೂಲೆಯಲ್ಲಿ ಯಾವ ಅಂಗಡಿಯಿಂದಲಾದರೂ ಯಾವ ಸಾಮಾನನ್ನು ಬೇಕಾದರೂ ಕೊಳ್ಳಬಹುದು—ಪೆಟ್ರೋಲು ಮೊದಲುಗೊಂಡು. ಖಚಿತವಾದ ವರಮಾನವಿರುವವರು ಯಾರಾದರೂ ಈ ಕಾರ್ಡನ್ನು ಪಡೆಯಬಹುದು. ಪ್ರವಾಸಿಗರು ನಗದು ಹಣವನ್ನು ತೆಗೆದುಕೊಂಡು ಹೋಗಬೇಕಾಗಿಯೇ ಇಲ್ಲ. ಹೆಚ್ಚು ಹಣ ಇಟ್ಟುಕೊಂಡು ಪ್ರಯಾಣ ಮಾಡುವುದು ಒಳ್ಳೆಯದೂ ಅಲ್ಲ.

ಇದೆಲ್ಲದರಿಂದ ಹೊರಪಡುವುದೇನು ? ಅಮೆರಿಕನ್ನರು ನಮಗಿಂತ ಗಿರಾಕಿಗಳ ವಿಷಯದಲ್ಲಿ ದಯಾರ್ದ್ರಹೃದಯರು ಎಂದಲ್ಲ, ತಮ್ಮ ವ್ಯಾಪಾರದ ಪ್ರಮಾಣವನ್ನು ಹೆಚ್ಚಿಸಿಕೊಂಡು ಅಪಾರ ಲಾಭವನ್ನು ಗಳಿಸುವುದರಲ್ಲಿ ಅವರು ಚತುರರು ಎಂದು. ಅವರೂ ಸ್ವಾರ್ಥಿಗಳೇ—ನಮ್ಮಂತೆ. ಆದರೆ ಅವರ ಸ್ವಾರ್ಥ ವ್ಯವಹಾರಜ್ಞಾನವುಳ್ಳದ್ದು—enlightened selfishness ; ಅಂದರೆ, ಇತರರಿಗೆ ಅನುಕೂಲಮಾಡಿಕೊಟ್ಟರೆ ನಮಗೂ ಅನುಕೂಲ ಎಂಬ ರಹಸ್ಯವನ್ನು ಬಲ್ಲ ಸ್ವಾರ್ಥ. ಅನೇಕ ವೇಳೆ ಅದು ಔದಾರ್ಯದಂತೆಯೇ ಕಾಣುತ್ತದೆ. ಅದು ಪ್ರಗತಿಯ ದಾರಿ ಎನ್ನುವುದು ಅವರಿಗೆ ಅನುಭವವೇದ್ಯವಾಗಿದೆ: ಛಾರ್ಜ್‌ಕಾರ್ಡನ್ನು ಉಪಯೋಗಿಸುವ ಜನ ನಗದು ಹಣ ಕೊಡುವವರಿಗಿಂತ ಮೂರು ಪಟ್ಟು ಹೆಚ್ಚಿನ ವ್ಯಾಪಾರಮಾಡುತ್ತಾರೆ ಎಂದು ಮೊನ್ನೆ ತಾನೆ ಒಂದು ಪತ್ರಿಕೆ ಪ್ರಕಟಿಸಿತ್ತು.

ಈ ದೈತ್ಯಪ್ರಮಾಣದ ಸ್ಟೋರುಗಳಲ್ಲಿ ಆಗುವ ವ್ಯಾಪಾರವೆಷ್ಟು ಎಂದು ಹೇಳಿದರೆ ನಂಬುವುದೇ ಕಷ್ಟ. ಕಳೆದ ವರ್ಷ ಸಿಯರ್ಸ್ ಮತ್ತು ರೋಬಕ್ ಕಂಪೆನಿ ವ್ಯಾಪಾರದಲ್ಲಿ ವಿಕ್ರಮ ಸಾಧಿಸಿತಂತೆ. ಆ ವರ್ಷದಲ್ಲಿ ಅವರ ಒಟ್ಟು ವ್ಯಾಪಾರ 10.9 ಬಿಲಿಯನ್. ಅಂದರೆ ಒಂದು ಸಾವಿರ ಕೋಟಿ ಡಾಲರುಗಳಿಗಿಂತ ಸ್ವಲ್ಪ ಹೆಚ್ಚಾಯಿತು—ಬಿಲಿಯನ್ ಎಂದರೆ ಸಾವಿರ ಮಿಲಿಯನ್. ಈ ಕಂಪೆನಿ ವ್ಯಾಪಾರದಲ್ಲಿ ಎಲ್ಲರನ್ನೂ ಮೀರಿಸಿರುವಂತೆ ಅವರು ಷಿಕಾಗೋವಿನಲ್ಲಿ ಕಟ್ಟಿರುವ ಗಗನಚುಂಬಿ ಪ್ರಪಂಚದ ಎಲ್ಲ ಕಟ್ಟಡಗಳನ್ನೂ ಎತ್ತರದಲ್ಲಿ ಮೀರಿಸಿದೆ. ನ್ಯೂಯಾರ್ಕಿನ ಎಂಪೈರ್‌ಸ್ಟೇಟ್ ಕಟ್ಟಡದ ಪ್ರಾಶಸ್ತ್ಯ ಈಗ ಉಳಿದಿಲ್ಲ.

ಸುಮಾರು ಕಾಲು ಶತಮಾನದ ಕೆಳಗೆ ನಾನು ಮೈಸೂರು ವಿಶ್ವವಿದ್ಯಾಲಯದ ಬಿ.ಕಾಮ್. ಪರೀಕ್ಷೆಗೆ ಪ್ರಶ್ನಪತ್ರಿಕೆ ಕೊಟ್ಟಿದ್ದೆ. ಪ್ರಬಂಧ ಬರೆಯಲೆಂದು ನಾನು ಕೊಟ್ಟಿದ್ದ ಮೂರು ವಿಷಯಗಳಲ್ಲಿ 'The customer is always right' (ಗಿರಾಕಿ ಹೇಳುವುದೆಲ್ಲ ಸರಿ) ಎಂಬುದೂ ಒಂದು.

ಉತ್ತರಪತ್ರಿಕೆಗಳು ಬಂದಾಗ ನೋಡಿದರೆ—ಒಬ್ಬನೇ ಒಬ್ಬ ವಿದ್ಯಾರ್ಥಿಯೂ ಆ ವಿಷಯವನ್ನು ಅರಿಸಿಕೊಂಡಿರಲಿಲ್ಲ. ಆ ವಾಕ್ಯದ 'ಧ್ವನಿ' ಅವರಲ್ಲೊಬ್ಬರಿಗೂ ಬಹುಶಃ ಅರ್ಥವಾಗಿರಲಿಲ್ಲ. ಈಗ ಪರಿಸ್ಥಿತಿ ಬದಲಾಯಿಸಿರಬಹುದೇನೊ. ಪಾಶ್ಚಾತ್ಯರಲ್ಲಿ ಈ ವಾಕ್ಯದ ಬಳಕೆ ಹೆಚ್ಚು. ಗಿರಾಕಿ ಹೇಳಿದ್ದೆಲ್ಲ ವೇದವಾಕ್ಯ ಎಂಬಂತೆ ಅವರು ನಟಿಸುತ್ತಾರೆ. ಅದರಿಂದ ಗಿರಾಕಿಯ ಮನಸ್ಸಿಗೆ ಹಿತ; ವ್ಯಾಪಾರಿಯ ಜೇಬಿಗೂ ಹಿತ.

## ಬ್ರೂಕ್ಲಿನ್ ಮೃಗಾಲಯ

ಇವತ್ತು ಭಾನುವಾರ. ರಾಮುವಿಗೆ ಆಸ್ಪತ್ರೆಯ ಕೆಲಸವಿಲ್ಲ—ನಿಯಮಾನುಸಾರವಾಗಿ ನೋಡಿದರೆ. ಆದರೂ ಬೆಳಗಿನ ಉಪಾಹಾರವಾದ ಮೇಲೆ ಅವನು "ಸ್ವಲ್ಪ ಆಸ್ಪತ್ರೆಯ ಬಳಿಗೆ ಹೋಗೋಣ. ಒಬ್ಬ ರೋಗಿಯ ಸ್ಥಿತಿ ಹೇಗಿದೆಯೋ ನೋಡಬೇಕು. ಅದಾದ ಮೇಲೆ ಎಲ್ಲಾದರೂ ಸುತ್ತಿಕೊಂಡು ಸಂಜೆ ವಾಪಸು ಬರೋಣ" ಎಂದ. ಹಾಗೆಯೇ ಹೋದೆವು. ಆಸ್ಪತ್ರೆಗೆ ಹೋದಮೇಲೆ ಡಾಕ್ಟರ ಕಾಲ ಅವನ ಸ್ವತ್ತಲ್ಲ. ಅವನು ಅಲ್ಲಿಂದ ಹೊರಡುವ ಹೊತ್ತಿಗೆ 10½ ಘಂಟೆಯಾಗಿತ್ತು. ಆಮೇಲೆ ಎಲ್ಲಿಗೆ ಹೋಗಬೇಕು ಎಂದು ಚರ್ಚೆ. ಸಂಜೆಯ ವೇಳೆಗೆ ಮನೆ ಸೇರಿಕೊಳ್ಳಬೇಕು. ಇಲ್ಲಿಯ ಹೆದ್ದಾರಿಗಳಲ್ಲಿ ಕೂಡ ಕತ್ತಲೆಯಾದ ಮೇಲೆ ಪ್ರಯಾಣ ಅಷ್ಟೇನೂ ಸುರಕ್ಷಿತವಲ್ಲ. ಈ ತಿಂಗಳ ಮೊದಲಲ್ಲಿ ರಾಷ್ಟ್ರೀಯ ಹೆದ್ದಾರಿಯಲ್ಲಿ ನಾಲ್ಕು ಜನರು—ಒಂದೇ ದಿನದಲ್ಲಿ ಇಬ್ಬರ—ಕೊಲೆಯಾಗಿತ್ತು.

"ಇಲ್ಲೇ ಹತ್ತಿರದಲ್ಲೊಂದು ನ್ಯಾಷನಲ್ ಪಾರ್ಕ್ ಇದೆ. ಅಲ್ಲಿಗೆ ಹೋಗೋಣ" ಎಂದು ರಾಮು ಸಲಹೆ ಕೊಟ್ಟ. ಈ ಮಹರಾಯನ ಭಾಷೆಯಲ್ಲಿ 'ಹತ್ತಿರ' ಎಂದರೆ ಎಷ್ಟು ದೂರವೋ! ಹಿಂದೊಬ್ಬ ಆಂಗ್ಲ ಡೆಪ್ಯುಟಿ ಕಮಿಷನರು ಮೈಸೂರು ಜಿಲ್ಲೆಯ ಹಳ್ಳಿಯೊಂದಕ್ಕೆ ಹೋಗಬೇಕಾಯಿತಂತೆ. ಅದು ಹತ್ತಿರ ಎಂದದ್ದರಿಂದ ನಡೆದುಕೊಂಡೇ ಹೊರಟ. ಮೈಲಿಗಟ್ಟಲೆ ನಡೆದರೂ ಊರು ಸಿಕ್ಕಲಿಲ್ಲ. ಜನವೇನೋ 'ಹತ್ತಿರ' ಎನ್ನುತ್ತಲೇ ಇದ್ದರು. ಕೊನೆಗೆ ಅವನು ಈ ಒಗಟೆಯನ್ನು ಬಿಡಿಸಲಾರದೆ ತನ್ನ ಗುಮಾಸ್ತನನ್ನು 'How many miles make one ಹತ್ತಿರ?' (ಒಂದು 'ಹತ್ತಿರ'ಕ್ಕೆ ಎಷ್ಟು ಮೈಲಿ?) ಎಂದು ಕೇಳಿದನಂತೆ. ಅಮೆರಿಕಕ್ಕೆ ಬಂದ ಮೇಲೆ ನನಗೂ ಇದೇ ಅನುಭವವಾಗುತ್ತಿದೆ.

"ವಾರಾಂತ್ಯದಲ್ಲಿ ಮಿನ್ನಿಯಾಪೊಲಿಸ್‌ಗೆ ಹೋಗಿ ಬರುವುದು ಸಾಧ್ಯವೆ?"

"ಅದಕ್ಕೇನು! ಹತ್ತಿರ."

"ಲಿಂಕನ್‌ಗೆ ಹೋಗಿಬರೋಣವೆ?"

"ಅದಕ್ಕೇನು! ಹತ್ತಿರ."

ಮಿನ್ನಿಯಾಪೊಲಿಸ್‌ಗೆ ಸುಮಾರು 500 ಮೈಲಿ. ಲಿಂಕನ್‌ಗೆ 180 ಮೈಲಿ!

"ಪಾರ್ಕ್ ನಿಜವಾಗಿಯೂ ಹತ್ತಿರ, ಕೇವಲ 80 ಮೈಲಿ. ಅದು ಬೇಡವಾದರೆ ಬ್ರೂಕ್ಲಿನ್ ಮೃಗಾಲಯಕ್ಕೆ ಹೋಗಬಹುದು. ಇಲ್ಲೇ ಇದೆ—20 ಮೈಲಿ."

ಡಯಾನಳಿಗೆ ಮೃಗಾಲಯಕ್ಕೆ ಹೋಗಬೇಕೆಂದು ಅಪೇಕ್ಷೆ. ಆದರೆ ನನ್ನ ಇಷ್ಟವೇನು ಎಂಬುದು ತಿಳಿಯದೆ "ಮೃಗಾಲಯಕ್ಕೆ ಹೋದರೆ ಸುನೀಲನಿಗೆ ಖುಷಿಯಾಗುತ್ತೆ, ಆದರೆ ತಾತನಿಗೆ ಬೇಸರವಾಗಬಹುದು. ಪಾರ್ಕಿಗೇ ಹೋಗೋಣ" ಎಂದಳು. ಈ ತಾತನ ಬುದ್ಧಿ ಅಷ್ಟೇನೂ ಮಂದವಲ್ಲ. ಅವಳ ಅಪೇಕ್ಷೆ ಅರ್ಥವಾಯಿತು. ನಾನೂ ಅವಳ ಕಡೆಗೇ ವೋಟುನೀಡಿದೆ.

ಮೃಗಾಲಯಕ್ಕೆ ಹೋಗುವ ರಸ್ತೆ ಹೆದ್ದಾರಿಯಲ್ಲ. ಇಕ್ಕೆಲದಲ್ಲೂ ಹುಲ್ಲುಗಾವಲಿನ ಹರವು, ಕಾಡಿನ ದಟ್ಟಣೆ, ಹಸುರಿನ ಸೂರೆ. ಮುಕ್ಕಾಲು ದಾರಿ ರಕ್ಷಿತವನ (forest preserve) ವೊಂದರ ನಡುವೆ ಹೋಗುತ್ತದೆ. ಅಲ್ಲಲ್ಲೇ ಗಾಲ್ಫ್ ಆಡಲು ಅನುಕೂಲಿಸುವಂತೆ ಕಾಡನ್ನು ಅಳವಡಿಸಿಕೊಂಡಿದ್ದಾರೆ. ಇಂಥ ಕಡೆಗಳಲ್ಲಿ ಬಣ್ಣಬಣ್ಣದ ಉಡುಪು ಧರಿಸಿ ಜನ ತಿರುಗಾಡುತ್ತಿರುವುದು ಮರಗಳ ನಡುವೆ ಕಾಣುತ್ತದೆ. ಅದರಿಂದ ಪ್ರಕೃತಿಯ ಸೊಬಗಿಗೆ ಭಂಗವೇನೂ ಇಲ್ಲ. ಕಾಡಿನಲ್ಲಿ ಹುಲಿಯೋ ಜಿಂಕೆಯೋ ಕಣ್ಣಿಗೆ ಬಿದ್ದರೆ ಅವುಗಳ ವೈವಿಧ್ಯ ಕಾಡಿಗೆ ಸಹಜವಾದದ್ದೇ ತಾನೆ. ಆ ಜನರಲ್ಲಿ ಜಿಂಕೆ ಹುಲಿಗಳೆರಡರ ಜಾತಿಗೆ ಸೇರಿದ ಜನರೂ ಇದ್ದಿರಬೇಕು.

ಅಮೆರಿಕದಲ್ಲಿ ಹಸಿವು ಸ್ವಲ್ಪ ಹೆಚ್ಚು. ದಾರಿಯಲ್ಲಿ ಸಿಕ್ಕಿದ ಹೋಟಲೊಂದರಲ್ಲಿ—ನಮ್ಮ ಕನ್ನಡ ಪದ್ಧತಿಯನ್ನನುಸರಿಸಿ ನಾನು ರೆಸ್ಟೊರಾಂಟನ್ನು ಹೋಟಲೆಂದೇ ಕರೆಯುತ್ತಿದ್ದೇನೆ–'ಲಂಚ್' (ಮಧ್ಯಾಹ್ನದ ಊಟ) ಮುಗಿಸಿಕೊಂಡು ಹೋಗೋಣವೆಂದು ನಿಶ್ಚಯಿಸಿದೆವು. ವಾಸ್ತವವಾಗಿ ಲಂಚ್ ಸಮಯ ಬಂದಿರಲಿಲ್ಲವಾದ್ದರಿಂದ ಕಾರ್ ನಿಲ್ಲಿಸುವ ಸ್ಥಳಕ್ಕಾಗಿಯೂ ಹೋಟಲಲ್ಲಿ ಕೂರುವ ಸ್ಥಳಕ್ಕಾಗಿಯೂ ಕ್ಯೂ ನಿಲ್ಲಬೇಕಾಗಲಿಲ್ಲ. ಅದು ಸ್ವೀಡಿಷ್ ಹೋಟಲು. ಮೂರು ಹಂತಗಳುಳ್ಳ ಸುಮಾರು 50 ಅಡಿ ಉದ್ದದ ಗ್ಯಾಲರಿ. ಅದರ ಮೇಲೆ ಸಾಲಾಗಿ ತಿಂಡಿ ತಿನಿಸುಗಳನ್ನು ಇಟ್ಟಿದ್ದರು. ಮಾಂಸಾಹಾರಿಗಳಲ್ಲದ ನಮಗೆ ಬೇಯಿಸಿದ ಆಲೂಗೆಡ್ಡೆ, ಸೊಪ್ಪು, ಈರುಳ್ಳಿ, ಕೋಸು

ಗೆಡ್ಡೆ, ಟೊಮೇಟೊ ಮುಂತಾದ್ದನ್ನೊಳಗೊಂಡ ಸ್ಯಾಲಡ್, ಚಟ್ನಿಯಂತಿದ್ದ ಏನೋ ಪದಾರ್ಥ (sauce ?), ಐಸ್‌ಕ್ರೀಮ್, ಸೊಗಸಾದ ಕಾಫಿ. ಬುಫೆ ಪದ್ಧತಿ, ನಾಲ್ಕಾರು ಪದಾರ್ಥಗಳನ್ನು ತಂದು ರುಚಿ ನೋಡಿ, ಇಷ್ಟವಾದದ್ದನ್ನು ಮತ್ತೆ ತರಬಹುದು. ಇಲ್ಲಿಗೆ ಬಂದ ಮೇಲೆ ಮನೆಯಿಂದ ಹೊರಗೆ ನಾನು ಊಟಮಾಡಿದ್ದು ಇದೇ ಮೊದಲು—ಮೊದಲ ಅನುಭವ ಅಹಿತವೇನಲ್ಲ.

ಪ್ರವೇಶಧನ—ತಲಾ ಒಂದು ಡಾಲರು—ಕೊಟ್ಟು ಮೃಗಾಲಯದೊಳಕ್ಕೆ ಹೋದೊಡನೆ ನಮ್ಮ ಕಣ್ಣಿಗೆ ಬಿದ್ದದ್ದು ಮರಗಳ ನಡುವೆ ನುಸುಳಿಕೊಂಡು ಹೋಗುತ್ತಿದ್ದ ಸುಮಾರು 60–70 ಅಡಿ ಉದ್ದದ ಹುಲಿ ! ಅದರ ಒಡಲಿನಲ್ಲಿ ಅನೇಕ ಮಹಿಳೆಯರೂ ಮಹನೀಯರೂ ಮಕ್ಕಳೂ ತುಂಬಿಕೊಂಡಿದ್ದದ್ದು ಕಾಣುತ್ತಿತ್ತು. ನನಗೆ ಹಳೆಯ ಲಿಮರಿಕ್ (ಹಾಸ್ಯಕ್ಕಾಗಿ ಬರೆಯುವ ಒಂದು ಬಗೆಯ ಪದ್ಯ) ಒಂದರ ನೆನಪು ಬಂತು :

There was a lady of Niger
Who went for a ride on a tiger
They returned from the ride
With the lady inside,
And a smile on the face of the tiger.

(ನೈಗರಿನ ಮಹಿಳೆಯೊಬ್ಬಳು ಇದ್ದಳೊಮ್ಮೆ ;
ವ್ಯಾಘ್ರವಾಹನೆಯಾಗಿ ಹೊರಟಳವಳು.
ಇಬ್ಬರೂ ಮರಳಿದರು ಪಯಣದಿಂದ—
ಮಹಿಳೆಯಿದ್ದಳು ಹುಲಿಯ ಒಡಲಿನಲ್ಲಿ,
ಮುಗುಳು ನಗೆಯುರುಳಿತ್ತು ಹುಲಿಯ ಮುಖದಲ್ಲಿ.)

ಇಲ್ಲೇನೋ ನಗು ಹುಲಿಯ ಮುಖದಲ್ಲಿರಲಿಲ್ಲ, ಸವಾರಿ ಹೊರಟಿದ್ದವರ ಮುಖದ ಮೇಲೇ ಇತ್ತು. ಒಂದು ಮೋಟಾರ್ ಕಾರಿಗೆ ನಾಲ್ಕು ಟ್ರಯ್ಲರುಗಳನ್ನು ಲಗತ್ತುಮಾಡಿ ಅವೆಲ್ಲ ಒಟ್ಟು ಒಂದು ಭಾರಿ ಹುಲಿಯ ಹಾಗೆ ಕಾಣುವಂತೆ ಪಟ್ಟೆಪಟ್ಟೆ ಬಣ್ಣ ಹಾಕಿದ್ದರು. ಈ ಹುಲಿ ಜನರನ್ನು ಹೊತ್ತು ಮೃಗಾಲಯವನ್ನು ಸುತ್ತುಹಾಕುತ್ತಲೇ ಇರುತ್ತದೆ. ಇದರ ಜೊತೆಗೆ ಸ್ವಲ್ಪ ದೂರದಲ್ಲಿ ಪುಟ್ಟದೊಂದು ರೈಲೂ ಇದೆ. ಈ ಏರ್ಪಾಡು ಮಕ್ಕಳಿಗಾಗಿ ; ಆದರೆ ಮಕ್ಕಳಷ್ಟೇ ಸಂಖ್ಯೆಯ ದೊಡ್ಡವರೂ ಇರುತ್ತಾರೆ. ನಾವು ಸುನೀಲನ ಜೊತೆಗೆ ಅದರಲ್ಲಿ ಸುತ್ತಿದೆವು.

ಆದರೆ ನಮ್ಮ ಮನೋವೃತ್ತಿಗೂ ಇಲ್ಲಿಯ ಜನರದ್ದಕ್ಕೂ ಅದೆಷ್ಟು

ವ್ಯತ್ಯಾಸ! ಮೃಗಾಲಯವಾಗಲಿ, ಸರೋವರದ ಅಥವಾ ಸಮುದ್ರದ ತೀರವಾಗಲಿ, ಬೆಟ್ಟದ ತಪ್ಪಲಾಗಲಿ, ವಿಹಾರಕ್ಕಾಗಿ ಯಾವ ಸ್ಥಳಕ್ಕೆ ಬಂದರೂ ಈ ಜನ ಗೆಲುವಿನಲ್ಲಿ ಮಕ್ಕಳೊಡನೆ ಸ್ಪರ್ಧೆ ಹೂಡುತ್ತಾರೆ. ನಕ್ಕು ನಲಿದು ಕೆಲೆದು ಕುಪ್ಪಳಿಸಿ ಹಾಡಿ ಕುಣಿದು ಆನಂದಪಡುತ್ತಾರೆ. ತಮ್ಮ ಸ್ಥಾನಮಾನಗಳು, ವಯಸ್ಸು, ಇತರರೆದುರಿಗೆ ಗಂಭೀರವಾಗಿ ನಡೆದುಕೊಳ್ಳಬೇಕೆಂಬ ಸಭ್ಯ ಮನೋವೃತ್ತಿ, ಕೊನೆಗೆ ತಾನು ಗಂಡು ಅಥವಾ ಹೆಣ್ಣು ಎಂಬುದರ ಅರಿವು—ಎಲ್ಲವನ್ನೂ ಮರೆತು ಹಿಡಿತ ಹಿಂಜರಿಕೆಗಳನ್ನು ಗಾಳಿಗೆ ತೂರಿಕೊಟ್ಟು ಗೆಲುವಿನಿಂದ ಬದುಕುವ ಶಕ್ತಿ ಇವರಿಗಿದೆ. ಅದು ನಮ್ಮಲ್ಲಿ ಎಂದೂ ಇರಲಿಲ್ಲವೊ ಅಥವಾ ಹಿಂದೆ ಇದ್ದುದನ್ನು ಈಗ ಕಳೆದುಕೊಂಡಿದ್ದೇವೆಯೊ? ನಂದಾಮ ಶರದಶ್ಶತಂ (ನೂರು ವರ್ಷ ಆನಂದವಾಗಿರೋಣ) ಎಂದವರು ನಮ್ಮ ಪೂರ್ವಿಕರೇ ಹೌದೆ? ನಮ್ಮಲ್ಲಿ ಜೀವನೋತ್ಸಾಹದ ಚಿಲುಮೆ ಬತ್ತಿಹೋಗಿದೆಯೆ? ಅಥವಾ.....ಅಥವಾ ನಾವು ಅದನ್ನು ನಿಯಂತ್ರಿಸಿ ಉಚಿತ ಪ್ರಮಾಣದಲ್ಲಿ ಮಾತ್ರ ಹೊರಹೊಮ್ಮಿಸುತ್ತಿದ್ದೇವೆಯೊ? ಭಾರತೀಯ ಸಂಸ್ಕೃತಿಗೆ ಹೊಂದಿಕೊಂಡು ಬೆಳೆದವರು ಸ್ತ್ರೀಯರ ವಿಷಯದಲ್ಲಿ ತೋರಿಸುವ ಸಲಿಗೆಯ ಮಿತಿ, ಇತರರೆದುರಿಗೆ ಪ್ರೇಮಪ್ರದರ್ಶನ ಮಾಡುವ ವಿಷಯದಲ್ಲಿ ಉಳಿಸಿಕೊಂಡಿರುವ ಹಿಂಜರಿಕೆ—ಇದನ್ನು ನೋಡಿದಾಗ ನಮ್ಮಲ್ಲಿರುವುದು ಉತ್ಸಾಹದ ಅಭಾವವಲ್ಲ, ಔಚಿತ್ಯದ ಅಸ್ತಿತ್ವ ಎನ್ನಿಸುತ್ತದೆ. ಇದರಲ್ಲಿ ಸತ್ಯಾಂಶವಿದೆಯಾದರೂ ನಮ್ಮ ಬದುಕಿನಲ್ಲಿ ಗೆಲುವನ್ನು ಸ್ವಲ್ಪ ಹೆಚ್ಚಿಸಿಕೊಳ್ಳುವುದು ಬಹುಶಃ ಅವಶ್ಯಕ.

ಇವರನ್ನು ನೋಡುತ್ತ ನೋಡುತ್ತ ನನ್ನ ಮನಸ್ಸಿಗೆ ಮತ್ತೊಂದು ಯೋಚನೆ ಬಂತು: ನಮ್ಮಲ್ಲಿ ಗೆಲುವಿನ ಅಭಾವ ಅಥವಾ ಕೊರತೆ ಎಷ್ಟು ಅಸ್ವಾಭಾವಿಕವೋ ಇವರ ಗೆಲುವೂ ಅಷ್ಟೇ ಅಸ್ವಾಭಾವಿಕ ಎನ್ನಬಹುದು. ನಮ್ಮನ್ನು ಯಾವುದೊ ಜಡ್ಡು, ಮೂದೇವಿ, ಮೆಟ್ಟಿದ್ದರೆ ಇವರನ್ನು ಯಾವುದೋ ತಿರುಗುಪೆಪ್ಪ ಮೆಟ್ಟಿದೆ. ಇವರ ಕಾಲಿನಲ್ಲಿ ಚಕ್ರವಿದೆ; ಮಾತ್ರವಲ್ಲ, ಮೈಮನಗಳೆಲ್ಲದರಲ್ಲೂ ಚಕ್ರಗಳಿವೆ ಮತ್ತು ಅವು ಚಲಿಸುತ್ತಲೇ ಇರುತ್ತವೆ. ಸ್ಥಾಯಿಯಿಲ್ಲ, ಎಲ್ಲ ಸಂಚಾರಿಯೇ. ಅರ್ಧ ಘಂಟೆ ಇವರನ್ನು ಒಂದು ಕಡೆ ಕೂರಿಸಿ ನಮ್ಮ ಗಾಯತ್ರಿಯನ್ನೋ ಅವರ ಪೇಟರ್‌ನಾಸ್ಟರನ್ನೋ[1] ಜಪ ಮಾಡಿಸಲು

[1] Paternoster ಎಂದರೆ 'ನಮ್ಮ ತಂದೆ'. ಯೇಸು ಕ್ರಿಸ್ತ ಹೇಳಿಕೊಟ್ಟ ಆ ಪ್ರಾರ್ಥನೆ 'Our father which art in heaven' ಎಂದು ಪ್ರಾರಂಭವಾಗುತ್ತದೆ.

ಸಾಧ್ಯವೆ? ಹೇಳಲಾರೆ!

ಈ ಚಂಚಲತೆ ಅವರ ಹೃದಯವನ್ನೂ ಆಕ್ರಮಿಸಿರುವಂತೆ ತೋರುತ್ತದೆ. ಇವತ್ತು ಇಲ್ಲಿ ಒಬ್ಬರ ನಡುವನ್ನು ಮತ್ತೊಬ್ಬರು ಬಳಸಿ ಆಗಾಗ ಪರಸ್ಪರ ಮುತ್ತಿಟ್ಟು ಅರ್ಧನಡೆದು ಅರ್ಧಕುಣಿದು ಸಾಗುತ್ತಿರುವ ಯುವಕಯುವತಿಯರು ನಾಳೆ ಒಬ್ಬರ ಮುಖವನ್ನು ಮತ್ತೊಬ್ಬರು ನೋಡದಿರುವುದು ಅಪರೂಪವೇನಲ್ಲ—ಅವರಿಬ್ಬರೂ ಮತ್ತಾರೊಡನೆಯೋ ಕುಣಿದು ಸಾಗುತ್ತಾರೆ. ನಮ್ಮ ಹತ್ತಿರದಲ್ಲೇ ಇರುವ ಈ ಫ್ಲೆಮಿಂಗೊ ಪಕ್ಷಿಗಳ ಕೊಳದ ಬಳಿಯಲ್ಲಿ ನಡುವಯಸ್ಸಿನ ದಂಪತಿಗಳ ಮತ್ತು ಮಕ್ಕಳ ಗುಂಪೊಂದಿದೆ. 6-7 ವರ್ಷದ ಮಗಳು ತಾಯಿಯ ಕೈಹಿಡಿದು ಎಳೆಯುತ್ತಿದ್ದಾಳೆ; ತಾಯಿ ಜುಗುಪ್ಸೆಯ ವೇಷ ತಾಳಿದ ಆನಂದದಿಂದ ಮಗಳ ಕೆನ್ನೆ ಹಿಂಡಿ 'ಸಾಕಮ್ಮ, ನಿನ್ನ ಕಾಟ' ಎನ್ನುತ್ತಿದ್ದಾಳೆ. ಮೂರು ವರ್ಷದ ಮಗು ತಂದೆಯ ಹೆಗಲ ಮೇಲೆ ಹೈ ಹೈ ಎನ್ನುತ್ತ ಸವಾರಿ ಮಾಡುತ್ತಿದೆ. ದಂಪತಿಗಳ ನಡುವೆ ಹನಿ (Honey), ಡಾರ್ಲಿಂಗ್, ಹಾನ್ (Hon—ಇದು 'ಹನಿ'ಯನ್ನು ಅಕ್ಕರೆಯ ಆಧಿಕ್ಯದಿಂದ ಮೊಟಕುಮಾಡಿ ಪಡೆದ ಪದ) ಇತ್ಯಾದಿ ಪ್ರೇಮದ ಮಾತಿನ ವಿನಿಮಯ ನಡೆಯುತ್ತಿದೆ. ಆದರೆ ಇನ್ನು ಮೂರು-ನಾಲ್ಕು ತಿಂಗಳಲ್ಲಿ ಇದೇ ದಂಪತಿಗಳು ಒಬ್ಬರಿಗೊಬ್ಬರು ಸೋಡ ಚೀಟಿ ಕೊಟ್ಟು, ಮಕ್ಕಳಿಗೆ ತಾಯಿಯ ಅಥವಾ ತಂದೆಯ ಬಳಕೆಯನ್ನು ತಪ್ಪಿಸಿ ಸ್ವೇಚ್ಛೆಯಾಗಿ ವ್ಯಕ್ತಿ ಸ್ವಾತಂತ್ರ್ಯದ ಜೀವನ ನಡಸಿದರೆ ಆಶ್ಚರ್ಯ ಪಡಬೇಕಾದ್ದಿಲ್ಲ.

ಆದರೂ—ಅವರ ಮನಸ್ಸು ಅಷ್ಟೊಂದು ಅಸ್ಥಿರವಾದರೆ, ಅವರಿಗೆ ತಪಶ್ಶಕ್ತಿಯಿಲ್ಲದಿದ್ದರೆ, ಅವರು ಅಣುವನ್ನು ಹೇಗೆ ಸೀಳಿದರು, ಬಾಹ್ಯಾಕಾಶದಲ್ಲಿ ಹೇಗೆ ಸಂಚರಿಸಿದರು? ತಪಸ್ಸಿಲ್ಲದೆ ಅದೆಲ್ಲ ಸಾಧ್ಯವೆ? ಮತ್ತೊಂದು ಸಾರಿ 'ಹೇಳಲಾರೆ' ಎನ್ನಬೇಕು. ಸಮಸ್ಯೆ ಎಷ್ಟು ಜಟಿಲವೋ ಮೇಲೆ ಕಾಣಿಸಿರುವ ನನ್ನ ಆಲೋಚನಾ ಸರಣಿ ಅಷ್ಟೇ ಸರಳವಾಯಿತು.

ಮೃಗಾಲಯದ ವಿಷಯ ಬರೆಯಹೊರಟರೆ ಪ್ರೇಕ್ಷಕರೇ ಹೆಚ್ಚು ಸ್ಥಳವನ್ನು ಆಕ್ರಮಿಸುತ್ತಿದ್ದಾರೆ!

ಫ್ಲೆಮಿಂಗೊ ಪಕ್ಷಿಗಳು ಮೈಸೂರಿನ ಮೃಗಾಲಯದಲ್ಲಿದ್ದವೋ ಇಲ್ಲವೋ ನೆನಪಿಲ್ಲ. ನಾನು ಅಲ್ಲಿಗೆ ಹೋಗಿ ಮೂರು ದಶಕಗಳಾದವು. ಇಲ್ಲಿ ಆ ಪಕ್ಷಿಗಳ ಎತ್ತರದ ನಿಲುವನ್ನೂ ನಸುಗೆಂಪಿನ ಸೊಬಗನ್ನೂ ಕಂಡು ಮುಗ್ಧನಾದೆ. ಹುಸಿ ನಮಗೇನೂ ಹೊಸದಲ್ಲ. ನಾನು ಹಿಂದೆ ನೋಡದಿದ್ದ ಪ್ರಾಣಿಯೆಂದರೆ ಕಪ್ಪುಬಣ್ಣದ ಜಾಗುವರ್ (jaguar). ಇದೂ 'ಹುಲಿಯ ಜಾತಿಗೆ ಸೇರಿಸಿನೆಂದು

ಗರ್ವಿಸಬಹುದಾದ ಪ್ರಾಣಿ. ಇದರ ಮುಖದಲ್ಲಿ ಹುಲಿಯ ಮುಖದಲ್ಲಿರುವುದ ಕ್ಕಿಂತ ಹೆಚ್ಚು ಕ್ರೌರ್ಯ ಕಾಣುತ್ತದೆ. ಆದರೆ ಮಿರಿಮಿರಿ ಮಿಂಚುವ ಅದರ ಮೈಬಣ್ಣ—ಕಪ್ಪು ಅಷ್ಟು ಮನೋಹರವಾಗಿರುವುದು ಸಾಧ್ಯವೆ ಎಂದು ಆಶ್ಚರ್ಯಪಡುವಂತಾಯಿತು. ಅದು ಬಳುಕುತ್ತ ನಡೆಯುವಾಗ ಅದರ ಚಲ ನೆಯ ಲಯ, ಸೂಚಿತವಾಗುವ ಅದ್ಭುತಶಕ್ತಿ, ಇದನ್ನೆಲ್ಲ ನೋಡಿದರೆ ಅದು ನಿಜವಾಗಿ ಹುಲಿಯ ಬಂಧುವೇ.

ಇಲ್ಲಿ ಎಲ್ಲಕ್ಕಿಂತ ಹೆಚ್ಚು ಆಕರ್ಷಕವಾದ—ನಾನು ಹಿಂದೆಂದೂ ನೋಡ ದಿದ್ದ—ದೃಶ್ಯವೆಂದರೆ ಡಾಲ್ಫಿನ್ ಪ್ರದರ್ಶನ. ಸುಮಾರು 100 ಅಡಿ ಉದ್ದ, 30–35 ಅಡಿ ಅಗಲದ ದೊಡ್ಡ ಕೊಳ, ನೀರಿನ ಆಳ 14 ಅಡಿಯಂತೆ. ಅದರಲ್ಲಿ 4–5 ಪಳಗಿಸಿದ ಡಾಲ್ಫಿನ್‌ಗಳಿವೆ. ನೀರೊಳಗಿನ ಬದುಕಿಗೆ ಅನುಕೂಲ ವಾಗುವಂತೆ ಅವುಗಳ ಶರೀರ ಶತಸಹಸ್ರಮಾನಗಳಲ್ಲಿ ಮೀನಿನ ಶರೀರದಂತೆಯೇ ವಿಕಾಸಗೊಂಡಿವೆ. ಆದರೆ ಅವು ಮೀನುಗಳಲ್ಲ, ತಿಮಿಂಗಿಲದ ಜಾತಿಗೆ ಸೇರಿದ ಪ್ರಾಣಿಗಳು. ನಾಯಿಗಳನ್ನು ಪಳಗಿಸುವಂತೆ ಇವನ್ನೂ ಪ್ರದರ್ಶನಕ್ಕಾಗಿ ಪಳ ಗಿಸಿ ಆಟಗಳನ್ನು ಕಲಿಸಿದ್ದಾರೆ.

ಜನ ಸೇರಿದೊಡನೆಯೇ ಅವು ಯಾರ ಮಾತಿಗೂ ಕಾಯದೆ ನೀರಿನಿಂದ 7–8 ಅಡಿ ಎತ್ತರಕ್ಕೆ ಹಾರಿ ಲಾಗ ಹಾಕಲಾರಂಭಿಸುತ್ತವೆ. ನೀರಿಗೆ ಟೋಪಿ ಯನ್ನೆಸೆದರೆ ಈಜಿಕೊಂಡು ಹೋಗಿ ಅದನ್ನು ತಂದು ಎಸೆದವನ ಕೈಗೆ ಕೊಡು ತ್ತವೆ. ಬ್ಯಾಸ್ಕೆಟ್ ಚೆಂಡನ್ನು ಅದಕ್ಕಾಗಿ ಮಾಡಿದ ಕುಕ್ಕೆಯೊಳಕ್ಕೆ ಗುರಿಯಿಟ್ಟು ಎಸೆಯುತ್ತವೆ. ನಾಲ್ಕಡಿ ವ್ಯಾಸವುಳ್ಳ ದೊಡ್ಡ ಒಳೆಯ ಮೂಲಕ ಶರವೇಗದಿಂದ ತೂರಿ ಹಾರುತ್ತವೆ. 12 ಅಡಿ ಎತ್ತರದಲ್ಲಿ ಆಹಾರವನ್ನು ತೂಗುಬಿಟ್ಟರೆ ಅಷ್ಟೆ ತ್ತರಕ್ಕೂ ನೆಗೆದು ಅದನ್ನು ಕಚ್ಚಿಕೊಂಡು ಹಾಗೇ ನೀರಿಗೆ ಲಾಗ ಹಾಕುತ್ತವೆ.

ಈ ಸರ್ಕಸ್ಸು ನೋಡಬೇಕಾದದ್ದೇ. ಆದರೆ ಅದಕ್ಕಿಂತ ಹೆಚ್ಚಾಗಿ ನಮ್ಮನ್ನು ಆಕರ್ಷಿಸುವುದೆಂದರೆ ಡಾಲ್ಫಿನ್‌ಗಳ ಮುಖದಲ್ಲಿ ಸ್ಪಷ್ಟವಾಗಿ ಕಾಣುವ ಸ್ನೇಹಪರತೆ. ಅದನ್ನು ಗುರುತಿಸದಿರುವುದು ಸಾಧ್ಯವೇ ಅಲ್ಲ. ಡಾಲ್ಫಿನ್ ಗಳ ವಿಷಯ ನಾನು ಓದಿದ್ದೆನಾದರೂ ಅವನ್ನು ನೋಡಿರಲಿಲ್ಲ. ಅವುಗಳದ್ದು ಸಾಧಾರಣವಾಗಿ ನಗುಮುಖ ಹಾಗೆನ್ನುವುದು ರೂಪಕ ಮಾತ್ರವಲ್ಲ. ಮಕ್ಕಳ ಮುಖದಲ್ಲಿ ಪೈಶಾಚ್ಯ, ಚೇಷ್ಟೆ, ನಗು, ಇವೆಲ್ಲ ಸುಳಿದು ಹೋಗುವಂತೆಯೇ ಇವುಗಳ ಮುಖದಲ್ಲೂ ಸುಳಿಯುತ್ತವೆ. ಬೇಕಾದ ತಿಂಡಿಯನ್ನು ಪಡೆಯಲು ಮಕ್ಕಳು ಕಾಡಿ ಬೇಡಿಯೋ, ಅತ್ತು ಕರೆದೋ ಕೋಪಗೊಂಡೋ ನಗುವಿನಿಂದಲೋ ತಾಯಿಯನ್ನು ಪ್ರಸನ್ನಳಾಗಿಸುವಂತೆ ಇವೂ ಯಜಮಾನನಲ್ಲಿ ಹಾಗೇ ತಂತ್ರ

ಗಳನ್ನು ಬಳಸಿ ತಿಂಡಿಯನ್ನು ಕಸಿದುಕೊಳ್ಳುತ್ತವೆ. ಸುನೀಲನಿಗೂ ದ್ವಿತೀಯ ಶೈಶವದಲ್ಲಿರುವ ನನಗೂ ಈ ಡಾಲ್ಫಿನ್ ಪ್ರದರ್ಶನ ಬಹಳ ಆನಂದಕೊಟ್ಟಿತು. ಚಿಕ್ಕಮಕ್ಕಳನ್ನು ಜೊತೆಯಲ್ಲಿ ಕರೆದುಕೊಂಡು ಹೋಗುವುದು ಒಳ್ಳೆಯದು. ಸುನೀಲನ ಹೆಸರು ಹೇಳಿಕೊಂಡು ನಾವೆಲ್ಲ ಚಾಕೊಲೆಟ್ ಐಸ್‌ಕ್ರೀಮು ಗಳನ್ನು ತಿಂದು ಫಲಾಮೃತ ಕುಡಿದೆವು. ಮನೆಗೆ ಹಿಂದಿರುಗಿದಾಗ ಏಳು ಘಂಟೆ.

## ಹಿನ್ನೋಟ : ರಾಜು—ನ್ಯಾನ್ಸಿಯರ ಮದುವೆ

ನೈಲ್ಸ್‌ಗೆ ಬಂದ ದಿನವೇ ಮೆಕ್‌ಮಿಲನ್‌ದಂಪತಿಗಳಿಗೆ ಫೋನ್‌ಮಾಡಿದ್ದೆನಷ್ಟೆ. ಅವರು "ಲಿಂಕನ್‌ಗೆ ಯಾವಾಗ ಬರುತ್ತೀರಿ" ಎಂದು ಕೇಳಿದಾಗ "ನನಗೇನು, ಕೆಲಸವಿಲ್ಲ ಕಾರ್ಯವಿಲ್ಲ. ನೀವೂ ರಾಮುವೂ ಮಾತಾಡಿಕೊಂಡು ನಿಶ್ಚಯ ಮಾಡಿ. ಅಪ್ಪಣೆ, ಜಹಾಪನಾ ಎನ್ನುವುದಷ್ಟೇ ನನ್ನ ಕೆಲಸ" ಎಂದು ಉತ್ತರ ಕೊಟ್ಟಿದ್ದೆ. ಮೇ ತಿಂಗಳ ಕೊನೆಯಲ್ಲಿ ಅಲ್ಲಿಗೆ ಹೋಗುವುದೆಂದು ಗೊತ್ತಾಗಿತ್ತು. ಮೊದಮೊದಲು ನನಗೆ ಈ ಭೇಟಿಯ ವಿಷಯದಲ್ಲಿ ಕುತೂಹಲದ ಜೊತೆಗೆ ನಿರುತ್ಸಾಹವೂ ಬೆರೆದಿತ್ತು. ಪಾಶ್ಚಾತ್ಯರಲ್ಲಿ ಮಾವ-ಅಳಿಯಂದಿರ ಮಾವ-ಸೊಸೆ ಯರ, ಕೊನೆಗೆ ತಂದೆ–ಮಕ್ಕಳ ಸಂಬಂಧ ತಾವರೆಯೆಲೆಗೂ ಅದರ ಮೇಲಿರುವ ನೀರಿಗೂ ಇರುವಂಥಾದ್ದು. ಇನ್ನು ಬೇಗರ ಸಂಬಂಧ—ಅದರಲ್ಲೂ ಬೀಗರು ಜನಾಂಗ, ದೇಶ, ಮತ, ಸಂಸ್ಕೃತಿ. ಎಲ್ಲ ವಿಷಯದಲ್ಲೂ ಬೇರೆಯವರಾಗಿರುವ ಪರಿಸ್ಥಿತಿಯಲ್ಲಿ—ಹೇಗಿದ್ದೀತು! ಆದರೆ ಇದು ನನ್ನ ಸೊಸೆಗೂ ಮೊದಲ ಮೊಮ್ಮಗಳು ಕಮಲಳಿಗೂ (ಇನ್ನಿಬ್ಬರು ಮೊಮ್ಮಕ್ಕಳು ತಾಯಿಯ ಬಂಧು ಗಳನ್ನು ಇನ್ನೂ ಕಾಣರು) ಸಂತೋಷ ಕೊಡುವ ವಿಷಯ. ಆದ್ದರಿಂದ ಹೋಗಲೇಬೇಕು. ನನಗೂ ಅದೊಂದು ಹೊಸ ಅನುಭವ. ಆಂಗ್ಲರೊಡನೆಯೂ ಅಮೆರಿಕನ್ನರೊಡನೆಯೂ ಬೇಕಾದಹಾಗೆ ಮಾತಾಡಿದ್ದೇನಾದರೂ ಎಂದೂ ಅತಿಥಿಯಾಗಿ ಅವರ ಮನೆಯಲ್ಲಿ ಇದ್ದದ್ದಿಲ್ಲ.

ಜೊತೆಗೆ ಇನ್ನೊಂದು ಕುತೂಹಲವೂ ಇತ್ತು. ಮೆಕ್‌ಮಿಲನ್ ದಂಪತಿ ಗಳಿಗೆ ರಾಜು ತಮ್ಮ ಮಗಳನ್ನು ಮದುವೆಯಾಗುವುದು ಇಷ್ಟವಿರಲಿಲ್ಲ. ಆ ವಿಷಯ ತಿಳಿದೊಡನೆ ಅವರು ನನಗೆ ತಂತಿ ಕೊಟ್ಟಿದ್ದರು: "ನಿಮ್ಮ ಮಗ ಮತ್ತು ನಮ್ಮ ಮಗಳು ಮದುವೆಯಾಗಬೇಕೆಂದಿದ್ದಾರೆ. ನಡವಳಿಕೆ, ಮತ, ಸಂಸ್ಕೃತಿ, ಇವೆಲ್ಲ ದೃಷ್ಟಿಯಿಂದಲೂ ಇದು ನಮಗೆ ಇಷ್ಟವಿಲ್ಲ. ನೀವು ನಿಮ್ಮ ಮಗನಿಗೆ ಬೇಡ ಎಂದು ಹೇಳಿ; ನಮ್ಮೊಡನೆ ಸಹಕರಿಸಿ" ಎಂದು, ಅವರಂತೆ ನಾನೂ

ಆ ಮದುವೆಗೆ ವಿರೋಧಿಯೇ. "ಇದು ನನಗೂ ಇಷ್ಟವಿಲ್ಲ, ನಿನ್ನ ತಾಯಿಗೂ ಇಷ್ಟವಿಲ್ಲ" ಎಂದೇನೋ ರಾಜುವಿಗೆ ಸ್ಪಷ್ಟಪಡಿಸಿದೆ. ಆದರೆ 'ಬೇಡ' ಎಂದು ಬರೆಯಲಿಲ್ಲ. ನಾವು ಆ ಮದುವೆಯನ್ನು ವಿರೋಧಿಸುವುದಕ್ಕೆ ಕಾರಣವೇನು, ಅದರ ಪರವಾಗಿಯೂ ವಿರೋಧವಾಗಿಯೂ ಹೇಳಬಹುದಾದದ್ದೇನು, ಎಂದೆಲ್ಲ ವಿವರಿಸಿ, "ಇದನ್ನೆಲ್ಲ ಯೋಚಿಸಿ ನಿನ್ನಿಷ್ಟವಿದ್ದಂತೆ ಮಾಡು" ಎಂದು ಕಾಗದ ಬರೆದೆ ; ಆ ಕಾಗದದ ಪ್ರತಿಯನ್ನು ಮೆಕ್‌ಮಿಲನ್‌ರಿಗೆ ಕಳಿಸಿದೆ. ರಾಜು ತನ್ನ ನಿಲುವನ್ನು ಬದಲಾಯಿಸಲಿಲ್ಲ. "ನ್ಯಾನ್ಸಿಯನ್ನೇ ಮದುವೆಯಾಗಬೇಕೆಂದು ನಿಶ್ಚಯಿಸಿದ್ದೇನೆ. ನನ್ನ ಸೌಖ್ಯಕ್ಕೆ ಅದು ಅವಶ್ಯಕ. ನಿಮ್ಮಿಬ್ಬರ ಒಪ್ಪಿಗೆಯನ್ನೂ ಆಶೀರ್ವಾದವನ್ನೂ ತಿಳಿಸಿ" ಎಂದು ಉತ್ತರ ಬರೆದ. ನಾನೂ ನನ್ನ ನಿಲುವನ್ನು ಬದಲಾಯಿಸಲಿಲ್ಲ. "ನಮ್ಮ ಒಪ್ಪಿಗೆಯುಂಟು ಎಂದು ಬರೆದರೆ ಅದು ಸುಳ್ಳಾಗುತ್ತದೆ. ನಮ್ಮ ಆಶೀರ್ವಾದ ಮಾತ್ರ ಖಂಡಿತ ಇದೆ, ಅದು ಯಾವಾಗಲೂ ಇದ್ದೇ ಇರುತ್ತದೆ" ಎಂದು ಹೇಳಿ ಆ ಸಂಬಂಧದ ಪತ್ರವ್ಯವಹಾರವನ್ನು ಮುಗಿಸಿದೆ.

ಮದುವೆಯಾದ ಮೇಲೆ ರಾಜು ಎರಡು ವಾರ ರಜಪಡೆದು ತಾನೊಬ್ಬನೇ ಇಂಡಿಯಕ್ಕೆ ಬಂದ—ಕೇವಲ ನಮ್ಮನ್ನು ಸಮಾಧಾನಪಡಿಸಲೆಂದು. ಅವನು ವಾಪಸು ಹೋದಾಗ ನಾನು ನಮ್ಮ ವೈದಿಕ ಆಶೀರ್ವಾದ ಮಂತ್ರವನ್ನು.... ಅದರ ಕೆಲವು ಭಾಗಗಳು ನನಗೆ ಬಹಳ ಮೆಚ್ಚು—ಇಂಗ್ಲಿಷಿಗೆ ಭಾಷಾಂತರಿಸಿ ನ್ಯಾನ್ಸಿಗೆ ಅವುಗಳನ್ನೊಳಗೊಂಡ ಕಾಗದ ಬರೆದೆ. ಅದಕ್ಕೆ ನನ್ನ ಹೆಂಡತಿ, ನಾನು, ನನ್ನ ತಮ್ಮಂದಿರು, ಎಲ್ಲರೂ ರುಜುಮಾಡಿ ರಾಜುವಿನ ಕೈಯಲ್ಲಿ ಕೊಟ್ಟು ಕಳಿಸಿದೆವು. ಅಮೆರಿಕನ್ ಹುಡುಗಿಗೂ ನಮಗೂ ಹೊಂದಿಕೆ ಬೆಳೆಯಬೇಕಾದರೆ ಸ್ವಲ್ಪ ಕಾಲ ಬೇಕೆಂದು ನಾವೆಲ್ಲ ಬಲ್ಲೆವು. ಆದರೂ ಆ ವೇಳೆಗೆ ನಮ್ಮ ಮನಸ್ಸಿನಲ್ಲಿ ನ್ಯಾನ್ಸಿ ಮೆಕ್‌ಮಿಲನ್‌ರ ಮಗಳಲ್ಲ, ನಮ್ಮ ಮನೆಗೆ ಬಂದ ಸೊಸೆ.

ಈಗ ನ್ಯಾನ್ಸಿ ಭಾರತಕ್ಕೆ ಚೆನ್ನಾಗಿ ಹೊಂದಿಕೊಂಡವಳು ಮಾತ್ರವಲ್ಲ, ಅವಳು ತಂದ ಪಾಶ್ಚಾತ್ಯ ಸಂಸ್ಕೃತಿಯ ಮಿಲನದಿಂದಾಗಿ ರಾಜುವಿನ ಮತ್ತು ನನ್ನ ಮನೆಯ ಜೀವನಸಂಪತ್ತು ಹೆಚ್ಚಿದೆ. ಯೇಸುಕ್ರಿಸ್ತನ ಮತ್ತು ಬೈಬಲಿನ ವಿಷಯವಾಗಿ ನನ್ನ ಮೊಮ್ಮಗಳು ಕಮಲ ಕೆಲವು ವೇಳೆ ನನಗೆ ಪ್ರಶ್ನೆ ಹಾಕಿದ್ದಾಳೆ. ಅದೇ ಕಮಲ "ಗೌರೀ ಪೂಜೆಗೆ ಮಂಟಪ ಕಟ್ಟಿಕೊಡು" ಎಂದು ನನ್ನನ್ನು ಕಾಡಿ ಸಿದ್ಧತೆ ಮಾಡಿಸಿಕೊಂಡು ಪೂಜೆಮಾಡಿ ನನಗೆ ಚರಪು ಕೊಟ್ಟಿದ್ದಾಳೆ. ಎರಡೂ ನನಗೆ ಆನಂದ ಕೊಟ್ಟಿವೆ.

ಇದೆಲ್ಲ ಸರಿ. ಆದರೆ ತಮ್ಮ ಮಗಳು ಭಾರತೀಯನನ್ನು—ಹಿಂದುವನ್ನು—ಮದುವೆಯಾದಳಲ್ಲ ಎಂಬ ಅಸಮಾಧಾನ ಮೆಕ್‌ಮಿಲನ್ ದಂಪತಿಗಳಲ್ಲಿ ಪೂರ್ತಿ ಹೋಗಿದೆಯೋ ಅಥವಾ ಅದರ ಸಿಲುಕೇನಾದರೂ ಉಳಿದಿದೆಯೋ ಎಂಬ ಸಂದೇಹ ನನಗೆ ಒಂದೆರಡು ಸಾರಿ ಬಂದಿದೆ. ಅವರು ಮಗಳಿಗೆ ಆಗಾಗ ಕಾಗದ ಬರೆಯುತ್ತಿರುವುದು, ತಾವು ಮೆಚ್ಚಿದ ಪುಸ್ತಕಗಳನ್ನೂ ಮಾಸಪತ್ರಿಕೆಗಳನ್ನೂ ಇತರ ಕೊಡುಗೆಗಳನ್ನೂ ಕಳಿಸುತ್ತಿರುವುದು, ಇದನ್ನೆಲ್ಲ ನೋಡಿದರೆ ಅಸಮಾಧಾನ ಮಾಯವಾಗಿರಬೇಕು ಎನ್ನಿಸುತ್ತದೆ. ಆದರೂ ನನಗೆ 'ಅವರ ಮನಸ್ಸು ಹೇಗಿದೆ, ನೋಡಬೇಕು' ಎಂಬ ಕುತೂಹಲವಿತ್ತು.

ಇಂಥ ವಿಷಯದಲ್ಲಿ ಪಾಶ್ಚಾತ್ಯರ ಮನಸ್ಸು ನಮ್ಮದಕ್ಕಿಂತ ಉದಾರವಾದದ್ದು ಎಂದು ಅನೇಕರು—ನಮ್ಮ ಜನ ಮತ್ತು ಪಾಶ್ಚಾತ್ಯರು—ಹೇಳಿದ್ದನ್ನು ಕೇಳಿದ್ದೇನೆ. ಇಂಥ ಸಾಮಾನ್ಯೀಕರಣದ ಮಾತಿನಲ್ಲಿ ನನಗೆ ನಂಬಿಕೆಯಿಲ್ಲ. ಹಿಂದೊಮ್ಮೆ ಪ್ರಸಿದ್ಧ ಐರಿಷ್ ಕವಿ ಜೆ. ಎಚ್. ಕಸಿನ್ಸ್‌ರು ತಮ್ಮ ಹೆಸರನ್ನು ಬಿಟ್ಟು ಜಯರಾಮ್ ಎಂಬ ಹೆಸರಿಟ್ಟುಕೊಂಡರಂತೆ ಎಂಬ ಮಾತು ಬಂತು. ಆಗ ನನ್ನ ಆಂಗ್ಲಗುರುಗಳೊಬ್ಬರು "The man is mad !" (ಅವನಿಗೆ ಹುಚ್ಚು ಹಿಡಿದಿದೆ) ಎಂದದ್ದು ನೆನಪಿದೆ. ನಿಜವಾಗಿಯೂ ಅವರು ದೊಡ್ಡ ಮನುಷ್ಯರೇ; ಆದರೂ ಅವರಲ್ಲಿ ಈ ಸಣ್ಣತನದ ಎಳೆಯಿತ್ತು. ಐರೋಪ್ಯರು ಇತರ ಜನಾಂಗದ ಮಹಿಳೆಯನ್ನು ಮದುವೆಯಾದರೆ ಅದನ್ನು ಪ್ರಸ್ತಾಪಿಸುವ ಸಂದರ್ಭದಲ್ಲಿ ಕೆಲವರು ಲೇಖಕರು "He has gone native" ಎಂಬ ತಿರಸ್ಕಾರದ ಮಾತನ್ನು ಬರೆಯುವುದುಂಟು, ನಮ್ಮಲ್ಲಿಯೂ ಬೇರೆ ಜನಾಂಗದವರನ್ನು ಮದುವೆಯಾದವರಿಗೆ ಹೀಗೇ ತಿರಸ್ಕಾರ ಸಲ್ಲುತ್ತದೆ. ಮದುವೆಯಾಗುವುದಂತಿರಲಿ, 'ವಿಲಾಯಿತಿ'ಗೆ ಹೋಗಿ ಬಂದವರನ್ನು ಕೂಡ ಸವ್ಯವಹಾರಕ್ಕೆ ಸೇರಿಸಬಾರದು ಎಂಬ ಭಾವನೆ ಒಂದು ಕಾಲದಲ್ಲಿ ತೀವ್ರವಾಗಿತ್ತೆಂಬುದನ್ನು ನಾನೇ ಬಲ್ಲೆ. ಸಂಪ್ರದಾಯವನ್ನು ತಳ್ಳಿಹಾಕುವುದು ಸುಲಭವಲ್ಲ. ಆದರೆ ಆ ಮಟ್ಟದಿಂದ ಮೇಲಕ್ಕೇರಬಲ್ಲವರು ನಮ್ಮಲ್ಲಿ ಇಲ್ಲದಿಲ್ಲ. ಸಂಪ್ರದಾಯವನ್ನು ತಳ್ಳಿಹಾಕವೆ ಅದನ್ನು ಮಾನವೀಯತೆಯ ಅಧೀನಕ್ಕೊಳಪಡಿಸಬಲ್ಲ ಘನತೆಯನ್ನು ನಾನು ನನ್ನ ಸಂಸಾರದಲ್ಲೇ ಕಂಡಿದ್ದೇನೆ. ಮುಂದೆ ಹೇಳುವ ಮಾತಿನಲ್ಲಿ ಹೆಮ್ಮೆಯಿದೆ; ಅದಕ್ಕಾಗಿ ಕ್ಷಮೆ ಬೇಡುತ್ತೇನೆ.

1963ರಲ್ಲಿ ರಾಜು F.A.O. ಸಂಸ್ಥೆಯ ತಜ್ಞನಾಗಿ ಫಿಲಿಪೀನ್ಸ್‌ಗೆ ಹೋಗುವುದಕ್ಕೆ ಮುಂಚೆ ಹೆಂಡತಿಯನ್ನೂ ಎರಡು ವರ್ಷದ ಮಗು ಕಮಲಳನ್ನೂ ಕರೆದುಕೊಂಡು ಮೈಸೂರಿಗೆ ಬಂದು ನಮ್ಮೊಡನೆ ಎರಡು ವಾರ ಇದ್ದ.

ಇಲ್ಲಿಗೆ ಬರುವುದಕ್ಕೆ ಪೂರ್ವಭಾವಿಯಾಗಿ "ನ್ಯಾನ್ಸಿಗೆ ನಮ್ಮ ನಡವಳಿಕೆ ಆಚಾರಗಳು ಇತ್ಯಾದಿ ಗೊತ್ತಿಲ್ಲ. ಮಾಡಬೇಕಾದ್ದು, ಮಾಡಬಾರದ್ದು ಏನೇನಿದೆಯೋ ತಿಳಿಸು" ಎಂದು ಕಾಗದ ಬರೆದಿದ್ದ. "ನೀನು ನನ್ನ ಮನೋವೃತ್ತಿಯನ್ನು ಬಲ್ಲೆ, ನಿನ್ನ ತಾಯಿಯ ಮನೋವೃತ್ತಿಯನ್ನೂ ಬಲ್ಲೆ, ಏನೇನು ತಿಳಿಸಬೇಕೆಂದು ತೋರುತ್ತದೆಯೋ ಅದೆಲ್ಲವನ್ನೂ ನೀನೇ ನಿನ್ನ ಹೆಂಡತಿಗೆ ತಿಳಿಸು. ಈ ವಿಷಯದಲ್ಲಿ ಹೆಚ್ಚು ಆತಂಕಪಡಬೇಕಾದ್ದಿಲ್ಲ" ಎಂದು ನಾನು ಉತ್ತರ ಬರೆದೆ. ಆದರೆ ನನ್ನ ಮನಸ್ಸಿನಲ್ಲಿ ನಿಜವಾಗಿ ಆತಂಕವಿದ್ದೇ ಇತ್ತು.

ನಾನಂತೂ ವೆಸ್ಲಿಯನ್ ಮಿಷನ್ ಸ್ಕೂಲಿನಲ್ಲಿ ವಿದ್ಯಾಭ್ಯಾಸ ಆರಂಭ ಮಾಡಿದವನು. ಲೂಕನು ಬರೆದ ಸುವಾರ್ತೆ (the Gospel according to St. Luke) ನನಗೆ ಎರಡನೇ ತರಗತಿಯಲ್ಲೇ ಪಾಠವಾಗಿತ್ತು! ಅಲ್ಲಿಂದೀಚೆಗೂ ಕೂಡ ಕ್ರೈಸ್ತ ವೇದದ ಪರಿಚಯವನ್ನು ಸ್ವಲ್ಪಮಟ್ಟಿಗೆ ಉಳಿಸಿಕೊಂಡೇ ಬಂದಿದ್ದೇನೆ. "ಈ ಜಾತಿಯವರು ಮುಟ್ಟಿದ್ದನ್ನು ತಿನ್ನಬಾರದು, ಆ ಜಾತಿಯವರನ್ನು ಅಡಿಗೆ ಮನೆ ದೇವರ ಮನೆಗಳಿಗೆ ಸೇರಿಸಬಾರದು"— ಇತ್ಯಾದಿ ಪದ್ಧತಿಗಳಿಗೆ ನಾನು ಬುದ್ಧಿ ತಿಳಿದ ಕಾಲದಿಂದ ಯಾವಾಗಲೂ ಮನ್ನಣೆ ಕೊಟ್ಟವನಲ್ಲ. ಅಲ್ಲದೆ ನನಗೆ ಪಾಶ್ಚಾತ್ಯ ಜೀವನಕ್ರಮದ ಸ್ಥೂಲ ಪರಿಚಯವೂ ಉಂಟು. ಆದ್ದರಿಂದ ನ್ಯಾನ್ಸಿ ಹೇಗೆ ನಡೆದುಕೊಂಡರೂ ಅರ್ಥ ಮಾಡಿಕೊಳ್ಳಬಲ್ಲೆ. ಸಹಾನುಭೂತಿಯಿಂದ ನೋಡಬಲ್ಲೆ—ಬಹುಶಃ! ನನ್ನ ಮನಸ್ಸಿನಲ್ಲಿ ಪೂರ್ವಗ್ರಹಗಳಿಲ್ಲವೇ ಇಲ್ಲವೆಂದು ಯಾವ ಧೈರ್ಯದಿಂದ ಹೇಳಲಿ! ಆದರೆ ಜಯಲಕ್ಷ್ಮಿಯ ಮಾತು ಬೇರೆ. ಸ್ವಾಭಾವಿಕವಾಗಿ ಹೆಂಗಸರು ಆಚಾರಕ್ಕೂ ಸಂಪ್ರದಾಯಕ್ಕೂ ಗಂಡಸರಿಗಿಂತ ಹೆಚ್ಚಾಗಿ ಬೆಲೆ ಕೊಡುತ್ತಾರೆ. ಹಾಗಿರುವುದು ಒಳ್ಳೆಯದೆಂದೂ ನನ್ನ ನಂಬಿಕೆ. ಅವಳ ತಂದೆತಾಯಿಯರು ಸಂಪ್ರದಾಯನಿಷ್ಠರು. ಅವಳ ಮನಸ್ಸು ನನ್ನ ಮನಸ್ಸಿನಂತೆ ನಿರೀಶ್ವರವಾದ, ಸಂದೇಹವಾದ, ಅಜ್ಞೇಯತಾವಾದ, ಇತ್ಯಾದಿ ಕ್ಷೇತ್ರಗಳಲ್ಲಿ ಕಾಡುಮೇಯಲು ಹೊರಟದ್ದಲ್ಲ. ಆಧುನಿಕ ಯೋಚನಾತರಂಗಗಳು—ಅವುಗಳ ಪರಿಚಯ ತಕ್ಕಮಟ್ಟಿಗೆ ಇದ್ದರೂ—ಅವಳ ಮತಶ್ರದ್ಧೆ ಆಚಾರಶ್ರದ್ಧೆ ದೈವಶ್ರದ್ಧೆಗಳ ಮೇಲೆ ಕೊಚ್ಚಿ ಹರಿದಿಲ್ಲ. ನನಗೂ ಅವಳಿಗೂ ಆಗಾಗ ನಡೆಯುತ್ತಿದ್ದ ವಾಗ್ವಾದಗಳು "ನಿಮ್ಮ ಮಾತು ಬಿಡಿ, ನಿಮಗೆ ದೇವರಿಲ್ಲ ದಿಂಡರಿಲ್ಲ!" ಎಂಬ ಅವಳ ನಗೆ ಮಾತಿನಲ್ಲಿ ಕೊನೆಗಾಣುತ್ತಿದ್ದವು.

ಆದ್ದರಿಂದ ಈ ಅಮೆರಿಕದ ಕ್ರಿಶ್ಚಿಯನ್ ಸೊಸೆ ಮನೆಗೆ ಬಂದರೆ ಅವಳ ಪ್ರತಿಕ್ರಿಯೆ ಹೇಗಿರುತ್ತೋ ಏನೋ, ಎಂದು ನನ್ನ ಶಂಕೆ. ಅವಳು ನ್ಯಾನ್ಸಿಯ

ಮನಸ್ಸನ್ನು ನೋಯಿಸುವುದಿಲ್ಲ—ಆ ವಿಷಯದಲ್ಲಿ ನನಗೆ ಸಂದೇಹವಿಲ್ಲ. ಆದರೆ ತಾನು ಒಳಗೇ ಎಷ್ಟು ನೊಂದುಕೊಳ್ಳುತ್ತಾಳೆಯೊ! ನ್ಯಾನ್ಸಿಗೆ ಹೇಳಬೇಕಾದ್ದನ್ನು ರಾಜು ಹೇಳುತ್ತಾನೆ. ಜಯಲಕ್ಷ್ಮಿಗೆ ನಾನು ಏನು ಹೇಳಲಿ? ಈ ಅತ್ತೆಸೊಸೆಯರು ಹೊಂದಿಕೊಂಡಿರಲೆಂದು, ಅದು ಸಾಧ್ಯವಲ್ಲದಿದ್ದರೆ ಒಬ್ಬರನ್ನೊಬ್ಬರು ನೋಯಿಸದಿರಲೆಂದು, ನನ್ನ ಉತ್ಕಟವಾದ ಆಸೆ........ ಜಯಲಕ್ಷ್ಮಿಗೆ ಏನು ಹೇಳಲಿ? ಅವಳ ನಂಬಿಕೆಗೆ ವಿರುದ್ಧವಾಗಿ ನಡೆದುಕೊಳ್ಳಬೇಕೆಂದು ಹೇಗೆ ಒತ್ತಾಯಪಡಿಸಲಿ? ನಾನು ಲಘುವಾಗಿ ಸೂಚನೆ ಕೊಟ್ಟರೂ ಅವಳಿಗೆ ಅದು ಒತ್ತಾಯವಾಗಿಯೇ ಪರಿಣಮಿಸುತ್ತದೆ. ಹೀಗೆ ಅಳೆದು ಸುರಿದು ಕೊನೆಗೆ ಏನೂ ಹೇಳದೆ ಸುಮ್ಮನಿರುವುದೇ ಲೇಸು ಎಂದು ನಿಶ್ಚಯಿಸಿದೆ. ನ್ಯಾನ್ಸಿಯ ಮನಸ್ಸು ನೋಯಬಾರದು. ಇವಳ ಮನಸ್ಸೂ ನೋಯಬಾರದು.

ಕೊನೆಗೆ ಅವಳೇ ಕೇಳಿದಳು :

"ಸೊಸೆ ಬಂದಾಗ ಏನು ಮಾಡಬೇಕು? ಹೇಳಿ."

"ರಾಜು ಇದೇ ಪ್ರಶ್ನೆ ಕೇಳಿ ಕಾಗದ ಬರೆದಿದ್ದನಲ್ಲ? ಅವನಿಗೆ ಕೊಟ್ಟ ಉತ್ತರ ನಿನಗೆ ಗೊತ್ತಲ್ಲ? ಹೀಗೆ ಮಾಡು ಅಂತ ನಾನು ಹೇಳುವುದಿಲ್ಲ, ನಿನಗೆ ಸರಿತೋರಿದಂತೆ ನಡೆದುಕೊ. ನಾನು ಪ್ರತಿ ಹೇಳುವುದಿಲ್ಲ."

"ಬಾಯಲ್ಲಿ ಹೇಳುವುದಿಲ್ಲ. ಮನಸ್ಸಿನಲ್ಲಿ......."

"ಮನಸ್ಸಿನಲ್ಲೂ ಅಸಮಾಧಾನ ಇಟ್ಟುಕೊಳ್ಳುವುದಿಲ್ಲ."

"ಎಲ್ಲ ನನ್ನ ತಲೆಯ ಮೇಲೆ ಹೊರಿಸುತ್ತಾ ಇದೀರಿ!"

"ನಿನ್ನ ತಲೆ ಹೊರಬಲ್ಲದು. ಹೊತ್ತುಕೊ."

ರಾಜು, ನ್ಯಾನ್ಸಿ, ಕಮಲ, ಎಲ್ಲಾ ಸಂಜೆಯ ಟ್ರೈನಿನಲ್ಲಿ ಬಂದರು. ಮನೆಗೆ ಬಂದೊಡನೆ ನ್ಯಾನ್ಸಿ ಜಯಲಕ್ಷ್ಮಿಗೆ ನಮಸ್ಕಾರ ಮಾಡಿದ್ದನ್ನು ಗಮನಿಸಿದೆ—ಅದು ರಾಜು ಕೊಟ್ಟ ಸಲಹೆಯಿರಬೇಕು. ಮಾರನೆಯ ದಿನ ನ್ಯಾನ್ಸಿ ಅಡಿಗೆ ಮನೆಯ ಬಾಗಿಲಿನ ಬಳಿ ನಿಂತು ವಿನಯದಿಂದ, ನಗುಮುಖದಿಂದ ಕೇಳಿದಳು :

"ನಾನು ಎಲ್ಲಿಯವರೆಗೆ ಬರಬಹುದು?" ನಮ್ಮಲ್ಲಿರುವ 'ಮಡಿ' ಕಲ್ಪನೆಯನ್ನು ರಾಜು ಅವಳಿಗೆ ವಿವರಿಸಿದ್ದಿರಬೇಕೆಂದು ಸ್ಪಷ್ಟ.

ಜಯಲಕ್ಷ್ಮಿಗೆ ಇಂಗ್ಲಿಷಿನ ಮೇಲೆ ಮಾತಾಡುವಷ್ಟು ಮಟ್ಟಿನ ಪ್ರಭುತ್ವವಿಲ್ಲ, ಆದರೆ ಆಡಿದ್ದನ್ನು ಸ್ವಲ್ಪ ಮಟ್ಟಿಗೆ ಅರ್ಥಮಾಡಿಕೊಳ್ಳಬಲ್ಲಳು. ಅವಳು ಕನ್ನಡದಲ್ಲೇ ಉತ್ತರಕೊಟ್ಟಳು :

"ನೀನು ನಮ್ಮ ಮನೆಯ ಸೊಸೆ. ಎಲ್ಲಿ ತಿರುಗಾಡಲು ತಾನೆ ಅಡ್ಡಿಯೇನು ?"

"ನಾನು ನಿಮ್ಮನ್ನು ಏನೆಂದು ಕರೆಯಲಿ ?"

"ಎಲ್ಲರೂ ನನ್ನನ್ನು ಜಯಮ್ಮ ಎಂದು ಕರೆಯುತ್ತಾರೆ. ನೀನೂ ಹಾಗೇ ಕರಿ."

ಇದಾದ ಮೂರುನಾಲ್ಕು ದಿನಗಳಲ್ಲೇ ಗೌರಿಯ ಹಬ್ಬ ಬಂತು. ಅವತ್ತು ನಾನು ನೋಡಿದ ದೃಶ್ಯವನ್ನು ಎಂದಿಗೂ ಮರೆಯಲಾರೆ. ನ್ಯಾನ್ಸಿ ಸ್ನಾನ ಮಾಡಿ ತಲೆ ಬಾಚಿ ಜಡೆ ಹೆಣೆದುಕೊಂಡು (ಆ ವೇಳೆಗಾಗಲೇ ಅವಳು ಕೇಶವನ್ನು ಉದ್ದವಾಗಿ ಬೆಳಸಿದ್ದಳು) ಹಣೆಗೆ ಕುಂಕುಮ ಇಟ್ಟು ಜಯಲಕ್ಷ್ಮಿ ಹೇಳಿಕೊಟ್ಟಂತೆ ಅವಳ ಮಗ್ಗುಲಲ್ಲಿ ಕುಳಿತು ಗೌರೀ ಪೂಜೆ ಮಾಡುತ್ತಿದ್ದಳು.* —ನನ್ನ ಕಣ್ಣಲ್ಲಿ ನೀರು ಬಂದದ್ದನ್ನು ಯಾರೂ ಕಾಣದಿರಲೆಂದು ನಾನು ಅಲ್ಲಿಂದ ಹೊರಟುಹೋದೆ. ಒಂದು ಕಡೆ ತಾನು ನಂಬಿದ ದೈವ, ಸಾವಿರಾರು ವರ್ಷಗಳಿಂದ ಬಂದ ನಿಯಮಗಳು, ವಿಧಿನಿಷೇಧಗಳು ; ಮತ್ತೊಂದು ಕಡೆ ಕ್ರೈಸ್ತ ಮತಾನುಯಾಯಿಯಾದ ಹೆಣ್ಣು, ಹಿಂದೆ ಮಾಂಸ ತಿನ್ನುತ್ತಿದ್ದವಳು— ಇವೊಂದೂ ಜಯಲಕ್ಷ್ಮಿಯ ನೈಸರ್ಗಿಕ ಹಿರಿತನಕ್ಕೆ ಕುಂದು ತರಲಿಲ್ಲ. ಗೌರೀ ದೇವಿಯ ವರದ ಹಸ್ತ ತನಗೆ ಬೇಕಾದರೆ ತನ್ನ ಸೊಸೆಗೆ ಬೇಡವೆ ?........ ಇವಳೊಡನೆ ನಲವತ್ತು ವರ್ಷ ಸಂಸಾರ ಮಾಡಿದ್ದೆ, ಆದರೂ ಅವಳ ಔದಾರ್ಯದ ಮತ್ತು ಘನತೆಯ ಔನ್ನತ್ಯವನ್ನು ತಿಳಿದಿರಲಿಲ್ಲ! ಅವಳನ್ನು ಮನಸಾರ ಹೊಗಳಬೇಕಾಗಿತ್ತು ; ಹಾಗೆ ಮಾಡಲಿಲ್ಲ, ನನ್ನ ಮೆಚ್ಚಿಕೆ ಮನಸ್ಸಿನಲ್ಲೇ ಉಳಿದುಹೋಯಿತು.

ನ್ಯಾನ್ಸಿಯೂ ಈ ಅತ್ತೆಗೆ ತಕ್ಕ ಸೊಸೆ. 'ಪೂಜೆ ಮಾಡುತ್ತೀಯಾ' ಎಂದು ಕೇಳಿದೊಡನೆ ಒಪ್ಪಿದಳು. ಹಿಂದೂ ಅತ್ತೆಗಿದ್ದಂತೆಯೇ ಕ್ರೈಸ್ತ ಸೊಸೆಗೂ ಸಾವಿರಾರು ವರ್ಷದಿಂದ ಬಂದ ವಿಧಿ ನಿಷೇಧಗಳಿದ್ದವು. 'ಹೂವು ಮಂತ್ರಾಕ್ಷತೆಗಳನ್ನು ಪೂಜೆಮಾಡು' ಎಂದಾಗ ಅವಳಿಗೆ ಬೈಬಲ್‌ನಲ್ಲಿ ಬರುವ ದಶಾಜ್ಞೆಗಳಲ್ಲಿ ಒಂದಾದ 'Thou shalt not make unto thee a graven image' ('ನೀನು—ಪೂಜೆಗಾಗಿ—ಕಡೆದ ಮೂರ್ತಿಯನ್ನು ನಿರ್ಮಿಸಕೂಡದು) ಎಂಬುದು ನೆನಪಿಗೆ ಬಂದು ಪೂಜೆಮಾಡಲು ಮನಸ್ಸು

* ಈ ಬಗೆಯ ಪ್ರಸಂಗ ಇತ್ತೀಚಿನ ಯಾವುದೋ ಒಂದು ಚಿತ್ರದಲ್ಲಿ ಬಂದಿದೆಯೆಂದು ಕೇಳಿದ್ದೇನೆ.

ಹಿಂಜರಿಯಿತ್ತಂತೆ. ಜಯಲಕ್ಷ್ಮಿಯಂತೆಯೇ ಅವಳೂ ಈ ಹಿಂಜರಿಕೆಯನ್ನು ಅದುಮಿದಳು.

ನನ್ನ ಸಂಸಾರದ ಈ ಪ್ರಸಂಗವನ್ನು ಬರೆದಿರುವುದರಲ್ಲಿ ಹೆಮ್ಮೆಯಿದೆ ಯೆಂದು ಹೇಳಿದ್ದೇನೆ. ಅದನ್ನು ಹಿಂಜರಿಯದೆ ಒಪ್ಪಬೇಕು. ಅದಕ್ಕೆ ಪ್ರಾಯಶ್ಚಿತ್ತವಾಗಿ ಬೇರೊಂದು ಸಂಸಾರದ ಘನತೆಯನ್ನು ಹೊಗಳುತ್ತೇನೆ. ನನ್ನ ಮನೆಯಲ್ಲಿ ಮೇಲೆ ಹೇಳಿರುವುದೆಲ್ಲ ನಡೆದದ್ದು 1963 ರಲ್ಲಿ. ಮುಂದೆ ಹೇಳಲಿರುವುದು ಸುಮಾರು 70 ವರ್ಷ ಹಿಂದಿನ, ಅಂದರೆ ಹಳೆಯ ಆಚಾರಗಳ ಕಟ್ಟು ಹತ್ತು ಪಾಲು ಹೆಚ್ಚಾಗಿದ್ದ ಕಾಲದ ಮಾತು. ಈ ಶತಮಾನದ ಆದಿಭಾಗದಲ್ಲಿ ಕೂಡ ವೈದಿಕ ಮನೆತನದವರೊಬ್ಬರು ಸಂಪ್ರದಾಯಕ್ಕಿಂತ ಮಾನವೀಯ ಪ್ರೇಮಕ್ಕೆ ಹೆಚ್ಚು ಬೆಲೆ ಕಟ್ಟಿದರೆಂಬುದನ್ನು ನೆನೆಯುವುದು ನನಗೆ ಆನಂದ :

ಸುಮಾರು 20 ವರ್ಷಗಳ ಕೆಳಗೆ ಒಂದು ದಿನ ಬೆಳಗ್ಗೆ ನಾನು ಡಿ. ವಿ. ಗುಂಡಪ್ಪನವರ ಮನೆಯಲ್ಲಿ ಮಾತಾಡುತ್ತ ಕುಳಿತಿದ್ದಾಗ ಹಿರಿಯರೊಬ್ಬರು ಅಲ್ಲಿಗೆ ಬಂದರು. ಅವರು ನನಗೆ ಪರಿಚಿತರು, ಗುಂಡಪ್ಪನವರಿಗೆ ಹಳೆಯ ಸ್ನೇಹಿತರು, ಗಣ್ಯವ್ಯಕ್ತಿಗಳು. ಅವರ ಹೆಸರನ್ನು ಹೇಳಿದರೆ ಅಪಚಾರವೇನೂ ಆಗುವುದಿಲ್ಲ. ಆದರೂ ಅವರನ್ನು ಸುಮ್ಮನೆ 'ರಾಯರು' ಎಂದು ಕರೆಯುತ್ತೇನೆ. ಅವರ ಮತ್ತು ಗುಂಡಪ್ಪನವರ ಮಾತಿಗೆ ಅಡ್ಡ ಬರಬಾರದೆಂದು ನಾನು ಒಂದೆರಡು ಮರ್ಯಾದೆಯ ಮಾತಾಡಿ 'ಬರುತ್ತೇನೆ' ಎಂದು ಎದ್ದೆ. ರಾಯರು "ನಿಮಗೆ ತಿಳಿಯಬಾರದ ವಿಷಯವೇನೂ ಇಲ್ಲ. ಕೂತುಕೊಳ್ಳಿ" ಎಂದು ಒತ್ತಾಯಮಾಡಿದರು. ಆ ಮಾತು ಈ ಮಾತು ನಡೆದ ಮೇಲೆ ಅವರು ಯಾವ ಸಂದರ್ಭದಲ್ಲೋ ತಮ್ಮ ಮದುವೆಯ ವಿಷಯ ಪ್ರಸ್ತಾಪಿಸಿದರು. ಅದು ಆಗ್ಗೆ 40–50 ವರ್ಷದ ಹಿಂದಿನ ಮಾತು. ಆಗ ವಿದೇಶದಲ್ಲಿದ್ದ ರಾಯರು ಪಾಶ್ಚಾತ್ಯ ಮಹಿಳೆಯೊಬ್ಬರನ್ನು ಮದುವೆಯಾಗಬಯಸಿ ಆಕೆಯ ಒಪ್ಪಿಗೆಯನ್ನು ಪಡೆದಿದ್ದರು. ತಮ್ಮ ಮನೆಯಲ್ಲಿ ಹಿರಿಯರಾಗಿ ಉಳಿದಿದ್ದ ಅಕ್ಕ ಮತ್ತು ಭಾವಂದಿರಿಗೆ "ನಾನು ಪಾಶ್ಚಾತ್ಯ ಮಹಿಳೆಯೊಬ್ಬಳನ್ನು ಮದುವೆಯಾಗಬೇಕೆಂದಿದ್ದೇನೆ. ನೀವು ಆಶೀರ್ವದಿಸಬೇಕು" ಎಂದು ಕಾಗದ ಬರೆದರು. ಹಿರಿಯರು ಬಹಳ ನೊಂದುಕೊಂಡು "ಖಂಡಿತ ಹಾಗೆ ಮಾಡಬೇಡ" ಎಂದು ಬರೆದರು. ಆದರೆ ರಾಯರು ತಮ್ಮ ನಿರ್ಧಾರದಂತೆಯೇ ನಡೆದುಕೊಂಡರು. ಆಮೇಲೆ ಬಿರುಸುಮಾತುಗಳ ವಿನಿಮಯವೇನೂ ಆಗಲಿಲ್ಲ. ಅನಂತರ ವಿಶೇಷ ಕಾರಣವೇನೂ ಇಲ್ಲದಿದ್ದರೂ ಆ ಹಿರಿಯರೊಡನೆ ವ್ಯವಹಾರ ನಿಂತು ಹೋಗಿತ್ತು.

ಮೂರು ನಾಲ್ಕು ವರ್ಷ ಕಳೆದ ಮೇಲೆ—ಆ ವೇಳೆಗೆ ರಾಯರು ಭಾರತಕ್ಕೆ ಮರಳಿ ಬಂದು ಇಲ್ಲೇ ನೆಲಸಿದ್ದರು—ಅವರು ಕಲ್ಕತ್ತೆಗೆ ಹೋಗಬೇಕಾಗಿ ಬಂತು. ದಾರಿಯಲ್ಲೇ ಅವರ ಅಕ್ಕ ಭಾವ ಇದ್ದ ಊರು. ರಾಯರಿಗೂ ಅವರಿಗೂ ಹೆಚ್ಚು ಕಡಮೆ ಈ ರೀತಿ ಪತ್ರವ್ಯವಹಾರ ನಡೆಯಿತು:

"ನಾನು ಇಂಥ ದಿನ ಇಂಥ ರೈಲಿನಲ್ಲಿ ಕಲ್ಕತ್ತೆಗೆ ಪ್ರಯಾಣ ಮಾಡುವವನಿದ್ದೇನೆ. ನಿಮ್ಮನ್ನೂ ಅಕ್ಕನನ್ನೂ ನೋಡಬೇಕೆನ್ನಿಸುತ್ತಿದೆ. ಕೃಪೆ ಮಾಡಿ ಸ್ಟೇಷನ್ನಿಗೆ ಬರುವುದು ಸಾಧ್ಯವೆ?"

"ಇದೇನು ನಿನ್ನ ಮಾತು? ನಮ್ಮ ಊರಿನ ಮೇಲೇ ಹೋಗುತ್ತೇನೆ ಅಂತೀಯೆ, ಇಲ್ಲಿ ಒಂದು ದಿನ ನಿಂತು ಹೋಗಬೇಡವೆ!"

"ನನ್ನ ಜೊತೆ ನನ್ನ ಹೆಂಡತಿಯೂ ಪ್ರಯಾಣ ಮಾಡಲಿದ್ದಾಳೆ. ಆದ್ದರಿಂದ ಅಲ್ಲಿ ನಿಲ್ಲುವ ಏರ್ಪಾಡು ಮಾಡಲಿಲ್ಲ."

"ಚೆನ್ನಾಯಿತು! ನಿನ್ನ ಹೆಂಡತಿ ಜೊತೆಯಲ್ಲಿ ಬರುತ್ತಾಳೆಂದ ಮೇಲೆ ಇಲ್ಲಿ ನಿಲ್ಲುವುದಕ್ಕೆ ಅದೇ ದೊಡ್ಡ ಕಾರಣವಲ್ಲವೆ? ಇಲ್ಲಿ ಎರಡು ದಿನ ಇದ್ದು ಹೋಗುವ ಏರ್ಪಾಡು ಮಾಡು."

ಹಾಗೇ ಏರ್ಪಾಡಾಯಿತು. ವೃದ್ಧದಂಪತಿಗಳು ಸ್ಟೇಷನ್ನಿಗೆ ಬಂದು ರಾಯರನ್ನೂ ಅವರ ಶ್ರೀಮತಿಯವರನ್ನೂ ಮನೆಗೆ ಕರೆದುಕೊಂಡು ಹೋದರು. ಮನೆಯ ಬಳಿಗೆ ಹೋಗುವ ಹೊತ್ತಿಗೆ ಬಾಗಿಲಿನಲ್ಲಿ ಮಣೆ ಹಾಕಿತ್ತು; ಅರಿಶಿನ ಕುಂಕುಮದ ತಟ್ಟೆ, ಆರತಿಯ ತಟ್ಟೆ, ಸಿದ್ಧವಾಗಿದ್ದವು. ಮನೆಗೆ ಬಂದ ಸೊಸೆಗೆ ಕುಂಕುಮ ಇಟ್ಟು ಆರತಿ ಎತ್ತಿ ಒಳಕ್ಕೆ ಬರಮಾಡಿಕೊಂಡರು. ಬಂಧುಗಳನ್ನು ಕರೆದು ಔತಣ ಮಾಡಿ, "ಇವಳು ನಮ್ಮ ಸೊಸೆ, ತಡವಾದರೂ ಇವತ್ತು ಮನೆ ತುಂಬಿಸಿಕೊಳ್ಳುತ್ತಿದ್ದೇವೆ" (ಅಂದ ಹಾಗೆ, 'ಮನೆ ತುಂಬಿಸಿಕೊಳ್ಳುವುದು' ಎಂಬ ಮಾತು ಅದೆಷ್ಟು ಸುಂದರವಾದದ್ದು, ಭಾವಪೂರ್ಣವಾದದ್ದು, ಅರ್ಥಪೂರ್ಣವಾದದ್ದು!) ಎಂದು ನಗುಮುಖದಿಂದ ಆಕೆಯನ್ನು ಎಲ್ಲರಿಗೂ ಪರಿಚಯ ಮಾಡಿಕೊಟ್ಟರು. ಮಾರನೆಯ ದಿನ ರಾಯರು ಹೊರಡುವುದಕ್ಕಿಂತ ಮುಂಚೆ ಸೊಸೆಯನ್ನು ಹಸೆಮಣೆಯ ಮೇಲೆ ಕೂರಿಸಿ ಮಡಿಲು ತುಂಬಿ ಹೂವು ಮುಡಿಸಿ "ಇನ್ನೊಂದು ಸಾರಿ ಬರುವಾಗ ಮಗುವನ್ನೆತ್ತಿಕೊಂಡು ಬಾ ನನ್ನ ತಾಯಿ!" ಎಂದು ತಲೆಯ ಮೇಲೆ ಕೈಯಿಟ್ಟು ನೇವರಿಸಿ ಆಕೆಯನ್ನು ಆಶೀರ್ವದಿಸಿ ಸಾಗಕಳಿಸಿದರು.

ಸಾಮಾನ್ಯವಾಗಿ ರಾಯರು ಭಾವೋದ್ರೇಕಕ್ಕೆ ಎಡೆಗೊಡುವವರಲ್ಲ; ಅಲ್ಲದೆ ಅವರು ಹೇಳುತ್ತಿದ್ದದ್ದು ಆಗ್ಗೆ ಸುಮಾರು ಅರ್ಧಶತಮಾನದ ಹಿಂದಿನ

ಕಥೆ. ಆದರೂ ಕಥೆ ಉತ್ತರಾರ್ಧಕ್ಕೆ ಬರುವ ವೇಳೆಗೆ ಅವರ ಕಣ್ಣಿಂದ ನೀರು ಹರಿಯುತ್ತಿತ್ತು; ಮಾತು ಗದ್ಗದವಾಗಿ ತೊದಲಲಾರಂಭಿಸಿತು: ಕೊನೆಗೆ ಬಿಕ್ಕಿಬಿಕ್ಕಿ ಅತ್ತುಬಿಟ್ಟರು. ಗುಂಡಪ್ಪನವರು ಅವರ ಹೆಗಲಮೇಲೆ ಕೈಯಿಟ್ಟು "ನೋಡಿ ಮೂರ್ತಿರಾವ್, ನೋಡಿ! ನಮ್ಮ ರಾಯರು 'ನಮ್ಮ ಬದುಕನ್ನು ನಿಂತು ನಡಸಬೇಕಾದದ್ದು ವಿಚಾರಶಕ್ತಿಯೊಂದೇ' ಎನ್ನುವವರು. ನಮ್ಮ ಬದುಕನ್ನು ನಡಸುವುದು ಯಾವುದು? ಈಗ ತಿಳಿಯುತ್ತೆ ನೋಡಿ!" ಎಂದರು. ರಾಯರು ನನ್ನ ಕಡೆ ತಿರುಗಿ "ಗುಂಡಪ್ಪ ನನಗೆ ಹಳೆಯ ಸ್ನೇಹಿತರು, ಆದರೆ ನಿಮ್ಮೆದುರಿಗೆ ಹೀಗೆ ನಡೆದುಕೊಂಡೆನಲ್ಲ! ಕ್ಷಮಿಸಿ. ನನಗೆ ನಾಚಿಕೆಯಿಂದ ತಲೆ ತಗ್ಗಿಸುವಂತಾಗಿದೆ" ಎಂದರು, ನಾನು, "ಸಾರ್, ತಮ್ಮ ಪರಿಚಯ ಇತ್ತೀಚಿನದು, ಆದರೆ ನನಗೆ ಹಿಂದಿನಿಂದಲೂ ತಮ್ಮಲ್ಲಿ ಬಹಳ ಗೌರವವಿತ್ತು. ಇವತ್ತು ತಮ್ಮ ಕಣ್ಣೀರನ್ನೂ ಅದಕ್ಕೆ ಕಾರಣವಾದ ಮನೋಧರ್ಮವನ್ನೂ ಕಂಡ ಮೇಲೆ ನನ್ನ ಗೌರವ ಮೈಲಿಗಟ್ಟಲೆ ಎತ್ತರಕ್ಕೆ ಏರಿದೆ. ಗುಂಡಪ್ಪನವರ ಮಾತನ್ನು ನಾನೂ ಅನುಮೋದಿಸುವವನೇ; ಬದುಕನ್ನು ನಡಸುವುದು ಯಾವುದು ಎನ್ನುವುದು ನನಗೂ ತಿಳಿಯಿತು" ಎಂದೆ.

ಈ ಕಥೆ ನನಗೆ ಪ್ರಿಯವಾದದ್ದು. ಇದನ್ನು ನೆನೆದಾಗ "ಈ ಜನಾಂಗದವರಿಗಿಂತ ಆ ಜನಾಂಗದವರು ಉದಾರಮನಸ್ಕರು" ಎನ್ನುವ ಸುಲಭ ಸಾಮಾನ್ಯವಾದ ಮಾತಿನಲ್ಲಿ ಹುರುಳಿಲ್ಲ ಎನ್ನಿಸುತ್ತದೆ. ಔದಾರ್ಯವಾಗಲಿ ಸಣ್ಣತನವಾಗಲಿ ಯಾವುದೊಂದು ಜನಾಂಗದ, ದೇಶದ, ಅಥವಾ ಸಂಸ್ಕೃತಿಯ ಸ್ವತ್ತಲ್ಲ. ಮೆಕ್‌ಮಿಲನ್‌ರೇನೋ ಹಿಂದೆ ರಾಜು–ನ್ಯಾನ್ಸಿಯರ ಮದುವೆಯನ್ನು ವಿರೋಧಿಸಿದ್ದರು. ನಾನೂ ವಿರೋಧಿಸಿದ್ದೆ, ನನ್ನಲ್ಲಾದ ಬದಲಾವಣೆ ಅವರಲ್ಲೂ ಆಗಿರಬೇಕು. ಅವರು ಅವತ್ತು ಟೆಲಿಫೋನಿನಲ್ಲಿ ಮಾತಾಡಿದಾಗ ಅವರ ದನಿಯಲ್ಲಿ ಸ್ನೇಹವಿತ್ತು. ನಾನು ಇಲ್ಲಿಗೆ ಬರುವುದಕ್ಕೆ ಮುಂಚೆಯೇ ಅವರು ಒಂದೆರಡು ಸಾರಿ ರಾಮುವನ್ನೂ ಡಯಾನಳನ್ನೂ ಬರಮಾಡಿಕೊಂಡಿದ್ದರಂತೆ. 'ಗ್ರಾಮ ಡೆಟ' (ಮಿಸೆಸ್ ಆಡೆಟ ಮೆಕ್‌ಮಿಲನ್‌ರನ್ನು ಸುನೀಲ 'ಗ್ರಾಮ ಡೆಟ'—grandma Detta—ಆಗಿ ಮಾರ್ಪಡಿಸಿದ್ದ) ಸುನೀಲನ ಪ್ರೀತಿಯನ್ನು ಗಳಿಸಿದ್ದರೆಂದರೆ ಅದೇನೂ ಅಲ್ಪವಾದ ಹೊಗಳಿಕೆಯಲ್ಲ. ಮಕ್ಕಳು ತಮ್ಮ ಪ್ರೀತಿಯನ್ನು ಒಡಪೆಟ್ಟಿಗೆ ಕೊಡುವುದಿಲ್ಲ. ಬೀಗರ ಮನೆಗೆ ನಾನು ಕೊಡುವ ಭೇಟಿ ಹಿತವಾಗಿಯೇ ಪರಿಣಮಿಸೀತು!

# ನನ್ನ ಅಮೆರಿಕನ್ ಬೀಗರು (1)—ಲಿಂಕನ್‌ನಲ್ಲಿ

ಶನಿವಾರ ಬೆಳಗ್ಗೆ ಹೊರಟು ದಾರಿಯಲ್ಲೇ ಊಟ ಮುಗಿಸಿಕೊಂಡು 3-30 ಘಂಟೆಗೆ ಲಿಂಕನ್ ತಲಪುವುದು ಎಂದು ಏರ್ಪಾಡು ಮಾಡಿಕೊಂಡೆವು. ಊಟ ಮಾಡಿದ ಕಡೆಯಿಂದಲೇ ಮೆಕ್‌ಮಿಲನ್‌ರಿಗೆ ಫೋನ್ ಮಾಡಿದೆವು. ಅವತ್ತು ಅವರಿಗೆ ಅನಿವಾರ್ಯವಾದ ಕೆಲಸವೊಂದಿತ್ತು—ಕೆಲವು ಸಿಮಿಟರಿಗಳನ್ನು (ರುದ್ರಭೂಮಿಗಳನ್ನು) ನೋಡಿಕೊಂಡು ಬರುವುದು. ವರ್ಷಕ್ಕೊಂದು ಸಲ ಗೊತ್ತಾದ ದಿನದಲ್ಲಿ ಅದನ್ನು ಆಚರಿಸುವ ಪದ್ಧತಿಯಿರಬಹುದು. ನಾವು ಬರುವುದರೊಳಗೆ ಅದನ್ನು ಮುಗಿಸಬೇಕೆಂದಿದ್ದರು. ಆದರೆ ಏಕೋ ಹೊರಡುವುದು ತಡವಾಯಿತು. "ನಾವು ಬರುವುದು ಒಂದೆರಡು ಘಂಟೆ ತಡವಾಗಬಹುದು. ಮನೆಯ ಬೀಗದ ಕೈಯನ್ನು black man (ಮನೆಯ ಎದುರಿಗೆ ನಿಲ್ಲಿಸಿರುವ ಚಿಕ್ಕ ನೀಗ್ರೋ ಪ್ರತಿಮೆ) ಕೆಳಗೆ ಇಟ್ಟಿದ್ದೇವೆ. ನೀವು ಹೋಗಿ ವಿಶ್ರಾಂತಿ ತೆಗೆದುಕೊಳ್ಳಿ. ನಿರ್ದಾಕ್ಷಿಣ್ಯವಾಗಿ ರೆಫ್ರಿಜಿರೇಟರನ್ನು ಲೂಟಿ ಮಾಡಿ" ಎಂದು ಮಿಸೆಸ್ ಮೆಕ್‌ಮಿಲನ್ ಹೇಳಿದರು.

ಮೆಕ್‌ಮಿಲನ್‌ರ ಮನೆ ಹೆದ್ದಾರಿಯಿಂದ ಅರ್ಧ ಮೈಲಿ ದೂರದಲ್ಲಿದೆ. ಅಲ್ಲಿಂದ ಲಿಂಕನ್ ಪಟ್ಟಣಕ್ಕೆ ಒಂದೂವರೆ ಮೈಲಿ. ಅವರ ಮನೆಯ ಸುತ್ತ ದಿಗಂತದವರೆಗೂ ಬಯಲು, ಹೊಲ. ನಾವು ಹೋದಾಗ ಹೊಲದಲ್ಲಿ ಬೆಳೆಯೇನೂ ಇರಲಿಲ್ಲ. ಅವರಿಗೆ 150 ಎಕರೆ ಜಮೀನಿದೆಯಂತೆ. "ಅದು ತೀರ ಚಿಕ್ಕ (!) ಪ್ರಮಾಣದ ಫಾರಂ; ಆದ್ದರಿಂದ ಅದಕ್ಕಾಗಿ ಹಣವನ್ನೂ ಶ್ರಮವನ್ನೂ ವೆಚ್ಚಮಾಡುವುದು ಸರಿಯಲ್ಲ ಎಂದುಕೊಂಡು ಅದನ್ನು ಸಾಲಿಯಾನಾ ಎಕರೆಗೆ 50 ಡಾಲರಿನಂತೆ ಗುತ್ತಿಗೆಗೆ ಕೊಟ್ಟಿದ್ದೇನೆ" ಎಂದರು. ಈಗ ಅವರ ಮನೆಯ ಸುತ್ತ ಎರಡೂವರೆ ಎಕರೆಯಷ್ಟು ಸ್ಥಳವಿದೆ. ಅದಕ್ಕೆ ಬೇಲಿ, ಗೋಡೆ ಏನೂ ಇಲ್ಲ. ಕೆಲವು ವರ್ಷಗಳ ಹಿಂದೆ ಅಲ್ಲಿ 40,000 ಡಾಲರು ವೆಚ್ಚಮಾಡಿ ದೊಡ್ಡ ಮನೆ ಕಟ್ಟಿದ್ದರಂತೆ. ಅಕಸ್ಮಾತ್ ಬೆಂಕಿ ಬಿದ್ದು ಅದು ಪೂರ್ತಿ ಸುಟ್ಟು ಹೋಯಿತು. ಈಗ ತಮ್ಮ ಉಪಯೋಗಕ್ಕಾಗಿ ಸಣ್ಣದೊಂದು ಮನೆಯನ್ನು —ಅದು 250-300 ಚದರಡಿಗಳಿಗಿಂತ ಹೆಚ್ಚು ಇರಲಾರದು—ಕಟ್ಟಿಕೊಂಡಿದ್ದಾರೆ. ಅಲ್ಲಿರುವವರು ಅವರಿಬ್ಬರೇ—ಮಗ ಸ್ಪ್ರಿಂಗ್‌ಫೀಲ್ಡ್‌ನಲ್ಲಿದ್ದಾನೆ; ಹೆಣ್ಣು ಮಕ್ಕಳಿಬ್ಬರೂ ಮದುವೆಮಾಡಿಕೊಂಡು ಹೊರಟುಹೋಗಿದ್ದಾರೆ. ಮೆಕ್‌ಮಿಲನ್ ದಂಪತಿಗಳು ಬೇಸಿಗೆಯಲ್ಲಿ ಮಿಚಿಗನ್, ಚಳಿಗಾಲದಲ್ಲಿ ಫ್ಲಾರಿಡ

ಅಥವಾ ಅರಿಜೋನ—ಹೀಗೆ ಸುತ್ತುತ್ತಲೇ ಇರುತ್ತಾರೆ. ಆದ್ದರಿಂದ ಸಣ್ಣ ಮನೆ ಸಾಕು. ಮಿಸಿಸ್ ಮೆಕ್‌ಮಿಲನ್ "ನನಗೆ ವಯಸ್ಸಾಗುತ್ತ ಬಂತು. ದೊಡ್ಡಮನೆಯನ್ನು ಚೊಕ್ಕಟವಾಗಿಟ್ಟುಕೊಳ್ಳಲು ಹೆಣಗುವವರು ಯಾರು ಅದಕ್ಕೆ ಸಣ್ಣಮನೆ ಕಟ್ಟಿಕೊಂಡೆವು" ಎಂದರು. ಆ ಸಣ್ಣ ಮನೆಯ ಅಂದ ಅಚ್ಚುಕಟ್ಟುಗಳನ್ನು ನೋಡಿ ಬಹಳ ಮೆಚ್ಚಿಕೆಯಾಯಿತು.

ಆ ಮನೆಯಲ್ಲದೆ ಪ್ರೀಫ್ಯಾಬ್ (pre-fab) ಮನೆಯೂ ಒಂದಿದೆ. ಅದು ಪ್ರಮಾಣ ಸುಮಾರು 40×10; ಹೊರಗಿನಿಂದ ನೋಡುವುದಕ್ಕೆ ರೈಲು ಗಾಡಿಯಂತೆ ಕಾಣುತ್ತದೆ, ಇಂಥ ಮನೆಗಳನ್ನು ಅಮೆರಿಕದಲ್ಲಿ ಅನೇಕ ಕಡೆ ಕಾಣಬಹುದು. ಅವನ್ನು ಕಾರ್ಖಾನೆಗಳಲ್ಲಿ ತಯಾರಿಸಿ ಎಲ್ಲಿಗೆಂದರೆ ಅಲ್ಲಿಗೆ ಕಳಿಸಿಕೊಡುತ್ತಾರೆ—ಮನೆಯೆಲ್ಲ ಮರದಿಂದ ಮಾಡಿದ್ದು, ಒಳಕ್ಕೆ ಹೋದೊ ಡನೆ ಒಂದು ದೊಡ್ಡ ಕೊಠಡಿ; ಅದರ ಒಂದು ಕೊನೆಯಲ್ಲೇ ಅಡಿಗೆಮನೆ, ಟೀವಿ, ರೇಡಿಯೋ, ರೆಫ್ರಿಜಿರೇಟರ್ ಎಲ್ಲ ಅಡಕವಾಗುತ್ತವೆ. ಸೋಫಾಗಳನ್ನು ಹಾಕಿ ಅದನ್ನೇ ದಿವಾನಖಾನೆಯಾಗಿಯೂ ಉಪಯೋಗಿಸುತ್ತಾರೆ. ಅಲ್ಲಿಂದ ಮುಂದೆ ಹೋದರೆ ಮಲಗುವ ಮನೆ, ಅಲ್ಲಿಂದ ಆಚೆಗೆ ಸ್ನಾನ ಮತ್ತು ಶೌಚ ಗೃಹ. ನಾನು ಹಿಂದೆ ಬಣ್ಣಿಸಿದ ಡೂಪ್ಲೆಕ್ಸ್ ಮನೆಗಳಂತೆಯೇ ಇದೂ— ಹೊರಗಿನ ಅಂದ ಏನೂ ಇಲ್ಲ; ಒಳಗಿನ ಅನುಕೂಲ ಅಚ್ಚುಕಟ್ಟುಗಳನ್ನು ಎಷ್ಟು ಹೊಗಳಿದರೂ ತೀರದು. ಈ ಮನೆಗೆ 100 ಅಡಿ ದೂರದಲ್ಲಿ ಕಾರಿಗೆ ಲಗತ್ತು ಮಾಡಬಹುದಾದ ಟ್ರೈಲರನ್ನು (trailer) ನಿಲ್ಲಿಸಿದ್ದಾರೆ. ಅದೂ ಒಂದು ಮನೆಯೇ.

ಮನೆಯ ಸುತ್ತ ಹುಲ್ಲುಗಾವಲು; ಹತ್ತಾರು ಮರಗಳು, ನಾವು ಅಲ್ಲಿಗೆ ಹೋದ ಸಮಯದಲ್ಲಿ ಸೂರ್ಯ ರಚಿಸಿದ್ದ ನೆರಳು ಬೆಳಕುಗಳ ಚಿತ್ರ ಬಹು ಸುಂದರವಾಗಿತ್ತು. ಮಳೆ ಬಂದರೆ ಕೆಸರಾಗದಿರಲೆಂದು ನಡೆಯುವ ದಾರಿಯಲ್ಲಿ ಸಣ್ಣ ಹರಳುಗಳನ್ನು ಹರಡಿದ್ದಾರೆ. ದಾರಿಯ ಪಕ್ಕದಲ್ಲಿ, ಮನೆಯ ಪಕ್ಕದಲ್ಲಿ ಹೂವಿನ ಗಿಡಗಳು, ನಾವು ಹೋದ ದಿನ ಗುಲಾಬಿಯ ಹೂವಿನಂತಿದ್ದ, ಹಿತ ವಾದ ಪರಿಮಳವನ್ನು ಬೀರುತ್ತಿದ್ದ ಒಂದು ಜಾತಿಯ ಹೂವು ಬೇಕಾದ ಹಾಗೆ ಅರಳಿತ್ತು. ಇದು ಕವನಗಳಲ್ಲಿ ನನಗೆ ಪರಿಚಿತವಾಗಿದ್ದ ಪಿಯೊನಿ (peony) ಎಂದು ಆಮೇಲೆ ತಿಳಿಯಿತು. ಒಟ್ಟಿನಲ್ಲಿ ಊರಿಗೆ ಹತ್ತಿರವಾಗಿದ್ದು ವಿವಿಕ್ತವಾಗಿ ಗಲಭೆಯಿಲ್ಲದ ಸ್ಥಳದಲ್ಲಿರುವ ಆ ಮನೆಯ ಸನ್ನಿವೇಶ ಬಹಳ ಆಕರ್ಷಕ ವಾದದ್ದು.

ಮೆಕ್‌ಮಿಲನ್ ದಂಪತಿಗಳು ಸುಮಾರು 7 ಘಂಟೆಯ ಹೊತ್ತಿಗೆ

ಬಂದರು ಆಗತಾನೆ ಡಯಾನ ನಾವು ತಿಂಡಿ ಕಾಫಿಗೆ ಉಪಯೋಗಿಸಿದ್ದ ಪಾತ್ರೆಗಳನ್ನು ತೊಳೆದಿಟ್ಟುಬಿಡೋಣ ಎಂದು ಹೊರಟಿದ್ದಳು. ಗ್ರಾಮಡೆಟ (ಅವರನ್ನು ಸುನೀಲ ಇಟ್ಟ ಹೆಸರಿನಿಂದಲೇ ನಿರ್ದೇಶಿಸುವುದು ಸುಲಭ) ಅವಳನ್ನು ಕುಳ್ಳಿರಹೇಳಿ ಗಂಡನೊಡನೆ ತಾವೇ ಆ ಕೆಲಸಕ್ಕೆ ನಿಂತರು. ಗಂಡ ಹೆಂಡತಿಯರಿಬ್ಬರೂ ಒಬ್ಬರ ಮಗ್ಗುಲಲ್ಲೊಬ್ಬರು ನಿಂತು ಇತ್ತ ನಮ್ಮೊಡನೆ ಮಾತನಾಡುತ್ತ ಅತ್ತ ಒಬ್ಬರಿಗೊಬ್ಬರು ಹುಕುಂ ಹೊರಡಿಸುತ್ತ (ಎಲ್ಲ ಹುಕುಮುಗಳನ್ನು ಹೊರಡಿಸಿದವರು ಗ್ರಾಮಡೆಟ) ಜೊತೆಗೆ ಯಾಂತ್ರಿಕ ದಕ್ಷತೆಯಿಂದ ಪಾತ್ರೆಗಳನ್ನು ತೊಳೆದು ಒರೆಸಿ ಇಟ್ಟು, ಆನಂತರ ತರಕಾರಿ (ಶಾಕಾಹಾರಿಗಳ ತರಕಾರಿಯೇ ; 'ಲಾಲ್' ತರಕಾರಿಯಲ್ಲ!) ಹೆಚ್ಚಿಸುತ್ತಿದ್ದ ದೃಶ್ಯಕ್ಕೆ ನನ್ನ ಮೆಚ್ಚಿಕೆ ಸಂದಿತು :

"ನ್ಯಾನ್ಸಿ ಈ ಮನೆಯನ್ನು ನೋಡಿಯೇ ಇಲ್ಲ, ಮಿ. ರಾವ್. ಇದನ್ನು ನಾವು ಕೊಂಡದ್ದು ಅವಳು ಅಮೆರಿಕವನ್ನು ಬಿಟ್ಟಮೇಲೆ....ಅದನ್ನುಮತ್ತೇನೂ ತೊಳೆಯಬೇಕಾಗಿಲ್ಲ, ಮ್ಯಾಕ್. ಒರಸಿಟ್ಟರಾಯಿತು."

"ಸರಿ ಮ್ಯಾಮ್."

"ಕಮಲ ಒಳ್ಳೆ ಎತ್ತರವಾಗಿ ಬೆಳೆದುಬಿಟ್ಟಿರಬೇಕು. ಈಗ ನಾವು ಒಬ್ಬರನ್ನೊಬ್ಬರು ಗುರುತು ಹಿಡಿಯುವುದಕ್ಕೂ ಆಗುವುದಿಲ್ಲ. ಫಿಲಿಪೀನ್ಸ್‌ಗೆ ಅವರೆಲ್ಲ ಹೊರಟಾಗ ಅವಳಿನ್ನೂ ಒಂದು ಒಂದುವರೆ ವರ್ಷದ ಹುಡುಗಿ.... ಮ್ಯಾಕ್, ಇನ್ನೊಂದು ಚಾಕು ಇತ್ತಲ್ಲ...."

"ಇಗೋ ಇಲ್ಲಿದೆ."

"ನ್ಯಾನ್ಸಿ ಒಬ್ಬಳಾದರೂ ನಿಮ್ಮ ಜೊತೆ ಬಂದಿದ್ದರೆ ಚೆನ್ನಾಗಿತ್ತು. ಮ್ಯಾಕ್! ಹಾಳು ಮಾಡಿದೆಯೊ ಅದನ್ನ! ನಿನಗೆ ಕೆಲಸ ಹೇಳಿದವಳಿಗೆ ಬುದ್ಧಿಯಿಲ್ಲ!" (ತರಕಾರಿಯ ಹೋಳುಗಳೋ ಏನೋ ಕೆಳಕ್ಕೆ ಬಿದ್ದವು.)

"ಸರಿ, ನಾನೊಬ್ಬ ಇದೀನಲ್ಲ, ಅನ್ನಿಸಿಕೊಳ್ಳೋದಕ್ಕೆ! ನಾನಲ್ಲ ಹಾಳು ಮಾಡಿದವನು ಸ್ವಂತ ರಾಜಿಯಿಂದ ಅದೇ ಹಾಳಾಯಿತು!"

"ಧೈರ್ಯವಾಗಿ ಹೇಳು, ಆ ಮಾತನ್ನ, ಅದೇನೂ ನಾನಲ್ಲ ಆವನು ಅಂತ ಅನ್ನಲಾರದಷ್ಟೆ!"

ನಾನು "ಈ ಮಾತು ಕಥೆಯನ್ನೆಲ್ಲ ನೋಡಿದರೆ ನಮ್ಮ ಸಂಸಾರದ ವಾತಾವರಣವೇ, ಇದೂ ಕೂಡ. ನಮ್ಮ ಗಂಡಸರೂ ಹೀಗೇ ಮನೆಗೆಲಸಗಳಲ್ಲಿ ಹೆಂಡತಿಯರಿಗೆ ನೆರವಾದರೆ ಚೆನ್ನಾಗಿರುತ್ತದೆ. ಅದನ್ನು ನಾವು ಕಲಿಯಬೇಕು" ಎಂದುಕೊಳ್ಳುತ್ತಿದ್ದೆ. ಅಷ್ಟು ಹೊತ್ತಿಗೆ ಗ್ರಾಮಡೆಟ ಬಹಳ ಚಿಲಿಯುಳ್ಳದ್ದೇ

ನನ್ನೋ ಕಳೆದುಕೊಂಡವರಂತೆ ಗಟ್ಟಿಯಾಗಿ ಚೀರಿದರು.

"ಮ್ಯಾಕ್, ಆ ಗರ್ಬಾಂಜೊ ಇತ್ತಲ್ಲ, ಎಲ್ಲಿ ?"

ಗರ್ಬಾಂಜೊ (ಪದದ ರೂಪವನ್ನು ನಾನು ಸರಿಯಾಗಿ ಗ್ರಹಿಸಿದ್ದೇನೆ ತಾನೆ ?) ಆ ವೇಳೆಗೆ ನನಗೆ ಪರಿಚಿತವಾಗಿತ್ತು—ನಮ್ಮ ಕಡಲೆಗಿಂತ ಎರಡು ಮೂರರಷ್ಟು ದಪ್ಪನಾದ ಕಡಲೆಕಾಳು.

"ಡಯಾನ, ಇಲ್ಲಿಷ್ಟು ಗರ್ಬಾಂಜೊ ನೆನಸಿಟ್ಟಿದ್ದೆ, ನೀನೇನಾದರೂ ಕಂಡೆಯಾ ? ಎಲ್ಲಿ ಅವಿತುಕೊಂಡಿದೆಯೊ ಕಾಣೆನಲ್ಲ !"

ನಾನು "ನಮ್ಮ ಹೊಟ್ಟೆಯ ಒಳಗೆ !" ಎಂದೆ.

ಗ್ರಾಮಡೆಟ "ನಿರ್ದಾಕ್ಷಿಣ್ಯವಾಗಿ ರೆಫ್ರಿಜಿರೇಟರನ್ನು ಲೂಟಿ ಮಾಡಿ" ಎಂದು ಹೇಳಿದ್ದರಷ್ಟೆ. ನಾವು ಆ ಮಾತಿನ ಅಕ್ಷರ ಅಕ್ಷರಕ್ಕೂ ಬೆಲೆಕೊಟ್ಟು ನಿರ್ದಾಕ್ಷಿಣ್ಯವಾಗಿಯೇ ಹಣ್ಣುಹಂಪಲು ಸೀರಿಯಲ್‌ಗಳ ಜೊತೆಗೆ ಕಡಲೆ ಕಾಳನ್ನೂ ಉಪ್ಪು ಮೆಣಸಿನಪುಡಿ (ಇಲ್ಲಿ ಮೆಣಸಿನ ಪುಡಿ ಎಂದರೆ ಅಚ್ಚ ಮೆಣಸಿನ—ಕಪ್ಪು ಮೆಣಸಿನ—ಪುಡಿ. ನಮ್ಮ ಮೆಣಸಿನ ಕಾಯನ್ನು (red pepper) ರೆಡ್ ಪೆಪ್ಪರ್ ಎಂದು ಕರೆಯುತ್ತಾರೆ.) ಸೇರಿಸಿಕೊಂಡು ಮುಗಿಸಿ ಬಿಟ್ಟಿದ್ದೆವು. ಡಯಾನ "ನಿಮ್ಮ ಮಾತನ್ನು ಅಕ್ಷರಶಃ ನಡೆಸಿಬಿಟ್ಟೆವು" ಎಂದಳು. ಗ್ರಾಮಡೆಟ ಅಳಬೇಕೊ ನಗಬೇಕೊ ಒಂದೂ ತೋರದೆ ಕ್ಷಣಕಾಲ ಸುಮ್ಮನೆ ನಿಂತರು. ಮಾರನೆಯ ದಿನ ಏನೋ ಒಂದು ವಿಶೇಷ ಭಕ್ಷ್ಯವನ್ನು ಮಾಡುವುದಕ್ಕಾಗಿ ಅದನ್ನು ನೆನಸಿ ಇಟ್ಟಿದ್ದರಂತೆ. ಅದು ಅವರಿಗೆ ಬಹಳ ಪ್ರಿಯವಾದ ಭಕ್ಷ್ಯ ; ಅದನ್ನು ತಯಾರು ಮಾಡುವುದರಲ್ಲಿ ಅವರು ಚತುರರು, ಅದನ್ನು ಅತಿಥಿಗಳಿಗೆ ಬಡಿಸಿ ಅವರು ಸಂತೋಷಪಡುವುದನ್ನು ನೋಡಿ ತಾವೂ ಸಂತೋಷಪಡಬೇಕೆಂಬ ಆಸೆಯಿಟ್ಟುಕೊಂಡಿದ್ದಂತೆ ತೋರಿತು. ಈಗ ಮತ್ತೆ ನೆನೆಯಹಾಕಿದರೂ ಬೆಳಗಿನ ಹೊತ್ತಿಗೆ ಅದು ಸಾಕಾದಷ್ಟು ನೆನೆದಿರುವುದಿಲ್ಲ ! ಮುಖದಲ್ಲಿ ಅಸಮಾಧಾನ ಸ್ಪಷ್ಟವಾಗಿ ಕಾಣುತ್ತಿತ್ತು—ಅದನ್ನು ಬಚ್ಚಿಟ್ಟು ಕೊಳ್ಳುವ ಕಲೆ ಅವರ ಸ್ವಭಾವಕ್ಕೆ ಸಿದ್ಧಿಸುವಂಥದಲ್ಲ ! "ಅದು ಅತಿಥಿಗಳಿಗೆ ಅಂತ ಮಾಡಿದ್ದು. ಅತಿಥಿಗಳೇ ತಿಂದರಲ್ಲ ! ಸರಿಯಾಯಿತು ಬಿಡು !" ಎಂದು ಮೆಕ್‌ಮಿಲನ್ ಸಮಾಧಾನಪಡಿಸಿದರು. ಈಗ ಗ್ರಾಮಡೆಟ ಮನಸ್ಸನ್ನು ಹದಕ್ಕೆ ತಂದುಕೊಂಡು "ನಿಜ, ಮ್ಯಾಕ್. ನೀನು ಹೇಳಿದ್ದು. ಅತಿಥಿಗಳೇ ತಿಂದರು. ಆದರೆ....ಅದಕ್ಕೊಂದಿಷ್ಟು ಸಂಸ್ಕಾರಮಾಡಿ ಕೊಡೋಣ ಅಂದುಕೊಂಡಿದ್ದೆ" ಎಂದವಳ್ಳದೆ ನಮ್ಮ ಕಡೆಗೆ ತಿರುಗಿ "ನೋಡಿದಿರ, ಎಂಥ ಸಣ್ಣ ವಿಷಯಕ್ಕೆಲ್ಲ ನಾನು ತಲೆ ಕೆಡಿಸಿಕೊಳ್ಳುತ್ತೀನಿ ಅಂತ!" ಎಂದು ನಕ್ಕರು.

ಮಾರನೆಯ ದಿನಕ್ಕೆ ಅವರು ಏನೇನೋ ಸಿದ್ಧ ಮಾಡಿಕೊಳ್ಳುತ್ತಿದ್ದದ್ದರಿಂದ ನಾವೆಲ್ಲ ಮುಂಚೆಯೇ ಮಲಗಲು ಹೊರಟೆವು. ರಾಮು ಡಯಾನರಿಗೆ ಪ್ರೀ ಫ್ಯಾಬ್ ಮನೆಯನ್ನೂ ನನಗೆ ಟ್ರೈಯ್ಲರನ್ನೂ ಬಿಡುವು ಮಾಡಿಕೊಟ್ಟಿದ್ದರು. ಮೆಕ್‌ಮಿಲನ್ ನನ್ನೊಡನೆ ಬಂದು "ಸ್ವಿಚ್ ಇಲ್ಲಿದೆ, ಇದು ರೇಡಿಯೊ" ಎಂದು ಮುಂತಾಗಿ ಎಲ್ಲವನ್ನೂ ತೋರಿಸಿ ಗುಡ್‌ನೈಟ್ ಹೇಳಿ ಹೋದರು ನಾನು ಟ್ರೈಯ್ಲರಿನಲ್ಲಿ ಎಲ್ಲ ಸೌಕರ್ಯಗಳನ್ನೂ ಅಳವಡಿಸಿರುವ ಚಾತುರ್ಯವನ್ನು ನೋಡಿ ಆಶ್ಚರ್ಯಪಡುತ್ತ ಅರ್ಧ ಘಂಟೆ ಕಳೆದೆ.

ಇಂಥದೊಂದು ಟ್ರೈಯ್ಲರ್, ಅದನ್ನು ಎಳೆಯಬಲ್ಲ ಕಾರ್, ಆ ಕಾರನ್ನು ಓಡಾಡಿಸುವುದಕ್ಕೆ ಬೇಕಾದ ಹಣ, ಮೂರು ಜನಕ್ಕೆ ಮೀರಿದ ಸಂಸಾರ— ಇವೆಲ್ಲ ಇದ್ದರೆ ಜೀವಮಾನವೆಲ್ಲ ಮನೆ ಕಟ್ಟುವ ಯೋಚನೆಯನ್ನೇ ಮಾಡದೆ ಅದರಲ್ಲೇ ಇದ್ದುಬಿಡಬಹುದು. ಈ ಪರಿವ್ರಾಜಕ ಗೃಹದಲ್ಲಿ ಫ್ರಿಜ್, ಏರ್ ಕಂಡಿಷನರ್, ಹೀಟರ್, ಮೆತ್ತನೆಯ ಪೀಠಗಳು, ಮೆತ್ತನೆಯ ಹಾಸಿಗೆ, ಫ್ಲಷ್ ಶೌಚಗೃಹ, ಟಾಯ್‌ಲೆಟ್ ಸಾಮಗ್ರಿಗಳು—ಬೇಕಾದದ್ದೆಲ್ಲ ಇದೆ. ಕಾರು ಹೋಗಬಹುದಾದ ಕಡೆಗೆಲ್ಲ ಈ ಮನೆಯನ್ನೂ ತೆಗೆದುಕೊಂಡು ಹೋಗಬಹುದು. ಹೋಟಲಿಗಾಗಲಿ ಮೋಟಲಿಗಾಗಲಿ ದಿನಕ್ಕೆ 15 ಡಾಲರಿನಿಂದ ಹಿಡಿದು 100–150 ಡಾಲರಿನವರೆಗೆ ಹಣ ತೆರಬೇಕಾಗಿಲ್ಲ. ಮೋಟಲುಗಳಲ್ಲಿ ಕೊಠಡಿ ಖಾಲಿ ಇದೆಯೋ ಇಲ್ಲವೋ ಎಂದು ಚಿಂತೆ ಪಡಬೇಕಾಗಿಲ್ಲ. ಕ್ಯಾಂಪಿಂಗ್ ಸ್ಥಳ ಒಂದು ಸಿಕ್ಕಿದರೆ ಸಾಕು.

ಈ ಕ್ಯಾಂಪಿಂಗ್ ಸ್ಥಳದ ವಿಷಯ ಒಂದೆರಡು ಮಾತು ಹೇಳಬೇಕು. ಮೆಕ್‌ಮಿಲನ್‌ರು ಎರಡು ಮೂರು ವೃತ್ತಿಯುಳ್ಳವರು. ಅವುಗಳಲ್ಲಿ ಕ್ಯಾಂಪಿಂಗ್ ಸ್ಥಳ ನಡೆಸುವುದೂ ಒಂದು. ಅವರಿರುವ ಸ್ಥಳಕ್ಕೆ ಕ್ಯಾಂಪ್–ಅ–ವೈಲ್ (camp-a-while) ಎಂಬ ಹೆಸರಿಟ್ಟಿದ್ದಾರೆ. ಅದರ ಸುತ್ತ ಸುಮಾರು 30 ಮೈಲಿ ಫಾಸಲೆಯಲ್ಲಿರುವ ಎಲ್ಲ ರಸ್ತೆಗಳಲ್ಲೂ 'ಕ್ಯಾಂಪ್ ಅ ವೈಲ್ ಇನ್ ಕ್ಯಾಂಪ್-ಅ–ವೈಲ್' (camp a while in camp-a-while) ಎಂದು ಮುಂತಾಗಿ ಜಾಹೀರಾತುಗಳನ್ನು—ದಾರಿ ತೋರಿಸುವ ಶರಚಿಹ್ನೆಗಳೊಡನೆ—ಪ್ರದರ್ಶಿಸಿದ್ದಾರೆ. ಅವರ ಮನೆಯ ಸುತ್ತ ಸುಮಾರು 150 ಅಡಿ ಜಾಗ ಬಿಟ್ಟುಕೊಂಡು ಉಳಿದ ಸ್ಥಳದಲ್ಲಿ ಒಂದೊಂದು ಕಾರಿಗೂ ಸುಮಾರು 15 ಅಡಿ ಅಗಲದ ಜಾಗ ಗೊತ್ತುಮಾಡಿ ಬಿಳಿಯ ಬಣ್ಣದ ಪಟ್ಟಿಗಳಿಂದ ಅವನ್ನು ಪ್ರತ್ಯೇಕಿಸಿದ್ದಾರೆ. ಕಾರನ್ನೂ ಟ್ರೈಯ್ಲರನ್ನೂ ಈ ಪಟ್ಟಿಗಳ ನಡುವಿನ ಜಾಗದಲ್ಲೇ ನಿಲ್ಲಿಸಬೇಕು. ಟ್ರೈಯ್ಲರಿನಲ್ಲೂ ನಿಲ್ಲಿಸುವ ಸ್ಥಳದಲ್ಲೂ ನೀರು ವಿದ್ಯುತ್ತುಗಳನ್ನು

ಒದಗಿಸುವ ಮತ್ತು ಮಲವನ್ನು ಸೆಳೆದುಕೊಳ್ಳುವ ನಾಳಗಳಿರುತ್ತವೆ. ಟ್ರೈಯ್ಲರ್ ನಿಲ್ಲಿಸಿದ ಮೇಲೆ ಅದರ ನಾಳಗಳಿಗೂ ನೆಲದಲ್ಲಿರುವ ನಾಳಗಳಿಗೂ ಸಂಬಂಧ ಕಲ್ಪಿಸಿದರೆ ಸರಿ—ಟ್ರೈಯ್ಲರಿನಲ್ಲಿ ಮನೆಯಲ್ಲಿರುವ ಅನುಕೂಲಗಳೆಲ್ಲ —ಪರಿಶುದ್ಧವಾದ ನೀರು, ವಿದ್ಯುತ್, ಫ್ಲಷ್, ಶೌಚ ಸಾಧನ—ಇದ್ದಂತಾ ಯಿತು. ಕ್ಯಾಂಪ್-ಅ-ವೈಲ್‌ನಲ್ಲಿ ಸುಮಾರು 20 ಟ್ರೈಯ್ಲರ್‌ಗಳನ್ನು ನಿಲ್ಲಿಸ ಬಹುದು.

ಈ ಅನುಕೂಲಗಳಲ್ಲದೆ ಗುಡಿಸಲಿನಂಥ ಒಂದು ಸಣ್ಣ ಕಟ್ಟಡದಲ್ಲಿ ಬಟ್ಟೆ ಒಗೆಯುವ ಯಂತ್ರ, ಕೊಸರಿಗೆ ಬೇಕಾದರೆ ಇರಲೆಂದು ಇನ್ನೊಂದು ಸ್ನಾನ ಮತ್ತು ಶೌಚಗೃಹ—ಈ ಹೆಚ್ಚಿನ ಸೌಕರ್ಯಗಳೂ ಇವೆ. 24 ಘಂಟೆ ಅಥವಾ ಅದಕ್ಕಿಂತ ಕಡಮೆ ಅಲ್ಲಿ ಕ್ಯಾಂಪ್ ಮಾಡಿದರೆ 3½–4 ಡಾಲರು ಬಾಡಿಗೆ. ಕ್ಯಾಂಪ್-ಅ-ವೈಲ್‌ನ ಮಾಲೀಕರು ಮನೆಯಲ್ಲಿರಲಿ ಇಲ್ಲದಿರಲಿ, ಹಗಲಾಗಲಿ ಮಧ್ಯರಾತ್ರಿಯಾಗಲಿ ಬಂದವರು ಕ್ಯಾಂಪನ್ನು ಉಪಯೋಗಿಸು ವಂತೆ ವ್ಯವಸ್ಥೆಯಿದೆ. ಟ್ರೈಯ್ಲರ್ ನಿಲ್ಲಿಸುವುದು ಬಯಲಿನಲ್ಲಿ. ಅದಕ್ಕಾಗಿ ಕಟ್ಟಡ ಕಟ್ಟಬೇಕಾದದ್ದಿಲ್ಲ. ಆದ್ದರಿಂದ ಮಾಲೀಕರಿಗೆ ಆ ಸ್ಥಳವನ್ನು ಶುಭ್ರವಾಗಿಟ್ಟು ಕೊಳ್ಳುವುದೊಂದೇ ಕೆಲಸ. ಮೆಕ್‌ಮಿಲನ್‌ರು ಇದೊಂದರಿಂದಲೇ ಖರ್ಚು ಕಳೆದು ವರ್ಷಕ್ಕೆ 7–8 ಸಾವಿರ ಡಾಲರ್ ಗಳಿಸುತ್ತಾರಂತೆ. ಇಂಡಿಯದಲ್ಲಿ ಈ ವ್ಯವಸ್ಥೆ ಎಲ್ಲೂ ಇದ್ದಂತೆ ಕಾಣೆ. ಕಾರುಗಳ ಓಡಾಟ ಕಡಮೆಯಾದ್ದರಿಂದ ಈ ವ್ಯವಸ್ಥೆಯ ಅವಶ್ಯಕತೆಯೂ ಇಲ್ಲ, ಅದು ಲಾಭಕರವೂ ಅಲ್ಲ. ಅಲ್ಲದೆ ಸುಮಾರು 14,000 ಡಾಲರ್ ಕೊಟ್ಟು ಟ್ರೈಯ್ಲರ್ ಕೊಳ್ಳಬಲ್ಲ ಜನ ಇಲ್ಲಿ ಎಷ್ಟು ಜನ ಇದ್ದಾರು! (ಈಚೆಗೆ ಪ್ರವಾಸಿಗಳು ಹೆಚ್ಚಾಗಿ ಬರುವ ಒಂದೆರಡು ಕಡೆಗಳಲ್ಲಿ ಸರ್ಕಾರದವರು ಈ ಸೌಕರ್ಯಗಳನ್ನು ಒದಗಿಸಿದ್ದಾರೆಂದು ಕೇಳಿ ದ್ದೇನೆ).

## ನನ್ನ ಅಮೆರಿಕನ್ ಬೀಗರು

## (2)–ಸ್ಪ್ರಿಂಗ್‌ಫೀಲ್ಡ್‌ನಲ್ಲಿ ಬೀಗರ ಔತನ

ರಾತ್ರಿ ನನಗೆ ನಿದ್ದೆ ಬಂದದ್ದು ತಡ; ಆದ್ದರಿಂದ ಬೇಗ್ಗೆ ಏಳುವುದೂ ತಡ ವಾಯಿತು. ಸುಮಾರು 6 ಘಂಟೆಯ ಹೊತ್ತಿನಲ್ಲಿ ಯಾರೋ ಟ್ರೈಯ್ಲರಿನ ಬಾಗಿಲು ತೆರೆದಂತಾಯಿತು. ಅರೆನಿದ್ದೆಯಲ್ಲಿದ್ದ ನನಗೆ ಎದ್ದು ನೋಡುವಷ್ಟು

  

ಚಟುವಟಿಕೆಯಿಲ್ಲ. ಏಳೂವರೆ ಘಂಟೆಗೆ ಎದ್ದು ಕೂಡುವ ಕೋಣೆಗೆ ಬಂದು ನೋಡಿದರೆ ಅಲ್ಲಿ ಛತ್ರಿಯೊಂದು ಒಂದು ಕುಳಿತಿತ್ತು. ಹೊರಗೆ ಮಳೆ, ಗಾಳಿ; ಮೆಕ್‌ಮಿಲನ್ ಆ ಮಳೆಯಲ್ಲೇ ಬಂದು ನನ್ನ ಉಪಯೋಗಕ್ಕಾಗಿ ಛತ್ರಿಯನ್ನಿಟ್ಟು ಹೋಗಿದ್ದರು!

ಕಾಫಿ ಕುಡಿಯುತ್ತಿರುವಾಗ ಗ್ರಾಮಡೆಟ ಮುಂದಿನ ಕಾರ್ಯಕ್ರಮವನ್ನು ವಿವರಿಸಿದರು. ಸುಮಾರು 11 ಘಂಟೆಗೆ ಎಲ್ಲರೂ ಸ್ಪ್ರಿಂಗ್‌ಫೀಲ್ಡ್‌ಗೆ ಹೋಗುವುದು. ಅಲ್ಲಿ ಅವರ ಮಗನ (ಫ್ರೆಡ್‌ರಿಕ್ ಆರ್ನಾಲ್ಡ್ ಮೆಕ್‌ಮಿಲನ್, ನ್ಯಾನ್ಸಿಯ ತಮ್ಮ) ಮನೆಯಲ್ಲಿ ಮಧ್ಯಾಹ್ನದ ಊಟ. ಅದಕ್ಕೆ ಸಿದ್ಧತೆ ಅಲ್ಲೂ ನಡೆಯುತ್ತಿದ್ದಿರಬೇಕು; ಇಲ್ಲಿಂದಲೂ ಕೆಲವು ಸಾಮಾನು ತಯಾರಿಸಿಕೊಂಡು ಹೋಗುವ ಏರ್ಪಾಡಿತ್ತು. ಡಯಾನ "ನಾನು ನಿಮ್ಮ ಜೊತೆಗಿದ್ದು ಸಹಾಯ ಮಾಡಬಹುದಲ್ಲ?" ಎಂದದ್ದಕ್ಕೆ ಗ್ರಾಮಡೆಟ "11 ಘಂಟೆಯವರೆಗೂ ನೀವು ಯಾರೂ ನನ್ನ ಕಾಲಿಗೆ ತೊಡರಿಕೊಳ್ಳಬೇಡಿ. ಕೆಲಸಕ್ಕೆ ಆರಂಭಿಸಿದರೆ ನಾನು ಒಂಟಿಬಡಕ ಸುಂಟರಗಾಳಿ. ಮ್ಯಾಕ್, ಟ್ರಾಪಿಕ್ಸ್‌ನಲ್ಲಿ ನಾಷ್ಟಾ ಸಿದ್ಧವಾಗಿದೆ. ಎಲ್ಲರನ್ನೂ ಕರೆದುಕೊಂಡು ಹೋಗು" ಎಂದು ಹಾಸ್ಯ ಬೆರೆದ ದರ್ಪದಿಂದ ಹುಕುಂ ಹೊರಡಿಸಿದರು. ಟ್ರಾಪಿಕ್ಸ್ (Tropics) ಎನ್ನುವುದು ಲಿಂಕನ್ನಿನಲ್ಲಿ ಉತ್ತಮವಾದ ರೆಸ್ಟೋರಾಂಟ್.

ನಾಷ್ಟಾ ಮಾಡಿ ಊರನ್ನೆಲ್ಲಾ ಸುತ್ತುಹಾಕಿ ಸುಂದರವಾದ ಪಾರ್ಕ್ ಒಂದರಲ್ಲಿ ಅಲೆದಾಡಿ 11 ಘಂಟೆಗೆ ಸರಿಯಾಗಿ ಮನೆಗೆ ಮರಳಿದೆವು. ಗ್ರಾಮಡೆಟ ತಮ್ಮ ಕೆಲಸವನ್ನೆಲ್ಲ ಮುಗಿಸಿ ಸಿದ್ಧವಾಗಿದ್ದರು. ರಾಮು ಡಯಾನ ತಮ್ಮ ಕಾರಿನಲ್ಲಿ ಹೊರಟರು. ನಾನು ಮೆಕ್‌ಮಿಲನ್‌ರೊಡನೆ ಅವರ ಕಾರಿನಲ್ಲೇ ಕುಳಿತೆ.

ಪ್ರಯಾಣ ಮಾಡುವಾಗ ಪ್ರಶ್ನೆಗಳ ಸುರಿಮಳೆ ಬಂದೀತೆಂದು ನಿರೀಕ್ಷಿಸಿದ್ದೆ. ಅದು ಬರಲಿಲ್ಲ. ಮೆಕ್‌ಮಿಲನ್ "ಇವತ್ತು ಹೆಚ್ಚು ಮಾತಿಗೆ ಅವಕಾಶವಾಗುವುದಿಲ್ಲ. ಇಲ್ಲಿಂದ ಸ್ಪ್ರಿಂಗ್‌ಫೀಲ್ಡ್ ಬಹಳ ಹತ್ತಿರ—ಇನ್ನು ಅರ್ಧ ಘಂಟೆಯೊಳಗೇ ಅಲ್ಲಿಗೆ ತಲಪುತ್ತೇವೆ. ಮಾತಿಗೋಸ್ಕರವೇ ನೀವು ಇನ್ನೊಂದೆರಡು ಸಾರಿ ಬರಬೇಕು" ಎಂದರು. ಸ್ಪ್ರಿಂಗ್‌ಫೀಲ್ಡ್ ಇಲ್ಲಿನಾಯ್ ರಾಜ್ಯದ ಮುಖ್ಯ ಪಟ್ಟಣ; ಲಿಂಕನ್ ಇದ್ದ ಸ್ಥಳ. ಇಲ್ಲಿ ಕಾರಿನ ನಂಬರುಪ್ಲೇಟುಗಳ ಮೇಲೆ ನಂಬರಿನ ಜೊತೆಗೆ ಆ ರಾಜ್ಯದ ವೈಶಿಷ್ಟ್ಯವೇನೆಂಬುದನ್ನು ಕುರಿತು ಒಂದು ಮಾತು ಬರೆಯುತ್ತಾರೆ. ಮಿನ್ನಿಸೋಟ ರಾಜ್ಯದ ಕಾರುಗಳ ನಂಬರು ಪ್ಲೇಟಿನಲ್ಲಿ 'Ten Thousand Lakes' (ಹತ್ತು ಸಾವಿರ ಸರೋವರಗಳು) ಎಂದು ಬರೆದಿರುತ್ತಾರೆ. ಹಾಗೇ ಇಲ್ಲಿನಾಯ್ ರಾಜ್ಯದ ಪ್ಲೇಟುಗಳ ಮೇಲೆ

'Land o' Lincoln' (ಲಿಂಕನ್‌ನ ಪ್ರಾಂತ) ಎಂದು ಬರೆದಿರುತ್ತಾರೆ. ಮೆಕ್‌ಮಿಲನ್ ಸ್ಪ್ರಿಂಗ್‌ಫೀಲ್ಡ್‌ನ ಸ್ಥಳಪುರಾಣ (ಬಹುಮಟ್ಟಿಗೆ ಲಿಂಕನ್ ವಿಷಯ) ಸ್ವಲ್ಪ ಹೇಳಿದರು.

ಅವರ ಕಾರಿನಲ್ಲಿ ರೇಡಿಯೊ ಟೆಲಿಫೋನ್ ಇಟ್ಟುಕೊಂಡಿದ್ದಾರೆ. ಅದರ ಮೂಲಕ ಅವರ ಮಗನೊಡನೆ "ಹೊರಟಿದ್ದೇವೆ, ಇಷ್ಟು ಮೈಲಿ ದೂರದಲ್ಲಿದ್ದೇವೆ" ಎಂದು ಒಂದೆರಡು ಮಾತಾಡಿದರು. ಅದು ಅವಶ್ಯಕವಾದ ಮಾತೇನೂ ಅಲ್ಲ—ಹೊರಟ ವಿಷಯ ಲಿಂಕನ್ನಿನಿಂದಲೇ ಫೋನ್ ಮಾಡಿಯಾಗಿತ್ತು. ರೇಡಿಯೊ ಟೆಲಿಫೋನ್ ಇರುವ ವಿಷಯ ನನಗೆ ತಿಳಿಯಲೆಂದು ಫೋನ್ ಮಾಡಿದರೇನೋ ಎಂಬ ಯೋಚನೆ ನನ್ನ ದುಷ್ಟ ಮನಸ್ಸಿನಲ್ಲಿ ಹೊಳೆದುಹೋಯಿತು. ಈ ಹಿಂದುಳಿದ ಭಾರತದವರಿಗೆ ಇದೆಲ್ಲ ವಿಸ್ಮಯ ತರಬೇಕಷ್ಟೆ! ನನ್ನ ಮುಖದಲ್ಲೇನಾದರೂ ನಗುವಿನ ಛಾಯೆ ಕಂಡಿತೋ ಏನೊ, ಮೆಕ್‌ಮಿಲನ್ ವ್ಯಾಖ್ಯಾನ ಮಾಡಿದರು.

"ನಾನು ಮಾತಾಡಿದ್ದು ನನ್ನ ಮಗನೊಡನೆ, ಸ್ವಲ್ಪ ಪ್ರದರ್ಶನ ಅಂತ ಅನ್ನಿಸುತ್ತೋ ಏನೊ!"

"ಅನ್ನಿಸಬಹುದೇನೊ, ನಾನೇನೋ ನೀವು ಅಪರಾಧಿಗಳಲ್ಲ ಅಂದುಕೊಂಡಿದೀನಿ."

"ನಾನೇ ತಪ್ಪೊಪ್ಪಿಕೊಂಡು ಬಿಟ್ಟರೆ?"

"ಹಾಸ್ಯ ಮನೋವೃತ್ತಿ ತಪ್ಪು ಅನ್ನೋದಾದರೆ ಒಪ್ಪಿಕೊಳ್ಳಿ!"

"ವಂದನೆಗಳು."

ಅಷ್ಟು ಹೊತ್ತಿಗೆ ಸ್ಪ್ರಿಂಗ್‌ಫೀಲ್ಡ್ ಬಂದೇ ಬಿಟ್ಟಿತು. ಅವರ ಮಗನ ಮನೆಯಲ್ಲಿ ಸುಮಾರು 20–25 ಜನ ಸೇರಿದ್ದರು. ಮಿಸಿಸ್ ಮೆಕ್‌ಮಿಲನ್‌ರ ಅಕ್ಕತಂಗಿಯರು, ಮಕ್ಕಳು, ಅವರ ಸಂಸಾರ—200–250 ಮೈಲಿ ದೂರದ ಒಳಗಿದ್ದ ಬಂಧುಗಳನ್ನೆಲ್ಲ ಕರೆದಿದ್ದರೆಂದು ತಿಳಿಯಿತು. ಪರಿಚಯ ಮಾಡಿಕೊಡುವ ಕೆಲಸ ಮುಗಿದಮೇಲೆ ನ್ಯಾನ್ಸಿಯ ಚಿಕ್ಕಪ್ಪ—ರಾಯ್—ನನ್ನನ್ನು ತಮ್ಮ ವಶಕ್ಕೆ ತೆಗೆದುಕೊಂಡು "Come on, there's bond between us (ಬನ್ನಿ ಬನ್ನಿ, ನನಗೂ ನಿಮಗೂ ವಿಶೇಷ ಬಾಂಧವ್ಯ) ಎಂದರು. ನನ್ನ ಮುಖದಲ್ಲಿ ಪ್ರಶ್ನೆ ಸುಳಿದಿರಬೇಕು. "Our height, you know" (ನಮ್ಮ ಎತ್ತರ) ಎಂದು ವಿವರಣೆ ಕೊಟ್ಟರು. ಅವರೂ ನನ್ನಂತೆ ಐದಡಿ ಮೂರೂವರೆ ಅಂಗುಲ ಎತ್ತರದವರು. ನಾನೂ ನಗುತ್ತ, ಅವರನ್ನು ತಲೆಯಿಂದ ಕಾಲಿನವರೆಗೂ ನೋಡಿದಂತೆ ಮಾಡಿ ತೀರ್ಪುಕೊಟ್ಟೆ: "ನಿಜ, ನಿಮ್ಮ ಎತ್ತರವೂ

ಹದಮೀರಿ ಹುಚ್ಚು ಹುಚ್ಚಾಗಿ ಸಾಗಿಲ್ಲ."

"ಈ ಬಡ್ಜ್ ಮೊದಲಾದವರ ಹಾಗಲ್ಲ, ಅಲ್ಲವೆ?"—ಬಡ್ಜ್ ಮೆಕ್ ಮಿಲನ್‌ರ ಮತ್ತೊಬ್ಬ ಷಡ್ಡಕ. ಅಲ್ಲಿದ್ದವರೆಲ್ಲರಿಗಿಂತ ಆತನೇ ಎತ್ತರದ ಆಳು.

ರಾಯ್ ಬಹಳ ಸ್ನೇಹಪರರೆಂದು ತೋರಿತು. ಯಾವಾಗಲೂ ನಗು ಮುಖ, ಮಾತಿನಲ್ಲಿ ಹಾಸ್ಯದ ಧ್ವನಿ. ನಾನು ಅಮೆರಿಕಕ್ಕೆ ಬಂದದ್ದು ಇದೇ ಮೊದಲೆ, ಇಲ್ಲಿಯ ವಾತಾವರಣ ಒಗ್ಗಿದೆಯೆ, ಇತ್ಯಾದಿ ಹೊಸದಾಗಿ ಪರಿಚಿತ ರಾದವರೊಡನೆ ಆಡಬಹುದಾದ ಮಾತನ್ನೆಲ್ಲ ಆಡಿದರು. ಅವರ ಆ್ಯಕ್ಸೆಂಟಿ ನಿಂದಾಗಿ ಕೆಲವು ವೇಳೆ ನನಗೆ ಮಾತು ಅರ್ಥವಾಗುತ್ತಿರಲಿಲ್ಲ. ಒಂದು ಸಾರಿ ತಮ್ಮ ಊರಿನ ಮಾತಾಡುತ್ತ ಏನೋ ಪ್ರಶ್ನೆ ಕೇಳಿ ಹಾಗೆಯೇ ಜೇಬಿನಿಂದ ಸಿಗರೇಟ್ ಪ್ಯಾಕಿನಂತಿದ್ದ ಪದಾರ್ಥವೊಂದನ್ನು ತೆಗೆದರು. ಸಿಗರೇಟ್ ಕೊಡುತ್ತಾರೆಂದು ಭಾವಿಸಿ ನಾನು "ಕ್ಷಮಿಸಿ. ನಾನು ಸಿಗರೇಟ್ ಸೇದುವುದಿಲ್ಲ. ಆದರೂ ವಂದನೆಗಳು" ಎಂದೆ. ಅವರು ಸ್ವಲ್ಪ ನಕ್ಕು "ನಾನೂ ಸೇದುವುದಿಲ್ಲ. ನಿಮಗೆ ನನ್ನ ಮನೆಯ ಫೋಟೋ ತೋರಿಸಲೆಂದು ಇದನ್ನು ತೆಗೆದೆ" ಎಂದರು. ಅವರು ತೆಗೆದದ್ದು ಸಣ್ಣ ನೋಟ್‌ಬುಕ್ಕು. ನಾನು ಕ್ಷಮೆ ಬೇಡಿದೆ:

"ನನಗೆ ಅಮೆರಿಕನ್ ಆ್ಯಕ್ಸೆಂಟ್ ಇನ್ನೂ ಬಳಕೆಯಾಗಿಲ್ಲ. ಆದ್ದರಿಂದ ಕೆಲವು ವೇಳೆ ನೀವು ಹೇಳಿದ್ದೊಂದಾದರೆ ನಾನು ತಿಳಿದುಕೊಳ್ಳುವುದು ಮತ್ತೊಂದಾಗುತ್ತದೆ. ಕ್ಷಮಿಸಿ!"

ರಾಯ್ ನಗುತ್ತ "ನ್ಯಾನ್ಸಿ ನಿಮಗೆ ತರಬೇತು ಕೊಟ್ಟಿರಬೇಕಲ್ಲವೆ?" ಎಂದರು.

"ಇಲ್ಲ. ನಾವೇ ನ್ಯಾನ್ಸಿಗೆ ತರಬೇತು ಕೊಟ್ಟಿದ್ದೇವೆ." ಎಂದು ನಾನು ಕುಕ್ಕೆ ಸಬ್ಬನ ಕಥೆಯನ್ನು ಹೇಳಿದೆ.*

* ಈ ಕಥೆ ಕೈಲಾಸಂ ಕಟ್ಟಿದ್ದಂತೆ: ಮೈಸೂರಿನ ಯುವರಾಜರು ಯಾವುದೋ ಒಂದು ಪಂಗಡದ ಹುಡುಗರಿಗೆ ಶುದ್ಧ ಕನ್ನಡದ ಉಚ್ಚಾರಣೆಯನ್ನು ಕಲಿಸಲೆಂದು ಪ್ರಸಿದ್ಧ ವಿದ್ವಾಂಸರಾದ ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿಗಳನ್ನು ನೇಮಿಸಿದರು. ಯುವರಾಜರು ಇಂಗ್ಲೆಂಡಿಗೆ ಹೋಗಿದ್ದು ಒಂದು ವರ್ಷದ ಮೇಲೆ ಬಂದು ಮತ್ತೆ ಆ ಶಾಲೆಗೆ ಭೇಟಿ ಕೊಟ್ಟಾಗ ಅದರ ಉಪವನದಲ್ಲಿದ್ದ ಹೂವಿನ ಗಿಡಗಳ ಪಾತಿಯನ್ನು ಕುಕ್ಕುತ್ತ ಯಾರೋ ಒಬ್ಬ ಕೆಂಪು ಲಪ್ಪಟ್ಟಿ ತಲೆಗೆ ಸುತ್ತಿಕೊಂಡು ಕುಳಿತಿದ್ದ. ಯುವ ರಾಜರು 'ಯಾರೋ ನೀನು? ಹಿಂದೆ ನಿನ್ನನ್ನು ಕಂಡಂತಿಲ್ಲ' ಎಂದರು. ಅವನು 'ಯಾನಾ ಬುದ್ಧಿ, ಗೆಪ್ತಿ ಇಲ್ವಾ? ಕುಕ್ಕೆ ಸುಬ್ಬನಲ್ವಾ ನಾನು?' ಎಂದನಂತೆ. ಶಾಲೆಯ ಹುಡುಗರು ಶಾಸ್ತ್ರಿಗಳಿಂದ ಉಚ್ಚಾರಣೆ ಕಲಿಯುವ ಬದಲು ಅವರಿಗೇ ತಮ್ಮ ಉಚ್ಚಾರಣೆಯನ್ನು ಕಲಿಸಿದ್ದರು!

ಬಡ್ಜ್ ಕೇಳಿದರು: "ನೀವು ವಾಸಮಾಡುವುದು ಎಲ್ಲಿ, ಮಿ. ನಾಗರಾಜ್?" ನಮ್ಮಲ್ಲಿ ಸರ್‌ನೇಮ್ (surname) ಇಟ್ಟುಕೊಳ್ಳುವ ಪದ್ಧತಿಯಿಲ್ಲವೆಂದು ಅವರಿಗೆ ತಿಳಿಯದು. ನನ್ನ ಮಗನ ಹೆಸರು ನಾಗರಾಜ್ ಆದ್ದರಿಂದ ನನ್ನ ಹೆಸರೂ ಅದೇ ಇರಬೇಕೆಂದು ಅವರ ಭಾವನೆ. ನಾನು ಅದನ್ನು ತಿದ್ದಲಿಲ್ಲ.)

"ಮೈಸೂರಿನಲ್ಲಿ."

"ಅದು ನಿಮ್ಮ ಮಗನ ಫಾರಂ ಹತ್ತಿರದಲ್ಲೇ ಇರುವ ಊರು, ಅಲ್ಲವೆ?"

"ಹೌದು. ಆದರೆ ನಾನಿರುವುದು ಊರಿನಲ್ಲಲ್ಲ, ಫಾರಂನಲ್ಲಿಯೇ."

"ಓ, ನೀವೂ ಅಲ್ಲೇ ಮನೆ ಕಟ್ಟಿಕೊಂಡಿದ್ದೀರಿ?"

"ಇಲ್ಲ. ನಾವೆಲ್ಲ ಒಟ್ಟಿಗೆ ಇದ್ದೇವೆ."

ಅವರಿಗೆ ಬಹಳ ಆಶ್ಚರ್ಯವಾಯಿತು. ತಂದೆ ಮಗ ಒಟ್ಟಿಗೆ ಇರುವುದು ನಮ್ಮಲ್ಲಿ ಅಪರೂಪವಲ್ಲ ಎಂದು ನಾನು ವಿವರಣೆ ಕೊಟ್ಟ ಮೇಲೂ ಅವರಲ್ಲಿ 'ಇದೇನು ವಿಚಿತ್ರ!' ಎಂಬ ಭಾವನೆ ಅಳಿದಂತೆ ತೋರಲಿಲ್ಲ.

ಅಷ್ಟು ಹೊತ್ತಿಗೆ ಯುವತಿಯೊಬ್ಬಳು ಬಂದು ನಮ್ಮೊಡನೆ ಕುಳಿತುಕೊಂಡು "ನಿಮಗೆ ಎಲ್ಲರ ಪರಿಚಯ ಮಾಡಿಕೊಟ್ಟಾಗ ನಾನು ಅಲ್ಲಿರಲಿಲ್ಲ. ನಾನು ಲಿಂಡ" ಎಂದಳು.

"ನೀವು ಬಂದೊಡನೆಯೇ ನಿಮ್ಮ ಗುರುತು ಹಿಡಿದೆ. ನ್ಯಾನ್ಸಿ ನಿಮ್ಮ ಫೋಟೋ ತೋರಿಸಿ 'ನನ್ನ ತಂಗಿ' ಎಂದು ಹೇಳಿದ್ದಳು."

"ಓ, ಆ ಫೋಟೋ ಹತ್ತು ವರ್ಷದ ಕೆಳಗಿನದು!"

"ನೀವು ಏನೂ ಬದಲಾಯಿಸಿದಂತೆ ತೋರುವುದಿಲ್ಲ, ನಿಮ್ಮ ಮುಖದಲ್ಲಿ ಈಗ ಆತ್ಮವಿಶ್ವಾಸ, ವಿಚಾರಪರತೆಯಿಂದ ಬರುವ ಗಾಂಭೀರ್ಯ. ಇವು ಚಿತ್ರದಲ್ಲಿರುವುದಕ್ಕಿಂತ ಹೆಚ್ಚಾಗಿ ಕಾಣುತ್ತವೆ, ಅಷ್ಟೆ."

"ವಂದನೆ. ನ್ಯಾನ್ಸಿ ಮದುವೆಮಾಡಿಕೊಂಡು ಕ್ಯಾಲಿಫೋರ್ನಿಯಕ್ಕೆ ಹೋದಾಗ ನಾನಿನ್ನೂ ಚಿಕ್ಕ ಹುಡುಗಿ. ಆಮೇಲೆ ಅವಳು ಫಿಲಿಪೀನ್ಸ್‌ಗೆ ಹೊರಟುಹೋದಳು. ಆದ್ದರಿಂದ ನನಗೆ ಅಕ್ಕನ ಬಳಕೆಯೇ ಇಲ್ಲದಂತಾಯಿತು. ಅವಳ ವಿಷಯದಲ್ಲಿ ನೀವು ಹೇಳಬೇಕು."

"ನ್ಯಾನ್ಸಿ ಆ ಕೆಲಸ ವಹಿಸಿಕೊಟ್ಟೇ ಕಳಿಸಿದ್ದಾಳೆ. ನಾನು ಭಾರತಕ್ಕೆ ಹೋದಮೇಲೆ ಇಲ್ಲಿಯ ವರದಿಯನ್ನೂ ಒಪ್ಪಿಸಬೇಕಾಗುತ್ತೆ."

ಅಷ್ಟು ಹೊತ್ತಿಗೆ ಊಟಕ್ಕೆ ಏಳಬೇಕೆಂದು ಕರೆ ಬಂತು. ಎಲ್ಲರೂ ಎದ್ದು ಮೇಜಿನ ಸುತ್ತ ನಿಂತೆವು. ಕ್ರೈಸ್ತರಲ್ಲಿ ಊಟಕ್ಕೆ ಮುಂಚೆ ಗ್ರೇಸ್ ಹೇಳುವ

(saying grace) ಪದ್ಧತಿಯುಂಟಷ್ಟೆ—ಅದು ನಮ್ಮಲ್ಲಿ ಪರಿಷಿಂಚನೆಮಾಡಿ ಚಿತ್ರಾಹುತಿ ಇಟ್ಟು 'ಪ್ರಾಣಾಯ ಸ್ವಾಹಾ' ಇತ್ಯಾದಿ ಹೇಳುವ ಪದ್ಧತಿಯಂತೆ. ಅವತ್ತು ಗ್ರೇಸ್ ಹೇಳಿದವರು ರಾಯ್. ಅಲ್ಲಿದ್ದವರಲ್ಲಿ ಅವರೇ ಹಿರಿಯರು. ಅವರಿಗೆ ಆ ಗೌರವವನ್ನು ಕೊಟ್ಟಿದ್ದನ್ನು ನೋಡಿ ನನಗೆ 'ನಾನು ಇನ್ನೂ ಭಾರತದ ಸಂಪ್ರದಾಯಸ್ಥರ ಗುಂಗಿನಲ್ಲೇ ಇದ್ದೇನೆ' ಎನ್ನಿಸಿತು.

ರಾಯ್ ಗಂಭೀರವಾಗಿ ನಿಂತು ಪದ್ಧತಿಯ ಪ್ರಕಾರ ಹೇಳುವ 'May the Lord make us truly grateful for what we are about to receive today' ಎಂಬ ಮಾತುಗಳ ಜೊತೆಗೆ 'And may his grace descend also on our relations from abroad who have travelled thousands of miles to see us' ಎಂಬ ಮಾತನ್ನು ಸೇರಿಸಿದರು. ಈ ಮಾತಿನ ಅರ್ಥ: ಈಗ ನಾವು ಪಡೆಯಲಿರುವುದಕ್ಕಾಗಿ (ಅಂದರೆ ಪಡೆಯಲಿರುವ ಆಹಾರಕ್ಕಾಗಿ) ಹೃತ್ಪೂರ್ವಕ ಕೃತಜ್ಞತೆಯನ್ನು ಅರ್ಪಿಸುವಂತೆ ಭಗವಂತ ನಮ್ಮ ಮನಸ್ಸನ್ನು ಅನುಗೊಳಿಸಲಿ. ಮತ್ತು, ನಮ್ಮನ್ನು ಭೇಟಿ ಮಾಡಲು ದೂರದೇಶದಿಂದ ಸಾವಿರಾರು ಮೈಲಿ ಪ್ರಯಾಣಮಾಡಿ ಬಂದಿರುವ ನಮ್ಮ ಬಂಧುಗಳ ಮೇಲೂ ಅವನ ಹರಕೆಯಿರಲಿ.) ಎಲ್ಲರೂ 'Amen' (ತಥಾಸ್ತು) ಹೇಳಿದಾಗ ನಾನೂ ಆ ಕ್ರೈಸ್ತರಷ್ಟೇ ಶ್ರದ್ಧೆಯಿಂದ 'Amen' ಹೇಳಿದೆ. ಆ ಆಚರಣೆಯಿಂದ ಅವರು ನನ್ನನ್ನು ತಮ್ಮಲ್ಲಿ ಒಬ್ಬನನ್ನಾಗಿ ಮಾಡಿಕೊಂಡರು ಎಂಬ ಭಾವನೆ ಬಂತು.

ನಾನು ಮೆಕ್‌ಮಿಲನ್ ದಂಪತಿಗಳನ್ನೂ ಅವರ ಮಕ್ಕಳನ್ನೂ ಮತ್ತೆ ನೋಡಿದರೂ ನೋಡಬಹುದೇನೊ. ಅಲ್ಲಿ ನೆರೆದಿದ್ದ ಅವರ ಬಂಧುಗಳನ್ನು ಮತ್ತೆ ನೋಡುವುದು ತೀರ ಅಸಂಭವ. ಬಹುಶಃ ಒಂದೆರಡು ತಿಂಗಳು ಕಳೆದ ಮೇಲೆ ನಾವು ಪರಸ್ಪರ ಗುರುತಿಸುವುದೂ ಸಾಧ್ಯವಾಗಲಾರದು. ಆದರೂ ಅಂದು ಅವರು ಆಡಿದ ಮಾತೆಲ್ಲ ಸ್ನೇಹ ತುಂಬಿದ ಹೃದಯದಿಂದ ಬಂದದ್ದು. ಅದು ತಾತ್ಕಾಲಿಕ ಎನ್ನಬಹುದು; ಏನೂ ಆಸಕ್ತಿಯೇ ಇಲ್ಲದಿರುವುದಕ್ಕಿಂತ ತಾತ್ಕಾಲಿಕ ಸ್ನೇಹವಾದರೂ ಒಳ್ಳೆಯದು. ನಾನೇನೋ ಆ ಸನ್ನಿವೇಶವನ್ನು ಆನಂದದಿಂದ ನೆನೆಯುತ್ತಿದ್ದೇನೆ. ಅವರೆಲ್ಲರ ವಿಷಯದಲ್ಲೂ ಮನಸ್ಸು ಆರ್ದ್ರವಾಗಿದೆ, ಅವರು ಯಾವ ದೇವರನ್ನು ನಂಬಿದ್ದಾರೋ ಅವನ ಹರಕೆ ಅವರ ಮೇಲಿರಲಿ. ಇದನ್ನು ಅವರ ಭಾಷೆಯಲ್ಲೇ ಹೇಳುತ್ತೇನೆ: May His grace descend on them all. Amen.

ಮೆಕ್‌ಮಿಲನ್ ದಂಪತಿಗಳು, ಅವರ ಮಗ, ಸೊಸೆ, ಮೊಮ್ಮಕ್ಕಳು, ಕೆಲವರು ಹುಡುಗರು, ರಾಮು, ದಯಾನ. ಇವರೆಲ್ಲ ಒಂದು ಮೇಜಿನ ಸುತ್ತ

ಕುಳಿತರು. ನನ್ನ ಜೊತೆಗೆ ಕುಳಿತವರು ರಾಯ್, ಬಡ್ಜ್, ಮಿಸಿಸ್ ಮೆಕ್ ಮಿಲನ್‌ರ ಅಕ್ಕತಂಗಿಯರಾದ ಐವ, ಡಾಲಿ, ಟ್ವೈನಿ, ಮತ್ತು ಲಿಂಡ. ಇದು ಅವರೆಲ್ಲರಿಗೂ ಮೆಕ್ ಮಿಲನ್‌ರು ತೋರಿದ ಮರ್ಯಾದೆ. ಅಲ್ಲದೆ ಅವರ— ನಾನು ಯಾರನ್ನು ಮತ್ತೆ ಕಾಣುವ ಸಂಭವವಿಲ್ಲವೋ ಅವರ—ಪರಿಚಯ ನನಗೆ ಚೆನ್ನಾಗಿ ಆಗಲು ಅವಕಾಶ. ಆಲೋಚನಾಪರರು ಮಾತ್ರ ಮಾಡ ಬಹುದಾದ ಈ ಏರ್ಪಾಡು ನೋಡಿ ನನಗೆ ಬಹಳ ಮೆಚ್ಚಿಕೆಯಾಯಿತು.

ಅವತ್ತು ಬಹುಶಃ ಅಲ್ಲಿ ಯಾರಿಗೂ ಮಾಂಸಾಹಾರವಿಲ್ಲ; ನನ್ನ ಜೊತೆ ಕುಳಿತಿದ್ದವರಿಗಂತೂ ಇಲ್ಲವೆಂದು ಖಚಿತವಾಗಿ ಹೇಳಬಲ್ಲೆ. ಮಗ್ಗುಲಲ್ಲಿ ಯಾರಾದರೂ ಮಾಂಸ ತಿನ್ನುತ್ತಿದ್ದರೂ ನನಗೆ ಊಟ ಕಷ್ಟವೆಂದು ನ್ಯಾನ್ಸಿ ಕಾಗದ ಬರೆದಿದ್ದಿರಬಹುದು. ನನ್ನಿಂದಾಗಿ ಅವರಿಗೆಲ್ಲ ಪ್ರಿಯವಾದ ಆಹಾರ ತಪ್ಪಿತಲ್ಲ ಎಂದು ನನಗೆ ಸ್ವಲ್ಪ ವ್ಯಥೆಯಾಯಿತು. ಸೂಪ್, ಸಾಲಡ್, ಕೇಕ್, ಐಸ್‌ಕ್ರೀಮ್, ಮುಂತಾದ್ದು ಏನೇನೋ ಇದ್ದಿರಬೇಕು. ಮಾತಿನಲ್ಲಿ ಮಗ್ನ ನಾಗಿದ್ದದ್ದರಿಂದ ತಿಂದದ್ದೇನು ಎನ್ನುವುದು ನೆನಪೇ ಇಲ್ಲ. ಮಾದಕ ಪಾನೀಯ ಗಳೇನೂ ಇರಲಿಲ್ಲ. ಮೆಕ್‌ಮಿಲನ್‌ರ ಮನೆಯಲ್ಲಿ ಅದರ ಉಪಯೋಗವೇ ಇಲ್ಲವಂತೆ. ಮೊದಲು ಹತ್ತಾರು ನಿಮಿಷ ಬಹುಮಟ್ಟಿಗೆ ಗಂಡಸರೊಡನೆಯೇ ಮಾತಾಯಿತು. ಹೆಂಗಸರು ಮಧ್ಯೆ ಮಧ್ಯೆ ಒಂದೊಂದು ಪ್ರಶ್ನೆ ಹಾಕುತ್ತಿ ದ್ದರು. ಆಮೇಲೆ ಸಂಭಾಷಣೆಯನ್ನೆಲ್ಲ ಹೆಂಗಸರೇ ವಹಿಸಿಕೊಂಡುಬಿಟ್ಟರು.

ನಾನು ಓದಿರುವುದನ್ನು ನೆಚ್ಚಬಹುದಾದರೆ, ಪಾಶ್ಚಾತ್ಯರ ಮನೆಯಲ್ಲಾ ಗಲಿ ಪಾರ್ಟಿಗಳಲ್ಲಾಗಲಿ ಊಟಕ್ಕೆ ಕುಳಿತಾಗ ಗಂಭೀರವಾದ ವಿಷಯಗಳ ಚರ್ಚೆ ನಿಷಿದ್ಧ. ಲೋಕಾಭಿರಾಮವಾದ ಮಾತು, ಲಘುಹಾಸ್ಯ, ಸಾಧ್ಯವಾದ ಮಟ್ಟಿಗೆ ಇತರರಿಗೆ ಮಾತಾಡಲು ಅವಕಾಶಕೊಟ್ಟು ನಮ್ಮ ಸ್ವಂತ ಅಭಿಪ್ರಾಯ ಗಳ ಮಂಡನೆಯನ್ನು ತೀರ ಕಡಮೆ ಮಟ್ಟದಲ್ಲಿಟ್ಟುಕೊಳ್ಳುವುದು—ಇದು ಸಭ್ಯ ನಡತೆ. ನಾನು ಗಂಡಸರೊಡನೆ ಮಾತಾಡುವಾಗಲೇನೋ ಈ ನಿಯಮ ವನ್ನು ಪಾಲಿಸಿದೆ. ಆದರೆ ಮಹಿಳೆಯರು ಗಂಭೀರವಾದ ವಿಷಯಗಳನ್ನು ಕುರಿತು ಪ್ರಶ್ನೆ ಹಾಕಿದಾಗ ಉತ್ತರ ಕೊಡಲೇಬೇಕಷ್ಟೆ. ಚರ್ಚೆಯಲ್ಲಿ ಮುಖ್ಯ ವಾಗಿ ಭಾಗವಹಿಸಿದವರು ನ್ಯಾನ್ಸಿಯ ಚಿಕ್ಕಮ್ಮಂದಿರು. ಐವ ಒಂದೆರಡು ಮಾತಾಡಿದರೋ ಇಲ್ಲವೊ. ಡಾಲಿ ಮತ್ತು ಟ್ವೈನಿ ಭಾರತದ ವಿಷಯದಲ್ಲಿ ಬಹಳ ಕುತೂಹಲ ತೋರಿಸಿದರು:

"ಭಾರತದಲ್ಲಿ ಹೇಳಲಸಾಧ್ಯವಾದಷ್ಟು ಬಡತನವಂತೆ, ನಿಜವೆ?"

"ಬಡತನವಿದೆ, ನಿಜ, ಅಮೆರಿಕಕ್ಕಿಂತ ನಮ್ಮದು ಬಡದೇಶ. ಆದರೆ

ಬ್ರಿಟಿಷ್ ಪತ್ರಿಕೆಗಳು ನಮ್ಮ ಬಡತನವನ್ನು ಉತ್ಪ್ರೇಕ್ಷಿಸಿ ಪಲ್ಲವಿ ಹಾಡುವುದರಲ್ಲಿ ಆನಂದ ಪಡೆಯುತ್ತವೆ. ಅಮೆರಿಕದ ಪತ್ರಿಕೆಗಳಿಗೂ ಇದು ಅಭ್ಯಾಸವಾಗಿದೆ. ಇಲ್ಲವೆ....ಬಡತನವೆಂದರೇನು ಎಂಬ ಪ್ರಶ್ನೆಯೂ ಹಾಕಬೇಕಾದ್ದು."

"ವಿವರಣೆ ಕೊಡುತ್ತೀರಾ ?"

"ಈಗ ನೋಡಿ, ನನ್ನ ಮನೆಯಲ್ಲಿ ಸೋಫಾ ಸೆಟ್ ಇಲ್ಲ; ನೆಲಕ್ಕೆ ರತ್ನಗಂಬಳಿ ಇಲ್ಲ; ನಾನು ರೆಫ್ರಿಜಿರೇಟರ್ ಕೊಂಡಿಲ್ಲ ; ಚೈನಾಪಾತ್ರೆಗಳನ್ನು ಉಪಯೋಗಿಸಿಯೇ ಇಲ್ಲ."

"ನಿಜವಾಗಿ ? ಟೀ ಕಾಫಿ ಕೊಡಬೇಕಾದಾಗ ಏನು ಮಾಡುತ್ತೀರಿ ?"

"ಸ್ಟೇನ್‌ಲೆಸ್ ಸ್ಟೀಲ್ ಗ್ಲಾಸಿನಲ್ಲಿ ಕೊಡುತ್ತೇನೆ. ಒಂದೆರಡು ಸಾರಿ ಅಮೆರಿಕನ್ನರು ನಮ್ಮ ಮನೆಗೆ ಬಂದಿದ್ದಾಗ 'ನಮ್ಮ ಮನೆಗಳಲ್ಲಿ ಚೈನಾವೇರ್ ಉಪಯೋಗಿಸುವ ಅಭ್ಯಾಸ ಇತ್ತೀಚೆಗೆ ಬಂದದ್ದು, ನಾನಿನ್ನೂ ಹಳೆಯ ಕಾಲದಲ್ಲೇ ಇದ್ದೇನೆ' ಎಂದು ವಿವರಣೆ ಕೊಟ್ಟೆ, ಅಷ್ಟೆ. ನನ್ನ ದೃಷ್ಟಿಯಲ್ಲಿ ಇವೆಲ್ಲ ಇಲ್ಲದಿರುವುದು ಬಡತನವಲ್ಲ. ಆದರೂ ನಿಜವಾದ ಬಡತನ ನಮ್ಮ ದೇಶದಲ್ಲಿ ಹೆಚ್ಚು, ಅದಕ್ಕೆ ಕಾರಣರಾದವರು ಬ್ರಿಟಿಷರು."

"ಹೆಂಗಸರು ಬೀದಿಯಲ್ಲೇ ಮಕ್ಕಳನ್ನು ಹೆರುತ್ತಾರಂತಲ್ಲ ?"

ನನಗೆ ನಗು ಬಂತು. "ಹಾಗೇ ? ನನಗೆ ಗೊತ್ತಿರಲಿಲ್ಲ, ನಾನು ಬೀದಿಯಲ್ಲಿಲ್ಲದ ಸಮಯ ನೋಡಿಕೊಂಡು ಹೆತ್ತಿರಬೇಕು! ನನ್ನ ಹಿರಿಯ ಮಗ ಇಂಗ್ಲೆಂಡಿನಲ್ಲಿದ್ದಾಗ ಒಂದು ಟೀವಿ ಚಿತ್ರ ನೋಡಿದನಂತೆ. ಮದುವೆಯ ಸಮಾರಂಭ ಭಾರತದಲ್ಲಿ ಹೇಗೆ ನಡೆಯುತ್ತದೆ ಎಂಬುದನ್ನು ತೋರಿಸಲು ನಿರ್ಮಿಸಿದ ಚಿತ್ರ. ಹೆಣ್ಣು ಅಂಬೆಗಾಲಿಟ್ಟುಕೊಂಡು ಹತ್ತಾರು ಗಜ ದೂರದಿಂದ ಬಂದು ಗಂಡು ಚಾಚಿದ್ದ ಎಡಗಾಲಿಗೆ ಮುತ್ತಿಡುವುದು—ಇದು, ಆ ಚಿತ್ರದ ಪ್ರಕಾರ ಭಾರತದಲ್ಲಿ ಮದುವೆಯ ಕ್ರಮ! ಈ ಆಚರಣೆಯನ್ನು ನಾನು ಎಲ್ಲೂ ಕಂಡಿಲ್ಲ, ನಮ್ಮ ಪದ್ಧತಿ 'ನೀನು ನಮ್ಮ ಮನೆಯ ರಾಣಿ' ಎಂದು ಹೇಳಿ ಹೆಣ್ಣನ್ನು ಆಶೀರ್ವದಿಸಿ ಮನೆಗೆ ಕರೆದುಕೊಳ್ಳುವುದು. ಮೇಲೆ ಹೇಳಿದಂಥ ಕಥೆಗಳನ್ನು ಪ್ರಚಾರ ಮಾಡುವುದಕ್ಕಾಗಿಯೇ ಬ್ರಿಟಿಷರು ಹಣ ಕೊಡುತ್ತಿದ್ದರು, ಅದು ಇನ್ನೂ ಉಳಿದು ಬಂದಿದೆಯೇನೋ !"

"ಹಾಗಾದರೆ ಇದೆಲ್ಲ ಬರಿಯ ಸುಳ್ಳು !"

"ಕೆಲವು ದಿನಗಳ ಕೆಳಗೆ ರೈಲಿನಲ್ಲೋ ಪ್ಲೇನಿನಲ್ಲೋ ಒಂದು ಹೆರಿಗೆಯಾಯಿತೆಂದು ಓದಿದ ನೆನಪಿದೆ, ಹಾಗೆ ಎಲ್ಲೋ ಒಂದು ಕಡೆ ಆಗಿದ್ದರೆ ಆಶ್ಚರ್ಯಪಡಬೇಕಾದ್ದಿಲ್ಲ."

“ಮಿಷನರಿಗಳಿಲ್ಲದಿದ್ದರೆ ಇಂಡಿಯದಲ್ಲಿ ವಿದ್ಯಾಭ್ಯಾಸ ಮುಂದುವರಿಯುತ್ತಿರಲಿಲ್ಲ ಎನ್ನುತ್ತಾರಲ್ಲ?”

“ನಾನು ವಿಶ್ವವಿದ್ಯಾಲಯವನ್ನು ಪ್ರವೇಶಿಸುವುದಕ್ಕಿಂತ ಮುಂಚೆ ನಿಮ್ಮ ಮೆಥಡಿಸ್ಟ್ (ಮೆಕ್‌ಮಿಲನ್‌ರೂ ಅವರ ಬಂಧುಗಳೂ ಮೆಥಡಿಸ್ಟ್ ಪಂಥದ ಕ್ರೈಸ್ತರು) ಪಂಗಡದವರು ನಡೆಸುತ್ತಿದ್ದ ‘ವೆಸ್ಲಿಯನ್ ಮಿಷನ್’ ಸ್ಕೂಲಿನಲ್ಲೇ ಓದಿದವನು, ಅದಕ್ಕೆ ಕಾರಣ : ಅದು ನನ್ನ ಮನೆಯ ಹತ್ತಿರದಲ್ಲಿದ್ದ ಸ್ಕೂಲು. ನಾನು ಅಲ್ಲಿ ವಿದ್ಯಾರ್ಥಿಯಾಗಿದ್ದಾಗ ಪ್ರಿನ್ಸಿಪಾಲರಾಗಿದ್ದ ರೆವರೆಂಡ್ ಆರ್. ಡಬ್ಲ್ಯು. ಬೂಟ್ ಅವರ ವಿಷಯದಲ್ಲಿ ನನಗೆ ಬಹಳ ಗೌರವವಿದೆ. ನಮ್ಮ ಭಾಷೆಗಳಿಗಾಗಿ ಮಿಷನರಿಗಳು ದುಡಿದಿದ್ದಾರೆ. ಕನ್ನಡದಲ್ಲಿ ಈಗಿರುವ ಅತ್ಯುತ್ತಮ ನಿಘಂಟು ಕಿಟ್ಟೆಲ್ ಎಂಬುವರು ನಮ್ಮ ಪಂಡಿತರ ನೆರವಿನಿಂದ ತಯಾರಿಸಿದ್ದು. ಆದರೆ ಮಿಷನರಿಗಳಿಲ್ಲದಿದ್ದರೆ ವಿದ್ಯಾಭ್ಯಾಸ ಮುಂದುವರಿಯುತ್ತಲೇ ಇರಲಿಲ್ಲ ಎನ್ನುವುದು ನಿಜವಲ್ಲ. ಹಾಗೆ ಹೇಳಿಕೊಂಡರೆ ಅವರನ್ನು ಕ್ಷಮಿಸಬಹುದು, ಆದರೆ ನಂಬಬಾರದು.”

“ಸ್ತ್ರೀ ವಿದ್ಯಾಭ್ಯಾಸವನ್ನು ಆರಂಭಮಾಡಿದವರು ಅವರೆ?”

“ಇಂಡಿಯದಲ್ಲಿ ಮಹಿಳೆಯರಿಗಾಗಿ ಆಧುನಿಕ ರೀತಿಯ ಶಾಲೆಯನ್ನು ಮೊದಲು ಸ್ಥಾಪಿಸಿದವರು ಯಾರೋ ನನಗೆ ತಿಳಿಯದು. ಮೈಸೂರಿನಲ್ಲಿ ಮಹಾರಾಣಿಯವರ ಹೆಸರಿನಲ್ಲಿ ಹೈಸ್ಕೂಲು, ಕಾಲೇಜು ಎಲ್ಲ ಇವೆ; ಆ ಕಾಲೇಜಿನಲ್ಲಿ ನಾನು ಪಾಠ ಹೇಳಿದ್ದೇನೆ. ಅವು ಸ್ಥಾಪಿತವಾದದ್ದು ನನಗೆ ಬುದ್ಧಿ ತಿಳಿಯುವುದಕ್ಕಿಂತ ಮುಂಚೆ. ಮೈಸೂರು ಸರ್ಕಾರವೇ ಅವನ್ನು ಸ್ಥಾಪಿಸಿ ನಡೆಸುತ್ತಿದೆ. ಮಿಷನರಿಗಳು ನಡೆಸುತ್ತಿರುವ ಮಹಿಳಾ ಕಾಲೇಜುಗಳೂ ಇವೆ; ಆದರೆ ಅವು ಇತ್ತೀಚಿನವು. ಸರ್ಕಾರದವರು, ಅಥವಾ ಹಿಂದೂ ಸಂಸ್ಥೆಗಳು ನಡೆಸುತ್ತಿರುವ ಮಹಿಳಾ ಶಾಲೆಗಳೂ ಬೇಕಾದಷ್ಟಿವೆ.”

“ನೀವು ಓದಿದ್ದು ಮಿಷನ್ ಸ್ಕೂಲಿನಲ್ಲಿ ಎಂದಿರಿ, ಹಾಗಾದರೆ ನಿಮಗೆ ಬೈಬಲಿನ ಪರಿಚಯವಿರಬೇಕಲ್ಲವೆ?”

“ಹೌದು. ಅದು ಸ್ಕೂಲಿನಲ್ಲಿ ಪಠ್ಯವಿಷಯವಾಗಿತ್ತು. ಅಲ್ಲದೆ ಆಗ ವೆಸ್ಲಿಯನ್ ಮಿಷನ್‌ನವರು ‘ಪೀಟರ್ ಕೇಟರ್’ ಎಂಬ ಪರೀಕ್ಷೆಯನ್ನು—ಅದು ಬೈಬಲ್ ತಿಳಿವಳಿಕೆಯನ್ನು ಪರೀಕ್ಷಿಸುವುದಕ್ಕಾಗಿಯೇ ಮೀಸಲಾದದ್ದು—ನಡೆಸುತ್ತಿದ್ದರು. ಅದಕ್ಕಾಗಿ ನಾನು ಹಳೆ ಒಡಂಬಡಿಕೆಯ (Old Testament) ಭಾಗಗಳನ್ನು ಓದಿದೆ. ಆದರೆ ಪರೀಕ್ಷೆಗೆ ಕೂರಲಿಲ್ಲ....ನಿಮಗೆ ಒಂದು ಗುಟ್ಟು ಹೇಳಬಹುದಾದರೆ—15-16 ವರ್ಷವಾಗಿದ್ದಾಗ ನನಗೆ ಕ್ರೈಸ್ತನಾಗ

ಬಹುದಲ್ಲವೆ ಎಂಬ ಯೋಚನೆ ಬಂದಿತ್ತು."

"ಅದನ್ನೇಕೆ ಬಿಟ್ಟಿರಿ ?"

"ಅದಕ್ಕೆ ಕಾರಣರಾದವರು ಒಬ್ಬ ಮಿಷನರಿ! ಸಭೆಯೊಂದರಲ್ಲಿ ಅವರು ತಮ್ಮ ಮತವನ್ನು ಹೊಗಳಿದ್ದಲ್ಲದೆ ಹಿಂದೂಮತವನ್ನು ಬಹಳ ಹಳಿದರು. ನನಗೆ ಅದು ಸಣ್ಣತನ ಎನ್ನಿಸಿತು, ನಮ್ಮವರೇ ಒಬ್ಬರು ನಿಮಗೆ ಹಿಂದೂಮತ ಏನು ಗೊತ್ತಿದೆ? ಎಂದು ಕೇಳಿದಾಗ ಅವರ ಉತ್ತರ ಸಮರ್ಪಕವಾಗಿರಲಿಲ್ಲ. ನನ್ನ ಮತದ ವಿಷಯ ನನಗೂ ಏನೂ ಗೊತ್ತಿಲ್ಲ ಎಂಬುದು ನನ್ನ ಮನಸ್ಸಿಗೆ ತಟ್ಟಿತು. ಆಮೇಲೆ ಸ್ವಲ್ಪ ಓದಲಾರಂಭಿಸಿದೆ. ಮತದ ಬದಲಾವಣೆ ಅನವಶ್ಯಕ ಎನ್ನಿಸಿತು."

"ಆ ಮಿಷನರಿಗೆ ನಿಮ್ಮ ಮತದ ವಿಷಯ ಎಷ್ಟು ಗೊತ್ತಿತ್ತೋ ಕಾಣೆ. ಆದರೆ ಆತ ಮಾಡಿದ್ದು ತೀರ ತಪ್ಪು ಎನ್ನುತ್ತೀರಾ? ಇತರ ಮತಗಳಿಗಿಂತ ನಮ್ಮ ಮತ ಉತ್ತಮ ಎನ್ನುವುದು ಸ್ಪಷ್ಟವಾಗಿರುವಾಗ ಅದನ್ನು ಬೋಧಿಸುವುದೂ ಬೇರೆ ಮತಗಳ ದೋಷಗಳನ್ನು ತಿಳಿಸುವುದೂ ಸ್ವಾಭಾವಿಕ ಮಾತ್ರವಲ್ಲ, ಕರ್ತವ್ಯ ಎಂದು ಕೂಡ ಹೇಳಬಹುದಲ್ಲವೆ ?"

"ನಮ್ಮ ಚರ್ಚೆ ಬಹಳ ಗಂಭೀರವಾಯಿತು, ದೀರ್ಘವೂ ಆಯಿತು, ಅಲ್ಲವೆ? ನಮ್ಮ ಇತರ ಮಿತ್ರರಿಗೆ ಬೇಸರವಾದೀತು."

ಮೂರು ನಾಲ್ಕು ಜನ (ಗಂಡಸರು ಮತ್ತು ಹೆಂಗಸರು) "ಇಲ್ಲ ನಿಮ್ಮ ಅಭಿಪ್ರಾಯ ತಿಳಿಯಲು ನಮಗೆಲ್ಲ ಕುತೂಹಲ."

"ಮತದ ವಿಚಾರ ಮಾತಾಡುವುದು ಸ್ವಲ್ಪ ಕಷ್ಟ. ಶ್ರದ್ಧೆ ಹೆಚ್ಚಾದಷ್ಟೂ ಭಿನ್ನಾಭಿಪ್ರಾಯಗಳನ್ನು .."

"ನಮಗೆ ಭಿನ್ನಾಭಿಪ್ರಾಯ ಅಭ್ಯಾಸವಾಗಿದೆ, ಹೇಳಿ ?"

"ಹಾಗಾದರೆ ಹೇಳುತ್ತೇನೆ. ಅಸಮಾಧಾನವಾದರೆ ಕ್ಷಮಿಸಿಬಿಡಿ. ಮಾನವನಾದವನ ಬುದ್ಧಿಗೆ ಮಿತಿಯಿದೆ, ಪರವಸ್ತುವಿಗೆ ಮಿತಿಯಿಲ್ಲ. ಆದ್ದರಿಂದ ನಮ್ಮ ಮನಸ್ಸು ಅದಕ್ಕೆ ಒಲಿಯಬಹುದೇ ಹೊರತು ಅದನ್ನು ಪೂರ್ತಿ ಗ್ರಹಿಸಲಾರದು. ಆದ್ದರಿಂದಲೇ ನಾವು ಯಾರೂ 'ನನ್ನ ಮತವೇ ಸರಿ, ಇತರರದ್ದು ತಪ್ಪು' ಎಂದು ಹೇಳಬಾರದು ಎನ್ನಿಸುತ್ತದೆ. ನಾವು ನಂಬುವುದು ತಪ್ಪಲ್ಲ; ಆದರೆ ಇತರರೂ ನಾವು ನಂಬಿದ್ದನ್ನೇ ನಂಬಲಿ ಎನ್ನದಿದ್ದರೆ ಒಳ್ಳೆಯದು. ಅವರ ಮತದಲ್ಲೂ ಒಳ್ಳೆಯದೇನಾದರೂ ಇರಬಹುದಲ್ಲ."

"ಕ್ರೈಸ್ತಮತದಲ್ಲಿ ಒಳ್ಳೆಯದಿರಬಹುದೆಂದು ಹಿಂದುಗಳು ಒಪ್ಪುತ್ತಾರೆಯೆ ?"

“ಧಾರಾಳವಾಗಿ, ನಾನೇನೋ ಯೇಸುಕ್ರಿಸ್ತನನ್ನು ಒಪ್ಪಿಕೊಂಡಿದ್ದೇನೆ (I have accepted Christ).”

“ಹಾಗೇ ? ಹಾಗಾದರೆ ನೀವು ಕ್ರೈಸ್ತರು!”

“ಇಲ್ಲ. ಆದರೆ ನೀವು ನನ್ನನ್ನು ಕ್ರೈಸ್ತ ಎಂದು ಕರೆದರೆ ನಾನು ಅದನ್ನು ವಿರೋಧಿಸುವ ತೊಂದರೆ ತೆಗೆದುಕೊಳ್ಳುವುದಿಲ್ಲ. ಬೆಟ್ಟದ ಮೇಲೆ ನಿಂತು ಉಪದೇಶ ಮಾಡಿದ ಕ್ರಿಸ್ತ, ದುರ್ನಡತೆಯ ಮಗನ ಮತ್ತು ದಯಾಳುವಾದ ಸಮಾರಿಟನ್ನನ ಕಥೆಗಳನ್ನು ಹೇಳಿದ ಕ್ರಿಸ್ತ (the Christ of the Sermon on the Mount and the Christ of the Parables of the Prodigal Son and Good Samaritan) ಈ ಕ್ರಿಸ್ತನನ್ನು ನಾನು ಒಪ್ಪಿಕೊಂಡಿದ್ದೇನೆ. ಅವನನ್ನು ಒಪ್ಪುವುದು ಹಿಂದುವಾದವನಿಗೆ ಕಷ್ಟವಲ್ಲ.”

ಲಿಂಡ: “ಹಾಗಾದರೆ ನೀವು ಮತ್ತೇನೇ ಆಗಿರಿ, ಕ್ರೈಸ್ತರೂ ಆಗಿದ್ದೀರಿ.”

“ಭಾಗಶಃ.”

ಟ್ರೈನಿ: “ಆದರೆ ದೀಕ್ಷಾಸ್ನಾನ (baptism)....”

ಮಧ್ಯೆ ಇನ್ನೊಬ್ಬರು ಪ್ರಶ್ನೆ ಹಾಕಿದರು :

“ವಿಗ್ರಹಾರಾಧನೆಯ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು ? ನಿಮ್ಮಲ್ಲಿ ಅದು ಉಂಟಲ್ಲವೆ ?”

“ವೇದಗಳ ಕಾಲದಲ್ಲಿ ಇರಲಿಲ್ಲ ಎಂದು ತಿಳಿದವರು ಹೇಳುತ್ತಾರೆ. ಈಗೇನೋ ಅದು ಸರ್ವಸಾಮಾನ್ಯ. ನನಗೆ ಅದರಲ್ಲಿ ತಪ್ಪೇನೂ ಕಾಣುವುದಿಲ್ಲ. ಆಧ್ಯಾತ್ಮಿಕ ದಾರಿಯಲ್ಲಿ ಮುಂದುವರಿದಿರುವವರಿಗೆ ಮಾನಸಪೂಜೆಯೇ ಅತ್ಯುತ್ತಮ, ನಮ್ಮ ನಡೆನುಡಿಗಳಲ್ಲಿ ಪ್ರತಿಯೊಂದು ಭಗವಂತನ ಪೂಜೆಯಾಗಬೇಕು ಎಂಬ ಭಾವನೆಯನ್ನೂ ನಮ್ಮ ಮತ ಒಪ್ಪುತ್ತದೆ. ಆದರೆ ಎಲ್ಲೆಲ್ಲೂ ಇರುವ ದೇವರು ವಿಗ್ರಹದಲ್ಲೂ ಇದ್ದಾನೆ ಎಂದು ನಂಬಬಹುದಲ್ಲ? ಅಲ್ಲಿ ಮಾತ್ರವಲ್ಲದೆ ಎಲ್ಲೆಲ್ಲೂ ಇರುತ್ತಾನೆಂಬುದನ್ನು ಮರೆಯದಿದ್ದರೆ ಸರಿ. ಆದಿ ಮಧ್ಯ ಅಂತ್ಯ ಇವೊಂದೂ ಇಲ್ಲವೆ ಪರವಸ್ತುವನ್ನು ಗ್ರಹಿಸಲಾರದ ನಮ್ಮ ಬಡಮನಸ್ಸು ‘ನಾನು ಗ್ರಹಿಸಬಹುದಾದ ಈ ವಿಗ್ರಹದಲ್ಲಿ ತಾತ್ಕಾಲಿಕವಾಗಿ ಬಂದು ನೆಲಸು, ನನ್ನ ಪೂಜೆಗಾಗಿ’ ಎಂದು ಬೇಡಿಕೊಳ್ಳುತ್ತದೆ. ಇದು ‘ಆವಾಹನೆ’. ಆ ವಿಗ್ರಹ ದೇವರ ಸಂಕೇತ. ದೇವರು ಇತರ ಕಡೆಗಳಲ್ಲಿ ಇಲ್ಲವೆಂದಲ್ಲ. ಅವನು ಎಲ್ಲ ಕಡೆಯಲ್ಲೂ ಪೂರ್ಣನೇ. ಆ ವಿಗ್ರಹದ ವಿಷಯ ಹೇಳಬಹುದಾದ್ದನ್ನೆಲ್ಲ ಹೇಳಿದರೆ ದೇವರ ವಿಷಯವನ್ನೆಲ್ಲ ಹೇಳಿ ಮುಗಿಸಿದಂತಾಯಿತು ಎಂದೂ ಅಲ್ಲ.”

ಲಿಂಡ (?): “ಅವರು ಹೇಳುವುದು ನ್ಯಾಯವಾಗಿ ಕಾಣುತ್ತೆ.”

ಟ್ವೆನಿ (?): "ಆದರೆ ಬೈಬಲ್ ...."

ಲಿಂಡ: "ಬೈಬಲ್ ಹಾಗಿರಲಿ, ನಮ್ಮ ಬುದ್ಧಿಗೆ ಹೇಗೆ ತೋರುತ್ತೆ ಎಂಬುದನ್ನೂ ಯೋಚಿಸೋಣ."

ನನಗೆ ಈ ಮತವಿಷಯವಾದ ಚರ್ಚೆ ಬೇಕಿರಲಿಲ್ಲ. ನಾನು ವಿಪರೀತ ಮಾತಾಡುತ್ತಿದ್ದೇನೆ, ನಾಲಗೆಯನ್ನು ಬಿಗಿಹಿಡಿಯಬೇಕು, ಎಂದುಕೊಂಡೆ. ದೇವರ ದಯದಿಂದ ಲಿಂಡಳ ವಾಕ್ಯ ಮುಗಿಯುವ ಹೊತ್ತಿಗೆ ಸ್ಟ್ಯಾನ್ಲಿಯ ತಮ್ಮ ಆರ್ನಲ್ಡ್ ಬಂದು "ನನಗೆ ನೀವು ಸ್ಟ್ಯಾನ್ಲಿಯ ವಿಷಯ ಅವಳ ಫಾರಂ (ಹೊಲ, ಗದ್ದೆ ಇತ್ಯಾದಿ) ವಿಷಯ ಎಲ್ಲವನ್ನೂ ಹೇಳಬೇಕು" ಎಂದರು. ನಾನು ನಿರಾಳವಾಗಿ ಉಸಿರೆಳೆದೆ.

ಆರ್ನಲ್ಡ್ ನಮ್ಮನ್ನು ಸ್ಪ್ರಿಂಗ್‌ಫೀಲ್ಡ್‌ನಲ್ಲೆಲ್ಲ ಸುತ್ತಿಸಿದರು. ಲಿಂಕನ್‌ನ ಲಾಯರ್ ಕಚೇರಿ, ಅವನು ವಾಸಿಸುತ್ತಿದ್ದ ಮನೆ, ಅವನ ಸಮಾಧಿ ಎಲ್ಲವನ್ನೂ ನೋಡಿ ಬಂದೆವು. ಹೊರಡುವ ಮುನ್ನ ಲಿಂಡ ತನ್ನ ಗಂಡನ ಪರಿಚಯ ಮಾಡಿಕೊಟ್ಟು, ತಮ್ಮ ಊರಿಗೂ ಬರಬೇಕೆಂದು ಆಹ್ವಾನ ಕೊಟ್ಟಳು. ಮೆಕ್‌ಮಿಲನ್ ದಂಪತಿಗಳು ಲಿಂಕನ್ನಿನಿಂದಾಚೆ 20-30 ಮೈಲಿ ದೂರದವರೆಗೂ ನಮ್ಮ ಜೊತೆ ಬಂದು, ದಾರಿಯಲ್ಲಿ ಒಂದು ರೆಸ್ಟೋರಾಂಟಿನಲ್ಲಿ ಕಾಫಿ ಆತಿಥ್ಯ ನಡೆಸಿ ಹಿಂದಿರುಗಿದರು. ಮುಂದಿನ ಎರಡನೆಯ ಭಾನುವಾರ ಅವರನ್ನು ಲೇಕ್ ಜಿನೀವದಲ್ಲಿ ಭೇಟಿಯಾಗುವುದೆಂದೂ ನಿಶ್ಚಯವಾಯಿತು.

## ಗೇಲಾರ್ಡ್ಸ್, ಮಾರ್ಟನ್ ಆರ್ಬೊರೀಟಮ್, ಗ್ರೇಲೇಕ್

ಇವತ್ತು ದಯಾನ-ರಾಮು ಇವರು ಮದುವೆಯಾದ ದಿನ. ಹುಟ್ಟಿದ ದಿನಕ್ಕೆ ಇರುವಂತೆ ಮದುವೆಯ ದಿನಕ್ಕೆ ನಮ್ಮಲ್ಲಿ ಪ್ರಾಶಸ್ತ್ಯವಿಲ್ಲ—ನನಗೆ ತಿಳಿದ ಮಟ್ಟಿಗೆ. ಇದ್ದರೆ ಆ ದಿನ ಮನೆಯ ಯಜಮಾನಿತಿಗೆ ಕೆಲಸ ಹೆಚ್ಚುತ್ತದೆ; ಅಡಿಗೆಯ ಕೆಲಸ ಇಮ್ಮಡಿ ಮುಮ್ಮಡಿಯಾಗುತ್ತದೆ. ಅಮೆರಿಕದಲ್ಲಾದರೆ ಆಕೆಗೆ ಆ ದಿನ ವಿಶ್ರಾಂತಿ ಕೊಡುವುದು ಸಾಧ್ಯ. ಅಂಗಡಿಗಳಲ್ಲಿ frozen dinner ಅಂದರೆ ಅರ್ಧ ಮುಕ್ಕಾಲು ಅಥವಾ ಪೂರ್ತಿ (?) ಬೇಯಿಸಿದ ಆಹಾರವನ್ನು ಅತಿ ಶೈತ್ಯದಿಂದ ಕಲ್ಲಾಗಿ ಮಾಡಿ ಮಾರುತ್ತಾರೆ. ಅದನ್ನು ಮನೆಗೆ ತಂದು ನಾಲ್ಕೈದು ನಿಮಿಷ ಒಲೆಯ ಮೇಲಿಟ್ಟರೆ ಸಾಕು, ಊಟ ಸಿದ್ಧವಾಗುತ್ತದೆ. ರಾಮು 'ಅದೂ ಬೇಡ. ಸಂಜೆ ಊಟಕ್ಕೆ ಗೇಲಾರ್ಡ್ಸ್ (Gaylords)ಗೆ ಹೋಗೋಣ' ಎಂದು ನಿಶ್ಚಯಿಸಿದ. ಹಬ್ಬದ ಊಟವನ್ನೂ ಔತಣದ ಊಟ

ವನ್ನು ಹೋಟಲಿನಲ್ಲಿ ನಡಸುವುದು ನಿಧಾನವಾಗಿ ನಮ್ಮಲ್ಲೂ ಚಾಲತಿಗೆ ಬರುತ್ತಿದೆ. ನಿಧಾನವಾಗಿಯೇ ಬರಲಿ, ಆತುರ ಬೇಡ, ಎನ್ನುವುದವಲ್ಲಿದ್ದೆ; ಆದರೆ ಈ ಸಮಸ್ಯೆಯನ್ನು ಅಡಿಗೆ ಮಾಡುವ ಮಹಿಳೆಯರ ದೃಷ್ಟಿಯಿಂದಲೂ ನೋಡ ಬೇಕಲ್ಲ!

ಇಲ್ಲೇನೋ ನಾನು ರಾಮುವಿನ ಏರ್ಪಾಡನ್ನು ಮನಃಪೂರ್ವಕವಾಗಿ ಸ್ವಾಗತಿಸಿದೆ. ಇಲ್ಲಿಗೆ ಬಂದ ಮೇಲೆ ಹೊಸ ಅನುಭವಗಳನ್ನು ಸ್ವಾಗತಿಸ ಬೇಕಷ್ಟೆ. ಗೇಲಾರ್ಡ್ಸ್ ಇರುವುದು ಡೌನ್ ಟೌನ್ ಷಿಕಾಗೋ (down-town Chicago)ವಿನಲ್ಲಿ, ಅಂದರೆ ಷಿಕಾಗೋವಿನ ಮಧ್ಯಪ್ರದೇಶದಲ್ಲಿ. ಸುಮಾರು 1953-54ರಲ್ಲಿ ನಾನು ದೆಹಲಿಗೆ ಹೋಗಿದ್ದಾಗ ಮಿತ್ರರೊಬ್ಬರು ಅಲ್ಲಿಯ ಗೇಲಾರ್ಡ್ಸ್‌ಗೆ ಕರೆದುಕೊಂಡು ಹೋಗಿದ್ದರು, ಅದು ಬಹಳ 'ಪಾಷ್' (posh) ರೆಸ್ಟೋರಾಂಟು; ಅದರ ವಾತಾವರಣ ಪೌಡರ್, ತುಟಿ ಗೆಂಪು, ಕೆನ್ನೆಗೆಂಪು, ಸುಗಂಧ ದ್ರವ್ಯ, ಸಿಗರೆಟ್, ಮಾದಕ ಪಾನೀಯಗಳು— ಇವುಗಳಿಂದಲೇ ಸೃಷ್ಟಿಯಾದದ್ದು. ಇಷ್ಟು ಇದ್ದ ಮಾತ್ರಕ್ಕೆ ಅಮೆರಿಕದಲ್ಲಿ ಅದು ಪಾಷ್ ಆಗುವುದಿಲ್ಲ! ಷಿಕಾಗೋವಿನದು ದೆಹಲಿಯದರ ಶಾಖೆಯೋ ಅಥವಾ ತದ್ವಿರುದ್ಧವೋ ಕಾಣೆ, ಹಾಂಕಾಂಗ್‌ನಲ್ಲೂ ಒಂದು ಶಾಖೆಯಿದೆ ಯಂತೆ; ನ್ಯೂಯಾರ್ಕ್‌ನಲ್ಲೂ ಇರಬಹುದೇನೊ.

ಈಗ ಇಲ್ಲಿ ಸೂರ್ಯಾಸ್ತವಾಗುವುದು ಸುಮಾರು 8-30 ಘಂಟೆಗೆ; ಹತ್ತು ಘಂಟೆಯೊಳಗೆ ಮನೆಗೆ ಸೇರಿಕೊಳ್ಳಬೇಕು. 8-30ಕ್ಕೆ "ನಾಲ್ಕು ಜನ ಬರುತ್ತೇವೆ. ನಮಗಾಗಿ ಮೇಜೊಂದನ್ನು ಕಾದಿರಿಸಿ" ಎಂದು ಮೊದಲೇ ಫೋನ್ ಮಾಡಿದ್ದೆವು. ಅವತ್ತು ಸ್ವಲ್ಪ ಮೋಡ ಕವಿದುಕೊಂಡು ನಾವು ಅಲ್ಲಿಗೆ ಹೋಗುವ ಹೊತ್ತಿಗೆ ಕತ್ತಲು ಕತ್ತಲಾಗಿತ್ತು. ಹೋಟೆಲಿನ ಬಳಿಯಲ್ಲಿ ಕಾರ್ ನಿಲ್ಲಿಸುವಂತಿಲ್ಲ. 'ಪಾರ್ಕಿಂಗ್ ಲಾಟ್' ಇರುವುದು ಕಾಲು ಕಿಲೋ ಮೀಟರ್ ದೂರದಲ್ಲಿ. ರಾಮು ನಮ್ಮನ್ನು ಇಳಿಸಿ ಕಾರ್ ನಿಲ್ಲಿಸಲು ಹೋದ. ಅವನು ಬರುವವರೆಗೂ ನಮಗೆ ದಿಗಿಲು—ಷಿಕಾಗೋವಿನಲ್ಲಿ ಕತ್ತಲಾದ ಮೇಲೆ ಹೊರಗೆ ನಿಂತಿರುವುದು ಮೈಗೊಳ್ಳೆಯದಲ್ಲ!

ಬಾಗಿಲನ್ನು ತಳ್ಳಿ "ನಮಗಾಗಿ ಸೀಟುಗಳನ್ನು ಕಾದಿರಿಸಬೇಕೆಂದು ಕೇಳಿದ್ದೆವು" ಎನ್ನುವುದರೊಳಗೆ ಅಲ್ಲಿದ್ದ ಸ್ವಾಗತಕಾರ 'ಡಾಕ್ಟರ್ ರಾವ್'? ಎಂದು ಕೇಳಿ ನಮ್ಮನ್ನು ಮೇಜಿನ ಬಳಿಗೆ ಕರೆದೊಯ್ದ.

ನಾನು ಹಿಂದೆ ದೆಹಲಿಯಲ್ಲಿ ನೋಡಿದ್ದ ಗೇಲಾರ್ಡ್ಸ್‌ಗೂ ಇಲ್ಲಿಯ ದಕ್ಕೂ ಸಾದೃಶ್ಯವೇನೂ ಕಾಣಲಿಲ್ಲ. ದೆಹಲಿಯ ರೆಸ್ಟೋರಾಂಟಿಗೆ ಬಂದಿದ್ದ

ಜನರಲ್ಲಿ ನವಕುಬೇರರ ಅಲ್ಪತೆ ಕಾಣುತ್ತಿತ್ತು. ನನ್ನನ್ನು ಅಲ್ಲಿಗೆ ಕರೆದು ಕೊಂಡು ಹೋದ ಮಿತ್ರರನ್ನು ಕೇಳಿದೆ, "ಇಲ್ಲಿಗೇಕೆ ನನ್ನನ್ನು ಎಳೆದಿರಿ? ನಾನು ಮದ್ಯ ಕುಡಿಯುವವನಲ್ಲ!" ಎಂದು. ಅವರು "ನೀವು ಫಲಾಮೃತ ಕುಡಿಯಿರಿ, ನಾನೂ ಅದನ್ನೇ ಕುಡಿಯುವವನು. ನಿಮ್ಮನ್ನು ಕರೆತಂದದ್ದು ಇಲ್ಲಿಯ ವಾತಾವರಣವನ್ನು ನೋಡಲೆಂದು" ಎಂದು ಉತ್ತರಕೊಟ್ಟರು. ನಾನು ಅಲ್ಲಿ ಕಂಡದ್ದನ್ನು ಅವರೂ ಕಂಡಿದ್ದರು. ಅಲ್ಲಿದ್ದವರಲ್ಲಿ ನೂರಕ್ಕೆ ಎಂಬತ್ತು ತೊಂಬತ್ತು ಜನ ವೇಷಭೂಷಣಗಳಲ್ಲೂ ಇಂಗ್ಲಿಷ್ ಮಾತಾಡುವ ವೈಖರಿಯಲ್ಲೂ (ಭಾರತೀಯ ಭಾಷೆಗಳು ಕಿವಿಗೆ ಬಿದ್ದ ನೆನಪಿಲ್ಲ!) ಪಾಶ್ಚಾತ್ಯ ರನ್ನು, ಮುಖ್ಯವಾಗಿ ಅಮೆರಿಕನ್ನರನ್ನು, ಅನುಕರಿಸುವವರು. ಅವರು (ಇತರರ ಕಿವಿಗೆ ಬೀಳುವಂತೆ) ಮಾತಾಡುತ್ತಿದ್ದ ವಿಷಯ ತಮ್ಮ ಷೆವಿ (ಷೆವ್ರೊಲೆಟ್ ಕಾರು) ಗ್ಯಾಲನ್‌ಗೆ ಎಷ್ಟು ಮೈಲಿ ಕೊಡುತ್ತದೆ, 'ಮೊನ್ನೆ ನ್ಯೂಯಾರ್ಕ್‌ನಲ್ಲಿದ್ದಾಗ', ಪಾಶ್ಚಾತ್ಯ ಸಂಗೀತ, ಇತ್ಯಾದಿ. ನನ್ನ ಸಂಕಟ ಅವರು ಪಾಶ್ಚಾತ್ಯ ಸಂಗೀತವನ್ನು ಹೊಗಳಿದರೆಂದಲ್ಲ, ನಮ್ಮಲ್ಲೂ ಸಂಗೀತವಿದೆಯೆಂಬುದನ್ನು ಮರೆತರಲ್ಲ ಎಂದು. ಅಂತೂ ಆ ಜನದಿಂದಾಗಿ ಅಲ್ಲಿಯ ವಾತಾವರಣದಲ್ಲಿ ಕೃತಕತೆ, ಅಮೆರಿಕದ ಅಂಧಾನುಕರಣ, ಪ್ರತಿಷ್ಠಾ ಪೂಜೆ (ಎರಡನೆಯ ಮಹಾ ಯುದ್ಧವಾದ ಮೇಲೆ ಬ್ರಹ್ಮಪಟ್ಟ ಬಂದದ್ದು ಅಮೆರಿಕಕ್ಕೆ ತಾನೆ! ಆದ್ದರಿಂದ ಅಮೆರಿಕಕ್ಕೆ ಹೋಗಿದ್ದ ಎಂದರೆ ಪ್ರತಿಷ್ಠೆ) ಇವೆಲ್ಲ ತುಂಬಿದ್ದವು.

ದೆಹಲಿಯ ಗೇಲಾರ್ಡ್ಸ್‌ಗೂ ಇಲ್ಲಿಯದಕ್ಕೂ ಸಾದೃಶ್ಯವಿಲ್ಲ ಎಂದು ಮೇಲೆ ಹೇಳಿದ ಮಾತು ಉತ್ಪ್ರೇಕ್ಷೆ—ಮೇಲು ನೋಟಕ್ಕೆ ಸ್ವಲ್ಪ ಸಾದೃಶ್ಯ ಕಾಣಬಹುದು. ಎರಡು ಕಡೆಗಳಲ್ಲೂ ಸ್ವಾಗತಕಾರರೂ ವೆಯ್ಟರುಗಳೂ ಭಾರತೀಯರು. ಇಲ್ಲಿಯ ದರ ಅಮೆರಿಕನ್ನರು ನಡಸುವ ರೆಸ್ಟೊರಾಂಟುಗಳದ್ದಕ್ಕಿಂತಲೂ ಸ್ವಲ್ಪ ಕಡಮೆಯಂತೆ. ಆದ್ದರಿಂದ ಬಹಳ ಜನ ಅಮೆರಿಕನ್ನರು ಅಲ್ಲಿಗೆ ಬರುತ್ತಾರೆ. ಅಂದ ಮೇಲೆ ಅಲಂಕಾರಚೂರ್ಣ, ತುಟಿಗೆಂಪು, ಕೆನ್ನೆಗೆಂಪು, ಸಿಗರೇಟ್, ವೈನ್‌ಗ್ಲಾಸ್ ಇತ್ಯಾದಿಗಳಿಗೆ ಅಭಾವವೇನೂ ಇಲ್ಲ. ಆದರೆ ಭಾರತದಲ್ಲಿ ಇದೆಲ್ಲ ಅನುಕರಣ, ಇಲ್ಲಿ ಸ್ವಾಭಾವಿಕ. ಇಲ್ಲಿಯ ಜನ ತಾವು ಹುಟ್ಟಿ ಬೆಳೆದ ವಾತಾವರಣಕ್ಕೆ ಹೊಂದಿಕೊಂಡವರು, ವ್ಯಕ್ತಿತ್ವವನ್ನು ಉಳಿಸಿಕೊಂಡವರು. ಅವರು ಆಡುತ್ತಿದ್ದ ಮಾತು ಇತರರಿಗೆ ಕೇಳಿಸುವಂತಿರಲಿಲ್ಲ. ಅಮೆರಿಕದಲ್ಲಿ ಕಾರು ಸ್ಥಾನಮಾನಗಳ ಸಂಕೇತವಲ್ಲವಾದ್ದರಿಂದ ಯಾರೂ ಮಾತಿನಲ್ಲಿ ಅದನ್ನು ಮೆರಸುವುದಿಲ್ಲ. (ಆದರೆ ಅಲ್ಲಿ 'ಅವನು ಕ್ಯಾಡಿಲಾಕ್ ಕಾರನ್ನು ಇಟ್ಟಿದ್ದಾನೆ' ಎಂಬ ಮಾತನ್ನು ಕೇಳಿದ್ದೇನೆ!)

ಅಲ್ಲಿದ್ದ ಭಾರತೀಯರು ತಮ್ಮ ಭಾರತೀಯತೆಯನ್ನು ಉಳಿಸಿಕೊಂಡಿದ್ದರು. ಅವರು ತಗ್ಗಿದ ದನಿಯಲ್ಲಿ ಮಾತಾಡುವುದನ್ನು ಅಭ್ಯಾಸ ಮಾಡಿಕೊಂಡಿದ್ದರು. ಅದು ಮೆಚ್ಚಬಹುದಾದ ಅನುಕರಣೆ. ಮಧ್ಯೆ ಮಧ್ಯೆ ಇಂಗ್ಲಿಷ್ ಪದಗಳನ್ನು ಬೆರೆಸಿದರೂ ತಮ್ಮ ತಮ್ಮ ಭಾಷೆಯಲ್ಲೇ ಮಾತಾಡುತ್ತಿದ್ದರು. ಒಬ್ಬರು ಬಂಗಾಳಿಯೆಂದೂ ಇನ್ನೊಬ್ಬರು ಹಿಂದಿ ಮಾತಾಡುವವರೆಂದೂ ಗುರುತಿಸಿದೆ. ಗೋಡೆಯ ಮೇಲಿರುವ ಚಿತ್ರಗಳೂ ಒಂದೆರಡು ಕಡೆ ನಿಲ್ಲಿಸಿರುವ ಪ್ರತಿಮೆಗಳೂ ಭಾರತೀಯ. ಅಲ್ಲಲ್ಲೇ ದೀಪಗಳನ್ನಿರಿಸುವ ನಿಲುಗಂಬಗಳಲ್ಲೂ ಕೂಡ ಭಾರತೀಯತೆ ಎದ್ದು ಕಾಣುತ್ತಿತ್ತು. ಅಲ್ಲಿದ್ದ ಒಂದು ಬಗೆಯ ಕಂಬವನ್ನು 1910–12ರ ಕಾಲದಲ್ಲಿ ಕರ್ಣಾಟಕದ ನಾಗಮಂಗಲದಲ್ಲಿ ತಯಾರಿಸುತ್ತಿದ್ದರೆಂದು ಬಲ್ಲೆ.

ದೀಪಗಳ ಪ್ರಕಾಶ ಕಣ್ಣಿಗೆ ಹಿತವೆನ್ನಿಸುವಷ್ಟು ಮಂದ. ಹಿಂದೀ ಚಿತ್ರಗೀತೆಗಳು ಸ್ಪಷ್ಟವಾಗಿ, ಆದರೆ ಕನಸಿನಲ್ಲಿ ಎಲ್ಲೋ ದೂರದಿಂದ ಬಂದಂತೆ, ಕೇಳಿಬರುತ್ತಿದ್ದವು. ವಾತಾವರಣಕ್ಕೆ ಪರಿಮಳ ಸೇರಿಕೊಳ್ಳುವಂತೆ ಅವೂ ಸೇರಿಕೊಂಡಿದ್ದವು. ಬೆಳಕಿನ ಮತ್ತು ಸದ್ದಿನ ವಿಷಯದಲ್ಲಿ ಈ ಕಲಾತ್ಮಕವಾದ ಪರಿಮಿತಿ ಭಾರತದ ಇಂದಿನ ಜೀವನದ ವೈಶಿಷ್ಟ್ಯವೆಂದು ಹೇಳಲಾಗುವುದಿಲ್ಲ—ಈಗೀಗ ಕೆಲವು ರೆಸ್ಟೋರಾಂಟುಗಳಲ್ಲಿ ಕಂಡುಬರುತ್ತಿದೆಯಾದರೂ ಸಾಮಾನ್ಯವಾಗಿ ನಮ್ಮ ರೆಸ್ಟೋರಾಂಟುಗಳಲ್ಲಿ ರೇಡಿಯೊ ಅರಚುತ್ತಿರುತ್ತದೆ. ಇಲ್ಲಿ ಸಿನಿಮಾಗಳಲ್ಲಿ ಕೂಡ ಶಬ್ದದ ಮಟ್ಟ ಹದದಲ್ಲಿರುತ್ತದೆ. ಅಮೆರಿಕನ್ನರು ಹಬ್ಬ ಹರಿದಿನಗಳಲ್ಲಾಗಲಿ (ಹರೇ ಕೃಷ್ಣ ಪಂಥ ಆರಂಭವಾದಮೇಲೆ ಅಮೆರಿಕದಲ್ಲೂ 'ಹರಿದಿನ' ಎಂಬ ಮಾತು ಸಲ್ಲಬಹುದಷ್ಟೆ!) ಮದುವೆ ಮುಂತಾದ ಸಮಾರಂಭಗಳಲ್ಲಾಗಲಿ ಧ್ವನಿವರ್ಧಕಗಳನ್ನಿಟ್ಟು ಊರಿಗೆಲ್ಲ ತ್ರಾಸ ಕೊಡುವುದಿಲ್ಲ, ಮೋಟಾರ್ ಕಾರುಗಳ ಕೊಂಬಿನ ಕೂಗು ಸಹ ಅಪರೂಪ, (ಜೆಟ್‌ಪ್ಲೇನುಗಳೂ ಹೆಲಿಕಾಪ್ಟರ್ ಮೊದಲಾದುವೂ ಬಂದಮೇಲೆ ಸದ್ದಿನ ಬೇಡಿಕೆಯನ್ನು ಪೂರೈಸಲು ಬೇರೆ ಏರ್ಪಾಡಾಗಿದೆ!) ಒಟ್ಟಿನಲ್ಲಿ ಷಿಕಾಗೋವಿನ 'ಗೇಲಾರ್ಡ್ಸ್' ಅಮೆರಿಕದಲ್ಲಿದ್ದೂ ಭಾರತೀಯತೆಯನ್ನು ಉಳಿಸಿಕೊಂಡು ಅಮೆರಿಕನ್ನರಿಗೆ ಪ್ರಿಯವಾಗಿದೆ; ನಾನು ಹಿಂದೆ ಕಂಡ ದೆಹಲಿಯ 'ಗೇಲಾರ್ಡ್ಸ್' ಭಾರತದಲ್ಲಿದ್ದೂ ಅಮೇರಿಕನ್ ಆಗಬಯಸಿ—'ಅಮೆರಿಕನ್ ಆಗಿ' ಎನ್ನಲಾರೆ—ನವಕುಬೇರರಿಗೆ ಮಾತ್ರ ಪ್ರಿಯವಾಗಿದ್ದಂತೆ ತೋರಿತು!

ನಾವು ಕುಳಿತೊಡನೆಯೇ ವೆಯ್ಟರ್ ಸುಸೀಲಸಿದ್ದನ್ನು ನೋಡಿ ಮಕ್ಕಳಿಗಾಗಿಯೇ ಮಾಡಿದ ಎತ್ತರದ ಕುರ್ಚಿಯನ್ನು ತಂದಿಟ್ಟು 'ಕೂತುಕೊ,

ಮಗು' ಎಂದು ಅವನನ್ನು ಕೂರಿಸಿ, 'ನಿಮ್ಮ ಅಪ್ಪಣೆಯೇನು, ತಿಳಿಸುತ್ತೀರ, ಸಾರ್ ?' ಎಂದು ಕೇಳಿ ನಾವು ಹೇಳಿದ್ದನ್ನು ಬರೆದುಕೊಂಡು ಹೋದ. ಅಲ್ಲಿಯ ಮಾಂಸಾಹಾರದ ವಿಷಯ ನನಗೆ ತಿಳಿಯದು. ಅಲ್ಲಿದ್ದವರಲ್ಲಿ ಮುಕ್ಕಾಲು ಪಾಲು ಜನ ಅಮೆರಿಕನ್‌ರಾದ್ದರಿಂದ ಅವರಿಗೆ ಪ್ರಿಯವಾದ ವಸ್ತುಗಳಿದ್ದಿರಬೇಕು. ಶಾಕಾಹಾರಿಗಳಿಗೆ ಅಲ್ಲಿ ದೊರೆಯುವುದು ಉತ್ತರ ಇಂಡಿಯಾದಲ್ಲಿ ಬಳಕೆಯಾಗಿರುವ ಆಹಾರ ಪದಾರ್ಥಗಳು.

ಭಾರತೀಯರು ಇಲ್ಲಿಗೆ ಬಂದು ಅಮೆರಿಕನ್ನರೊಡನೆ ಸ್ಪರ್ಧೆ ಹೂಡಿ ಬದುಕುತ್ತಿದ್ದಾರೆನ್ನುವುದು ಸಂತೋಷದ ವಿಷಯ....ಅಥವಾ ಇದರ ಬಾಡವಾಳ ಅಮೆರಿಕನ್ನರದ್ದೊ !

## ಮಾರ್ಟನ್ ಆರ್ಬೊರೇರಿಟಂ

ಮಾರ್ಟನ್ ಆರ್ಬೊರೇರಿಟಂ ಎನ್ನುವುದು ಒಂದು ಬಗೆಯ 'ವೃಕ್ಷ ವಿಜ್ಞಾನ ಪ್ರಯೋಗ ಕ್ಷೇತ್ರ.' ಷಿಕಾಗೋವಿಗೆ 30–40 ಮೈಲಿ ದೂರದಲ್ಲಿದೆ. 1922ರಲ್ಲಿ ಜಾಯ್ ಮಾರ್ಟನ್ ಎಂಬಾತ ತನ್ನ ಸ್ವಂತ ಹಣ ವೆಚ್ಚಮಾಡಿ 1500 ಎಕರೆ ಜಮೀನನ್ನು ಕೊಂಡು ಅದನ್ನು ಮರ ಬೆಳೆಸುವ ಮತ್ತು ತೋಟಗಾರಿಕೆಯ ಪ್ರಯೋಗಕ್ಷೇತ್ರವನ್ನಾಗಿ ಮಾರ್ಪಡಿಸಿದ. ಅಲ್ಲಿ ಡ್ಯೂಪೇಜ್ ಎಂಬ ನದಿ ಹರಿಯುತ್ತದೆ. ಮೂರು ಸಣ್ಣ ಸರೋವರಗಳಿವೆ. ಪ್ರಪಂಚದಲ್ಲಿರುವ ಎಲ್ಲ ಬಗೆಯ ಮರಗಳನ್ನೂ ಅಲ್ಲಿ ಬೆಳೆಸುವ ಪ್ರಯತ್ನ ಮಾಡುತ್ತಾರೆ. ಆ ಮಣ್ಣಿನಲ್ಲಿ ಬೆಳಸುವುದು ಸಾಧ್ಯವಾದರೆ ಒಂದೊಂದು ಜಾತಿಯಲ್ಲೂ 30–40 ಮರಗಳನ್ನು ಬೆಳಸುತ್ತಾರೆ. ಅವುಗಳ ವಿಷಯ ಜನರಿಗೆ ತಿಳಿವಳಿಕೆ ಕೊಡುತ್ತಾರೆ. ಈಗ ಅಲ್ಲಿ 4800 ಬೇರೆ ಬೇರೆ ಜಾತಿಯ ಮರಗಳ ವಿಷಯದಲ್ಲಿ ಪ್ರಯೋಗ ನಡಸಿ ಅವನ್ನು ಬೆಳಸಿದ್ದಾರೆ.

ಈ ವನದಲ್ಲಿ ಕುದುರೆ ಸವಾರಿ, ಈಜುವುದು, ಮೀನು ಹಿಡಿಯುವುದು, ದೋಣಿಯ ವಿಹಾರ ಮುಂತಾದ್ದೊಂದಕ್ಕೂ ಅವಕಾಶವಿಲ್ಲ. ಅದನ್ನು ಸ್ಥಾಪಿಸಿರುವುದರ ಉದ್ದೇಶ ಸಂಪೂರ್ಣವಾಗಿ ವೈಜ್ಞಾನಿಕ. ಇಲ್ಲಿರುವ ತಜ್ಞರ ಸಲಹೆ ಪಡೆದು ಈ ವರ್ಷ ಇಲ್ಲಿನಾಯ್ ರಾಜ್ಯದಲ್ಲಿ ಒಂದು ಮಿಲಿಯನ್ ಮರಗಳನ್ನು ನೆಡುತ್ತಾರಂತೆ. ಈಗ 51 ವರ್ಷಗಳಿಂದ ಇದು ಅಮೆರಿಕದಲ್ಲಿ ವೃಕ್ಷಗಳನ್ನು ಬೆಳಸುವುದಲ್ಲದೆ ವೃಕ್ಷಪ್ರೇಮವನ್ನೂ ಬೆಳೆಸುತ್ತ ಬಂದಿದೆ.

ಇದನ್ನು ನೋಡಿದಾಗ, ಇದೇ ಅರ್ಧಶತಮಾನದಲ್ಲಿ ನಮ್ಮ ದೇಶದ ಮರಗಳ ಪಾಡೇನಾಗಿದೆ ಎಂಬುದು ನೆನಪಿಗೆ ಬಂತು. ನಾನು ಶಿವಮೊಗ್ಗಕ್ಕೆ

ಮೊದಲ ಸಾರಿ ಹೋದದ್ದು 1925ರಲ್ಲಿ. ಆಗ ತರೀಕೆರೆಯಿಂದ ಶಿವಮೊಗ್ಗಕ್ಕೆ ಹೋಗುವ ರೈಲುದಾರಿಯ ಎರಡು ಕಡೆಗಳಲ್ಲೂ ದಟ್ಟವಾದ ಕಾಡಿತ್ತು; ತರೀಕೆರೆ–ನರಸಿಂಹರಾಜಪುರ ಟ್ರಾಮ್‌ವೇ ಇನ್ನೂ ಚಾಲತಿಯಲ್ಲಿದ್ದ ಕಾಲ. ಒಂದು ದಿನ ರಂಗೇನಹಳ್ಳಿ ಸ್ಟೇಷನ್ ಮಾಸ್ಟರು ಬೆಳಗ್ಗೆ ಎದ್ದು ಬಾಗಿಲು ತೆಗೆದಾಗ ದ್ವಾರಪಾಲಕರಂತೆ ಎರಡು ಹುಲಿಗಳು ಕುಳಿತಿದ್ದವು! ಈಗ ಆ ಅರಣ್ಯವೆಲ್ಲ ಅದೃಶ್ಯವಾಗಿದೆ, ಅಥವಾ ತೀರ ತೆಳ್ಳಗಾಗಿದೆ. ಇದಕ್ಕೆ ಸರ್ಕಾರದವರನ್ನು ದೂರುವುದು ಸುಲಭ. ಆ ದೂರು ಅನ್ಯಾಯವೆಂದು ಹೇಳುವುದೂ ಕಷ್ಟ—ನಮ್ಮ 'ವನಮಹೋತ್ಸವ'ಗಳಿಂದ ಆಗಿರುವ ಪ್ರಯೋಜನ ಎಷ್ಟೆಂದು ಎಲ್ಲರಿಗೂ ಗೊತ್ತು. ಆದರೆ ಸರ್ಕಾರ ಆಸಕ್ತಿ ವಹಿಸಿದರೂ ಈ ಸಮಸ್ಯೆ ಬಗೆಹರಿಯುವುದು ಕಷ್ಟ. ಜನಸಂಖ್ಯೆ ಹೆಚ್ಚಿದಂತೆ ಊರು ಕಟ್ಟುವುದಕ್ಕೆ, ರಸ್ತೆ ಮಾಡುವುದಕ್ಕೆ, ಮನೆಕಟ್ಟುವುದಕ್ಕೆ, ಸೌದೆಗೆ—ಎಲ್ಲಕ್ಕೂ ಕಾಡನ್ನು ಕಡಿಯಬೇಕು ತಾನೆ! ವಾಸ್ತವವಾಗಿ ಚಿಂತೆಗೆ ಕಾರಣ: ಈ ಸಮಸ್ಯೆಯ ಬಿಸಿ ಯಾರ ಮನಸ್ಸಿಗೂ ತಟ್ಟಿಲ್ಲವಲ್ಲ ಎಂಬುದು.

## ಗ್ರೇಲೇಕ್ ವಿಮಾನ ಪ್ರದರ್ಶನ

ಗ್ರೇಲೇಕ್ ಮೈಲ್ಸ್‌ಗೆ ನಲವತ್ತು ಮೈಲಿ ದೂರದಲ್ಲಿರುವ ಸಣ್ಣ ಹಳ್ಳಿ. ಅದರ ಹತ್ತಿರ ಇರುವ ಕ್ಯಾಂಬೆಲ್ ವಿಮಾನ ನಿಲ್ದಾಣದಲ್ಲಿ ಲಯನ್ಸ್ ಕ್ಲಬ್‌ನವರು ಅಂಗವಿಕಲರ ಆಸ್ಪತ್ರೆಗೆ ಸಹಾಯಮಾಡಲೆಂದು ವಿಮಾನ ಪ್ರದರ್ಶನವನ್ನು ಏರ್ಪಡಿಸಿದ್ದರು. ಆ ನಿಲ್ದಾಣದಲ್ಲಿ ಕ್ಯಾರವೆಲ್ ಬೋಯಿಂಗ್‌ಗಳಂಥ ದೊಡ್ಡ ಪ್ಲೇನುಗಳು ಇಳಿಯಲಾರವು. ಇದನ್ನು ಉಪಯೋಗಿಸುವವರು ಖಾಸಗಿ ವಿಮಾನಗಳನ್ನಿಟ್ಟುಕೊಂಡಿರುವವರಂತೆ. ಅಲ್ಲೊಂದು 'ಫ್ಲೈಯಿಂಗ್ ಕ್ಲಬ್' ಇವೆಯೆಂದು ಯಾರೋ ಹೇಳಿದರು. ಇಲ್ಲಿ ಸ್ವಂತ ವಿಮಾನಗಳನ್ನು ಇಟ್ಟಿರುವವರ ಸಂಖ್ಯೆ ಗಣನೀಯವಾದದ್ದೇ. ನನಗೆ ಗುರುತಾದವರೊಬ್ಬರು 'ಅದೇನು ಅಂಥ ದೊಡ್ಡ ವಿಷಯವಲ್ಲ, 1200 ಡಾಲರಿಗೆ ಒಂದು ಸಣ್ಣ ವಿಮಾನ ಕೊಳ್ಳಬಹುದು' ಎಂದಿದ್ದರು.

ಎಂದಿನಂತೆ ರಸ್ತೆಯ ಇಕ್ಕೆಲದಲ್ಲೂ ರಕ್ಷಿತವನ ವಿಶಾಲವಾದ ಹುಲ್ಲುಗಾವಲು. ಹಸುರು ಹಾಸಿನ ಮತ್ತು ಮರಗಳ ನಡುವೆ ಅಲ್ಲಲ್ಲಿ ಆಡಂಬರವಿಲ್ಲದ ಇಪ್ಪತ್ತಾರು ಮನೆಗಳು. ಇಲ್ಲಿಯ ಜನರ ಮನಸ್ಸಿನಲ್ಲಿ ಶಾಂತಿ ಇರುವಂತಿಲ್ಲ ಆದರೆ ಈ ಹುಲ್ಲುಗಾವಲುಗಳನ್ನೂ ವನವನ್ನೂ ಸಣ್ಣ ಮನೆಗಳನ್ನೂ ನೋಡಿದರೆ ಇದೊಂದು ಕೊನೆಮೊದಲಿಲ್ಲದ ಋಷ್ಯಾಶ್ರಮ ಎನ್ನಿಸುತ್ತದೆ. ಇಲ್ಲಿಯ ಋಷಿ

ಗಳಿಗೆ ಗಡ್ಡ ಮೀಸೆಗಳೇನೋ ಬೇಕಾದ ಹಾಗಿವೆ—ಅನೇಕ ವೇಳೆ ಅವರ ಕಣ್ಣು ಮೂಗು ಎಲ್ಲಿವೆ ಎಂದು ಹುಡುಕಬೇಕಾಗಬಹುದು. ಆದರೆ ಈ ಋಷಿಗಳು ಪದ್ಮಾಸನಹಾಕಿ ಧ್ಯಾನಮಗ್ನರಾಗಿರುವುದಿಲ್ಲ. ಗಾಲ್ಫ್ ಆಡುತ್ತಿರುತ್ತಾರೆ.

ಗ್ರೇಲೇಕನ್ನು ತಲಪುವ ವೇಳೆಗೆ 11 ಘಂಟೆಯಾಗಿತ್ತು. ಬೆಳಗಿನ ಉಪಾಹಾರ ತೆಗೆದುಕೊಂಡೆವೊ ಅಥವಾ ಮರೆತೇಬಿಟ್ಟೆವೊ ಎನ್ನುವಂತಾಗಿತ್ತು. ಆ ಊರಿನಲ್ಲಿದ್ದ ಹೋಟೆಲಿನಲ್ಲಿ ಸಿದ್ಧಪಡಿಸಿದ ಮಾಂಸಾಹಾರ ಹೊರತು ಮತ್ತೆ ಏನೂ ಸಿಕ್ಕುವಂತಿರಲಿಲ್ಲ. ಸಿಕ್ಕಿದರೂ ಪುರಿ (Rice crispies) ಅಥವಾ ಪಾಪ್ ಕಾರ್ನ್. ಆದರಿಂದ ಹೊಟ್ಟೆ ತುಂಬಲಿಲ್ಲ. ಅವತ್ತೇನಾದರೂ ಏಕಾದಶಿಯಾಗಿದ್ದರೆ ನನ್ನ ಲೆಕ್ಕಕ್ಕೆ ಸ್ವಲ್ಪ ಪುಣ್ಯ ಸೇರಿರಬೇಕು.

ವಿಮಾನ ಪ್ರದರ್ಶನ ಬಹಳ ಚೆನ್ನಾಗಿತ್ತು. ಇಲ್ಲಿ ಕಂಡಷ್ಟು ಸಣ್ಣ ವಿಮಾನಗಳನ್ನು ನಾನು ನೋಡಿಯೇ ಇರಲಿಲ್ಲ. ಸಾಲಾಗಿಯೂ ಮುಂದೊಂದು ಸಾಲು ಹಿಂದೊಂದು ಸಾಲಾಗಿಯೂ ಹಾರುವುದು, ಎದುರುಬದರಾಗಿ ಬಂದು ಅಪಾಯವಿಲ್ಲದಂತೆ ಹಾದು ಹೋಗುವುದು, ಆಕಾಶಬಾಣದಂತೆ ನೇರವಾಗಿ ಮೇಲಕ್ಕೇರುವುದು, ಅಲ್ಲಿಂದ ತಲೆಕೆಳಗಾಗಿ ಸರ್ರನೆ ಇಳಿದು ಮತ್ತೆ ಮಟ್ಟಸವಾಗಿ ಹಾರುವುದು, ಲಾಗ ಹಾಕುವುದು, ನಾಯಿ ತನ್ನ ಬಾಲವನ್ನೇ ಹರಿಸಿಕೊಂಡು ಸುತ್ತುವಂತೆ ಗಿರ್ರನೆ ಸುತ್ತುವುದು—ಇತ್ಯಾದಿ ಸ್ಟಂಟುಗಳ ಪ್ರದರ್ಶನ ನಡೆಯಿತು. ಇದಕ್ಕಿಂತ ಹೆಚ್ಚಾಗಿ ನನ್ನ ಮನಸ್ಸಿನಲ್ಲಿ ನಿಂತಿರುವುದು ಎರಡು ವಿಷಯ :

ಅಲ್ಲಿ ಎಲ್ಲಿಗೆಂದರೆ ಅಲ್ಲಿಗೆ ಸಾಗಿಸಬಹುದಾದಂಥ ಏಳೆಂಟು ಶೌಚಾಗಾರಗಳನ್ನು ತಂದು ನಿಲ್ಲಿಸಿದ್ದರು—ಅಂಥವನ್ನು ತಯಾರು ಮಾಡುವುದೇ ಕಸಬಾಗಿ ಉಳ್ಳ ಕಂಪನಿಗಳಿವೆಯಂತೆ. ಅವುಗಳನ್ನು ತರಿಸುವುದು ಅವಶ್ಯವೆಂದು ಪ್ರದರ್ಶನದ ವ್ಯವಸ್ಥಾಪಕರು ಮನಗಂಡದ್ದು ಗಮನಾರ್ಹವಾದ ವಿಷಯ. ಅದಕ್ಕಿಂತ ಹೆಚ್ಚು ಗಮನಾರ್ಹವಾದದ್ದು—ಜನರು ಅವನ್ನು ಉಪಯೋಗಿಸಿದರೆಂಬುದು! ಅಮೆರಿಕನ್ನರಿಗೆ ಇದರಲ್ಲಿ ವಿಶೇಷವೇನೂ ಕಂಡಿರಲಾರದು. ಸಾವಿರಾರು ಜನ ಸೇರಿ ನಾಲ್ಕು ಘಂಟೆಯ ಕಾಲ ಒಂದೇಕಡೆ ಕುಳಿತಿದ್ದರು ; ಆದರೆ ಯಾರೂ ಸುತ್ತಮುತ್ತಿನ ಪ್ರದೇಶವನ್ನು ಹೊಲಸು ಮಾಡಲಿಲ್ಲ. ಶೌಚಾಗಾರದ ಬಳಿ 20–30 ಜನ ಕ್ಯೂ ನಿಂತಿದ್ದರೂ ತಾಳ್ಮೆಗೆಡದೆ ತಮ್ಮ ಸರದಿಗಾಗಿ ಕಾದು ನಿಂತಿದ್ದರು.

ನಾನು ಮೆಚ್ಚಿದ ಇನ್ನೊಂದು ವಿಷಯ—ಕಾಗದದ ಚೂರುಗಳು, ಸಿಗರೇಟ್ ಪ್ಯಾಕು, ಫಲಾಮೃತ ಕುಡಿದ ಕಾಗದದ ಗ್ಲಾಸುಗಳು, ಇತ್ಯಾದಿ

ಹರದವನ್ನು ಹಾಕುವುದಕ್ಕಾಗಿಯೇ ಒಂದು ದೊಡ್ಡ ಟ್ರಕ್ಕನ್ನು ತಂದು ನಿಲ್ಲಿಸಿದ್ದರು; ಅದರ ಮೇಲೆ 'Disposal Company' (ಕಸ ಸಾಗಿಸುವ ಕಂಪೆನಿ) ಎಂದು ಬರೆದಿತ್ತು. ಯಾರು ಏನು ಎಸೆಯಬೇಕಾದರೂ ಆ ಟ್ರಕ್ಕಿನ ಬಳಿಗೆ ಹೋಗಿ ಅದರೊಳಕ್ಕೆ ಎಸೆದು ಬರುತ್ತಿದ್ದರು. 'ಹರದ ಹರಡಬೇಡಿ' ಎಂದು ಎಚ್ಚರಿಕೆ ಕೊಡುವ ಬೋರ್ಡೇನೂ ಇರಲಿಲ್ಲ. ಈ ಬಗೆಯ ಶಿಸ್ತು ಇಲ್ಲಿಯವರಿಗೆ ಅಭ್ಯಾಸವಾಗಿಹೋಗಿದೆ.

ನಮಗೆಲ್ಲ ಹೊಟ್ಟೆ ಕಾದಿತ್ತಾದ್ದರಿಂದ ಪ್ರದರ್ಶನ ಮುಗಿಯುವುದಕ್ಕಿಂತ ಮುಂಚೆಯೇ ಹೊರಟು ದಾರಿಯಲ್ಲೊಂದು 'ಓಯಸಿಸ್'ನಲ್ಲಿ ನಿಂತೆವು. ಅದರ ವಿಷಯ ಒಂದೆರಡು ಮಾತು ಹೇಳುವುದು ಉಚಿತ. ಹಿಂದಿನ ಕಾಲದ ರಾಜರು ರಸ್ತೆಯ ಮಗ್ಗುಲಲ್ಲಿ ಅಲ್ಲಲ್ಲೇ ಮಂಟಪ, ಕೊಳ, ಛತ್ರ ಮುಂತಾದುವನ್ನು ಕಟ್ಟಿಸುತ್ತಿದ್ದರಷ್ಟೆ. ಪ್ರಯಾಣಿಕರಿಗೆ ಸೌಲಭ್ಯಗಳನ್ನು ಕಲ್ಪಿಸಬೇಕೆಂಬ ತತ್ತ್ವವೇನೋ ಹಳೆಯದೇ, ಆದರೆ ಅದನ್ನು ಕಾರ್ಯರೂಪಕ್ಕೆ ತರುವುದರಲ್ಲಿ ಅಮೆರಿಕನ್ನರ ದಕ್ಷತೆ ಮೆಚ್ಚಬೇಕಾದದ್ದು. ಹೋಗುವ ಕಾರುಗಳಿಗೆ ನಾಲ್ಕು, ಬರುವವಕ್ಕೆ ನಾಲ್ಕು–ಹೀಗೆ ಎಂಟು ಓಣಿಗಳುಳ್ಳ ಹೆದ್ದಾರಿಯ ಮೇಲೆ ರೈಲ್ವೆ ಮಾರ್ಗದ ಮೇಲು ಸೇತುವೆಯಂಥ ಭಾರಿ ಸೇತುವೆ ಕಟ್ಟಿರುತ್ತಾರೆ. ಆ ಸೇತುವೆ ರಸ್ತೆಗಾಗಿ ಮಾಡಿದ್ದಲ್ಲ. ಅದರ ಮೇಲೆ ವಿಶಾಲವಾದ ಸುಮಾರು 60 ಅಡಿ ಅಗಲ 160 ಅಡಿ ಉದ್ದ ಇರಬಹುದಾದ ದೊಡ್ಡ ಕಟ್ಟಡ. ಅದರಲ್ಲಿ ಬುಫೆ ಪದ್ಧತಿಯಿರುವ ರೆಸ್ಟೋರಾಂಟ್. ಒಳಗೆ ಹೋಗಲಿಷ್ಟವಿಲ್ಲದವರು ಹೊರ ವರಾಂಡಗಳಲ್ಲೇ ಇರುವ ಯಂತ್ರಗಳಿಗೆ ನಾಣ್ಯ ಹಾಕಿ ಕಾಫಿ, ಚಾಕೊಲೇಟ್, ಕೋಕಕೋಲ ಮುಂತಾದುವನ್ನು ಪಡೆಯಬಹುದು. ರೆಸ್ಟೋರಾಂಟಿನ ಹತ್ತಿರದಲ್ಲೇ ಕಾರ್ ತೊಳೆಸುವ, ರಿಪೇರಿ ಮಾಡಿಸುವ, ಮತ್ತು ಪೆಟ್ರೋಲು ತುಂಬಿಸುವ ಸೌಕರ್ಯವಿರುತ್ತದೆ. ಈ ಕೆಲಸಗಳನ್ನೆಲ್ಲ ಮುಗಿಸಿ ಬೇಸರ ಕಳೆಯುವವರೆಗೆ ಕೂತಿದ್ದು ಅನಂತರ ಮತ್ತೆ ರಸ್ತೆಯನ್ನು ಸೇರಿಕೊಳ್ಳಬಹುದು. ಸೇತುವೆಯ ಎರಡು ಪಕ್ಕಗಳಲ್ಲೂ ಕಾರುಗಳನ್ನು ನಿಲ್ಲಿಸುವುದಕ್ಕೆ ಸ್ಥಳವಿರುತ್ತದೆ. ಇಂಥ ಓಯೆಸಿಸ್‌ಗಳು ಅಲ್ಲಲ್ಲೇ ಇರುತ್ತವೆ. ಈ ಹೆದ್ದಾರಿಗಳಲ್ಲಿರುವ ಇನ್ನು ಒಂದು ಸೌಕರ್ಯವೂ ಈಗ ನೆನಪಿಗೆ ಬರುತ್ತಿದೆ. ಮೈಲಿಗೊಂದರಂತೆ ಟೆಲಿಫೋನ್‌ಗಳಿರುತ್ತವಂತೆ; ಹತ್ತಿರದ ಟೆಲಿಫೋನ್ ಇರುವುದು ಹಿಂದುಗಡೆಯೋ ಮುಂದುಗಡೆಯೋ ಎಂಬುದನ್ನು ಸೂಚಿಸುವುದಕ್ಕೆ ಬಾಣದ ಗುರುತಿನ್ನೆ ಬೇರೆ!

ಓಯೆಸಿಸ್ಸಿನಲ್ಲಿ ದೊರೆತ ತಿಂಡಿ ನನಗೆ ರುಚಿಸಲಿಲ್ಲ. ಮ್ಯಾಕರೋನಿ, ಸ್ಪಾಘೆಟಿ, ಶಿಲೀಂಧ್ರರಸ (mushroom soup), ಇವುಗಳನ್ನು ತಿನ್ನುವುದು

ಇನ್ನೂ ಸಾಧ್ಯವಾಗಿಲ್ಲ. ಅವೆಲ್ಲ ಶಾಕಾಹಾರವೇ. ಆದರೂ ನನ್ನ ಮನಸ್ಸು ಅವಕ್ಕೂ ಮಾಂಸಾಹಾರಕ್ಕೂ ಸಂಬಂಧ ಕಲ್ಪಿಸಿಬಿಟ್ಟಿದೆ. ಆ ಪೂರ್ವಗ್ರಹಕ್ಕೆ ನ್ಯಾಯಸಮ್ಮತವಾದ ಕಾರಣವೇನೂ ಇಲ್ಲವೆಂದು ನನ್ನ ಮನಸ್ಸು ಬಲ್ಲದು. ಆದರೂ ಪೂರ್ವಗ್ರಹ ತರ್ಕವನ್ನು ಮೆಟ್ಟಿ ನಿಂತಿದೆ.

ಮನೆಗೆ ಬಂದ ಮೇಲೆ ರಾಮು 'ಚಿತ್ರಾನ್ನ ಮಾಡೋಣವೆ?' ಎಂದು ಕೇಳಿದಾಗ ನಾನು ಪೂರ್ಣಮನಸ್ಸಿನ ಒಪ್ಪಿಗೆ ಕೊಟ್ಟೆ. ನಾವಿಬ್ಬರೂ ಕಂಠ ಪೂರ್ತಿ ತಿಂದೆವು. ಡಯಾನಳಿಗೆ ಅದು ಸೇರುವುದಿಲ್ಲ—ಅವಳು ಆ ಸೌಖ್ಯವನ್ನು ಕೇಳಿಕೊಂಡು ಬರಲಿಲ್ಲ, ನಾವೇನು ಮಾಡೋಣ!

## ಸುನೀಲನ ಜನ್ಮೋತ್ಸವ

ಇವತ್ತು ಸುನೀಲ ಹುಟ್ಟಿದ ದಿನ. ಎಂಟು ಹತ್ತು ಮಕ್ಕಳನ್ನೂ ಅವರ ತಾಯಿಯರನ್ನೂ ಕರೆದು ಡಯಾನ ಸಣ್ಣದೊಂದು ಪಾರ್ಟಿ ಮಾಡಿದಳು. ವ್ಯವಸ್ಥೆಯೆಲ್ಲ ಪಾಶ್ಚಾತ್ಯಸಂಪ್ರದಾಯವನ್ನನುಸರಿಸಿ ಮಾಡಿದ್ದು. 'ಬರ್ತ್‌ಡೇ ಕೇಕ್' ಸುನೀಲನ ಮೂರುವರ್ಷಕ್ಕೆ ತಕ್ಕಂತೆ ಅದರಲ್ಲಿ ಸಿಕ್ಕಿಸಿದ್ದ ಮೂರು ಮೋಂಬತ್ತಿ, ಮಕ್ಕಳಿಗೆಲ್ಲ ತಲೆಯ ಮೇಲಿಟ್ಟುಕೊಳ್ಳಲು ತ್ರಿಕೋನಾಕಾರದ ಬಣ್ಣದ ಕಾಗದದ ಟೋಪಿಗಳು, ಮೂರು ಮೋಂಬತ್ತಿಗಳನ್ನೂ ಹತ್ತಿಸುವ ಮತ್ತು ಆರಿಸುವ ವೈಖರಿ, ಆಮೇಲೆ ಕೇಕ್ ಅನ್ನು ಪಾಲುಮಾಡುವ ರೀತಿ—ಎಲ್ಲ ಪಾಶ್ಚಾತ್ಯ ಸಂಪ್ರದಾಯ. ಇದು ನನಗೆ ಹೊಸದಲ್ಲ. ಹುಟ್ಟಿದ ಹಬ್ಬವನ್ನು ನಮ್ಮ ಭಾರತೀಯರು—ಕನ್ನಡಿಗರು—ಈ ಸಂಪ್ರದಾಯಾನುಸಾರ ಆಚರಿಸಿದ್ದನ್ನು ನೋಡಿದ್ದೇನೆ. ಭಾರತದಲ್ಲಿ, ಭಾರತೀಯ ವಾತಾವರಣದಲ್ಲಿ, ಆಚರಿಸುವವರು ಮತ್ತು ಆಹ್ವಾನಿತರು, ಎಲ್ಲರೂ ಭಾರತೀಯರೇ ಆಗಿರುವ ಸಂದರ್ಭದಲ್ಲಿ, ವಿದೇಶೀಯ ಸಂಪ್ರದಾಯವನ್ನು ಏಕೆ ಅನುಸರಿಸುತ್ತಾರೋ ಅರ್ಥವಾಗಿಲ್ಲ. ಅಥವಾ ಅರ್ಥವಾಗಿಲ್ಲ ಎನ್ನುವುದೇಕೆ, ಅರ್ಥ ಸ್ಪಷ್ಟವಾಗಿಯೇ ಇದೆ; 'ನಾವು ಮುಂದುವರಿದವರು, ಅತ್ಯಾಧುನಿಕ ನಾಗರಿಕತೆಗೆ ಏರಿದವರು' ಅಂದರೆ 'ಪಾಶ್ಚಾತ್ಯರನ್ನು ಅನುಕರಿಸುವವರು' ಎಂದು ತೋರಿಸಿಕೊಳ್ಳುವುದಕ್ಕೆ ಅದೊಂದು ದಾರಿ—ಚಿತ್ತದಾಸ್ಯ, ಪ್ರತಿಷ್ಠಾಪೂಜೆ! ನಮಗೆ ಸ್ವಾತಂತ್ರ್ಯ ಬಂದ ಮೇಲೆ ಈ ಮನೋವೃತ್ತಿ ಕಡಮೆಯಾಗುವ ಬದಲು ಹೆಚ್ಚಾಗಿದೆ.

ರಾಮುವಿನ ಮನೆಯಲ್ಲಿ ಹುಟ್ಟಿದ ಹಬ್ಬವನ್ನು ಇದೇ ರೀತಿ ಆಚರಿಸಿದಾಗ ನನಗೆ ಅಸಮಾಧಾನವಾಗಲಿಲ್ಲವೇಕೆ? 'ಇತರ ಭಾರತೀಯರ ಮನೆಯಲ್ಲಿ

ಇದು ಚಿತ್ರದಾಸ್ಯವಾದರೆ ನನ್ನ ಮನೆಯಲ್ಲಿ ಮಾತ್ರ ಅಲ್ಲವೆ?' ಎಂದು ಪ್ರಶ್ನೆ ಹಾಕಿಕೊಂಡೆ. ಅಸಮಾಧಾನವಾಗದಿರುವುದಕ್ಕೆ ಕಾರಣ ನಮ್ಮ ತಪ್ಪು ನಮಗೆ ಕಾಣದು ಎಂಬುದಲ್ಲ ಎಂದು ತೋರುತ್ತದೆ. ಡಯಾನ ಎಷ್ಟಾಗಲಿ ಆಂಗ್ಲಳು. ನಮ್ಮ ಪದ್ಧತಿಗಳಲ್ಲಿ ನಮಗೆ ಕಾಣುವ ಸೌಂದರ್ಯವೂ ಕಾವ್ಯಮಯತೆಯೂ ಅವರ ಪದ್ಧತಿಗಳಲ್ಲೂ ಇರಬೇಕು. ಸೂರ್ಯೋದಯದಲ್ಲಿರುವ ಸೊಬಗು ಸೂರ್ಯಾಸ್ತದಲ್ಲೂ ಇಲ್ಲವೆ? ಅವರ ಪದ್ಧತಿಗಳು ರೂಪುಗೊಂಡದ್ದಕ್ಕೂ ಸೌಂದರ್ಯಾನ್ವೇಷಣೆಯೇ ಕಾರಣ. ಆ ಸೌಂದರ್ಯ ಅವಳಿಗೆ ಕಾಣುತ್ತದೆ; ಅಲ್ಲದೆ ನಮ್ಮ ರೀತಿಯ ಸೌಂದರ್ಯರಚನೆ ಅವಳಿಗೂ ತಿಳಿಯದು. ಆಹ್ವಾನಿತರಾಗಿದ್ದ ವಿದೇಶೀಯರಿಗೂ ತಿಳಿಯದು.

ಅಂದಿನ ಅತಿಥಿಗಳು ಬೇರೆ ಬೇರೆ ದೇಶದವರು. ಮಾರ್ಕ್, ಜೇಸನ್, ಮತ್ತು ಅವರ ತಾಯಿಯರು ಅಮೆರಿಕನ್ನರು. ಆ್ಯನಿ ಐರ್ಲೆಂಡಿನವಳು; ಕ್ಯಾಮಿಕೊ ಜಪಾನಿನವಳು; ಲೀಲಾ ರಾವ್ ನನ್ನ ಆರು ದಶಕಗಳ ಸ್ನೇಹಿತ ಸೋಮಸುಂದರಂ ಅವರ ಮಗಳು; ಮಗ್ಗುಲ ಮನೆಯ ಗೇಯಲ್ ಅಮೆರಿಕನ್ ಆದರೂ ಯೆಹೂದ್ಯಳು. ಗೇಯಲ್ ತನ್ನ ಮನೆಯಿಂದಲೇ 8–10 ಕುರ್ಚಿಗಳನ್ನು ತಂದಳು; ಡಯಾನಳ ಜೊತೆಗೆ ನಿಂತು ಬೇಸ್‌ಮೆಂಟ್ ಹಾಲಿನಲ್ಲಿ (ಅದು ನನ್ನ ರಾಜ್ಯ) ಮಾಡಬೇಕಾದ ವ್ಯವಸ್ಥೆಯನ್ನೆಲ್ಲ ಮಾಡಿದಳು. ಸುನೀಲನಿಗೆ ಕೊಡುಗೆಯಾಗಿ ಬಂದ ಪದಾರ್ಥಗಳನ್ನೆಲ್ಲ ಸಾಲಾಗಿ ಪ್ರದರ್ಶಿಸಿದರು. ಪಾರ್ಟಿ ಯಶಸ್ವಿಯಾಗಿ ನಡೆಯಿತು. ರಾಮುವಿಗೆ ಆಸ್ಪತ್ರೆಯಲ್ಲಿ ಕೆಲಸವಿದ್ದದ್ದರಿಂದ ಅವನು ಸಮಾರಂಭದಲ್ಲಿ ಭಾಗಿಯಾಗಲಿಲ್ಲ.

ನಾನೇನೋ ಅವರೆಲ್ಲರ ಜೊತೆಗೂ 'ಹ್ಯಾಪಿ ಬರ್ತ್‌ಡೇ ಟೂ ಊ ಊ ಯು' ಹಾಡಿದೆ. ಆದರೆ ಆಗ ನನ್ನ ಕಣ್ಣ ಮುಂದೆ ಇದ್ದದ್ದು ಅಂದಿನ ಪಾರ್ಟಿಯ ಚಿತ್ರವಲ್ಲ. ಕೆಲವು ವೇಳೆ ಟೀವಿಯ ಫಲಕದ ಮೇಲೆ ಕಾಣುವ ಚಿತ್ರದ ಮಗ್ಗುಲಲ್ಲೇ ಇನ್ನೊಂದು ಚಿತ್ರ ಕಾಣುತ್ತದೆ. ಮೊದಲನೆಯದರಲ್ಲಿದ್ದ ಸ್ಫುಟವಾದ ರೂಪ, ಕಣ್ಣ ಹೊಳಪು, ಸುಳಿದು ಅದೃಶ್ಯವಾಗುತ್ತಿದ್ದ ಭಾವವೈವಿಧ್ಯ—ಈ ಎರಡನೆಯದರಲ್ಲಿಲ್ಲ, ಅದೇನೋ ಒಂದು ಬಗೆಯ ಕಲಸುಮೇಲೋಗರ. ನನ್ನ ಕಣ್ಣಿಗೆ ಅಂದಿನ ಪಾರ್ಟಿ ಈ ಎರಡನೆಯ ಚಿತ್ರದಂತೆ ಕಂಡಿತು. ನನ್ನ ಒಳಗಣ್ಣಿನ ಮುಂದೆ ರೂಪುಗೊಂಡ ಚಿತ್ರ ಬೇರೆ: ಧರ್ಮಾವರದ, ಆಧುನಿಕ ರೀತಿಯ ನೈಲಾನಿನ, ಅಥವಾ ಜಾರ್ಜೆಟ್ ಸೀರೆಗಳನ್ನುಟ್ಟು ಕುಂಕುಮ ಧರಿಸಿ ಹೂವು ಮುಡಿದ ಮಹಿಳೆಯರು; ಅಲ್ಲಲ್ಲೇ ಪ್ರಸಾಧನ ಚೂರ್ಣದ ಸುಳಿವಿದ್ದರೂ ತುಟಿಗೆಂಪು ಕೆನ್ನೆಗೆಂಪುಗಳಿಲ್ಲ. (ಸುನೀಲನ

ಪಾರ್ಟಿಗೆ ಬಂದಿದ್ದವರಲ್ಲೂ ಇವು ಇರಲಿಲ್ಲ! ಅವನ್ನು ಬಳಸಿದ್ದಾಕೆ ಒಬ್ಬರೇ—50ಕ್ಕೆ ಮೀರಿದ ವಯಸ್ಸಿನ ಮಹಿಳೆ.) ಕುರ್ಚಿ ಮೇಜುಗಳ ಅವಾಂತರವಿಲ್ಲ; ಬಂದವರೆಲ್ಲ ನೆಲದಲ್ಲಿ ಹಾಸಿದ ಜಮಖಾನೆಯ ಮೇಲೆ ಕುಳಿತಿದ್ದಾರೆ. ಒಂದೆಕಡೆ ಗೋಡೆಯ ಮಧ್ಯವನ್ನನುಸರಿಸಿ ಹಸೆಮಣೆ, ಅದರ ಮೇಲೆ ಕೆಂಪು ರೇಷ್ಮೆಯ ವಸ್ತ್ರವನ್ನು ಹಾಸಿ ಮಗುವನ್ನು ಕೂರಿಸಿದ್ದಾರೆ. ಹಸೆಮಣೆಯ ಮುಂದೆ ಅರಿಶಿನ ಕುಂಕುಮ ಹೂವುಗಳನ್ನುಳ್ಳ ತಟ್ಟೆ, ಆರತಿಯ ತಟ್ಟೆ, ಇತ್ಯಾದಿ. ಸ್ವಲ್ಪ ದೂರದಲ್ಲಿ, ಒಳಬಾಗಿಲಿನ ಹತ್ತಿರ ಅರಳುಂಡೆ ಪುರಿ ಉಂಡೆಗಳನುಳ್ಳ ಕುಕ್ಕೆಗಳಿವೆ. ಥಳಥಳನೆ ಹೊಳೆಯುವಂತೆ ಬೆಳಗಿರುವ ಹಿತ್ತಾಳೆಯ ಕಂಬಗಳಲ್ಲಿ ಬತ್ತಿಯ ದೀಪಗಳು ಉರಿಯುತ್ತಿವೆ. ಹಸೆಮಣೆಯ ಹತ್ತಿರದಲ್ಲೇ ಪರಿಣತ ಸೌಂದರ್ಯದ ಹಿರಿಯ ಮುತ್ತೈದೆಯರು ಕೆಲವರಿದ್ದಾರೆ. ತಾವು ವಯಸ್ಸಾದವರಾದ್ದರಿಂದ ಜನರ ದೃಷ್ಟಿಯಲ್ಲಿ ತಮ್ಮ ಸ್ಥಾನ ತಗ್ಗಿಸದು ಎಂಬ ಭಾವನೆಯೇನೂ ಅವರ ಮುಖದಲ್ಲಿಲ್ಲ; ಪಾಶ್ಚಾತ್ಯ ಮನಶ್ಶಾಸ್ತ್ರಜ್ಞರು ಅಷ್ಟೊಂದು ಬಡಬಡಿಸುವ ಮಾತ್ಸರ್ಯವೂ ಕಾಣುತ್ತಿಲ್ಲ. ಯುವತಿಯರ ಸಡಗರವನ್ನು ಅವರು ಒಂದು ಬಗೆಯ ತೃಪ್ತಿಯಿಂದ ಆನಂದದಿಂದ ನೋಡುತ್ತಿದ್ದಾರೆ. ವಾತಾವರಣದಲ್ಲಿ ಅಗರುಬತ್ತಿಯ ಮತ್ತು ಗಂಧ ಹೂವುಗಳ ಪರಿಮಳ ತುಂಬಿದೆ. ಯುವತಿಯೊಬ್ಬಳು ಧನ್ಯಾಸಿಯಲ್ಲಿ 'ಅಮ್ಮಾ ಎನ್ನ ಕೂಡಾಡುವ ಮಕ್ಕಳಣಕಿಸುವರೆ' ಎಂಬ ಕೃತಿಯನ್ನು ಹಾಡಿ ಮುಗಿಸಿದ್ದಾಳೆ; ಮತ್ತೊಬ್ಬಳು ಭೈರವಿಯಲ್ಲಿ (ನಾನು ಇಂದು 'ಹ್ಯಾಪಿ ಬರ್ತ್‌ಡೇ ಟೂ ಯೂ' ಹಾಡಿದ್ದು ಯಾವ ರಾಗದಲ್ಲಿ!) 'ರಂಗ ಓಡಿ ಬಾರಯ್ಯ, ವೈಕುಂಠಪತಿ ನಿನ್ನ ನೋಡುವೆ ಮನದಣಿಯ' ಹಾಡುತ್ತಿದ್ದಾಳೆ....

ಇದೇನು, ವಾಸ್ತವ ಪ್ರಪಂಚವನ್ನು ಬಿಟ್ಟು ಕನಸಿನ ಪ್ರಪಂಚಕ್ಕೆ ಓಡಿಹೋಗುವ ಮನೋವೃತ್ತಿ! ಪಾಶ್ಚಾತ್ಯರೀತಿಯ ಜನ್ಮದಿನೋತ್ಸವದ ಪಾರ್ಟಿಯನ್ನು ನೋಡಿದಾಗ ನನ್ನ ಮನಸ್ಸಿನಲ್ಲಿ ಅಸಮಾಧಾನವೇನೂ ಇರಲಿಲ್ಲ ಎಂದೆನಷ್ಟೆ. ಅದು ನಿಜ. ಆದರೆ ಅಸಮಾಧಾನವಿರಲಿಲ್ಲ ಎನ್ನುವುದು ಕೇವಲ ನಾಸ್ತಿವಾಚಕವಾದ ಮಾತು. ಅಲ್ಲಿಂದ ಮುಂದೆ ಹೋಗಿ, ಆ ಭಾವದ ಅಭಾವದಿಂದ ಅಂದರೆ ಅಸಮಾಧಾನದ ಅಭಾವದಿಂದ ಮುಂದೆ ಹೋಗಿ ಆನಂದದ ಅಸ್ತಿತ್ವವನ್ನು ಸಾಧಿಸಬೇಕು. ನಮ್ಮ ಅತಿಥಿಗಳಾಗಿ ಇಲ್ಲಿಗೆ ಬಂದಿರುವ ಮಹಿಳೆಯರ ಕಣ್ಣಿಗೆ ಈ ಸಮಾರಂಭದಲ್ಲಿ ಸೌಂದರ್ಯ ಕಾಣುತ್ತಿದೆ—'ಇವರೊಬ್ಬರಿಗೂ ಸೌಂದರ್ಯದ ಸ್ವರೂಪ ತಿಳಿಯದು, ಇಲ್ಲಿ ನಡೆಯುತ್ತಿರುವುದೆಲ್ಲ ಕೃತಕ' ಎಂದು ಯಾವ ಧೈರ್ಯದಿಂದ ಹೇಳಲಿ! ನಮ್ಮ ಭಾರತದ ಆಚರಣೆಯ

ಸೊಬಗನ್ನು ಕಡೆಗಣಿಸಬೇಕಾಗಿಲ್ಲ; ಇಲ್ಲಿ ಕಾಣುವ ಸೊಬಗನ್ನೂ ಸವಿಯುವ ಶಕ್ತಿಯನ್ನೂ ಬೆಳೆಸಿಕೊಳ್ಳಬೇಕು. ನನ್ನ ದೃಷ್ಟಿ ತೀರ ಸಂಕುಚಿತವಲ್ಲ ಎಂದು ಒಂದೊಂದು ಸಾರಿ ತೋರಿದೆ—ಅದು 'ಅಹಂಕಾರ ವಿಮೂಢಾತ್ಮ'ನ ಭ್ರಮೆಯಾಗದಿರಲಿ! ಅದು ನಿಜವಾದರೂ....ದೃಷ್ಟಿ ಇನ್ನೂ ವಿಶಾಲವಾಗಬೇಕು. ಉದಾರದೃಷ್ಟಿ ಎಷ್ಟೋ ವೇಳೆ ಕರೆಕೊಟ್ಟಾಗ ಬರಲೊಲ್ಲದು. ಪೂರ್ವಗ್ರಹದ ಕೋಟೆಲೆಯಿಂದಾಗಿ ನನ್ನ ಹೃದಯದ ಕರೆಗೆ ಬಲ ಸಾಲದೇನೊ!

## ಕೊಂದು ಕೂಗುವ ಹಿಂಸಕರು

ನಿನ್ನೆ ಹಬ್ಬದ ಪಾರ್ಟಿಗೆ ಬಂದಿದ್ದ ಮಕ್ಕಳೆಲ್ಲ ಇನ್ನೂ ಆ ತ್ರಿಕೋನಾಕಾರದ ಬಫೂನ್ ಟೋಪಿಗಳನ್ನೇ ಹಾಕಿಕೊಂಡು ಕುಣಿಯುತ್ತಿವೆ. ಸುನೀಲನಿಗೆ ಕೊಡುಗೆಯಾಗಿ ಬಂದ ಸಾಮಾನೆಲ್ಲ ಹುಲ್ಲುಗಾವಲಿನಲ್ಲಿ ಅಲ್ಲಲ್ಲೇ ಬಿದ್ದಿವೆ—ಅವು ಈಗ ಈ ಮಕ್ಕಳೆಲ್ಲರ ಸ್ವತ್ತು. ಬಲೂನು, ಟ್ರೈಸಿಕಲ್ಲು, ಪುಟ್ಟ ಅಗ್ನಿಶಾಮಕಯಂತ್ರ, ಎಲ್ಲವನ್ನೂ ಅವು ಮೆರಸಿದ್ದೂ ಮೆರಸಿದ್ದೇ. ನಿನ್ನೆ ಸಂಜೆಯ ಪಾರ್ಟಿ ಇನ್ನೂ ಮುಂದುವರಿಯುತ್ತಲೇ ಇದೆ.

ಮನೆಯೊಳಕ್ಕೆ ಬಂದು ವೃತ್ತಪತ್ರಿಕೆಯನ್ನೋದಲು ಕುಳಿತೆ. ಅಲ್ಲಿಯದೇ ಬೇರೆ ಪ್ರಪಂಚ. ಈ ಪೇಪರುಗಳಲ್ಲಿ ಖೂನಿ, ಲೈಂಗಿಕ ಅತ್ಯಾಚಾರ ಮುಂತಾದ ಅಸಹ್ಯ ಮತ್ತು ಭಯಂಕರ ವಾರ್ತೆ ಇಲ್ಲದಿದ್ದ ದಿನವೇ ಇಲ್ಲ. ನಿನ್ನೆ ಯಾವನೋ ಒಬ್ಬ ಏಳು ಜನರನ್ನು—ತನ್ನ ಮನೆಯವರೇ ನಾಲ್ಕು ಜನ, ನೆರೆಮನೆಯವರು ಮೂರು ಜನ—ಕೊಲೆಮಾಡಿದನಂತೆ. ಅವನು ಹಿಂದೆ ಏನೋ ಮನೋರೋಗದಿಂದ ನರಳುತ್ತಿದ್ದನಂತೆ; ಸ್ವಲ್ಪ ದಿನ ಆಸ್ಪತ್ರೆಯಲ್ಲೂ ಇದ್ದ. ಈಗ ಹುಚ್ಚು ಮರುಕಳಿಸಿತೇನೊ. ಅಥವಾ ತನ್ನ ರಿವಾಲ್ವರಿಗೆ ಕೆಲಸ ಕೊಟ್ಟು ಬಹಳ ದಿನ ಆಯಿತಲ್ಲ ಎಂದುಕೊಂಡಿರಬಹುದು!

ನಾನು ಬಂದ ಹೊಸದರಲ್ಲೇ ಕೇಳಿದ್ದು, ಇದು: ಯಾವನೋ ಒಬ್ಬ 14 ವರ್ಷದ ಹುಡುಗನನ್ನು ಕಂಡೊಡನೆ ಗುಂಡಿಟ್ಟು ಕೊಂದ! ದಿನಪತ್ರಿಕೆಗಳಲ್ಲೂ ಮಾಸಪತ್ರಿಕೆಗಳಲ್ಲೂ ಓದಿದ್ದಂತೂ ಒಂದಲ್ಲ ಎರಡಲ್ಲ. ಷಿಕಾಗೋ ಊರೊಳಗೆ ತಾನು ಹೋಗಬೇಕಾಗಿದ್ದ ದಾರಿ ಗೊತ್ತಾಗದೆ ಯಾರನ್ನೋ ಕೇಳಿ ಮತ್ತೆ ಕಾರನ್ನು ಹತ್ತುವುದರಲ್ಲಿದ್ದವನನ್ನು ಯಾವನೋ ಕೊಂದು ಓಡಿಹೋದ. 57ನೇ ಹೆದ್ದಾರಿಯಲ್ಲಿ (ಸಂಖ್ಯೆ ತಪ್ಪಿದ್ದರೂ ಇರಬಹುದು) ಕಾರಿನಲ್ಲಿದ್ದವರಿಬ್ಬರನ್ನು ಗುಂಡಿಟ್ಟು ಕೊಂದರು; ಅವರಲ್ಲಿ ಒಬ್ಬಾಕೆಯು

ನಗ್ನಶವ ಬೆನ್ನು ಕೆಳಗಾಗಿ ಬಿದ್ದಿತ್ತು. 8 ವರ್ಷದ ಹುಡುಗನೊಬ್ಬ ಮನೆಯೊಳಗಿನಿಂದ ರಿವಾಲ್ವರ್ ತಂದು ತನ್ನ 'ಬೇಬಿ ಸಿಟರ್' (baby-sitter) ಅನ್ನು ಕೊಂದ. ಪಾತಕಿಯೊಬ್ಬ ಒಂದು ಮನೆಗೆ ನುಗ್ಗಿ ಮನೆಯ ಯಜಮಾನ ಯಜಮಾನಿತಿಯರಿಬ್ಬರನ್ನೂ ಕೊಂದ—ಅವರ ಅನಾಥರಾದ ಮಕ್ಕಳಲ್ಲಿ ಎಲ್ಲರಿಗಿಂತ ಹಿರಿಯನಾದವನಿಗೆ ಹದಿನಾಲ್ಕು ವರ್ಷ !* ಕೆಲವು ದಿನಗಳ ಕೆಳಗೆ ಮಿಷಿಗನ್ ಅವೆನ್ಯೂವಿಗೆ (ಅಲ್ಲಿ ಜನರ ಓಡಾಟ ಹೆಚ್ಚು) ಕೆಲವೇ ಗಜ ದೂರದಲ್ಲಿ ದೊಡ್ಡ ಕಟ್ಟಡದ ಬಳಿ ಇದ್ದ ಪೊದೆಗಳ ಮಧ್ಯೆ ಹುಡುಗಿಯೊಬ್ಬಳ ನಗ್ನಶವ ಸಿಕ್ಕಿತಂತೆ. ಈ ಕೃತ್ಯ ನಡೆದದ್ದು ಹಾಡುಹಗಲಿನಲ್ಲಿ. ಇಲ್ಲಿ ಹೆಣ್ಣಿನ ಮೇಲೆ ಅತ್ಯಾಚಾರ ನಡಸುವವರಿಗೆ ಕಾಮತೃಪ್ತಿಯೊಂದಾದರೆ ಸಾಲದೇನೊ, ಅವರು ಆ ಹೆಣ್ಣನ್ನು ಕೊಂದು ಮುಗಿಸುತ್ತಾರೆ. ಸತ್ತವರು ಸಾಕ್ಷ್ಯ ಹೇಳಲಾರರು! (Dead people tell no tales.)

ಇದನ್ನೆಲ್ಲ ಕೇಳಿದ ಮೇಲೆ ಮುಂದೆ ಹೇಳಲಿರುವ ಪ್ರಸಂಗ ಕಾಡುಗಿಚ್ಚಿನ ಮುಂದೆ ಗೀಚಿದ ಬೆಂಕಿಕಡ್ಡಿಯಂತೆ ಕಾಣಬಹುದು. 25 ವರ್ಷದ ಯುವಕನೊಬ್ಬ ಬೆಳಗ್ಗೆ ಎದ್ದು ಕಬ್ಬಿಣದ ದಂಡವನ್ನೋ ಅಥವಾ ಅಂಥಾದ್ದು ಮತ್ತೇನನ್ನೋ ಹಿಡಿದುಕೊಂಡು ಹೊರಟು 61 ಕಾರುಗಳನ್ನು ಮನಸಾರ ಒಡೆದು ಹಾಳುಮಾಡಿದ. ಅಷ್ಟುಹೊತ್ತಿಗೆ ಪೋಲೀಸಿನವರು ಅವನನ್ನು ಹಿಡಿದರು.

---

*1976ರಲ್ಲಿ ನಾನು ಮತ್ತೆ ಅಮೆರಿಕಕ್ಕೆ ಹೋದಾಗ ಅಲ್ಲಿ ನಡೆದ ಪ್ರಸಂಗ ಇದು: ಒಬ್ಬ ಅಪರಾಧಿ (ಲೈಂಗಿಕ ಅತ್ಯಾಚಾರ ಅವನ ವೈಶಿಷ್ಟ್ಯ) 'work-release (ಇದೇನೋ ನನಗೆ ಸರಿಯಾಗಿ ಗೊತ್ತಿಲ್ಲ. ಜೈಲಿನ ಹೊರಗಡೆ ಕೆಲಸ ಕಲಿಸುವ ವ್ಯವಸ್ಥೆಯಿರಬಹುದೇನೊ) ಕಾನೂನಿನ ಪ್ರಕಾರ ಬಿಡುಗಡೆ ಹೊಂದಿದ. ಒಂದು ಸಂಸಾರದವರು ಅವನನ್ನು ಸ್ನೇಹದಿಂದ ಕಂಡು 'ನಮ್ಮಲ್ಲೇ ಕೆಲಸಕ್ಕಿರು' ಎಂದು ಅನುಕೂಲಮಾಡಿಕೊಟ್ಟರು. ಅವನು 3 ವರ್ಷಗಳ ಹಿಂದೆ ಇಬ್ಬರು ಹುಡುಗಿಯರ ಮೇಲೆ ಅತ್ಯಾಚಾರ ನಡಸಿದ್ದ, ತನ್ನ ತಪ್ಪನ್ನು ಒಪ್ಪಿಕೊಂಡೂ ಇದ್ದ. 5 ವರ್ಷ ಸಜಾ ಆಗಿತ್ತು. ಅವನನ್ನು ಮೇಲ್ಕಂಡ ಸಂಸಾರದವರೊಡನೆ ಇರಲು ಕಳಿಸಿದರು. ಅವನು ಮನೆಯ ಯಜಮಾನ (37 ವರ್ಷ), ಯಜಮಾನಿತಿ (35 ವರ್ಷ), ಅವರ ಇಬ್ಬರು ಹೆಣ್ಣುಮಕ್ಕಳು (15, 13 ವರ್ಷ), ಮೂರುವರ್ಷದ ಗಂಡುಮಗು—ಎಲ್ಲರನ್ನೂ ಕೊಂದ. ಯಜಮಾನಿಯ ಮತ್ತು ಹೆಣ್ಣುಮಕ್ಕಳ ಮೇಲೆ ಅತ್ಯಾಚಾರ ನಡಸಿದ. ನಾಲ್ವರ ಶವ ನಜ್ಜುಗುಜ್ಜಾಗುವಂತೆ ಹೊಡೆದಿದ್ದ. ಮನೆಯವನ ಟ್ರಕ್ಕಿನಲ್ಲಿ ತಪ್ಪಿಸಿಕೊಂಡು ಹೋಗಿ ಇನ್ನೊಬ್ಬ ಹುಡುಗಿಯ ಮೇಲೆ ಅತ್ಯಾಚಾರ ನಡಸಿದ. ಪೋಲೀಸಿನವರು ಹಿಡಿದಾಗ ಆತ್ಮಹತ್ಯೆ ಮಾಡಿಕೊಂಡ. ಇಂಥ ಇತರ ಪ್ರಸಂಗಗಳೂ ಉಂಟು!

‘ಇದೇಕೆ ಹೀಗೆ, ಮಾಡಿದೆ?’ ಎಂದು ಕೇಳಿದಾಗ ‘ಏನಾದರೂ ಸ್ವಲ್ಪ ಗಲಾಟೆ ಮಾಡೋಣ ಅನ್ನಿಸಿತು’ ಎಂದ. ನಾವು ಆ ಕಾರುಗಳಿಗಾಗಿ ಕಣ್ಣೀರು ಕರೆಯಬೇಕಾದ್ದಿಲ್ಲ. ಆದರೆ ಆ ಮನೋವೃತ್ತಿ ಎಂಥ ಅಪಾಯಕರವಾದದ್ದು ಎಂಬುದನ್ನು ಗಮನಿಸಬಹುದು.*

ಸುಮಾರು ನಾಲ್ಕು ದಶಕಗಳ ಹಿಂದೆ ಮಿಸ್ ಮೇಯೊ ಎಂಬಾಕೆ ಭಾರತೀಯ ಜೀವನದಲ್ಲಿ ಅಸಹ್ಯವಾದದ್ದನ್ನೆಲ್ಲ ಎತ್ತಿ ತೋರಿಸಿ ಮದರ್ ಇಂಡಿಯ (Motner-India) ಎಂಬ ಹೆಸರಿನ ಪುಸ್ತಕ ಬರೆದಳು. ಭಾರತೀಯರನ್ನು ಪ್ರಪಂಚದ ತಿರಸ್ಕಾರಕ್ಕೆ ಗುರಿಮಾಡಬೇಕೆಂದೇ ಬರೆದದ್ದು ಆ ಪುಸ್ತಕ. ಮಹಾತ್ಮಾಗಾಂಧಿ ಅದನ್ನು ‘A drain-inspectors report’ (ಬಚ್ಚಲ ವ್ಯವಸ್ಥೆ ಸರಿಯಾಗಿದೆಯೆ ಎಂದು ನೋಡುವ ಇನ್‌ಸ್ಪೆಕ್ಟರನ ವರದಿ) ಎಂದು ಕರೆದರು. ಮೇಲಿನ ಪ್ಯಾರಾಗಳನ್ನು ಬರೆಯುವಾಗ ನನಗೆ ಇದು ನೆನಪಾಯಿತು. ಈ ಹಿಂಸಾಕೃತ್ಯಗಳ ಕೊಲೆಗಳ ವಿಷಯ ಮಾತ್ರ ಬರೆದರೆ ಇದೂ ಗಾಂಧಿಯವರು ಹೇಳಿದಂಥ ವರದಿಯಾದೀತು. ಅಮೆರಿಕದಲ್ಲಿ ಹೊಗಳಿಕೆಗೆ ಅರ್ಹವಾದದ್ದು ಬೇಕಾದಷ್ಟಿದೆ. ಆದರೆ ಈ ವಿಷಯಗಳನ್ನು ಗಮನಕ್ಕೆ ತಂದುಕೊಳ್ಳದಿರುವುದೂ ಒಳ್ಳೆಯದಲ್ಲ. ಅವುಗಳಿಂದ ಅಮೆರಿಕನ್ನರು ಮಾತ್ರವಲ್ಲದೆ ನಾವೂ ಕಲಿಯಬೇಕಾದ ಪಾಠವಿದೆ. ಅದರ ವಿಷಯ ಸ್ವಲ್ಪ ಮುಂದೆ ಬರುತ್ತದೆ.

ಅಮೆರಿಕನ್ನರು ಕೂಡ ‘ಈ ಹಿಂಸಾಪ್ರವೃತ್ತಿಯನ್ನು ಕಡೆಗಣಿಸಬಹುದು. ಅದರ ಪ್ರಮಾಣ ಹೆಚ್ಚಿನದಲ್ಲ, ಅದೆಲ್ಲ ವೃತ್ತಪತ್ರಿಕೆಗಳು ತಮ್ಮ ಪತ್ರಿಕೆಗಳು ಹೆಚ್ಚು ಮಾರಾಟವಾಗಲೆಂದು ಎಬ್ಬಿಸುವ ಕೋಲಾಹಲ’ ಎಂದು ಭಾವಿಸಿರುವಂತೆ ತೋರುವುದಿಲ್ಲ. ರಾಮು ಮತ್ತು ದಯಾನ ಷಿಕಾಗೋವಿಗೆ ಬಂದ ಹೊಸದರಲ್ಲಿ ಪೋಲೀಸಿನವನೊಬ್ಬ ಹೇಳಿದನಂತೆ, “ನೀವು ಬಹಳ ಜಾಗರೂಕರಾಗಿರಬೇಕು. ಎಷ್ಟು ಜಾಗರೂಕರಾಗಿದ್ದರೂ ಸಾಲದು. ಯಾವುದೊಂದು ಮುನ್ನೆಚ್ಚರಿಕೆಯನ್ನೂ ಮರೆಯಬೇಡಿ’ ಎಂದು. ‘ಷಿಕಾಗೋವಿನ ಜನ ಈ ಭಯದೊಡನೆ ಬದುಕುವ ಕಲೆಯನ್ನು ಕಲಿಯುತ್ತಿದ್ದಾರೆ’ ಎಂಬ ಅರ್ಥ ಬರುವ ವಾಕ್ಯವನ್ನು ಮೊನ್ನೆ ತಾನೆ ಯಾವುದೋ ಪತ್ರಿಕೆಯಲ್ಲಿ ಓದಿದೆ. ಈ ಭಯದ ವಿಷಯವಾಗಿ ಪತ್ರಿಕಾವೃತ್ತಿಯವನೊಬ್ಬ ಮೂರು ಲೇಖನಗಳನ್ನು

---

*ಇಂಥದೇ ಇನ್ನೊಂದು ಪ್ರಸಂಗದಲ್ಲಿ ಈ ಮನೋವೃತ್ತಿಗೆ ಬಲಿಯಾದವರು ಕಾರುಗಳಲ್ಲ, ಮೂರು ಜನ ಮನುಷ್ಯರು. ಕೊಲೆಗಡುಕ ತನ್ನ ಸ್ನೇಹಿತರೊಂದಿಗೆ ‘ಬಂದೂಕಿನಿಂದ ಕೊಲ್ಲುತ್ತ ಜನ ಹತ್ತಿರ ಬರದಂತೆ ದೂರದಲ್ಲೇ ತಡೆಹಿಡಿಯುವುದು ವಿಚಿತ್ರ ಅನುಭವ’ ಎಂದು ಹೇಳಿದನಂತೆ.

ಬರೆದ. ನಾನು ಲೇಖನಗಳನ್ನೇ ಓದಿದೆನೋ ಅಥವಾ ಅವುಗಳ ವರದಿಯನ್ನು ಓದಿದೆನೋ ಸರಿಯಾಗಿ ನೆನಪಿಲ್ಲ. ಅವನ ಲೇಖನಗಳ ಸಾರಾಂಶ: "ಅಂಕಿ ಅಂಶಗಳ ಆಧಾರದ ಮೇಲೆ ಹೇಳುವುದಾದರೆ ಅಮೆರಿಕದಲ್ಲಿ ಕಳ್ಳತನ ದರೋಡೆಗಳು ಕಡಿಮೆಯಾಗಿವೆ. ಆದರೆ ಕೊಲೆ ಶೇಕಡಾ 4ರಷ್ಟು, ಲೈಂಗಿಕ ಅತ್ಯಾಚಾರ ಶೇಕಡಾ 11ರಷ್ಟು ಹೆಚ್ಚಿದೆ, ಕೊಲೆಗಾರನಿಗೆ ಪರಿಚಯವೇ ಇಲ್ಲದವರ ಕೊಲೆ ಶೇಕಡಾ 20–25ರಷ್ಟು ಹೆಚ್ಚಿದೆ. ಇದರಿಂದಾಗಿ ಜನರ ಭಯ ಇದ್ದಂತೆಯೇ ಇದೆ." ಬೇರೊಂದು ಕಡೆ ಷಿಕಾಗೊ ನಗರದ ಮಟ್ಟಿಗೆ ಈ ಅಂಕಿ ಅಂಶ ಹೀಗಿತ್ತು: "1972ರ ಆದಿಭಾಗದಲ್ಲಿದ್ದದ್ದಕ್ಕಿಂತ 1973ರ ಆದಿಭಾಗದಲ್ಲಿ ಕೊಲೆ ಶೇಕಡಾ 34.6 ಹೆಚ್ಚಿತ್ತು."

ಅಮೆರಿಕದಲ್ಲಿ ಕೋಟಿಗಟ್ಟಲೆ ಜನ ಬದುಕಿಲ್ಲವೆ, ತಮ್ಮ ತಮ್ಮ ಕೆಲಸಗಳಲ್ಲಿ ನಿರತರಾಗಿಲ್ಲವೆ, ಎನ್ನಬಹುದು. ಬದುಕಿದ್ದಾರೆ; ಆದರೆ ಈ ಭಯವೆಂಬ ಹೆಡತಲೆಯ ಹಾವಿನ ಅರಿವೂ ಅದರಲ್ಲಿ ಜೀವಂತವಾಗಿದೆ. "ನೀವು ಹೋಗುತ್ತಿರುವಾಗ ದಾರಿಯಲ್ಲಿ ಯಾರಾದರೂ ಪೆಟ್ಟುತಿಂದು ಅರೆಜೀವದಿಂದ ಬಿದ್ದಿದ್ದರೆ ಅವರಿಗೆ ಸಹಾಯಮಾಡಲು ಕಾರಿನಿಂದ ಇಳಿಯಬೇಡಿ. ಮುಂದಕ್ಕೆ ಹೋಗಿ ಎಲ್ಲಿಂದಲಾದರೂ ಪೋಲೀಸಿನವರಿಗೆ ಫೋನುಮಾಡಿ. ಎರಡು ರಸ್ತೆಗಳು ದಾಟುವ ಕಡೆ ಕೆಂಪು ದೀಪ ಉರಿಯುತ್ತಿರುವಾಗ ಕಾರನ್ನು ನಿಲ್ಲಿಸಬೇಕಷ್ಟೆ—ಆಗ ನಿಮ್ಮ ಕಾರಿನ ಕಿಟಕಿಗಳು ಮುಚ್ಚಿರಲಿ, ಬಾಗಿಲುಗಳಿಗೆ ಬೀಗ ಹಾಕಿರಲಿ." —ಈ ಬಗೆಯ ಎಚ್ಚರಿಕೆಯನ್ನು ಎಲ್ಲರೂ ಕೊಡುತ್ತಾರೆ. ಈಚೀಚೆಗೆ "ರಾತ್ರಿಯ ಹೊತ್ತು ಕಾರಿನಲ್ಲಿ ಒಬ್ಬರೇ ಪ್ರಯಾಣ ಮಾಡಬೇಡಿ" ಎಂದು ಕೂಡ ಎಚ್ಚರಿಸುತ್ತಾರಂತೆ.

ನನಗೂ ಒಂದು ದಿನ ಈ ಭಯದ ಪರಿಚಯವಾಯಿತು. ಸೆಕೆ ಹೆಚ್ಚುತ್ತಿದ್ದದ್ದರಿಂದ ನಾವು ಇನ್ನೊಂದು ಹವಾನಿಯಂತ್ರಕವನ್ನು ಕೊಳ್ಳುವ ಯೋಚನೆ ಮಾಡಿದ. ಎವನ್‌ಸ್ಟನ್‌ನ ನಿವಾಸಿಗಳೊಬ್ಬರು 'ಉಪಯೋಗಿಸಿದ ಹವಾನಿಯಂತ್ರಕ ಮಾರಾಟಕ್ಕಿದೆ, ಚೆನ್ನಾಗಿದೆ' ಎಂದು ಜಾಹಿರಾತು ಕೊಟ್ಟಿದ್ದರು. ಅದನ್ನು ನೋಡಲು ಹೋದೆವು. 'ನಾವು ನೋಡಿಕೊಂಡು ಬಂದುಬಿಡುತ್ತೇವೆ. ನೀವೇನೂ ಕಾರಿನಿಂದ ಇಳಿಯಬೇಕಾಗಿಲ್ಲ. ಬಾಗಿಲುಗಳೂ ಕಿಟಕಿಗಳೂ ಮುಚ್ಚಿರಲಿ' ಎಂದು ಹೇಳಿ ಅವರು ಮನೆಯೊಳಕ್ಕೆ ಹೋದರು. ಸಂಜೆ 5-30ರ ಸಮಯ. ಸಾಮಾನ್ಯವಾಗಿ ಅಮೆರಿಕದಲ್ಲಿ ನಡೆದು ಹೋಗುವವರು ಅಪರೂಪವಷ್ಟೆ. ಬೀದಿಯಲ್ಲಿ ಒಬ್ಬನೇ ಒಬ್ಬ ಮನುಷ್ಯನೂ ಕಾಣಲಿಲ್ಲ. ಕಾರುಗಳು ಮಾತ್ರ ಆಗಾಗ ಭರ್ರೆಂದು ಹೋಗುತ್ತಿದ್ದವು—ಅವುಗಳ

ಸಂಖ್ಯೆಯೂ ಅಂದು ಕಡಮೆ. ಐದು ನಿಮಿಷ ಕಳೆಯಿತು. ಸುಮಾರು ಅರ್ಧ ಕಿಲೋಮೀಟರ್ ದೂರದಲ್ಲಿ ಒಬ್ಬ ನೀಗ್ರೋ ಯುವಕ ಕಾಣಿಸಿಕೊಂಡ. ಅವನ ವಯಸ್ಸು 18-20 ಇರಬಹುದು. ಹದಿವಯಸ್ಸಿನ (teenagers) ವರಿಂದ ಅಪಾಯ ಹೆಚ್ಚು ಎಂದು ಜನ ಹೇಳಿದ್ದನ್ನು ಕೇಳಿದ್ದೆ. ಅವನ ನಡತೆ ಬಹಳ ವಿಚಿತ್ರವಾಗಿತ್ತು. ಕೈಯಲ್ಲಿ ನಾಲ್ಕಡಿ ಉದ್ದದ ದಂಡವನ್ನು ಹಿಡಿದು ರಸ್ತೆಯ ಒಂದು ಕೊನೆಯಿಂದ ಮತ್ತೊಂದಕ್ಕೆ ತೂರಾಡುತ್ತಾ ಏನೋ ಒಂದು ಪದವನ್ನು ಹಾಡಿಕೊಳ್ಳುತ್ತಾ ನನ್ನ ಕಡೆಗೇ ಬರುತ್ತಿದ್ದ. ಆ ದಂಡ ವನ್ನು ಮೇಲಕ್ಕೆಸೆಯುವುದು, ಹಿಡಿದುಕೊಳ್ಳುವುದು, ಅದರಿಂದ ರಸ್ತೆಯ ಪಕ್ಕದ ಮರವನ್ನು ಹೊಡೆಯುವುದು, ಏನನ್ನೋ ಮೆಚ್ಚಿದವನಂತೆ ತಲೆ ದೂಗುವುದು—ಅವನು ಕುಡಿದಿದ್ದಿರಬಹುದು, ಅಥವಾ ಯಾವುದಾದರೂ ಡ್ರಗ್ ತೆಗೆದುಕೊಂಡಿದ್ದಿರಬಹುದು. ಅಂತೂ ಅವನ ನಡತೆ ಭಯವನ್ನು ಕೆರಳಿಸುವಂತಿತ್ತು. ಅವನು ನಮ್ಮ ಕಾರನ್ನು ದಾಟಿ ಮುಂದೆ ಹೋಗುವುದಕ್ಕೆ ಐದಾರು ನಿಮಿಷಗಳಾದವು. ಅದಷ್ಟು ಕಾಲವೂ ನಾನು ಬಾಯಲ್ಲಿ ಅಕ್ಕಿಕಾಳು ಹಾಕಿಕೊಂಡೇ ಕುಳಿತಿದ್ದೆ. ಪಿಸ್ತೂಲು ಹಾರಿಸಿ ಕೊಂದರೆ ವಾಸಿ, ಕ್ಷಣ ಮಾತ್ರದಲ್ಲಿ ಸಾವು ಬರುತ್ತದೆ; ಈ ಮಹರಾಯ ಹಿಂಸೆ ಮಾಡಿ ಕೊಲ್ಲದಿದ್ದರೆ ಸಾಕು, ಎಂಬ ಯೋಚನೆ ಕೂಡ ಬಂದ ನೆನಪಿದೆ! ಆಮೇಲೆ ಈ ಪ್ರಸಂಗ ವನ್ನು ನೆರೆಯವರೊಬ್ಬರಿಗೆ ಹೇಳಿದಾಗ ಅವರು 'ಏನಾಗಿದ್ದರೂ ಆಶ್ಚರ್ಯವಲ್ಲ. ಅವನು ಯಾವ ಕೆಡಕನ್ನೂ ಅರಿಯದ ಪೆದ್ದನಾಗಿರಬಹುದು, ಮದ್ಯವನ್ನೋ ಅಮಲುಮದ್ದನ್ನೋ ಸೇವಿಸಿದ್ದಿರಬಹುದು' ಎಂದರು.

ಕೊಲೆಗೂ ಇತರ ಹಿಂಸಾಕೃತ್ಯಗಳಿಗೂ ನಾಲ್ಕಾರು ಕಾರಣಗಳಿರ ಬಹುದು. ಬಡತನವೊಂದು ದೊಡ್ಡ ಕಾರಣ. ಅದರಿಂದಾಗಿ ಜನ ಕದಿಯು ತ್ತಾರೆ, ದರೋಡೆ ಮಾಡುತ್ತಾರೆ; ಸಿಕ್ಕಿಬೀಳುವುದನ್ನು ತಪ್ಪಿಸಿಕೊಳ್ಳುವುದ ಕ್ಕಾಗಿ ಕೊಲೆ ಮಾಡುತ್ತಾರೆ. ದ್ವೇಷಕ್ಕಾಗಿಯೂ ಮುಯ್ಯಿ ತೀರಿಸಿಕೊಳ್ಳುವು ದಕ್ಕಾಗಿಯೂ ಕೊಲೆ ಮಾಡುತ್ತಾರೆ. 'ಇವನು ಬದುಕಿದ್ದರೆ ನಾನು ಲಾಭ ಗಳಿಸಲಾಗುವುದಿಲ್ಲ' ಎಂದುಕೊಂಡೋ ಅಥವಾ 'ಇವನು ಬದುಕಿದ್ದರೆ ಚುನಾವಣೆಯಲ್ಲಿ ನಾನು ಗೆಲ್ಲಲಾರೆ' ಎಂದೋ ಮಾತ್ಸರ್ಯ ಸ್ವಾರ್ಥಗಳಿಂದ ಪ್ರೇರಿತರಾಗಿ ಕೊಲೆ ಮಾಡುತ್ತಾರೆ. ಇವೆಲ್ಲ ರೀತಿಯ ಕೊಲೆಗಳೂ ಪಾತಕ ಗಳೇ; ಇವು ಹೆಚ್ಚಿದರೆ ಸಮಾಜ ಹೊಲಸುಗೆಡುತ್ತಿದೆಯೆಂದು ಅರ್ಥ, ಆದರೆ ಅಮೆರಿಕದಲ್ಲಿ ಇವುಗಳ ಜೊತೆಗೆ ಇವೆಲ್ಲಕ್ಕಿಂತ ಭಯಕಾರಕವಾದ ಬೇರೊಂದು ಬಗೆಯ ಕೊಲೆ ಸಾಮಾನ್ಯವಾಗಿರುವಂತೆ ತೋರುತ್ತದೆ—ಕೊಲೆಗಾಗಿ ಕೊಲೆ,

ಹಿಂಸೆಗಾಗಿ ಹಿಂಸೆ. ಒಂದು ಕೊಲೆಯಾಗಿದೆ; ಕೊಲೆಗಾರ ಶವವನ್ನು ಕೊಂದ ಸ್ಥಳದಿಂದ ಸ್ವಲ್ಪ ದೂರಕ್ಕೆ ಸಾಗಿಸಿದ್ದಾನೆ—ಅವನಿಗೆ ಅಷ್ಟು ಕಾಲಾವಕಾಶ ವಿತ್ತು. ಆದರೂ ಶವದ ಜೇಬಿನಲ್ಲಿ ಇದ್ದ ಹಣವನ್ನಾಗಲಿ, ಕೈಯಲ್ಲಿದ್ದ ಗಡಿ ಯಾರವನ್ನಾಗಲಿ ಕೊಲೆಗಾರ ತೆಗೆದುಕೊಂಡಿಲ್ಲ. ಅಂದಮೇಲೆ ಆ ಕೊಲೆ ಹಣ ಕ್ಕಾಗಿ ನಡೆದದ್ದಲ್ಲ. ಇಂಥ ಪ್ರಸಂಗಗಳು ಎಷ್ಟೋ ನಡೆದಿವೆಯಂತೆ. ಅನೇಕ ವೇಳೆ ಕೊಲೆಪಾತಕನಿಗೂ ಕೊಲೆಯಾದವನಿಗೂ ಪರಿಚಯು ಸಹ ಇಲ್ಲ. ಯಾವ ಸಂಬಂಧವೂ ಇಲ್ಲ, ಕೊಲೆಪಾತಕನಲ್ಲಿ ಪಿಸ್ತೂಲಿತ್ತು, ಕೊಲ್ಲಿಸಿ ಕೊಳ್ಳುವುದಕ್ಕೆ ಒಬ್ಬ ಸಿಕ್ಕಿದ—ಅಷ್ಟೆ;

ನಾನು ಮುಂದೆ ಹೇಳಲಿರುವ ಪ್ರಸಂಗದಲ್ಲಿ ಇನ್ನೂ ಭಯಂಕರವಾದ ಮನೋವೃತ್ತಿ ಕಾಣುತ್ತದೆ. ಇದು ನಾನೇ ಸ್ವತಃ ವೃತ್ತಪತ್ರಿಕೆಯಲ್ಲಿ ಓದಿ ದ್ದಲ್ಲ. ಓದಿದವರೊಬ್ಬರು ನಂಬಿಕೆಗೆ ಅರ್ಹರಾದವರು, 'ಇದು ನಿಜ' ಎಂದು ಆಶ್ವಾಸನೆ ಕೊಟ್ಟು ಹೇಳಿದ್ದು. ಕೊಲೆಗಾರಿಕೆಯಲ್ಲಿ ನುರಿತವನೊಬ್ಬ ಇನ್ನೊಬ್ಬ ನಿಗೆ 'ಕೊಲೆ ಮಾಡಬೇಕಾದರೆ ಇಂಥಿಂಥ ಸಿದ್ಧತೆಮಾಡಿಕೊಳ್ಳಬೇಕು, ಕೊಲೆ ಮಾಡತಕ್ಕ ರೀತಿ ಹೀಗೆ' ಎಂದು ಉಪದೇಶಕೊಟ್ಟನಂತೆ. ಆ ಶಿಷ್ಯ ಖೂನಿ ಮಾಡಿ ಮುಗಿಸಿದ. ಆದರೆ ತನ್ನ ಗುರು ಹೇಳಿದ ಕ್ರಮವನ್ನು ಅನುಸರಿಸದೆ ಬೇರೆ ಯಾವುದೋ ಕ್ರಮ ಅನುಸರಿಸಿದ. ಆ ಗುರು perfectionist, ಅಂದರೆ ಮಾಡಿದ ಕೆಲಸದಲ್ಲಿ ಸಣ್ಣದೊಂದು ನ್ಯೂನತೆಯೂ ಇರಬಾರದು ಎನ್ನುವವನು. ಕಾರ್ಯ ನಡೆಯಿತೆಂದ ಮಾತ್ರಕ್ಕೆ ಅವನಿಗೆ ತೃಪ್ತಿಯಿಲ್ಲ; ಅದು ವಿಧ್ಯುಕ್ತವಾದ ರೀತಿಯಲ್ಲೇ ನಡೆಯಬೇಕು. ದೇವರನ್ನು ಸುತ್ತುಗಟ್ಟಿದ ಮಾತ್ರಕ್ಕೆ ಪುಣ್ಯ ಬಂದೀತೆ? ಪ್ರದಕ್ಷಿಣೆ ವಿಧಿಯನ್ನು ಅನುಸರಿಸಿಯೇ ಸುತ್ತು ಗಟ್ಟಬೇಕು! ಆದ್ದರಿಂದ ಕೇವಲ ಮಾತಿನ ಉಪದೇಶ ಸಾಲದೆಂದು ಆ ಗುರು ತಾನೇ ಒಬ್ಬನನ್ನು ಕೊಂದು "ಕೊಲ್ಲಬೇಕಾದ್ದು ಹೀಗೆ' ಎಂದು ತೋರಿಸಿ ಕೊಟ್ಟ. ಕೊಲೆಯಾದವನಿಗೂ ಈ ಗುರು ಶಿಷ್ಯರಿಗೂ ಯಾವ ಬಗೆಯ ಸಂಬಂಧವಾಗಲಿ ಪರಿಚಯವಾಗಲಿ ಇಲ್ಲ. ಅವನು ಇವರ ಮಿತ್ರನೂ ಅಲ್ಲ, ಶತ್ರುವೂ ಅಲ್ಲ—ಕೇವಲ ಪಾಠ ಹೇಳುವುದಕ್ಕಾಗಿ ನಡೆಸಿದ ಪ್ರಯೋಗವೊಂದ ರಲ್ಲಿ ಪಶು! ಈ ಕೊಲೆಯಲ್ಲಿ ಕಾಮ, ಅದರಿಂದ ಹುಟ್ಟುವ ಕ್ರೋಧ, ಅದರಿಂದ ಹುಟ್ಟುವ ಸಮ್ಮೋಹ, ಇತ್ಯಾದಿಗಳ ಕಾಟವೇನೂ ಇಲ್ಲ. ಅದೊಂದು ಅಸಹ್ಯ ರೀತಿಯ ನಿಷ್ಕಾಮಕರ್ಮ! ಇದು ವಾಸ್ತವವಾಗಿ ನಡೆದದ್ದಂತೆ.* ಇದನ್ನು

* ನಾನು 1976 ರಲ್ಲಿ ಮತ್ತೆ ಅಮೆರಿಕಕ್ಕೆ ಹೋಗಿದ್ದಾಗ ಇವರ ವಿಷಯ

ನೆನೆದರೇ ಮೈ ನಡುಗುತ್ತದೆ. ಮಾನವನಾದವನಲ್ಲಿ ಇಂಥ ಪ್ರವೃತ್ತಿ ಹೇಗೆ ನೆಲೆಗೊಂಡಿತು? "Let them anatomize Regan; see what breeds about her heart. Is there any cause in nature that makes these hard hearts?"—ರೀಗನ್‌ಳ ದೇಹವನ್ನು ಕೊಯ್ದು ಅವಳ ಹೃದಯ ಪ್ರದೇಶದಲ್ಲಿ ಅವೇನು ಹುಟ್ಟಿ ಬೆಳೆಯುತ್ತದೆಯೋ ನೋಡಲಿ. ಜನ ಇಂಥ ಕಠಿನ ಹೃದಯರಾಗುವುದಕ್ಕೆ ಪ್ರಕೃತಿಯಲ್ಲಿ ಏನಾದರೂ ಕಾರಣ ಸಿಕ್ಕೀತೆ?—ಇದು ಷೇಕ್ಸ್‌ಪಿಯರ್‌ನ 'ಕಿಂಗ್ ಲಿಯರ್' ನಾಟಕದಲ್ಲಿ ಬರುವ ಮಾತು.

## ಕ್ಯಾರಲ್, ಯಾನ್ಸನ್, ಶ್ರೀಮತಿ ಸುಭಾಷಿಣಿ, ಮತ್ತು ಗುಂಡೂರಾಯರು

ಇಂದು ಸಂಜೆ ನಮ್ಮ ಮನೆಗೆ ಅತಿಥಿಗಳಿಬ್ಬರು, ದಂಪತಿಗಳು, ಬಂದರು. ಅವರನ್ನು—ಕ್ಯಾರಲ್ ಮತ್ತು ಯಾನ್ಸೆನ್ ಎಂದು ಕರೆಯೋಣ. ರಾಮುವಿಗೂ ಡಯಾನಳಿಗೂ ತುಂಬ ಬೇಕಾದವರು; ನನಗೂ ಅವರ ಪರಿಚಯವಾಗಿತ್ತು. ಕ್ಯಾರಲ್ ಇಂಗ್ಲೆಂಡಿನವಳು; ಯಾನ್ಸೆನ್ ಹಾಲೆಂಡಿನವನು. ಇವರು ಊಟಕ್ಕೆ ಬರುತ್ತಾರೆಂದು ತಿಳಿದಾಗ ನಾನು ಡಯಾನಳನ್ನು ಕೇಳಿದೆ:

"ಏನಮ್ಮ, ಈ ಅತಿಥಿಗಳ ಜೊತೆಯಲ್ಲಿ ಪಂಚೆ ಉಟ್ಟುಕೊಂಡು ಕೂಡಬಹುದೋ ಅಥವಾ ಶಾಸ್ತ್ರೋಕ್ತವಾಗಿ ಷರಾಯಿ ಬೂಟ್ಸು ಇತ್ಯಾದಿಗಳನ್ನೆಲ್ಲ ಧರಿಸಬೇಕೊ? ಕೈಯಿಂದ ಊಟಮಾಡಬಹುದೊ? ಅನ್ನ ಸಾರು ಕಲಸಬಹುದೋ ಅಥವಾ ನಾಜೂಕಾಗಿ ಅನ್ನಕ್ಕೆ ಸಾರು ಸುರಿದು ಚಮಚದಲ್ಲಿ ಅದು ತಟ್ಟೆಗೆ ತಗಲಿದ ಸದ್ದು ಕೇಳದಂತೆ ಬಾಯಿಗೆ ಸಾಗಿಸಿ, ಅಗಿಯುವುದು ಕಾಣದಂತೆ ಅಗಿದು, ನುಂಗುವುದು ಕಾಣದಂತೆ ನುಂಗಬೇಕೊ?"

ಡಯಾನ ನಕ್ಕಳು, "ಯಾನ್ಸೆನ್ ಹಾಲೆಂಡಿನವನು, ಅವನಿಗೆ ಇಂಗ್ಲೆಂಡಿನ 'ಟೇಬಲ್ ಮ್ಯಾನರ್ಸ್' ವಿಷಯದಲ್ಲಿ ಆಸ್ಥೆಯಿರಲು ಕಾರಣವಿಲ್ಲ. ಕ್ಯಾರಲ್ ದೇಶ ಸುತ್ತಿದವಳು, ಎಲ್ಲ ತರದ ಜನವನ್ನೂ ಪದ್ಧತಿಗಳನ್ನೂ ಕಂಡಿ

---

ಮತ್ತಷ್ಟು ತೀವಿಯಿತು. ಆ 'ಗುರು'ವನ್ನು ಮನಶ್ಶಾಸ್ತ್ರಜ್ಞರ ಪರೀಕ್ಷೆಗೆ ಒಳಪಡಿಸಿದರಂತೆ, ತಜ್ಞರು 'ಇವನು ಹುಚ್ಚ' ಎಂದು ಅಭಿಪ್ರಾಯಪಟ್ಟರೆ ಸರ್ಕಾರ ಅವನನ್ನು ಜೈಲಿನಲ್ಲಿಡದೆ ಆಸ್ಪತ್ರೆಯಲ್ಲಿಡಬಹುದು, ಮತ್ತೆ ಅನಾಹುತಗಳಾಗಬಹುದು, ಎಂದು ಜನ ಹೆದರಿಕೆಯನ್ನು ವ್ಯಕ್ತಪಡಿಸುತ್ತಿದ್ದರು.

ದ್ದಾಳೆ. ಆದ್ದರಿಂದ ನೀವು ಕೈಯನ್ನೇ ಉಪಯೋಗಿಸಿದರೆ ಅವಳಿಗೆ ವಿಚಿತ್ರ ವಾಗಿ ಕಾಣುವುದಿಲ್ಲ.........ನೀವು ಈಗ ಚಾಕು ತ್ರಿಶೂಲ (ಫೋರ್ಕ್‌ನಲ್ಲಿ ನಾಲ್ಕು ಮುಳ್ಳುಗಳಿರುತ್ತವೆಯಾದರೂ ತ್ರಿಶೂಲ ಎಂದು ಹೆಸರಿಟ್ಟಿದ್ದೇನೆ. ಕ್ಷಂತವ್ಯೋ ಮೇsಪರಾಧಃ ಶಿವ ಶಿವ ಶಿವ ಭೋ ಶ್ರೀ ಮಹಾದೇವ ಶಂಭೋ!) ಚಮಚ ಇವುಗಳನ್ನೆಲ್ಲ ಚೆನ್ನಾಗಿಯೇ ಉಪಯೋಗಿಸುತ್ತೀರಲ್ಲ!"

"ತಿಳಿಯಿತು ಮಹರಾಯತಿ, ತಿಳಿಯಿತು. ನನ್ನನ್ನು ಹೊಗಳಿ ನಿನ್ನ ಉದ್ದೇಶ ಸಾಧಿಸಿಕೊಳ್ಳುತ್ತೀಯಲ್ಲವೆ? ಆಗಲಿ ಬಿಡು, ಚಮಚ ಫೋರ್ಕು ಗಳನ್ನೇ ಉಪಯೋಗಿಸುತ್ತೇನೆ. ಅವರೆಲ್ಲಾದರೂ ನಿನ್ನ ಮಾವ ಆಫ್ರಿಕದ ಕಗ್ಗತ್ತಲು ಕಾಡಿನಿಂದ ಬಂದ ಕಿರಾತ ಎಂದುಕೊಂಡಾರು!"

"ಹಾಗೆಂದುಕೊಳ್ಳುವುದಕ್ಕೆ ಎಂಟೆದೆ ಇರಬೇಕು!"

ನಾನು ಮುಜೆಯಲ್ಲೇ ಊಟಕ್ಕೆ ಕೂತೆ; ಆದರೆ ಊಟಮಾಡುವುದರಲ್ಲಿ ಪಾಶ್ಚಾತ್ಯರ ಕೈಕರಣವನ್ನೇ ಅನುಸರಿಸಿದೆ. ಪೂರಿಪಲ್ಯ ತಿನ್ನುವಾಗ ಮಾತ್ರ ಮ್ಲೇಚ್ಛಮಹಾಶಯರೇ ಬೆರಳುಗಳನ್ನು ಉಪಯೋಗಿಸಿದರು; ಅಂದ ಮೇಲೆ ನಾನೇಕೆ ಹಿಂಜರಿಯಬೇಕು?

ಯಾನ್ಸೆನ್ ಮೊನ್ನೆ ತಾನೆ 'ಬಿಸಿನೆಸ್ ಮ್ಯಾನೇಜ್‌ಮೆಂಟ್'ನಲ್ಲಿ ಮಾಸ್ಟರ್ಸ್ (ಎಂ.ಎ.) ಡಿಗ್ರಿ ಪಡೆದನಂತೆ. ಕ್ಯಾರಲ್—ನರ್ಸಿಂಗ್ ಕೆಲಸ ದಲ್ಲಿ ತರಬಿಯತ್ತಾದವಳು—ತಾನು ದುಡಿದು ಗಂಡನ ವಿದ್ಯಾಭ್ಯಾಸದ ಖರ್ಚ ನ್ನೆಲ್ಲಾ ಪೂರೈಸಿದಳು ಅವರಿಗೆ ಒಹು ಮುದ್ದಾದ ಮಗುವಿದೆ. ಅದನ್ನು ಎಲ್ಲೂ ಇರಿಸಲಾರರು. ಮಗು ಹೋದ ಕಡೆಯಲ್ಲೆಲ್ಲ ಅವರ ಕಣ್ಣು ತಿರುಗುತ್ತಿರುತ್ತದೆ. ಇದನ್ನು ನೋಡಿ ನಮಗೆಲ್ಲ ಬಹಳ ಸಂತೋಷವಾಯಿತು. ಕ್ಯಾರಲ್‌ಗೆ ಅಮೆರಿಕವನ್ನು ಕಂಡರಾಗದು; ನಮ್ಮೆದುರಿಗೇ ಗಂಡನೊಡನೆ ಚರ್ಚೆ ಮಾಡ ಲಾರಂಭಿಸಿದಳು—ಬಹುಶಃ ನಮ್ಮ ನೈತಿಕ ಬೆಂಬಲ ಸಂಪಾದಿಸಲೆಂದು.

"ಈ ದೇಶ ನಮಗೆ ಒಗ್ಗದು, ಯಾನ್ಸೆನ್. ಹೇಗಿದ್ದರೂ ನೀವು ಡಿಗ್ರಿ ಪಡೆದಿದ್ದಾಯಿತಲ್ಲ. ಇಂಗ್ಲೆಂಡೋ, ಜರ್ಮನಿಯೋ, ಮಧ್ಯಪೂರ್ವವೋ, ಎಲ್ಲಿಗಾದರೂ ಹೊರಟು ಹೋಗೋಣ."

"ನೋಡು ಡಾರ್ಲಿಂಗ್, ಅಮೆರಿಕ ನಮ್ಮಪ್ಪ ಬಿಟ್ಟುಹೋದ ಜಹಗೀರಿ ಯೇನಲ್ಲ. ಆದರೆ...."

"ಇಲ್ಲಿಯ ವಾತಾವರಣದಲ್ಲಿ ದ್ವೇಷ, ಅದಕ್ಕಿಂತ ಹೆಚ್ಚಾಗಿ ಕ್ರೌರ್ಯ ತುಂಬಿದೆ. ಬೆಳಗೆದ್ದರೆ ಖೂನಿ. ಮನೆ ಬಿಟ್ಟು ಹೊರಟವರು ಮತ್ತೆ ಮನೆಗೆ ಬರುತ್ತಾರೆ ಅನ್ನುವ ನಂಬಿಕೆಯೇ ಇಲ್ಲವಲ್ಲ!"

"ಆದರೂ ಇಲ್ಲಿ ನಮಗೆ ಹಿಟ್ಟು ಹುಟ್ಟುತ್ತೆ, ಅದನ್ನು ಒಪ್ಪುತ್ತೀಯೆ ತಾನೆ ?"

"ನಾವು ಬದುಕಿದ್ದರೆ ತಾನೆ ಹಿಟ್ಟಿನ ಯೋಚನೆ? ಅಲ್ಲದೆ ನಮ್ಮ ಅಲಿಕ್ಸ್ (ಅಲಿಗ್ಸಾಂಡರ್, ಅವರ ಮಗ) ಈ ವಾತಾವರಣದಲ್ಲಿ ಬೆಳೆಯ ಬಾರದು ಎನ್ನಿಸುತ್ತೆ."

ಇದೇ ಮಾತನ್ನು ನನ್ನ ಭಾರತೀಯ ಮಿತ್ರರೊಬ್ಬರು ಹೇಳಿದರೆಂದು ಈಗ ನೆನಪಿಗೆ ಬರುತ್ತಿದೆ. ಅವರಿಗೆ ಅಮೆರಿಕದಲ್ಲಿ ಒಳ್ಳೆಯ ಕೆಲಸವಿತ್ತು, ಅಲ್ಲೇ ಏಕಿದ್ದು ಬಿಡಬಾರದು ಎಂಬ ಯೋಚನೆಯೂ ಮನಸ್ಸಿಗೆ ಬಂದಿತ್ತಂತೆ. ಆದರೂ ಭಾರತಕ್ಕೆ ಬಂದುಬಿಟ್ಟರು. ಕಾರಣ ಕೇಳಿದ್ದಕ್ಕೆ "ನನ್ನ ಮಗಳಿಗೆ 12 ವರ್ಷ ವಾಗುತ್ತಾ ಬಂತು. ಅವಳು ಅಲ್ಲಿಯ ವಾತಾವರಣದಲ್ಲಿ ಬೆಳೆಯಬಾರದು ಎನ್ನಿಸಿತು" ಎಂದು ಉತ್ತರಕೊಟ್ಟರು. 'That is one of the risks we take !' (ಇರುವ ಅಪಾಯಗಳಲ್ಲಿ ಇದೂ ಒಂದು) ಎಂದುಕೊಂಡು ಅಲ್ಲೇ ನೆಲೆಸಿರುವವರನ್ನೂ ಬಲ್ಲೆ.

ಕ್ಯಾರಲ್ ನನ್ನ ಕಡೆಗೆ ತಿರುಗಿ ತನ್ನ ಮಾತನ್ನು ಮುಂದುವರಿಸಿದಳು :

"ನೀವೇನೋ 'ಅಮೆರಿಕನ್ನರು ಒಟ್ಟಿ ಬಟೆಯ ವಿಷಯದಲ್ಲೂ ಜನ ರೊಡನೆ ಸಲಿಗೆಯಿಂದ ಮಾತುಕಥೆ ಆಡುವ ವಿಷಯದಲ್ಲೂ ಇಂಗ್ಲೆಂಡಿನವರಂತೆ ಶ್ರೀಮದ್ಗಾಂಭೀರ್ಯ ಬಹುಮಾನಗಳನ್ನು ಇಟ್ಟುಕೊಂಡಿಲ್ಲ' (ಹಿಂದೊಮ್ಮೆ ಅವರೊಡನೆ ಮಾತಾಡುವಾಗ ನಾನು ಈ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದೆ) ಎಂದಿರಿ...."

"ನಾನು ಹಾಗೆ ಹೇಳಬಾರದಾಗಿತ್ತು. ಅದು ಗಿಳಿಪಾಠ, ಪುಸ್ತಕದ ಬದನೆಕಾಯಿ. ನಾನು ಇಂಗ್ಲೆಂಡಿನ ನೆಲದಲ್ಲಿ ಕಾಲೇ ಇಟ್ಟಿಲ್ಲ—ಅಲ್ಲಿಯ ವಿಷಯ ಮಾತಾಡಲು ಹಕ್ಕಿಲ್ಲ. ಅಮೆರಿಕದಲ್ಲಿ ಕೂಡ ನಾನು ನಿನ್ನೆ ಮೊನ್ನೆ ಕಣ್ಣು ಬಿಟ್ಟವನು !"

ಡಯಾನ "ಇಂಗ್ಲೆಂಡಿನಲ್ಲೂ ಸ್ವಲ್ಪ ಬದಲಾವಣೆಯಾಗಿದೆ" ಎಂದಳು. ಕ್ಯಾರಲ್ ತನ್ನ ಮಾತನ್ನು ಮುಂದುವರಿಸಿದಳು.

"ನಾನು ಶ್ರೀಮದ್ಗಾಂಭೀರ್ಯ ಬೇಕು ಎನ್ನುವವಳಲ್ಲ ; ಸರಳತೆಯನ್ನು ವಿರೋಧಿಸುವವಳೂ ಅಲ್ಲ. ಆದರೆ ಸ್ವಲ್ಪವೂ ಹಿಡಿತವೇ ಬೇಡವೆ? ಇಲ್ಲಿ ಕಾಣುವುದು ಸರಳತೆಯಲ್ಲ, ಅಶ್ಲೀಲ."

ನಾನು : "ನಿಮಗೂ ಹಾಗನ್ನಿಸುತ್ತದೆಯೇ ? ನಾನು ಹಳೆಯ ಕಾಲದ ವನು. ವಯಸ್ಸಾಗಿರುವುದರಿಂದ ಹೊಸ ಪರಿಸ್ಥಿತಿಗೆ ಹೊಂದಿಕೊಳ್ಳುವ ಶಕ್ತಿ

ಕಡಿಮೆಯಾಗಿದೆ. ಅಲ್ಲದೆ ಬಟ್ಟೆಬರೆಯ ವಿಷಯದಲ್ಲಿ ಭಾರತೀಯರು ಮಂದ ಗಾಮಿಗಳು. ಇಲ್ಲಿಯ ಉಡುಪಿನ ರೀತಿ ನನಗೆ ಮೆಚ್ಚಿಕೆಯಾಗಿರುವುದಕ್ಕೆ ಇದೇ ಕಾರಣ ಎಂದುಕೊಂಡಿದ್ದೆ."

ಕ್ಯಾರಲ್ "ಡಯಾನ ಹೇಳಿದ್ದು ನಿಜ. ಇಂಗ್ಲೆಂಡಿನಲ್ಲೂ ಬದಲಾವಣೆ ಯಾಗಿದೆ. ಆದರೆ ಇಲ್ಲಿಯಷ್ಟಲ್ಲ. ಬಿಕಿನಿ ಧರಿಸಿ ಸಮುದ್ರ ತೀರದಲ್ಲೋ ನದೀ ತೀರದಲ್ಲೋ ಓಡಾಡುವುದು ಸರಿ ಎಂದುಕೊಳ್ಳೋಣ. ನಿನ್ನೆ ವಾಲ್‌ಗ್ರೀನ್ಸ್ ಸ್ಟೋರಿಗೆ ಹೋದರೆ ಅಲ್ಲಿದ್ದ ಹೆಂಗಸರಲ್ಲಿ ಅರ್ಧಜನ ಬಿಕಿನಿ ಹಾಕಿದ್ದರು! ಸಂಜೆ ಗಲಿವರ್ಸ್ (ಒಂದು ರೆಸ್ಟೊರಾಂಟ್)ಗೆ ಪೀಟ್ಜ ತಿನ್ನೋಣವೆಂದು ಹೋದರೆ ಅಲ್ಲೂ ಇದೇ ದೃಶ್ಯ. ಕೆಲವರು ಕೊಳೆ ಮೆತ್ತಿದಂತಿದ್ದ ನೀಲಿ ಜೀನ್ಸ್ ಹಾಕಿದ್ದರು. ಇಂಗ್ಲೆಂಡು ಇಷ್ಟು ಕೆಟ್ಟಿಲ್ಲ. ಇಲ್ಲಿ ಮಾನ ಮುಚ್ಚಬೇಕೆಂಬ ಅಪೇಕ್ಷೆ ಹೆಂಗಸರಿಗಿಂತ ಗಂಡಸರಲ್ಲೇ ಹೆಚ್ಚಾಗಿರುವಂತೆ ಕಾಣುತ್ತದ."

ನಾನು : "ಒಟ್ಟೆ ಕೈಕಾಲಿಗೆ ತೊಡರಿಕೊಳ್ಳದಿರಲಿ ಎಂಬ ಕಾರಣವಿರ ಬಹುದು. ಅಥವಾ ಈಗ ಬೇಸಗೆ ತಾನೆ; ಸೆಕೆಯನ್ನು ತಾಳಲಾರದೆ ಹಾಗೆ ಬಂದರೋ ಏನೊ."

ಕ್ಯಾರಲ್ : "ಹಾಗಲ್ಲ ಬಿಡಿ, ಬೆತ್ತಲೆ ತಿರುಗುವುದಕ್ಕೊಂದು ನೆಪ ಬೇಕಲ್ಲ, ಬೇಸಗೆ ಬೇಗ ಬರಲಿ ಅಂತ ಪ್ರಾರ್ಥನೆ ಮಾಡುತ್ತಾ ಇರುತ್ತಾರೆ, ನಿಜವಾದ ಕಾರಣ : ಗಂಡಸರನ್ನು ಸೆಳೆಯುವ ಅಪೇಕ್ಷೆ."

ರಾಮು : "ಕೆಲವು ದಿನವಾದ ಮೇಲೆ ಬಿಕಿನಿಯೇ ಅಭ್ಯಾಸವಾಗಿ ಹೋಗುತ್ತದೆ. ಅದನ್ನು ಧರಿಸಿರುವವರ ಕಡೆ ಮನಸ್ಸು ಹೋಗುವುದೇ ಇಲ್ಲ, ಲೈಂಗಿಕ ಆಕರ್ಷಣೆ ಕಡಿಮೆಯಾಗುತ್ತೆ ಎಂದೂ ಕೆಲವರು ಹೇಳುತ್ತಾರಲ್ಲವೆ?"

ಕ್ಯಾರಲ್ : "ಅಭ್ಯಾಸವಾಗುತ್ತದೆ ಎನ್ನುವುದು ನಿಜ. ಆಕರ್ಷಣೆ ಕಡಿಮೆಯಾಗುತ್ತದೆ ಎನ್ನುವುದು ಸುಳ್ಳು. ಆದರೆ ಆ ವಿಷಯದಲ್ಲಿ ತೀರ್ಪು ಕೊಡಬೇಕಾದವರು ನೀವು. ನೀವೇ ಹೇಳಿ, ಇತರ ಗಂಡಸರನ್ನೂ ಕೇಳಿ, ಬಿಕಿನಿ ಯಿಂದ ಲೈಂಗಿಕ ಆಕರ್ಷಣೆ ಕಡಿಮೆಯಾಗುತ್ತದೆನ್ನುವುದು ನಿಜವಾದರೆ ದೇವ ರಾಣೆ, ಹೆಂಗಸರು ಹಿಂದಿನಂತೆ ಮ್ಯಾಕ್ಸಿ ಬಟ್ಟೆಗಳನ್ನೇ ಹಾಕಿಕೊಳ್ಳುತ್ತಾರೆ!"

ಯಾನ್ಸೆನ್ : "ಹೆಂಗಸರಿಗೇ ಮೈಮುಚ್ಚ ಬಟ್ಟೆ ಬೇಡವಾದರೆ ಗಂಡಸ ರಿಗೆ ತಾನೆ ಏಕೆ ಬೇಕು? ಅವರೂ ನಗ್ನತೆಯ ಕಡೆಗೆ ಸಾಗುತ್ತಾರೇನೊ."

ನಾನು : "ಹವಾಯಿಯಲ್ಲೋ ಲಾಸ್ ಏಂಜಲಿಸ್‌ನಲ್ಲೋ ಕೆಲವು ರೆಸ್ಟೊರಾಂಟುಗಳಲ್ಲಿ ಪೂರ್ಣ ನಗ್ನರಾದ ವೆಯ್ಟರುಗಳಿದ್ದಾರೆಂದು ಮೊನ್ನೆ ತಾನೆ ಮಾಸಪತ್ರಿಕೆಯಲ್ಲೋ ದಿನಪತ್ರಿಕೆಯಲ್ಲೋ ಓದಿದ ನೆನಪು."

ಯಾನ್ಸೆನ್: "ಸಿಯರ್ಸ್ ರೋಬಕ್ ಕಂಪೆನಿಯವರಿಗೂ ಕೆ ಮಾರ್ಟ್ ನವರಿಗೂ ಹೇಳಿಕೊಡಬೇಕು: ಹೀಗಾದರೆ ನಿಮ್ಮ ಬಟ್ಟೆ ವ್ಯಾಪಾರದ ಶಾಖೆ ದಿವಾಳಿಯೆದ್ದು ಹೋಗುತ್ತೆ ಅಂತ. ಅವರು ಫ್ಯಾಷನ್ ನಿರ್ಮಾಪಕರಿಗೆ ಒಂದೆರಡು ಲಕ್ಷ ಲಂಚಕೊಟ್ಟು ಜನರಿಗೆ ಮತ್ತೊಂದು ತರದ ಹುಚ್ಚು ಹಿಡಿಸು ತ್ತಾರೆ !"

ಅಂತೂ ಪಾಶ್ಚಾತ್ಯರಲ್ಲಿ ಕೂಡ ಕೆಲವರು ಉಡುಪಿನ ಫ್ಯಾಷನ್ನುಗಳ ಅತಿರೇಕವನ್ನು ಸಹಿಸಲಾರರೆನ್ನುವುದು ಸ್ಪಷ್ಟ. ಅದರೂ ಒಟ್ಟಿನಲ್ಲಿ ಇಲ್ಲಿಯ ಜನ 'ಸಮಾಜದಲ್ಲಿ ಬದಲಾವಣೆಗಳಾಗಲೇಬೇಕು. ಅದನ್ನು ತಡೆಯಲಾಗು ವುದಿಲ್ಲ. ಯುವಕ ಯುವತಿಯರು ತಮಗೆ ತೋರಿದಂತೆ ನಡೆದುಕೊಳ್ಳಲಿ ಎಂದು ಸುಮ್ಮನಿರುವುದೇ ಲೇಸು' ಎಂದು ವಾದಿಸುವುದೇ ಹೆಚ್ಚೆಂದು ತೋರು ತ್ತದೆ. ಅಲ್ಲದೆ ಅರೆ ಅಥವಾ ಮುಕ್ಕಾಲು ಬೆತ್ತಲೆಯಾಗಿರುವ ಹಕ್ಕು ಯುವಕ ಯುವತಿಯರದ್ದು ಮಾತ್ರವಲ್ಲ. ಈಗ ನಾಲ್ಕಾರು ದಿನಗಳಿಂದ ಸೆಕೆ ಹೆಚ್ಚಿದೆ. ಒಂದು ಟಿ ಷರ್ಟ್ (ನಮ್ಮಲ್ಲಿ ಕಾಣಬಹುದಾದ ಅರೆತೋಳಿನ ಸಿಟ್‌ಬನೀನು) ಮತ್ತು ನಿಕ್ಕರ್ ಹಾಕಿಕೊಂಡು ತಿರುಗುವ 70 ವಯಸ್ಸಿನ ಗಂಡಸರು ಹೆಂಗಸ ರನ್ನು ರೆಸ್ಟೊರಾಂಟ್ ಸೂಪರ್ ಮಾರ್ಕೆಟ್‌ಗಳಲ್ಲಿ ಕೂಡ ಕಾಣಬಹುದು. ನಾವಿರುವ ಸ್ಥಳದಲ್ಲೇ ಮನೆಯ ಮುಂದೆ ಅಲ್ಯುಮಿನಿಯಂ ಲೌಂಜ್ ಕುರ್ಚಿ ಗಳನ್ನು ಹಾಕಿ ನಿಕ್ಕರನ್ನೋ ಕಾಚವನ್ನೋ ಧರಿಸಿ, ತಲೆಯನ್ನು ಮಾತ್ರ ಒಂದು ಟೋಪಿಯಿಂದ ಮುಚ್ಚಿ ಘಂಟೆಗಟ್ಟಲೆ ಬಿಸಿಲು ಕಾಯಿಸಿಕೊಳ್ಳುವ ಹೆಂಗಸರು ಬೇಕಾದ ಹಾಗಿದ್ದಾರೆ. ಬೇಸಗೆಯಲ್ಲೇಕೆ ಹೀಗೆ ಕೂತಿದ್ದಾರೆ ಎಂದು ನನಗೆ ಮೊದಲು ಆಶ್ಚರ್ಯವಾಯಿತು. ಆಮೇಲೆ ನೆನಪಿಗೆ ಬಂತು. ಇಲ್ಲೆಲ್ಲ ಸೂರ್ಯ ಸ್ನಾನ (sun-bathing) ಮಾಡಿ ಮೈಬಣ್ಣವನ್ನು ಕಂದು ಮಾಡಿಕೊಳ್ಳುವ ಚಟ ಬೇರೆ ಇದೆಯಷ್ಟೆ. ಅತಿ ನೀಲ ಕಿರಣಗಳು ಚರ್ಮದ ಮೇಲೆ ನೇರವಾಗಿ ಬಿದ್ದರೆ ಚರ್ಮದ ಕ್ಯಾನ್ಸರ್ ಬರುತ್ತದೆಂದು ಇತ್ತೀಚಿನ ಶೋಧನೆಗಳಿಂದ ತಿಳಿದುಬಂದಿದೆಯಂತೆ, ಡಾಕ್ಟರುಗಳು ಹೇಳುತ್ತಾರೆ. ಆದರೆ ಅವರ ಮಾತುಗಳಿಂದ ಏನು ಪರಿಣಾಮವಾದೀತು! ಸಿಗರೇಟ್ ಸೇದುವುದರಿಂದ ಶ್ವಾಸಕೋಶದ ಕ್ಯಾನ್ಸರ್ ಬರುತ್ತದೆಂದು ಹೇಳುವ ಡಾಕ್ಟರುಗಳೇ ಸೇದುವು ದನ್ನು ಬಿಟ್ಟಿಲ್ಲ!

ನಿನ್ನೆ ರಾತ್ರಿ ಕ್ಯಾರಲ್-ಯಾನ್ಸೆನ್ ದಂಪತಿಗಳು ಹೊರಟುಹೋದ ಮೇಲೆ ಶ್ರೀಮತಿ ಸುಭಾಷಿಣಿಯವರೂ ಅವರ ಸ್ನೇಹಿತೆಯೊಬ್ಬಳೂ ಬಂದರು. ಅವರು ಬೆಂಗಳೂರಿನವರು ; ಬಾಸ್ಟನ್‌ನ ಆಸ್ಪತ್ರೆಯೊಂದರಲ್ಲಿ ಕೆಲಸ ಮಾಡು

ತ್ತಿದ್ದವರು. ಈಗ ಒಹೈಯೊ (Ohio) ರಾಜ್ಯದ ಕ್ಲೀವ್ಲೆಂಡಿನಲ್ಲಿ ಬೇರೊಂದು ಕೆಲಸ ದೊರಕಿಸಿಕೊಂಡು ಅಲ್ಲಿಗೆ ಹೊರಟಿದ್ದಾರೆ. ಬಾಸ್ಟನ್‌ನಿಂದ ಇಲ್ಲಿಗೆ ಸಾವಿರ ಮೈಲಿ ಇರಬಹುದೇನೊ—ಅಷ್ಟು ದೂರವೂ ಈ ಮಹಿಳೆಯರಿಬ್ಬರೇ ಕಾರನ್ನು ನಡಸಿಕೊಂಡು ಬಂದಿದ್ದಾರೆ. ನಾವು ಅವರ ಸಾಹಸವನ್ನು ಮೆಚ್ಚಿದೆವಾದರೂ ಅದು ಅಪಾಯಕರವೆಂದು ಸೂಚಿಸಿದೆವು. ರಾತ್ರಿ ನಮ್ಮೊಡನಿದ್ದು ಬೆಳಗ್ಗೆ ಕ್ಲೀವ್ಲೆಂಡಿಗೆ ಹೊರಡಬೇಕೆಂದು ಅವರ ಕಾರ್ಯಕ್ರಮ. ಆದರೆ ನಮ್ಮ ಬೇಡಿಕೆಗೆ ಒಪ್ಪಿ ಇವತ್ತು (ಶನಿವಾರ) ನಮ್ಮೊಡನೆಯೇ ಇದ್ದು ಭಾನುವಾರ ಪ್ರಯಾಣ ಮಾಡುವ ಏರ್ಪಾಡು ಮಾಡಿಕೊಂಡರು.

ನಮ್ಮನ್ನು ಇವತ್ತು ಗುಂಡೂರಾಯರು ಲಂಚ್‌ಗೆ ಕರೆದಿದ್ದರು; ನಮ್ಮ ಮನೆಗೆ ಅತಿಥಿಗಳು ಬಂದಿರುವುದು ತಿಳಿದ ಮೇಲೆ ಅವರನ್ನೂ ಬರ ಹೇಳಿದರು. ರಾಯರು ನನಗೆ ಹಿಂದಿನಿಂದ ಪರಿಚಿತರು. ಅವರು ಬೆಂಗಳೂರಿನ 'ಆಲ್ ಇಂಡಿಯ ಇನ್ಸ್ಟಿಟ್ಯೂಟ್ ಆಫ್ ಮೆಂಟಲ್ ಹೆಲ್ತ್'ನಲ್ಲಿ ಇದ್ದಾಗಲೂ ಅನಂತರ ಚಂಡೀಘಡದ ವಿಶ್ವವಿದ್ಯಾಲಯದಲ್ಲಿದ್ದಾಗಲೂ ಅವರನ್ನು ಭೇಟಿಯಾಗುತ್ತಿದ್ದದ್ದುಂಟು. ಸಾಲದ್ದಕ್ಕೆ ಅವರ ಪತ್ನಿ ನನ್ನ ಹಳೆಯ ಸ್ನೇಹಿತ ಸೋಮಸುಂದರಂ ಅವರ ಮಗಳು, ಇವೆಲ್ಲ ಕಾರಣಗಳಿಂದ ಅವರಲ್ಲಿ ನನಗೆ ಬಹಳ ವಿಶ್ವಾಸ.

ರಾಯರು ಒಳ್ಳೆಯ ವಿದ್ವಾಂಸರು; ಮಿತಭಾಷಿಗಳು. ಆದರೆ ಇಂದು ಅವರಿಗೆ ಪ್ರಿಯವಾದ ಕೆಲವು ವಿಷಯಗಳು ಚರ್ಚೆಗೆ ಬಂದಿದ್ದರಿಂದ ಬಹಳ ಉತ್ಸಾಹದಿಂದ ವಾಗ್ಯುದ್ಧಕ್ಕೆ ನಿಂತರು: ರಕ್ಷಣಾವ್ಯವಸ್ಥೆ ಮಾಡಿಕೊಂಡು ಶತ್ರುಗಳ ಆಗಮನವನ್ನು ನಿರೀಕ್ಷಿಸುತ್ತ ತಮ್ಮ ರಾಜ್ಯದಲ್ಲೇ ನಿಲ್ಲಲಿಲ್ಲ—ಶತ್ರು ರಾಜ್ಯಕ್ಕೇ ಸೈನ್ಯವನ್ನು ನುಗ್ಗಿಸಿದರು. ಅವರು ಕಂಪ್ಯೂಟರ್‌ಗಳಿಗೆ ಸಂಬಂಧಪಟ್ಟ ಶಾಸ್ತ್ರವನ್ನು ಆಸಕ್ತಿಯಿಂದ ಅಭ್ಯಾಸ ಮಾಡಿದ್ದರು. ರೋಗಕ್ಕೆ ಸಂಬಂಧಪಟ್ಟ ಅಂಕಿ ಅಂಶಗಳನ್ನು ಒದಗಿಸಿ ಕಂಪ್ಯೂಟರ್‌ಗೆ ಕೊಟ್ಟರೆ ಡಾಕ್ಟರ ಕೆಲಸದಲ್ಲಿ ಬಹುಭಾಗವನ್ನು ಅದೇ ಮಾಡಬಲ್ಲದು; ಡಾಕ್ಟರುಗಳ ಅವಶ್ಯಕತೆ ಕಡಿಮೆ ಆಗುತ್ತದೆ ಎಂದು ಅವರ ವಾದ. ರಾಮು ಮತ್ತು ಶ್ರೀಮತಿ ಸುಭಾಷಿಣಿ ತತ್ವಶಃ ಅವರ ವಾದದ ಬಹುಭಾಗವನ್ನು ಒಪ್ಪಿದರಾದರೂ "ಕಂಪ್ಯೂಟರ್ ಮಾಡಲಾಗದ ಕೆಲಸಗಳಿವೆ. ರೋಗಕ್ಕೆ ಸಂಬಂಧಪಟ್ಟ ಅಂಕಿ ಅಂಶಗಳು ಇದ್ದಂತೆಯೇ ಇರುವುದಿಲ್ಲ; ವೈದ್ಯಶಾಸ್ತ್ರ ಬೆಳೆದಂತೆಲ್ಲ ಅವೂ ಬದಲಾಗುತ್ತವೆ. ಶಾಸ್ತ್ರವನ್ನು ಬೆಳೆಸಬೇಕಾದರೆ, ಅಂಕಿ ಅಂಶ ಬದಲಾಗಬೇಕಾದರೆ, ಆ ಕೆಲಸ ಮಾಡುವವನು ವೈದ್ಯನೇ ಆಗಬೇಕು; ಕಂಪ್ಯೂಟರಿನ ಸಹಾಯ ಪಡೆಯಬಹುದೆಂದು

ಒಪ್ಪೋಣ. ಅಲ್ಲದೆ ರೋಗಿಯ ಮನಸ್ಸಿನ ಸ್ಥಿತಿಯನ್ನು ಗಮನಿಸುತ್ತಿದ್ದು ಅವನಲ್ಲಿ 'The will to live' (ಬದುಕಲೇಬೇಕೆಂಬ ಮನೋನಿಶ್ಚಯ) ಬೆಳೆಸಬೇಕಾದರೂ ವೈದ್ಯ ಇದ್ದೇ ಇರಬೇಕು" ಎಂದು ವಾದಿಸಿದರು. ವೈದ್ಯ ಶಾಸ್ತ್ರ ಕಂಪ್ಯೂಟರ್ ಶಾಸ್ತ್ರಗಳೆರಡರಲ್ಲೂ ಅಳತೆಗೆ ಮೀರಿದ ಅಜ್ಞಾನವುಳ್ಳ ನಾನು "ನೀವಿಬ್ಬರೂ ನಿಮ್ಮ ನಿಮ್ಮ ವಾದವನ್ನು ಸ್ವಲ್ಪ ಹೆಚ್ಚು ಒತ್ತಿ ಹೇಳು ತ್ತಿದ್ದೀರಿ" ಎಂದು ಕಾಜಿನ್ಯಾಯ ಮಾಡಿ, "ಎರಡು ಪಕ್ಷಗಳ ಪರವಾಗಿಯೂ ಹೇಳಬಹುದಾದ್ದು ಬೇಕಾದಷ್ಟಿದೆ" ಎಂದು ಪೂರ್ಣಪ್ರಜ್ಞರು ಕೊಡಬಹು ದಾದ ತೀರ್ಮಾನ ಕೊಟ್ಟೆ.

ಅನಂತರ ಮಾತು ವೇದಾಂತದ ಕಡೆಗೆ ತಿರುಗಿತು. ಜೀವನ ಪಥದ, ಜೀವನದ ಆದರ್ಶಗಳ ಚರ್ಚೆ ನಡೆಯಿತು. ಈ ಯುವಕ ಯುವತಿಯರಲ್ಲಿ—ಗುಂಡೂರಾಯರು ಮಾತ್ರ ಮಧ್ಯವಯಸ್ಸಿನವರು—ನಿಷ್ಪಕ್ಷಪಾತವಾದ ವಿಚಾರ ಶಕ್ತಿ ಎಷ್ಟು ಚೆನ್ನಾಗಿ ಬೆಳೆದಿದೆ ಎಂಬುದನ್ನು ಕಂಡು ನನಗೆ ಪರಮಾ ನಂದವಾಯಿತು. ಭಾರತದಲ್ಲಿ ಅನೇಕ ವೇಳೆ "ನಾವು ಆಧ್ಯಾತ್ಮಿಕ ಜೀವನಕ್ಕೆ ಮನಸ್ಸು ಕೊಟ್ಟವರು; ಅಮೆರಿಕನ್ನರು ಮೆಟೀರಿಯಲಿಸ್ಟರು, ಭೋಗಜೀವನವೇ ಗುರಿ ಎನ್ನುವವರು; ಅವರು ವಿಜ್ಞಾನ, ಟೆಕ್ನಾಲಜಿ ಮುಂತಾದ್ದರಲ್ಲಿ ಮುಂದು ವರಿದಿರಬಹುದು, ಹಣ ಗಳಿಸಿರಬಹುದು, ಆದರೆ ನಮಗೆ ಅವಕ್ಕಿಂತ ಮೇಲ್ಮ ಟ್ಟದ ಗುರಿ ಇರುವುದರಿಂದ ಅವರನ್ನು ಮರುಳು ಮಾಡುವ ವಿಷಯಗಳ ಕಡೆಗೆ ನಮ್ಮ ಗಮನ ಹೋಗಲೊಲ್ಲದು. ಸಂಪಾದಿಸಲು ಹೊರಟರೆ ನಾವೇನು ಯಾರಿಗೂ ಕಡಿಮೆಯಿಲ್ಲ" ಎಂಬ ವಾದಸರಣಿ ಕಂಡುಬರುತ್ತದೆ. ಹೀಗೆ ಮಾತಾಡಿ ನಾವು ಸಮಸ್ಯೆಯನ್ನು ಬಗೆಹರಿಸಿದ್ದೇವೆಂದು ಭಾವಿಸಿದ್ದೇವೆ. ಈ ವಾದದಲ್ಲಿ ಅಭಾವ ವೈರಾಗ್ಯ, 'ನಾನು ಎದ್ದರೆ ೧ಳಲ್ಲ' ಎಂಬ ಭಾವನೆ, ಅಜ್ಞತೆ, ಎಲ್ಲ ಬೆರೆದಿವೆ. ಇವತ್ತು ಇಲ್ಲಿ ವಾದ ಮಾಡುತ್ತಿದ್ದವರು ಈ ಹಳ್ಳಕ್ಕೆ ಬೀಳಲಿಲ್ಲ. ರಾಯರಂತೂ ಒಂದು ಕಡೆ ವಿಜ್ಞಾನಿಗಳು, ಮತ್ತೊಂದು ಕಡೆ ವೇದಾಂತಿಗಳು. ಅಮೆರಿಕನ್ ಜೀವನದ ರಹಸ್ಯವನ್ನು ತಿಳಿಯುವುದು ಅಷ್ಟು ಸುಲಭವಲ್ಲ ಎಂದು ಬಲ್ಲರು. ಅವರು ಭಾರತವನ್ನು ತೆಗಳದೆ ಅಮೆರಿಕವನ್ನೂ, ಅಮೆರಿಕವನ್ನು ತೆಗಳದೆ ಭಾರತವನ್ನೂ ಹೊಗಳಬಲ್ಲರು.

# ನನ್ನ ಯೆಹೂದ್ಯ ಮಿತ್ರರು

ಇವತ್ತು ಬೆಳಗಿನಿಂದ ಮನಸ್ಸಿಗೆ ಬಹಳ ಬೇಸರ. ಏಳು ಘಂಟೆಗೆ ಕಾಲೆಳೆದು ಕೊಂಡು ಹೊರಟು ನನ್ನ ಆರೋಗ್ಯ ಸಂಚಾರವನ್ನು ಮುಗಿಸಿದ್ದಾಯಿತು. ರಾಮು ಎಂದಿನಂತೆ ಆಸ್ಪತ್ರೆಗೆ ಹೊರಟ. ನಾನು ಏನೇನೋ ಮೆಲುಕು ಹಾಕುತ್ತಾ ಅರ್ಧ ಘಂಟೆ ಕೂತು ಉಪಾಹಾರದ ಕೆಲಸವನ್ನು—ಅದರಲ್ಲಿ ಸಂತೋಷವಿಲ್ಲದ್ದರಿಂದ ಅದೂ 'ಕೆಲಸ'ವಾಯಿತು—ನಿಧಾನವಾಗಿ ಮುಗಿಸಿದೆ. ಡಯಾನಳಿಗೆ ಇವತ್ತು ಸ್ವಲ್ಪ ಆತುರ—ಇವತ್ತಿನಿಂದ ಸುನೀಲ ಸ್ಕೂಲಿಗೆ ಹೋಗಬೇಕು. ಮೂರು ನಾಲ್ಕು ದಿನ ಡಯಾನ ಜೊತೆಗೆ ಹೋಗಿ ಸ್ವಲ್ಪ ಹೊತ್ತು ಅವನ ಪಕ್ಕದಲ್ಲೇ ಕೂರದಿದ್ದರೆ ಗಲಭೆ ಮಾಡಿ ಓಡಿಬಂದುಬಿಡು ತ್ತಾನೆ. ಆದ್ದರಿಂದ ಅವಳೂ ಹೊರಟಳು. ಮನೆಯಲ್ಲಿ ನಾನೊಬ್ಬನೇ.... ಹಠಾತ್ತಾಗಿ "ಈ ಒಂಟಿತನ ಇವತ್ತಿನದಲ್ಲ, ನಾಳೆ ಹೋಗುವುದೂ ಇಲ್ಲ. ಎಂಟೊಂಬತ್ತು ವರ್ಷದಿಂದ ನನ್ನ ಜನ್ಮಕ್ಕೆ ಹತ್ತಿ ಬಂದದ್ದು" ಎನ್ನಿಸಿತು. ನಾನು ಬಂದಿರುವುದು ನನ್ನ ಮಗನ ಮನೆಗೆ, ಸೊಸೆ ಬೇಕಾದ ಊಟ ಉಪ ಚಾರ ನಡಸುತ್ತಿದ್ದಾಳೆ. ಮೊಮ್ಮಗ ನಲಿಸುತ್ತಿದ್ದಾನೆ; ನಾನು ಇಲ್ಲಿಗೆ ಬಂದದ್ದು ಇವರೆಲ್ಲರ ಅಕ್ಕರೆಯ ಆಹ್ವಾನದಿಂದಾಗಿ, ಇದನ್ನೆಲ್ಲ ಅದುಮಿ ಒಂಟಿ ತನದ ಅನುಭವ ಮೇಲೇಳುತ್ತಿದೆಯೇಕೆ!

ಹಿಂದೊಮ್ಮೆ ನನ್ನ ಸ್ನೇಹಿತ ಡಾ. ಗೋವಿಂದಸ್ವಾಮಿ ಹೇಳಿದ ಕಥೆ ನೆನಪಿಗೆ ಬಂತು. ಇದು ಸುಮಾರು 1952–53ರ ಮಾತು. ಅವರು ನ್ಯೂಯಾರ್ಕ್‌ನಲ್ಲಿದ್ದಾಗ ದಿನವೂ ಸುಮಾರು 3 ಘಂಟೆಯ ಹೊತ್ತಿಗೆ ಗಲಭೆ ಯಿಲ್ಲದ ಸಣ್ಣದೊಂದು ರೆಸ್ಟೋರಾಂಟಿಗೆ ಕಾಫಿಗಾಗಿ ಹೋಗುತ್ತಿದ್ದರಂತೆ. ಅದೇ ವೇಳೆಗೆ 70 75 ವರ್ಷದ ಮುದುಕಿಯೊಬ್ಬಳು ಒಂಟಿಯಾಗಿ ಬಂದು ಸಾವಧಾನವಾಗಿ ಕುಳಿತು ಗುಟುಕುಗುಟುಕಾಗಿ ಕಾಫಿ ಕುಡಿಯುತ್ತ ಅರ್ಧ ಮುಕ್ಕಾಲು ಘಂಟೆ ಅಲ್ಲೇ ಕಳೆಯುತ್ತಿದ್ದಳು. ಒಂದು ದಿನ ಗೋವಿಂದಸ್ವಾಮಿ ಧೈರ್ಯಮಾಡಿ ಆಕೆಯನ್ನು ಕೇಳಿದರು. "ನೀವು ದಿನಾ ಒಬ್ಬರೇ ಬಂದು ಇಲ್ಲಿ ಬಹಳ ಹೊತ್ತು ಕೂತಿರುತ್ತೀರಿ. ನಿಮ್ಮನ್ನು ಮಾತಾಡಿಸಬೇಕು ಎನ್ನಿಸಿತು. ನಿಮ್ಮ ಜೊತೆಗೆ ಬರಬಹುದಾದವರು ಯಾರೂ ಇಲ್ಲವೆ? ಕ್ಷಮಿಸಬೇಕು— ನನ್ನದು ಸಲ್ಲದ ಕುತೂಹಲ!"

"ಕ್ಷಮಿಸುವಂಥಾದ್ದೇನೂ ಇಲ್ಲಪ್ಪ. ನೀವು ಮಾತಾಡಿಸಿದ್ದು ನನಗೂ

ಸಂತೋಷವೇ. ನ್ಯೂಯಾರ್ಕ್‌ನಲ್ಲಿ ನಾನೊಬ್ಬಳೇ ಇದ್ದೇನೆ. ಮಕ್ಕಳೇನೋ ಇದ್ದಾರೆ; ಇಬ್ಬರು ಮಕ್ಕಳು, ಬಹಳ ಒಳ್ಳೆಯ ಹುಡುಗರು. ಒಬ್ಬ ಆಸ್ಟ್ರೇಲಿಯದಲ್ಲಿದ್ದಾನೆ; ಇನ್ನೊಬ್ಬ ಇಲ್ಲೇ ಅಲಬಾಮದಲ್ಲಿದ್ದಾನೆ. ಅವರು ತಮ್ಮ ಕೆಲಸವನ್ನು ಬಿಟ್ಟು ನನ್ನನ್ನು ನೋಡಲು ಬರುವುದು ಕಷ್ಟ. ಸಾಧ್ಯವಾದಾಗ ಫೋನ್ ಮಾಡುತ್ತಾರೆ. ನನ್ನ ಹುಟ್ಟಿದ ದಿನ ಮರೆಯದೆ ಬರ್ತ್‌ಡೇ ಕಾರ್ಡು ಕಳಿಸುತ್ತಾರೆ, ಹೊಸವರ್ಷದ ಶುಭಾಶಯ ಕಳಿಸುತ್ತಾರೆ....ಇಲ್ಲಿ ನಾನೊಬ್ಬಳೇ."

ಆಕೆ 'ನಾನೊಬ್ಬಳೇ' ಎಂದಾಗಲೂ ಒಂಟಿತನದ ಅರಿವು ಉತ್ಕಟವಾಗಿದ್ದಂತೆ ತೋರಲಿಲ್ಲ; ಗೋವಿಂದಸ್ವಾಮಿಗೆ ತಿಳಿದ ಮಟ್ಟಿಗೆ ಅವಳ ಮಾತಿನಲ್ಲಿ ಆತ್ಮಾನುಕಂಪ ಏನೇನೂ ಇರಲಿಲ್ಲ. ಮಕ್ಕಳ ಜೊತೆಯಲ್ಲಿರುವುದು ಸಾಧ್ಯವಿಲ್ಲವಲ್ಲ ಎಂಬ ಯೋಚನೆ ಅವಳಿಗೆ ಬಂದೇ ಇರಲಿಲ್ಲ. ಗೋವಿಂದಸ್ವಾಮಿ "ಆಕೆಯಲ್ಲೇನೂ ದುಃಖ ಕಾಣಲಿಲ್ಲ, ಆದರೆ ಆಕೆಯ ಸ್ಥಿತಿ ನನ್ನ ಮರುಕವನ್ನು ಎಚ್ಚರಿಸಿತು" ಎಂದರು. ವೃದ್ಧರಿಗೆ ಒಂಟಿತನ ಕಟ್ಟಿಟ್ಟದ್ದು—ಅಮೆರಿಕನ್ನರ ಮನಸ್ಸು ಅದಕ್ಕೆ ಒಗ್ಗಿ ಹೋಗಿದೆ: ಮಕ್ಕಳ ಸಹವಾಸದ ಅಭಾವವೇ ಅವರಿಗೆ ಸಾಮಾನ್ಯ ಸ್ಥಿತಿ. ಆಕೆಯ ಒಂಟಿತನ ಗೋವಿಂದಸ್ವಾಮಿಗೆ ಅರ್ಥವಾದದ್ದು ಅವರು ಭಾರತೀಯರಾದ್ದರಿಂದ.

ನನ್ನ ಸ್ಥಿತಿಯೇನೂ ಆಕೆಯದರಂತೆ ಕರುಣಾಜನಕವಾದದ್ದಲ್ಲ. ಇಲ್ಲಾಗಲಿ ಭಾರತದಲ್ಲಾಗಲಿ ನಾನಿರುವುದು ನನ್ನ ಮಕ್ಕಳು ಮೊಮ್ಮಕ್ಕಳ ಜೊತೆಯಲ್ಲಿ ಅಥವಾ ತಮ್ಮಂದಿರ ಸಹವಾಸದಲ್ಲಿ, ಹಿತವಾದ ವಾತಾವರಣದಲ್ಲಿ. ಆದರೂ ಈಗ ನನ್ನ ವಾತಾವರಣ ಬದಲಾಯಿಸಿದೆ. ನಾನು ಮಿತ್ರರನ್ನು ಹುಡುಕಿಕೊಂಡು ಹೋಗುವುದಾಗಲಿ ಅವರು ನನ್ನನ್ನು ಹುಡುಕಿಕೊಂಡು ಬರುವುದಾಗಲಿ ಕಷ್ಟ—ವಯಸ್ಸಿನ ಮಹಿಮೆಯಿಂದಾಗಿ ಪುತ್ರರೊಡನೆ ಮಿತ್ರವತ್ ಆಚರಿಸಬೇಕೆಂಬುದು ನಿಜ. ಹಾಗಿದ್ದರೇ ಸಂಸಾರದಲ್ಲಿ ಸುಖ. ಆ ಸುಖ ನನಗಿದೆ. ಆದರೂ ಪುತ್ರರು ನಿಜವಾಗಿ ಮಿತ್ರರ ಸ್ಥಾನವನ್ನು ತುಂಬಲಾರರು, ಅವರ ಆಸಕ್ತಿ ಉತ್ಸಾಹಗಳೇ ಬೇರೆ, ನನ್ನವೇ ಬೇರೆ. ಟ್ರಾನ್ಸ್‌ಫಾರ್ಮರ್ ಸ್ಟೇಷನ್ನಿನ ಸಮಸ್ಯೆಗಳು, ತೆಂಗಿನ ಮರಕ್ಕೆ ಬರುವ ಕಡಾಂಗ್ ಕಡಾಂಗ್ ಖಾಯಿಲೆ ವೈರಸ್ಸೇ ಅಲ್ಲವೇ, ಬ್ರೂಸಿಲಾಸಿಸ್ ರೋಗದ ಈಟಿಯಾಲಜಿ ಏನು—ಇಂಥ ವಿಷಯಗಳು ಒಂದೆರಡು ನಿಮಿಷ ಕುತೂಹಲ ಕೆರಳಿಸಬಹುದು. ಆಮೇಲೆ? ಅವರು ದಿನವೆಲ್ಲ ಹೊರಗೆ ದುಡಿಯುವವರು, ನಾನು ಮನೆಯಲ್ಲಿ ಕುಳಿತಿರುವವನು.

ಆದ್ದರಿಂದಲೇ ನನ್ನ ಮನಸ್ಸು ಇಂದು ಅನುಭವಿಸಬಹುದಾದ ಸುಖ

ವನ್ನು ಅನುಭವಿಸಿ ಆನಂದ ಪಡದೆ ಕಳೆದುಹೋದ, ಮರಳಲಾಗದ ಸುಖವನ್ನು ನೆನೆಯುತ್ತಿದೆ. ನಿನ್ನೆ ನನ್ನ ಮಿತ್ರ ಶಿವರಾಮಶಾಸ್ತ್ರಿಗಳು ಸತ್ತು ಹೋದ ವರ್ತಮಾನ ಬಂದದ್ದರಿಂದ ಮನಸ್ಸಿನಲ್ಲಿ ಈ ವಿಚಾರಸರಣಿ ಜಾಗೃತವಾಯಿತು. ಸ್ನೇಹದ ವಿಷಯದಲ್ಲಿ ನಾನು ಭಾಗ್ಯಶಾಲಿ. ಬಹುಶ್ರುತರು, ಸರಳ ಹೃದಯರು, ಉದಾರ ಮನಸ್ಕರು, ಆದರ್ಶವಾದಿಗಳು, ಪ್ರೀತಿ ವಿಶ್ವಾಸಗಳನ್ನು ಕೊಟ್ಟು ಪಡೆಯುವುದರಲ್ಲಿರುವ ಆನಂದವನ್ನು ಬಲ್ಲವರು-ಇಂಥವರೊಡನೆ ನನಗೆ ಆತ್ಮೀಯತೆ ಲಭಿಸಿದೆ. ಆದರೆ ಅವರಲ್ಲಿ ಈಗ ಉಳಿದಿರುವವರೆಷ್ಟು ಜನ? ಗೋವಿಂದ ಸ್ವಾಮಿ ಸತ್ತು ಹತ್ತು ವರ್ಷದ ಮೇಲಾಯಿತು; ಶ್ರೀಕಂಠಯ್ಯ ಸತ್ತೂ ಆರೇಳು ವರ್ಷಗಳಾದವು. ಅವರು ಇದ್ದಾಗಲೂ ಕೊನೆಕೊನೆಗೆ ನಾನು ಊರೂರು ಅಲೆಯುತ್ತಿದ್ದದ್ದರಿಂದ ಅವರ ಸಹವಾಸ ಕಡಮೆಯಾಗಿತ್ತು. ಕಳೆದ ಒಂದು ದಶಕಕ್ಕಿಂತ ಹೆಚ್ಚು ಕಾಲ ಕನ್ನಡ ರಾಜ್ಯದಲ್ಲಿ ನಾನು ಕೇವಲ ಪ್ರವಾಸಿ!

ಆರೇಳು ವರ್ಷಗಳ ಕೆಳಗೆ ಭೋಪಾಲಿನಲ್ಲಿ ಮೊಮ್ಮಗಳ ಆಟವನ್ನು ನೋಡುತ್ತ ಕುಳಿತಿದ್ದಾಗ ಶ್ರೀಕಂಠಯ್ಯನಿಂದ ಒಂದು ಕಾಗದ ಬಂತು. ಅದರ ಒಕ್ಕಣೆಯನ್ನು ನೋಡುವುದಕ್ಕಿಂತ ಮುಂಚೆ ನನ್ನ ಕಣ್ಣು ಅಕಸ್ಮಾತ್ ತಾರೀಖು ಬರೆಯುವ ಬಲತುದಿಗೆ ತಿರುಗಿತು. ಶ್ರೀಕಂಠಯ್ಯ ಈಗ ಚಾಲತಿಯಲ್ಲಿರುವ ಪಾಶ್ಚಾತ್ಯ ಪದ್ಧತಿಯಂತೆ ತಾರೀಖು ಕಾಣಿಸುವ ಬದಲು 'ಆಷಾಢಸ್ಯ ಪ್ರಥಮ ದಿವಸೇ' ಎಂದು ಬರೆದಿದ್ದರು. ಅದನ್ನು ನೋಡಿದೊಡನೆ ಮರಳುಗಾಡಿನಲ್ಲಿ ಓಯೆಸಿಸ್ಸನ್ನು ಕಂಡಂತಾಯಿತು. 'ಮೇಘದೂತ'ದ ಆ ಪಂಕ್ತಿಗಳೂ ಚಿತ್ರಗಳೂ ನೆನಪಿಗೆ ಬಂದವು:

ಆಷಾಢಸ್ಯ ಪ್ರಥಮದಿವಸೇ ಮೇಘಮಾಶ್ಲಿಷ್ಟಸಾನುಂ ।
ವಪ್ರಕ್ರೀಡಾಪರಿಣತಗಜಪ್ರೇಕ್ಷಣೀಯಂ ದದರ್ಶ ॥

ಮನಸ್ಸಿನಲ್ಲಿ ಸ್ವಿಚ್ ಒಂದನು ಒತ್ತಿದಂತಾಗಿ ಅದು ಕಾಲದಲ್ಲಿ ಹಿಂದು ಹಿಂದಾಗಿ ಪ್ರಯಾಣಮಾಡಿತು. 'ಮೇಘದೂತ'ದ ಇತರ ಪದ್ಯಗಳು, ಅದರ ಕಾವ್ಯಗುಣದ ವಿಷಯವಾಗಿ ನಾವು ನಡೆಸಿದ್ದ ಚರ್ಚೆ, ಕಪಿಮುಷ್ಟಿ ಹಿಡಿದು ಸಮರ್ಥಿಸಿದ ಅಭಿಪ್ರಾಯಗಳು, ನೆನೆಸಿಕೊಂಡ ಇತರ ಕಾವ್ಯಗಳು, ಹಾಸ್ಯ, ಕುಚೋದ್ಯ....ಸಾ ವಿದಗ್ಧ ಪರಿಷತ್....ತಾಃ ಕಥಾಃ—ಅವೆಲ್ಲ ಸ್ಮೃತಿಪಥಕ್ಕೆ ಹೋಗಿ ಅದೆಷ್ಟು ವರ್ಷಗಳಾದವೊ! ಸ್ಮೃತಿಯಲ್ಲಿ ಸಹ ಅವು ಮಂಕಾಗತೊಡಗಿವೆ. ಮಹಾರಾಜಾ ಕಾಲೇಜಿನ ಮಿತ್ರವರ್ಗ ನಿರ್ಮಿಸಿಕೊಂಡಿದ್ದ ದಿವ್ಯ ಪ್ರಪಂಚ ಒಡೆದುಹೋಯಿತು. ಉಳಿದುಳಿದವರ ಮನಸ್ಸಿನಲ್ಲಿ 'ಕಾಂತಿ ಮತ್ತಂಡ

ಮೇಕಂ' (ಮತ್ತೆ 'ಮೇಘದೂತ' ನೆನಪಿಗೆ ಬರುತ್ತಿದೆ!) ಇನ್ನೂ ಇರಬಹುದೇನೊ, ಅಷ್ಟೆ. ಶ್ರೀಕಂಠಯ್ಯನೇ ಆ ಕಾಗದ ಬರೆದ ಕೆಲವು ತಿಂಗಳಲ್ಲಿ ತೀರಿಕೊಂಡರು....

"ಹವ ಬಹಳ ಹಿತವಾಗಿದೆ, ಅಲ್ಲವೆ? ಏನೋ ಯೋಚನೆಯಲ್ಲಿ ಮುಳುಗಿದ್ದೀರಲ್ಲ?"

ಭಾವಶೈಥಿಲ್ಯದ ("ಸೆಂಟಿಮೆಂಟಲ್") ಮನೋವೃತ್ತಿಗೆ ಬಲಿಬೀಳುತ್ತಿದ್ದ ನನ್ನನ್ನು ಪಾರುಮಾಡಿದವರು ಎದುರು ಮನೆಯ ಮಿ. ಸ್ಕಿನರ್. ಅವರು ಯೆಹೂದ್ಯರು. ಸಿದ್ಧಗೊಳಿಸಿದ ಬಟ್ಟೆಗಳನ್ನು ಮಾರಾಟಮಾಡುವುದು ಅವರ ವೃತ್ತಿ. ಅವರ ಕಾರ್ಯಕ್ಷೇತ್ರ ವಿಶಾಲವಾದದ್ದು—ಇಲ್ಲಿನಾಯ್, ಮಿಷಿಗನ್, ವಿಸ್ಕಾನ್ಸಿನ್, ಮಿನಸೋಟ, ಈ ನಾಲ್ಕು ರಾಜ್ಯಗಳನ್ನೊಳಗೊಂಡಿದ್ದು, ಕಾರಿನಲ್ಲಿ ಸದಾ ಸುತ್ತುತ್ತಲೇ ಇರುತ್ತಾರೆ. ಇವತ್ತು ಅವರಿಗೆ ಬಿಡುವಾಗಿದ್ದದ್ದು ಆಶ್ಚರ್ಯ. ಬಿಡುವಾಗಿದ್ದಾಗ ಬಹಳ ಸಲಿಗೆಯಿಂದಲೂ ಸ್ನೇಹದಿಂದಲೂ ವರ್ತಿಸುತ್ತಾರೆ. ನಾವು ಓಕ್‌ಪಾರ್ಕ್‌ನಿಂದ ನೈಲ್ಸ್‌ಗೆ ಬಂದ ಹೊಸದರಲ್ಲಿ ತಾವಾಗಿಯೇ ಮನೆಗೆ ಬಂದು ಪರಿಚಯ ಮಾಡಿಕೊಂಡು 'ನೀವು ಇಲ್ಲಿಗೆ ಬಂದದ್ದು ಬಹಳ ಸಂತೋಷ. ನಮಗೆ ಒಳ್ಳೆಯ ನೆರೆ ಬೇಕು. ನಮ್ಮಿಂದ ಆಗಬಹುದಾದ ಸಹಾಯವೇನಾದರೂ ಇದ್ದರೆ ದಯವಿಟ್ಟು ತಿಳಿಸಿ. ಆ ವಿಷಯದಲ್ಲಿ ನೀವು ಸ್ವಾತಂತ್ರ್ಯ ವಹಿಸಬೇಕು (ಇದು ಇಲ್ಲಿಯ ಜನ ವಿಶೇಷವಾಗಿ ಬಳಸುವ ಮಾತು : please feel free to tell us....)' ಎಂದು ಹೇಳಿ ಬಹಳ ಆದರದಿಂದ ಸ್ವಾಗತಿಸಿದರಂತೆ.

"ನಾನು ನಿಮ್ಮ ಆಲೋಚನೆಗೆ ಅಡ್ಡಿ ತಂದೆನೇನೊ...." ಎಂದು ಸ್ಕಿನರ್ ಮಾತಿಗೆ ಪೀಠಿಕೆ ಹಾಕಿದರು.

"ತಂದಿರಿ, ನಿಜ, ನನ್ನ ಮನಸ್ಸು ಅಷ್ಟೇನೂ ಹಿತವಾದ ಸ್ಥಿತಿಯಲ್ಲಿರಲಿಲ್ಲ. ಅಡ್ಡಿ ತಂದದ್ದಕ್ಕಾಗಿ ನಾನು ಬಹಳ ಕೃತಜ್ಞನಾಗಿದ್ದೇನೆ" ಎಂದು ನಾನು ನಕ್ಕೆ.

"ನಿಮಗೆ ಬೇಸರವಾಗುವುದು ಸಹಜ. ನಿಮ್ಮ ಮಗ ಬೆಳಗ್ಗೆ ಹೊರಟು ಹೋದವರು ಸಂಜೆ ಆರೂವರೆಗೆ ಬರುತ್ತಾರೆ. ನೀವು ಒಬ್ಬರೇ ಎಲ್ಲೂ ಹೋಗುವಂತಿಲ್ಲ. ನಾನು ಮೂರು ನಾಲ್ಕು ದಿನ ಟೂರ್ ಹೋಗುವುದಿಲ್ಲ. ಡೌನ್‌ಟೌನ್ ಷಿಕಾಗೋವಿಗೆ ಹೋಗಬೇಕಾದಾಗ ಹೇಳುತ್ತೇನೆ. ನನ್ನ ಜೊತೆ ಬನ್ನಿ."

"ಧನ್ಯವಾದ, ಸಂತೋಷದಿಂದ ಬರುತ್ತೇನೆ."

"ಈಗ ವುಡ್‌ಫೀಲ್ಡ್‌ನಲ್ಲಿ ಸ್ವಲ್ಪ ಕೆಲಸವಿದೆ. ಹೊರಡುವಾಗ ಕರೆಯುತ್ತೇನೆ, ಬನ್ನಿ. ಅದು ನೋಡಬೇಕಾದ ಸ್ಥಳ."

ಸುಮಾರು 11 ಘಂಟೆಯ ಹೊತ್ತಿಗೆ ಹೊರಟೆವು. ವುಡ್‌ಫೀಲ್ಡ್ ಇಲ್ಲಿಗೆ ಸುಮಾರು 15 ಮೈಲಿ ದೂರದಲ್ಲಿರುವ ಮಾರುಕಟ್ಟೆ ಕೇಂದ್ರ. ಒಂದೇ ಛಾವಣಿಯ ಕೆಳಗೆ ಅಷ್ಟು ದೊಡ್ಡ ಮಾರ್ಕೆಟ್ ಪ್ರಪಂಚದಲ್ಲಿ ಮತ್ತೆಲ್ಲೂ ಇಲ್ಲವಂತೆ. ಅದನ್ನು ಮಾರ್ಕೆಟ್ ಎನ್ನುವುದಕ್ಕಿಂತ ಸಣ್ಣ ಊರು ಎಂದೇ ಕರೆಯಬಹುದೇನೋ. ರೆಸ್ಟೋರಾಂಟ್, ಬ್ಯಾಂಕು, ಮಕ್ಕಳು ಆಡುವುದಕ್ಕೆ ಸ್ಥಳ, ಬೇಸರವಾದವರು ಕೂರುವುದಕ್ಕೆ ಲೌಂಜುಗಳು, ಮನಸ್ಸಿಗೆ ಆನಂದವಾಗುವಂತೆ ಸಣ್ಣ ನೀರಿನ ಕಾಲುವೆ, ಮಿನಿ ಜಲಪಾತ—ಜನರನ್ನು ಆಕರ್ಷಿಸಲು ಬೇಕಾದ ಸೌಕರ್ಯವೆಲ್ಲ ಇದೆ. ಈ ಬೃಹತ್ ಸೌಧದ ಪ್ರಮಾಣವನ್ನೂ ಅಚ್ಚುಕಟ್ಟನ್ನೂ ಶುಭ್ರತೆ ಸೊಬಗುಗಳನ್ನೂ, ಎಷ್ಟು ಬಣ್ಣಿಸಿದರೂ ತೀರದು. ಸಿಯರ್ಸ್ ರೋಬಕ್, ವಾಲ್‌ಗ್ರೀನ್ಸ್, ಪೆನಿ, ಮುಂತಾದ ಭಾರೀ ವ್ಯಾಪಾರಿ ಸಂಸ್ಥೆಗಳೆಲ್ಲ ಇಲ್ಲಿ ತಮ್ಮ ಸ್ಟೋರುಗಳನ್ನಿಟ್ಟಿದ್ದಾರೆ. ಮೈಮೇಲೆ ಬಿಸಿಲು ಮಳೆ ಬೀಳದಂತೆ ನಾವು ಯಾವ ಸ್ಟೋರಿಗೆ ಬೇಕಾದರೂ ಹೋಗಬಹುದು. ಸೌಂದರ್ಯಪ್ರಸಾಧನ, ಒಡವೆ, ಬಟ್ಟೆಬರೆ, ಆಹಾರ, ಪಾನೀಯ (ಸಾಮಾನ್ಯ ಮತ್ತು ಮಾದಕ), ಮಕ್ಕಳ ಆಟದ ಸಾಮಾನು, ಕಬ್ಬಿಣದ ಸಾಮಾನು, ಪಾತ್ರೆಗಳು, ಹವಾನಿಯಂತ್ರಕಗಳು—ಅಲ್ಲಿ ಸಿಕ್ಕದಿರುವ ಸಾಮಾನೇ ಇಲ್ಲ. ಇಹಜೀವನಕ್ಕೆ ಬೇಕಾದ ಸುಖಸಾಮಗ್ರಿಗಳನ್ನು ಮಾತ್ರ ಗಣನೆಗೆ ತಂದುಕೊಂಡರೆ, ಮಹಾಭಾರತದ ವಿಷಯದಲ್ಲಿ ಹೇಳುವ ಕ್ಲೀಷೆಯನ್ನು (ಅದು ಅಲ್ಲೂ ಉತ್ಪ್ರೇಕ್ಷೆ, ಇಲ್ಲೂ ಉತ್ಪ್ರೇಕ್ಷೆ!) ಇದಕ್ಕೂ ಅನ್ವಯಿಸಬಹುದು ಎನ್ನಿಸುತ್ತದೆ:

ಯದಿಹಾಸ್ತಿ ತದನ್ಯತ್ರ, ಯನ್ನೇಹಾಸ್ತಿ ನ ಕುತ್ರಚಿತ್ (ಇಲ್ಲಿರುವುದೇ ಇತರ ಕಡೆ ಇದೆ; ಇಲ್ಲಿ ಇಲ್ಲದಿರುವುದು ಇನ್ನೆಲ್ಲೂ ಇಲ್ಲ.)

"ಇದಕ್ಕೆ ಎಷ್ಟು ಖರ್ಚಾಗಿರಬಹುದು?" ಎಂದು ಸ್ಕಿನರ್ ಅವರನ್ನು ಕೇಳಿದೆ; ಅವರು "ಹೇಳಲಾರೆ. ಬಿಲಿಯನ್ ಡಾಲರುಗಳಿಗೆ ಕಡಮೆ ಇರಲಾರದು" ಎಂದರು.

ಸ್ಕಿನರ್ ಯಾವ ಸ್ಟೋರಿನಲ್ಲಿ ವ್ಯವಹಾರ ಇಟ್ಟುಕೊಂಡಿದ್ದರೋ ಆದರ ಮುಖ್ಯಸ್ಥನನ್ನು ನನಗೆ ಪರಿಚಯಮಾಡಿಕೊಟ್ಟರು. ಆತ ಎರಡನೆಯ ಮಹಾಯುದ್ಧದ ಕಾಲದಲ್ಲಿ ಅಮೆರಿಕನ್ ನೌಕಾದಳದ ಸಪ್ಲೈ ಶಾಖೆಯಲ್ಲಿದ್ದನಂತೆ. ಕರಾಚಿ ಬೊಂಬಾಯಿಗಳಿಗೆ ಬಂದಿದ್ದನಂತೆ. ಸುಮಾರು 65 ವರ್ಷದವನು;

ಅನುಕೂಲ ಸ್ಥಿತಿಯಲ್ಲಿರುವವರ ಮುಖದಲ್ಲಿ ಸಾಮಾನ್ಯವಾಗಿ ಕಾಣಬಹುದಾದ ಆತ್ಮವಿಶ್ವಾಸದ ಜೊತೆಗೆ ಒಂದು ಬಗೆಯ quizzical ಹಾಸ್ಯ ಪ್ರವೃತ್ತಿಯೂ ಕಾಣುತ್ತಿತ್ತು. ಸಾಮಾನ್ಯವಾಗಿ ಅಮೆರಿಕನ್ನರು ಬಟ್ಟೆಬರೆಯ ವಿಷಯದಲ್ಲಿ ಹೇಗೆಂದರೆ ಹಾಗೆ. ಆದರೆ ಈತ ಆ ವಿಷಯದಲ್ಲಿ ಬಹಳ ಎಚ್ಚರಿಕೆ ವಹಿಸಿದ್ದಂತೆ ತೋರಿತು. ಅಸಿಧಾರೆಯ ಹಾಗೆ ಕಾಣುವಂತೆ ಇಸ್ತ್ರಿಮಾಡಿದ ಅನವದ್ಯವಾದ ಸೂಟು, ಟೈ, ಟೈಪಿನ್ ಇತ್ಯಾದಿ. ಅವನ ವ್ಯಾಪಾರಕ್ಕೆ (ಬಟ್ಟೆಯ ವ್ಯಾಪಾರ) ಇದೆಲ್ಲ ಅವಶ್ಯಕವೇನೊ.

ಆತ ನನ್ನನ್ನು ಮಾತಿಗೆ ಎಳೆದ. "ನಮ್ಮ ರಾಜಕೀಯದ ವಿಷಯ ನೀವು ವೃತ್ತಪತ್ರಿಕೆಗಳಲ್ಲಿ ಓದುತ್ತಿದ್ದೀರಲ್ಲವೆ? ವಾಟರ್‌ಗೇಟ್ ಪ್ರಸಂಗ, ಗವರ್ನರ್ ವಾಕರ್ ಮತ್ತು ಮೇಯರ್ ಡೇಲಿ ಇವರ ವಾದ ವಿವಾದಗಳು—ನಿಮ್ಮ ಅಭಿಪ್ರಾಯವೇನು?"

"ನನ್ನ ಅಭಿಪ್ರಾಯ....ಈಗ ನಾನು ನಿಮ್ಮ ದೇಶದ ಅತಿಥಿಯಾಗಿದ್ದೇನೆ ಎಂದುಕೊಳ್ಳಬಹುದು. ನಮ್ಮ ಮನೆಯ ಹತ್ತಿರ ಇರುವ ಜನಸಾಮಾನ್ಯರಿಂದ ನನಗೆ ಆದರ ದೊರೆತಿದೆ. ಅದಲ್ಲದೆ ರಾಜಕೀಯದಲ್ಲಾಗಲಿ ವ್ಯಾಪಾರೋದ್ಯಮಗಳಲ್ಲಾಗಲಿ ಉನ್ನತ ಸ್ಥಾನಗಳಲ್ಲಿರುವವರ ವಿಷಯ ನಮಗೇನು ಗೊತ್ತಾಗುತ್ತದೆ? ಚಕ್ರದೊಳಗೆ ಚಕ್ರ! (wheels within wheels) ವೃತ್ತಪತ್ರಿಕೆಗಳಲ್ಲಿ ಬಂದಷ್ಟು ಮಾತ್ರ ಬಲ್ಲೆ. ನಿಮ್ಮವರೇ 'ನಿರ್ಣಯ ಕಷ್ಟ' ಎನ್ನುತ್ತಾರೆ. ಹೀಗಿರುವಾಗ ನಾನು ಅಭಿಪ್ರಾಯ ಹೇಳಲೇಬಾರದು."

"ಹೇಳುವುದಕ್ಕೆ ಇಷ್ಟವಿಲ್ಲ ಅಂತ ಸ್ಪಷ್ಟವಾಗಿ ಹೇಳಿಬಿಡಿ! ನೀವು ಆ ವಿಷಯ ಮಾತಾಡುವುದಿಲ್ಲ ಅಂದರೆ ಅದೇ ನನ್ನ ಪ್ರಶ್ನೆಗೆ ಉತ್ತರವಾಯಿತು. ನಾವಾದರೆ ಏನು ಮಾಡುತ್ತೇವೆ, ಗೊತ್ತೆ? ಇಲ್ಲಿಂದ ಬೊಂಬಾಯಿಗೆ, ಅಲ್ಲಿಂದ ದಿಲ್ಲಿಗೆ ಮದರಾಸಿಗೆ ಕಲ್ಕತ್ತಕ್ಕೆ ವಿಮಾನದಲ್ಲಿ ಹಾರಿಬರುತ್ತೇವೆ. ಟ್ಯಾಕ್ಸಿಯಲ್ಲಿ ತಿರುಗುತ್ತೇವೆ—ಅಥವಾ ನಿಮ್ಮ ಸರ್ಕಾರವೇ ನಮ್ಮನ್ನು ಸುತ್ತಿಸುತ್ತದೆ. ಇಲ್ಲಿ ಅಲ್ಲಿ ಕ್ಯಾಮರ ಕ್ಲಿಕ್ಕಿಸುತ್ತೇವೆ. ಅಮೆರಿಕನ್ ಎಂಬಸಿಯಲ್ಲಿ ಹೊತ್ತು ಕಳೆದು ಹದಿನೈದು ದಿನವಾದಮೇಲೆ ಮರಳಿ ಬಂದು 'Life in India—seen from inside' (ಭಾರತದಲ್ಲಿ ಬದುಕು—ಒಳಗಿನಿಂದ ಕಂಡಂತೆ) ಎಂದು ಪುಸ್ತಕ ಬರೆದುಬಿಡುತ್ತೇವೆ."

"ನಾನು ಹಾಗೆ ಮಾಡುವುದಿಲ್ಲವೆಂದು ಭಾಷೆ ಕೊಡಲಾರೆ!"

"ಬರೆಯಿರಿ, ಬರೆಯಿರಿ. ನಮ್ಮನ್ನು ಚೆನ್ನಾಗಿ ಹೊಗಳಿ. ಅಮೆರಿಕನ್ನರು

ಎಷ್ಟು ಹೊಗಳಿಕೆಯನ್ನಾದರೂ ಜೀರ್ಣಿಸಿಕೊಳ್ಳಬಲ್ಲರು. ಅಮೆರಿಕದಲ್ಲಿ ಎಲ್ಲ ಬೃಹತ್ಪ್ರಮಾಣದ್ದು; grab (ಗ್ರ್ಯಾಬ್ : ಗೆಬಕಿಕೊಳ್ಳುವುದು) ಕೂಡ ಬೃಹತ್ಪ್ರಮಾಣದ್ದು ಅಂತ ಬರೆಯಿರಿ!"

"ಗ್ರ್ಯಾಬ್ ಮಾಡುವ ಇಚ್ಛೆಯಲ್ಲಿ ನಾವೇನೂ ಹಿಂದೆ ಬಿದ್ದಿಲ್ಲ. (ನಾನು ಬಾಯಲ್ಲಿ ಹೇಳದಿದ್ದರೂ ಮನಸ್ಸಿನಲ್ಲೇ ಅಂದುಕೊಂಡೆ: ಆತ್ಮವೇನೋ ಸಿದ್ಧವಾಗಿದೆ, ದೇಹ ಮಾತ್ರ ದುರ್ಬಲ! ಎಂದು.) ನಾವು ನಿಮ್ಮೊಡನೆ ಸ್ಪರ್ಧೆ ಹೂಡುತ್ತೇವೆ."

"He who sups with the Devil must have a long spoon!" ("ಸೈತಾನನೊಡನೆ ಊಟಕ್ಕೆ ಕೂತರೆ ಉದ್ದವಾದ ಚಂಚ ಇರಬೇಕು!" ಈ ಮಾತಿನ ಭಾವಾರ್ಥ : ದುಷ್ಟರೊಡನೆ ವ್ಯವಹಾರ ಇಟ್ಟುಕೊಳ್ಳುವುದು ಒಳ್ಳೆಯದಲ್ಲ.)

ಮಧ್ಯಾಹ್ನ 4 ಘಂಟೆಯ ಹೊತ್ತಿಗೆ ಸ್ಕಿನರ್ ಅವರೊಡನೆ ಇನ್ನೊಂದು 'ಸೆಷನ್' ನಡೆಯಿತು. ಅವರು ತಮ್ಮ ಮತದಲ್ಲೂ ಬೈಬಲ್‌ನಲ್ಲೂ (ಬೈಬಲ್ ಅಂದರೆ ಯೆಹೂದ್ಯರಿಗೆ "ಹಳೆ ಒಡಂಬಡಿಕೆ"—The Old Testament) ಅಚಲವಾದ ನಂಬಿಕೆಯಿಟ್ಟಿರುವ ಯೆಹೂದ್ಯರು. ನಮ್ಮಲ್ಲಿ ಕೆಲವರು ಯಾವುದಾದರೂ ಸಂದರ್ಭದಲ್ಲಿ ಹೇಗೆ ನಡೆಯಬೇಕು ಎಂಬ ಪ್ರಶ್ನೆ ಬಂದರೆ ಅದಕ್ಕೆ ಉತ್ತರವನ್ನು ಶ್ರೀಮದ್ರಾಮಾಯಣದಲ್ಲಿ ಹುಡುಕುವುದುಂಟು. ರಾಮಾಯಣವನ್ನು ತೆಗೆದು ಮೊದಲು ಯಾವ ಪುಟ ಕಣ್ಣಿಗೆ ಬೀಳುತ್ತೋ ಅದನ್ನು ಓದಿ ಮೊದಲು ಕಾಣುವ ವಾಕ್ಯ ಸೂಚಿಸಿದಂತೆ ನಡೆಯುವುದು—"ಗಮನಾಯ ಮತಿಂ ಕೃತ್ವಾ" ಎಂಬ ಮಾತು ಕಣ್ಣಿಗೆ ಬಿದ್ದರೆ ಅವತ್ತು ಪ್ರಯಾಣಕ್ಕೆ ಒಳ್ಳೆಯ ದಿನ ಎಂದುಕೊಂಡು ಹೊರಡುವುದು. ಕ್ರೈಸ್ತರಲ್ಲಿ ಕೆಲವರು ಬೈಬಲನ್ನೂ ಹೀಗೆ ಉಪಯೋಗಿಸುತ್ತಾರೆಂದು ಕೇಳಿದ್ದೇನೆ. ಸ್ಕಿನರ್ ಅವರಲ್ಲಿ ಇಂಥ ಅಂಧ ವಿಶ್ವಾಸವೇನೂ ಇಲ್ಲ; ಆದರೆ ಬೈಬಲ್ ಬೋಧಿಸುವ ನೀತಿ (ಉದಾ : ದೇವರು ಮೋಶೆಗೆ (Moses) ಕೊಟ್ಟ ದಶಾಜ್ಞೆಗಳು), ಅದು ಕೆರಳಿಸುವ ದೈವಶ್ರದ್ಧೆ, ಅದರಲ್ಲಿ ಕಾಣುವ ಜೀವನಾದರ್ಶ, ಇದನ್ನೆಲ್ಲ ಅವರು ಮೆಚ್ಚುತ್ತಾರೆ. "ಈಗ ನಾವೆಲ್ಲ ಕೆಟ್ಟಿರುವುದು ಬೈಬಲನ್ನು ಮರೆತಿರುವುದರಿಂದ. ಇಂದಿನ ಪ್ರಪಂಚದ ರೋಗಕ್ಕೆ ಬೈಬಲ್ ಸಿದ್ಧೌಷಧ" ಎಂದರು. ಕೂಡಲೇ ನನಗೆ ಅಸಮಾಧಾನವಾದೀತೆಂಬ ಶಂಕೆಯಿಂದ "ನಿಮ್ಮ ಅಥವಾ ಇತರರ ಮತವನ್ನು ಕಡೆಗಣಿಸುತ್ತಿದ್ದೇನೆಂದು ಭಾವಿಸಬೇಡಿ. ನನಗೆ ನಿಮ್ಮ ಮತದ ಹೆಸರು ಬಿಟ್ಟರೆ ಮತ್ತೇನೂ ಗೊತ್ತಿಲ್ಲ. ನನ್ನ ಮತ ನನಗೆ ಸ್ವಲ್ಪ ತಿಳಿದದ್ದಾ

ದ್ದರಿಂದ ಅದರ ಮಾತಾಡಿವೆ, ಅಷ್ಟೆ," ಎಂದರು. ಇತರರ ಮನಸ್ಸನ್ನು ನೋಯಿಸಬಾರದೆಂಬ ಪ್ರವೃತ್ತಿಯನ್ನು ನಾನು ಮೆಚ್ಚಿಕೊಂಡೆ.

ಕೆಲವು ದಿನಗಳ ಹಿಂದೆ ಬ್ರೆಜ್‌ನೆವ್ ಅಮೆರಿಕಕ್ಕೆ ಭೇಟಿ ಕೊಟ್ಟಿದ್ದರು. ಆದ್ದರಿಂದ ಸ್ವಾಭಾವಿಕವಾಗಿಯೇ ರಷ್ಯದಲ್ಲಿ ಯೆಹೂದ್ಯರು ಅನುಭವಿಸುತ್ತಿರುವ ಕಷ್ಟಗಳ ಮಾತು ಬಂತು. ಅಮೆರಿಕದಲ್ಲೂ ಯೆಹೂದ್ಯರ ವಿಷಯದಲ್ಲಿ ಸಹಾನುಭೂತಿ ಸಾಲದು ಎಂಬ ಅಭಿಪ್ರಾಯವೂ ಬಂತು. ಇಸ್ರಯೆಲ್‌ನ ಮಾತಂತೂ ಬರದಿರುವುದು ಅಸಾಧ್ಯವಷ್ಟೆ. ಭಾರತೀಯರಿಗೆ ಇಸ್ರಯೇಲ್ ವಿಷಯದಲ್ಲಿ ಸಾಕಾದಷ್ಟು ಸಹಾನುಭೂತಿ ಇಲ್ಲವೆಂದು ಅವರು ಅಂದುಕೊಂಡಿರಬಹುದು. ಅದರ ಮಾತನ್ನೆತ್ತಲಿಲ್ಲ; ಸಂದಿಗ್ಧವಾಗಿ ಲೋಕಸಾಮಾನ್ಯವಾದ ಮಾತಾಡಿದಂತೆ "ಈ ಹಾಳು ರಾಜಕೀಯ ಬಹಳ ಜಟಿಲ! ಎಂಥೆಂಥ ಜನರ ಸಹವಾಸವನ್ನೋ ಸಹಿಸಬೇಕಾಗುತ್ತೆ" ಎಂದರು. ಅವರ ಒಲವು ಎತ್ತ ಕಡೆಗೆ ಎನ್ನುವುದು ಸ್ಪಷ್ಟವಾಗಿಯೇ ಇತ್ತು.

"ನಾವು ಬಹಳ ಕಷ್ಟಪಟ್ಟ ಜನ; ಈಗಲೂ ಕಷ್ಟಪಡುತ್ತಿದ್ದೇವೆ. ಯೆಹೂದ್ಯರ ಚರಿತ್ರೆಯ ವಿಷಯ ನೀವು ಓದಿರಬಹುದು" ಎಂದರು.

"ಸ್ವಲ್ಪ ಮಟ್ಟಿಗೆ ಓದಿದ್ದೇನೆ. ಯೂರೋಪಿನಲ್ಲಿ ಬಹು ಹಿಂದಿನಿಂದಲೂ ಯೆಹೂದ್ಯರು ಎಂಥ ಪಾಡು ಪಟ್ಟರೆಂದು ಬಲ್ಲೆ. ಅದಕ್ಕೆ ಕಾರಣವೇನು ಎಂಬುದು ಸರಿಯಾಗಿ ಅರ್ಥವಾಗಿಲ್ಲ. ಅವರು ಯೇಸುವನ್ನು ಶಿಲುಬೆಗೆ ಹಾಕಿಸಿದರು ಎಂಬ ಭಾವನೆಯೆ?"

"ಯೇಸುವನ್ನು ಶಿಲುಬೆಗೆ ಹಾಕಿಸಿದವರು ನಾವಲ್ಲ!"

"ಅದಕ್ಕೇ ನಾನು ಭಾವನೆ ಎಂಬ ಪದವನ್ನು ಉಪಯೋಗಿಸಿದ್ದು. ಶಿಲುಬೆಗೆ ಹಾಕಿಸಿದ್ದರ ಜವಾಬ್ದಾರಿ ರೋಮನ್ನರ ಮೇಲೆ ಬರಬೇಕಲ್ಲವೆ? ಪಿಲಾತ (Pontius Pilate) ಯೇಸುವನ್ನು ಕೊಲೆಗಾರರಿಗೆ ಒಪ್ಪಿಸಿದ ಮೇಲೆ ನೀರು ತರಿಸಿ ಕೈತೊಳೆದುಕೊಂಡ ಮಾತ್ರಕ್ಕೆ ಅವನಾಗಲಿ ರೋಮನ್ನರಾಗಲಿ ಪಾಪದಿಂದ ಮುಕ್ತರಾಗಲಿಲ್ಲ."

"ನಿಜ, ಆದರೂ ನೋಡಿ, ಯೂರೋಪಿನವರೆಲ್ಲ ರೋಮನ್ ನಾಗರಿಕತೆಯನ್ನು ಮೆಚ್ಚುತ್ತಾರೆ. ಅವರು ದ್ವೇಷಿಸುವುದು ಅಪರಾಧಿಗಳನ್ನಲ್ಲ ನಮ್ಮನ್ನು!"

"ಯೂರೋಪಿಯನ್ನರು ರೋಮನ್ ನಾಗರಿಕತೆಯನ್ನು ಮೆಚ್ಚುವುದಕ್ಕೇನೋ ಕಾರಣ ಹೇಳಬಹುದು; ಇತರ ಕಾರಣಗಳ ಜೊತೆಗೆ ಮತೀಯ ಕಾರಣವನ್ನು ಕೂಡ ಹೇಳಬಹುದು. ರೋಮ್ ಮೊದಮೊದಲು ಕ್ರೈಸ್ತರಿಗೆ ಚಿತ್ರಹಿಂಸೆ ಕೊಟ್ಟು ಅವರನ್ನು ಕೊಂದು, ಎಲ್ಲ ಮಾಡಿದರೂ ಆಮೇಲೆ ಅದು

ಕ್ರೈಸ್ತರ ಕೇಂದ್ರವಾಯಿತಷ್ಟೆ. ಕ್ರೈಸ್ತಮತ ಕವಲೊಡೆದು ಪ್ರಾಟೆಸ್ಟೆಂಟ್ ಶಾಖೆ ಹುಟ್ಟುವವರೆಗೆ ಎಲ್ಲ ಕ್ರೈಸ್ತರಿಗೂ ರೋಮ್ ಹೆಚ್ಚುಕಡಿಮೆ 'ಹೋಲಿ ಲ್ಯಾಂಡ್' ನಷ್ಟೇ ಪವಿತ್ರವಾಯಿತು, Eternal Cityಯ ಪಟ್ಟವನ್ನು ಗಳಿಸಿತು. ರೋಮನ್ ನಾಗರಿಕತೆ ಕೂಡ—ಅದರ ದೋಷಗಳನ್ನು ಮರೆಯದಿದ್ದರೂ—ಹೊಗಳಿಕೊಳ್ಳಬಹುದಾದದ್ದು. The glory that was Greece and the grandeur that was Rome (ಗ್ರೀಸ್ ಎಂಬ ದಿವ್ಯಪ್ರಭೆ, ರೋಮ್ ಎಂಬ ವೈಭವ) ಎಂಬ ಮಾತು ನಿಮಗೆ ಪರಿಚಯವಾದದ್ದೇ ಇರಬೇಕು. ನನಗೆ ಗ್ರೀಸ್ ಕಡೆಗೇ ಒಲವು ಹೆಚ್ಚು. ಆದರೆ ರೋಮ್‌ನಲ್ಲಿ ವೈಭವ ಇತ್ತೆಂದು ಒಪ್ಪಬೇಕು. ಕ್ರಿಸ್ತಪೂರ್ವದ ವೈಭವದ ಜೊತೆಗೆ ಆಮೇಲೆ ಇಟಲಿ ದೇಶಕ್ಕೆ ದಿವ್ಯಪ್ರಭೆಯೂ ಬಂತಲ್ಲ–ದಾಂತೆ, ಮೈಕಲೇಂಜಲೊ ಲಿಯನಾರ್ಡೊ ಡ ವಿಂಚಿ...."

"ಹೌದು. ಆ ಪ್ರಭೆಯ ಹಿಂದಿದ್ದ ದಿವ್ಯಪ್ರೇರಕ ಶಕ್ತಿ ಕ್ರೈಸ್ತಮತದ್ದು. ಒಪ್ಪಲೇಬೇಕು."

"ಕ್ರೈಸ್ತ ಮತದ ವಿಷಯದಲ್ಲಿ ಬಹಳ ಒಳ್ಳೆಯ ಮಾತಾಡಿದಿರಿ. ನಿಮ್ಮದು ಉದಾರಹೃದಯ."

"ವಂದನೆ."

"ಆದರೆ 'ಆ ಪ್ರೇರಕ ಶಕ್ತಿಯಲ್ಲಿ ಒಂದು ಭಾಗ ನನ್ನದು' ಎಂದು ಯೆಹೂದ್ಯರೂ ಹೇಳಬಹುದಲ್ಲವೆ? The Last Supper (ದಿ ಲಾಸ್ಟ್ ಸಪರ್—ಕೊನೆಯ ಊಟ—ಇದು ಲಿಯನಾರ್ಡೊ ಡ ವಿಂಚಿ ರಚಿಸಿದ ಜಗತ್ಪ್ರಸಿದ್ಧವಾದ ಚಿತ್ರ) 'ಮೋಸಿಸ್'ನಂಥ ಕೃತಿಗಳೂ ಇವೆಯಲ್ಲ? ಅವಕ್ಕೆ ಪ್ರೇರಣೆ ಬಂದದ್ದು ಹಳೆಯ ಒಡಂಬಡಿಕೆ (The Old Testament) ಯಿಂದ ತಾನೆ?"

"ನೀವು ರೋಮ್‌ಗೆ ಹೋಗಿದ್ದೀರಾ? ನಾನು ಹೋಗಿಯೇ ಇಲ್ಲ."

"ನಾನೂ ಹೋಗಿಲ್ಲ. ಆ ಕೃತಿಗಳ ಫೋಟೋ ನೋಡಿದ್ದೇನೆ, ಅಷ್ಟೆ. ಮೋಸೆಯ ಚಿತ್ರವನ್ನು ನೋಡಿದಾಗ ನನಗೊಂದು ವಿಚಿತ್ರ ಅನುಭವವಾಯಿತು! ಅದು ನಮ್ಮ ಬೃಹತ್ಕೃತಿಯಾದ ಮಹಾಭಾರತವನ್ನು ಬರೆದ—ಅಥವಾ ಬರೆದನೆಂದು ನಂಬಲಾದ ವ್ಯಾಸರನ್ನು ನೆನಪಿಗೆ ತಂದಿತು."*

---

* ಈ ಅನುಭವ ನನಗೆ ಆದಂತೆ ತೀ. ನಂ. ಶ್ರೀಕಂಠಯ್ಯನವರಿಗೂ ಆಗಿತ್ತು. ನಾವಿಬ್ಬರೂ ಈ ವಿಷಯವನ್ನು ಚರ್ಚಿಸಿದ ನೆನಪಿದೆ.

"ಸ್ವಲ್ಪ ವಿವರಣೆ ಬೇಕಾಗುತ್ತದೆ."

"ಕೊಡುವುದರಲ್ಲಿದ್ದೆ. ಮೋಶೆ, ವ್ಯಾಸ, ಇಬ್ಬರಿಗೂ ತಮ್ಮ ದೇಶದ ಮತ್ತು ಮತಧರ್ಮಗಳ ವಿಷಯದಲ್ಲಿ ಅಮಿತವಾದ ಪ್ರೇಮವಿತ್ತು. ಇಬ್ಬರೂ ಮಹೋನ್ನತರು, 'ದೇವರು ದಶಾಜ್ಞೆಗಳನ್ನು ಮೋಶೆಗೆ ಕೊಟ್ಟ. ಆತ ಅದನ್ನು ಯೆಹೂದ್ಯರಿಗೆ ಕೊಟ್ಟರು' ಎಂದು ನೀವು ನಂಬುತ್ತೀರಲ್ಲ, ಅದನ್ನು ಯೆಹೂದ್ಯರಲ್ಲದ ನಾವು ಬೇರೆ ರೀತಿಯಲ್ಲಿ ಅರ್ಥಮಾಡಿಕೊಳ್ಳುತ್ತೇವೆ—ಆತನಲ್ಲಿದ್ದ ದೈವೀಶಕ್ತಿ ಆ ಆಜ್ಞೆಗಳನ್ನು ಹೊರಡಿಸಿತು ಎಂದು. ಆದ್ದರಿಂದ ನಮ್ಮ ದೃಷ್ಟಿಯಲ್ಲಿ ಮೋಶೆಯ ಘನತೆ ಹೆಚ್ಚುತ್ತದೆ. ನಮ್ಮಲ್ಲಿ ವ್ಯಾಸರು ವೇದಗಳನ್ನು ವಿಂಗಡಿಸಿದರು ಎಂಬ ನಂಬಿಕೆಯಿದೆ. ಆದರೆ ನನ್ನ ಮನಸ್ಸಿಗೆ ಬಂದ ಸಾಮ್ಯ ಇದೊಂದೂ ಅಲ್ಲ. ಇಬ್ಬರಿಗೂ ತಮ್ಮ ಜನರ ವಿಷಯದಲ್ಲಿ ಪ್ರೇಮದ ಜೊತೆಗೆ ಅಸಮಾಧಾನವೂ ಇತ್ತು—ಅದನ್ನು ರೋಷ ಎಂದೇ ಕರೆಯಬಹುದೇನೊ. ಯೇಸು Oh faithless and perverse generation ! How long shall I be with you ! (ಅಯ್ಯೋ, ಈ ವಿಶ್ವಾಸರಹಿತ ಜನ! ಎಷ್ಟು ಹೇಳಿದರೂ ಕೇಳದ ಜನ! ನಾನು ಇವರೊಡನೆ ಇನ್ನೆಷ್ಟು ದಿನ ಇರಲಿ) ಎಂದಾಗ ಆತನ ಮನಸ್ಸಿನಲ್ಲೂ ಇಂಥದೇ ಭಾವವಿದ್ದಿರಬೇಕು. ನಮ್ಮ ವ್ಯಾಸ 'ಎರಡು ತೋಳುಗಳನ್ನೂ ಆಕಾಶಕ್ಕೆತ್ತಿ ಕೂಗುತ್ತಿದ್ದೇನೆ: ಧರ್ಮದಿಂದಲೇ ಅರ್ಥ, ಧರ್ಮದಿಂದಲೇ ಕಾಮ ಎಂದು; ಅನುಸರಿಸುವವರು ಗತಿಯಿಲ್ಲ' ಎಂದು ತಮ್ಮ ನಿರಾಶೆಯನ್ನೂ ಜುಗುಪ್ಸೆಯನ್ನೂ ಹೊರಗೆಡವಿದರು. ಮೈಕಲೇಂಜಲೋವಿನ 'ಮೋಶೆ'ಯ ಮುಖದಲ್ಲಿ ಇದೇ ಜುಗುಪ್ಸೆ, ನಿರಾಶೆ, sternness, ಕಾಣುತ್ತದೆ."

"ಮೋಶೆಯ ಮನಸ್ಸಿನಲ್ಲಿ ಆ ಭಾವ ಇತ್ತೆಂದು ಬೈಬಲ್‌ನಿಂದ ಸ್ಪಷ್ಟವಾಗುತ್ತದೆ. ಆ ಮಟ್ಟದಲ್ಲಿರುವವರಲ್ಲೂ ಜನಸಾಮಾನ್ಯದ ವಿಷಯದಲ್ಲಿ ಅಸಹನೆ, ಜುಗುಪ್ಸೆ, ನಿರಾಶೆ, ಕೋಪ, ಇವೆಲ್ಲ ಕೆರಳಿದರೆ ಆಶ್ಚರ್ಯವಲ್ಲ. ಅದು ನಮ್ಮ ಕೊನೆ ಮೊದಲಿಲ್ಲದ ದೌರ್ಬಲ್ಯ, ಹುಚ್ಚುತನ, ಪಾಶವೀವೃತ್ತಿ, ಇವೆಲ್ಲದರ ಪ್ರಭಾವ. ತಮ್ಮ ರೋಷವನ್ನು ತಡೆಹಿಡಿದು ಲೋಕೋಪಕಾರ ಮಾಡಿದ್ದು ಅವರ ದೊಡ್ಡತನ."

"ನಿಜ. ಮೋಶೆ ಸ್ವತಃ ಸುಖಪಡಲಿಲ್ಲ. ತನ್ನ ಜನರನ್ನು promised land (ದೇವರು ಯೆಹೂದ್ಯರಿಗೆ ಕರುಣಿಸಿದ ಪ್ರದೇಶ. ಕಾನಾನ್ ಪ್ರಾಂತ) ಕಡೆಗೆ ನಡಸಿದನೇ ಹೊರತು ತಾನು ಆ ಪುಣ್ಯಭೂಮಿಯನ್ನು ನೋಡಲೇ ಇಲ್ಲ! ಇದು ಅರ್ಥಪೂರ್ಣವಾದದ್ದು."

ಸ್ಕಿನರ್ ಸಂಭಾಷಣೆಯನ್ನು ಮತ್ತೆ ಯೆಹೂದ್ಯರ ಕಷ್ಟಸುಖಗಳ ಕಡೆಗೆ ಎಳೆದರು :

"ಯೂರೋಪಿನವರು ರೋಮ್‌ನ grandeur ಅನ್ನು ಜೀರ್ಣಿಸಿಕೊಂಡಂತೆ ರೋಮ್‌ನ ಕ್ರೌರ್ಯವನ್ನೂ ಅರೆದು ಹೊಯ್ದುಕೊಂಡರು. ರೋಮ್‌ನವರು ಕ್ರೈಸ್ತರಿಗೆ ಮಾಡಿದ ಅನ್ಯಾಯಕ್ಕಿಂತ ಹತ್ತು ಪಾಲು ಹೆಚ್ಚು ಅನ್ಯಾಯವನ್ನು ಅವರು ಯೆಹೂದ್ಯರಿಗೆ ಮಾಡಿದರು. ಯೆಹೂದ್ಯರು ಮನುಷ್ಯರೇ ಅಲ್ಲ ಎಂಬಂತೆ ನಡೆದುಕೊಂಡರು."

"ಅಪರೂಪಕ್ಕೆ (rarely) ಒಂದೊಂದು ಸಾರಿ ಬೇರೆ ದನಿ—Hath not a jew eyes...if you prick us do we not bleed? (ಯೆಹೂದ್ಯನಿಗೆ ಕಣ್ಣಿಲ್ಲವೆ....ನೀವು ನಮ್ಮನ್ನು ಚುಚ್ಚಿದರೆ ರಕ್ತ ಬರುವುದಿಲ್ಲವೆ? ಇದು ಷೇಕ್ಸ್‌ಪಿಯರ್‌ನ 'ವೆನಿಸ್ ನಗರದ ವರ್ತಕ' ಎಂಬ ನಾಟಕದಲ್ಲಿ ಬರುವ ಮಾತು) ಇಂಥ ಮಾನವೀಯತೆಯ ದನಿ, ಕೇಳಿಬರುತ್ತದೆ. 'ಅಪರೂಪಕ್ಕೆ' ಎಂಬ ಮಾತನ್ನು ಒತ್ತಿ ಹೇಳುತ್ತೇನೆ."

"ನಾನು ದಿ ಮರ್ಚೆಂಟ್ ಅಫ್ ವೆನಿಸ್ ನಾಟಕವನ್ನು ಓದಿದ್ದೇನೆ. ಷೇಕ್ಸ್‌ಪಿಯರ್‌ಗೆ ಯೆಹೂದ್ಯರ ವಿಷಯದಲ್ಲಿ ಹೆಚ್ಚು ಸಹಾನುಭೂತಿ ಇತ್ತೆಂದು ಹೇಳಲಾರೆ."

"ಒಪ್ಪಿದೆ, ಆದರೆ ಅಂದಿನ ವಾತಾವರಣದಲ್ಲಿ ಅವನು ಷೈಲಾಕ್‌ನ ಬಾಯಿಂದ ಆ ಮಾತನ್ನಾಡಿಸಿದ್ದೂ ಆಶ್ಚರ್ಯ, ಅದು ಷೈಲಾಕನ ಪಾತ್ರಕ್ಕೆ ಉಚಿತವಾದ ಮಾತು. ಆದರೆ ಅದನ್ನು ಬರೆದ ಘಳಿಗೆಯಲ್ಲಾದರೂ ಷೇಕ್ಸ್‌ಪಿಯರ್‌ನ ಸಹಾನುಭೂತಿ ಷೈಲಾಕನ ಕಡೆಗೇ ಇತ್ತು ಎಂದು ನನಗೆ ತೋರುತ್ತೆ."

"ಇರಬಹುದು, ನಾನು ಆ ನಾಟಕವನ್ನು ಅಷ್ಟೇನೂ ಸೂಕ್ಷ್ಮವಾಗಿ ಪರಿಶೀಲಿಸಿಲ್ಲ....ನಿಮ್ಮನ್ನು ಒಂದು ಪ್ರಶ್ನೆ ಕೇಳೋಣ ಎನ್ನಿಸುತ್ತದೆ. ಆದರೆ ನಿನಗೆ ಅಸಮಾಧಾನವಾದೀತೇನೊ ಎಂಬ ಶಂಕೆ."

"ಧಾರಾಳವಾಗಿ ಕೇಳಿ. ಪ್ರಶ್ನೆ ಏನೇ ಆಗಲಿ, ನಿಮ್ಮ bona fides ನಲ್ಲಿ ನನಗೆ ವಿಶ್ವಾಸವಿದೆ."

"ನನಗೆ ಭಾರತದ ವಿಷಯ ಏನೇನೂ ಗೊತ್ತಿಲ್ಲ, ಷೇಕ್ಸ್‌ಪಿಯರ್ ನಾಟಕವೇನೋ ಪ್ರಸಿದ್ಧವಾದದ್ದು. ಕಾಲೇಜಿನಲ್ಲಿ ಓದಿರಬೇಕು ಎಂದುಕೊಂಡೆ. ಬೈಬಲ್ ವಿಷಯ ಕೂಡ ನೀವು ಧಾರಾಳವಾಗಿ ಮಾತಾಡಿದಿರಿ. ಇವೆಲ್ಲದರ ಪರಿಚಯ ಹೇಗಾಯಿತು? 'ಭಾರತೀಯರೆಲ್ಲ ಅಜ್ಞರು, ಅವರಲ್ಲಿ

ತಿಳಿವಳಿಕೆ ಕಂಡುಬಂದರೆ ಆಶ್ಚರ್ಯ' ಎಂಬ ಭಾವನೆಯಿಂದ ಬಂದದ್ದಲ್ಲ, ನನ್ನ ಪ್ರಶ್ನೆ."

"ನಿಮ್ಮ ವಿಷಯದಲ್ಲಿ ಆ ಮಾತನ್ನು ನಂಬುತ್ತೇನೆ. ಆದರೆ ಪಾಶ್ಚಾತ್ಯ ರನೇಕರು ಭಾರತೀಯರ ವಿಷಯದಲ್ಲಿ ನೀವು ಹೇಳಿದಂತೆ ಭಾವಿಸುವುದುಂಟು. ವಾಸ್ತವವಾಗಿ ನೋಡಿದರೆ ಈ ಭಾವನೆ ವಿಚಿತ್ರ. ನನಗೆ ಇಂಗ್ಲಿಷ್ ಬರುವುದಿಲ್ಲ ಎಂದಿಟ್ಟುಕೊಳ್ಳಿ, ಷೇಕ್ಸ್‌ಪಿಯರನ ಮತ್ತು ಬೈಬಲಿನ ಪರಿಚಯ ನನಗಿಲ್ಲ ಎಂದಿಟ್ಟುಕೊಳ್ಳಿ. ನನ್ನಲ್ಲಿ ಅದೊಂದು ಕೊರತೆ, ಮಾನವರೆಲ್ಲ ಪೂರ್ಣಪ್ರಜ್ಞ ರಾಗಬೇಕು ಎಂಬ ಆದರ್ಶದ ದೃಷ್ಟಿಯಿಂದ. ಆದರೆ ಅದನ್ನು ವಿಶೇಷವಾದ ದೋಷ ಎಂದೇಕೆ ಭಾವಿಸಬೇಕು ? ಇಂಗ್ಲಿಷರಿಗೆ ಕನ್ನಡ ಬರುವುದಿಲ್ಲ ; ಅವರು ನಮ್ಮ ದೊಡ್ಡ ಕವಿಯಾದ ಕಾಳಿದಾಸನನ್ನು ಓದಿಲ್ಲ ; ವೇದಾಧ್ಯಯನ ಮಾಡಿಲ್ಲ. ಈ ಕಾರಣಕ್ಕಾಗಿ ಅವರನ್ನು ನಿಕೃಷ್ಟರು ಎನ್ನಬಹುದೆ ? ಪಾಶ್ಚಾತ್ಯರ ಮನಸ್ಸಿನಲ್ಲಿ 'ನಮ್ಮ ನಾಗರಿಕತೆ ದೊಡ್ಡದು, ಅದನ್ನು ತಿಳಿಯ ದವನು ಕೀಳು. ಇತರರ ನಾಗರಿಕತೆ....ಅದನ್ನು ತಿಳಿದುಕೊಳ್ಳದಿದ್ದರೆ ನಷ್ಟ ವೇನಿಲ್ಲ' ಎಂಬ ಭಾವನೆ ಅನೇಕ ವೇಳೆ ಕಾಣುತ್ತದೆ. ಇದು ಜನಸಾಮಾನ್ಯದ ಮಾತು. ವಿದೇಶೀಯ ಸಂಸ್ಕೃತಿಯ ಅಧ್ಯಯನಕ್ಕಾಗಿ ಜೀವನವನ್ನು ಮುಡುಪಾಗಿಟ್ಟ ನೂರಾರು ಜನ ಪಾಶ್ಚಾತ್ಯರಿದ್ದಾರೆಂಬುದನ್ನು ನಾನು ಮರೆತಿಲ್ಲ."

"ನೀವು ಹೇಳಿದ್ದು ನಿಜ. ಇತರರ ಸಂಸ್ಕೃತಿಯನ್ನು ತಿಳಿಯುವುದು ಹಾಗಿರಲಿ, ಎಷ್ಟೋ ವೇಳೆ ನಮ್ಮದನ್ನೇ ನಾವು ತಿಳಿದಿರುವುದಿಲ್ಲ."

"ನಿಮ್ಮ ಮಾತಿಗೆ ಸಾಕ್ಷಿಯಾಗಿ ನನ್ನ ಆಪ್ತಮಿತ್ರರೊಬ್ಬರ ಅನುಭವ ಒಂದನ್ನು ಹೇಳುತ್ತೇನೆ. ಅವರು ಇಂಗ್ಲೆಂಡಿನಲ್ಲಿದ್ದಾಗ ಒಂದು ಸಲ ಕಾಲು ನಡಗೆಯ ಪ್ರವಾಸ ಹೊರಟರು. ಅವರ ಜೊತೆಗೆ ಒಬ್ಬ ಆಂಗ್ಲನಿದ್ದ—ಸ್ನೇಹಿತ ಅಲ್ಲ, ಅಕಸ್ಮಾತ್ ಪರಿಚಯವಾದವನು. ದಾರಿಯಲ್ಲಿ 'ನೆದರ್‌ಸ್ಟೋಯಿ' ಎಂಬ ಬೋರ್ಡು ಕಾಣಿಸಿತು. ಆಗ ನನ್ನ ಮಿತ್ರ ಆಚಾರ್ಯರು 'ಕೋಲ್ ರಿಜ್‌ನ ನೆನಪು ತರುತ್ತದೆ' ಎಂದರು. ಆಂಗ್ಲ 'ಆತ ಯಾರು?' ಎಂದು ಕೇಳಿದ."

"ಅದೂ ಆಶ್ಚರ್ಯವಲ್ಲ, ಅಸ್ವಾಭಾವಿಕವೂ ಅಲ್ಲ."

"ಸರ್ವಥಾ ನಿಜ, ನಾನಾಗಲಿ ನನ್ನ ಮಿತ್ರರಾಗಲಿ ಈ ವಿಷಯಗಳನ್ನು ತಿಳಿದಿದ್ದೇವೆಂದು ಹೊಗಳಿಕೊಳ್ಳಬೇಕಾಗಿಲ್ಲ. ಅದಕ್ಕೆ ಐತಿಹಾಸಿಕ ಕಾರಣ ಗಳಿವೆ. ನನ್ನ ಮಟ್ಟಿಗೆ ಹೇಳುವುದಾದರೆ, ನಾನು ಷೇಕ್ಸ್‌ಪಿಯರ್ ಓದಿರು ವುದರಲ್ಲಿ ಏನೇನೂ ವಿಶೇಷವಿಲ್ಲ. ಅದು ನನ್ನ ವೃತ್ತಿ, ನಾನು ಮೈಸೂರಿನ ವಿಶ್ವ

ವಿದ್ಯಾಲಯದಲ್ಲಿ ಅಧ್ಯಾಪಕನಾಗಿದ್ದೆ, ಇಂಗ್ಲಿಷ್ ಪಾಠ ಹೇಳುತ್ತಿದ್ದೆ. ಇಂಗ್ಲಿಷ್ ಸಾಹಿತ್ಯವನ್ನು ಓದುವುದರಲ್ಲಿ ಆನಂದ ಪಡೆದಿದ್ದೇನೆ. ಆದರೆ ಅದನ್ನು ಓದದೆ ವಿಧಿಯಿರಲಿಲ್ಲ ಎಂಬುದೂ ನಿಜ. ನಾನು ವೆಸ್ಲಿಯನ್ ಮಿಷನ್ ಸ್ಕೂಲಿನಲ್ಲಿ ಓದಿದವನು. ಅಲ್ಲಿ ಎಲ್ಲ ತರಗತಿಗಳಲ್ಲೂ ಬೈಬಲ್ ಪಠ್ಯ ವಿಷಯ, ಅದನ್ನೂ ಓದಲೇಬೇಕಾಯಿತು."

"ಇಂಡಿಯದಲ್ಲಿ ಇಂಥವರು ವಿರಳ ಎನ್ನಬಹುದಲ್ಲವೆ?"

"ಇಲ್ಲ. ವಿಶ್ವವಿದ್ಯಾಲಯಗಳಲ್ಲಿ ಬೇಕಾದಷ್ಟು ಜನ ಇದ್ದಾರೆ. ಮಾತ್ರವಲ್ಲ, ವಿಶ್ವವಿದ್ಯಾಲಯಗಳ ಹೊರಗೂ ಕೇವಲ ಸಂತೋಷಕ್ಕಾಗಿ ಇಂಗ್ಲಿಷ್ ಸಾಹಿತ್ಯವನ್ನು ಓದಿ ಚಾಲತಿಯಲ್ಲಿಟ್ಟುಕೊಂಡಿರುವವರು ಅನೇಕರಿದ್ದಾರೆ. ನಮ್ಮ ಶಾಲೆಗಳಲ್ಲಿ ಇಂಗ್ಲಿಷೇ ಮಾಧ್ಯಮವಾಗಿತ್ತು, ನೋಡಿ! ಆ ಸ್ಥಿತಿ ಈಗಲೂ ಪೂರ್ತಿ ಬದಲಾಯಿಸಿಲ್ಲ. ತಮ್ಮ ಅಣ್ಣತಮ್ಮಂದಿರಿಗೆ ಕಾಗದ ಬರೆಯುವಾಗಲೂ ಎಷ್ಟೋ ಜನ ಇಂದಿಗೂ ಇಂಗ್ಲಿಷನ್ನು ಬಳಸುತಾರೆ. ಇಂಥ ಅಪರಾಧಿಗಳಲ್ಲಿ ನಾನೂ ಒಬ್ಬ. ಈಚೆಗೆ ನಮ್ಮ ಕೆಲಸಕಾರ್ಯಗಳಿಗೆಲ್ಲ ನಮ್ಮ ದೇಶದ ಭಾಷೆಯನ್ನೇ ಬಳಸಬೇಕೆಂಬ ಆಗ್ರಹ ಬಲವಾಗಿದೆ. ಹಾಗೆ ಆಗ್ರಹ ಮಾಡುವವರಲ್ಲಿ ನಾನೂ ಒಬ್ಬ."

ಸ್ಕಿನರ್ ನಕ್ಕು ಹೇಳಿದರು : "ಇದೇನು! ಅಪರಾಧ ಮಾಡುವವರಲ್ಲಿ ನಾನೂ ಒಬ್ಬ ಎಂದಿರಿ ; ಈಗ ಅದಕ್ಕೆ ವಿರುದ್ಧವಾಗಿ ಮಾತಾಡುತ್ತಿದ್ದೀರಲ್ಲ ?"

"ಡೊಂಕು ಬಾಲ! ಈ ಕ್ಷಣ ಸರಿಪಡಿಸಿಕೊಂಡರೆ ಮುಂದಿನ ಕ್ಷಣ ಮತ್ತೆ ಡೊಂಕಾಗುತ್ತದೆ."

"ಅದಕ್ಕಾಗಿ ಅಷ್ಟೇನೂ ಪರಿತಪಿಸಬೇಕಾಗಿಲ್ಲ, ಬಿಡಿ! ಎಷ್ಟೇ ಆಗಲಿ, ಇಂಗ್ಲಿಷ್ ವಿಶ್ವಭಾಷೆಯಾಗುತ್ತಿದೆ. ಅದರಲ್ಲಿ ಅಪಾರವಾದ ಸಾಹಿತ್ಯವಿದೆ. ಅದರ ಶಬ್ದಭಂಡಾರ ದಿನದಿನಕ್ಕೂ ಹೆಚ್ಚುತ್ತಿದೆ. ನಿಮಗೆ ಅಕಸ್ಮಾತ್ ದೊರೆತಿರುವ ಸೌಕರ್ಯವನ್ನು ಏತಕ್ಕೆ ಬಿಟ್ಟುಕೊಡಬೇಕು ? ಈಗ ನಾನು ಹೀಬ್ರ್ಯೂ ಮಾತಾಡುತ್ತೇನೆಯೆ? ಎಲ್ಲ ಕೆಲಸಕ್ಕೂ ಇಂಗ್ಲಿಷನ್ನೇ ಉಪಯೋಗಿಸುತ್ತೇನೆ. ನಾನಿರುವುದು ಅಮೆರಿಕದಲ್ಲಿ. ನನ್ನ ಜೀವನ ನಡೆಯುತ್ತಿರುವುದು ಅಮೆರಿಕದವರ ಸಹಕಾರದಿಂದ. ಇಂಗ್ಲಿಷನ್ನೇ ಬಳಸಬೇಕಾದದ್ದು ನನ್ನ ಕರ್ತವ್ಯ ಎನ್ನಬಹುದು."

"ನ್ಯಾಯವೇ. ನಾವು ನಮ್ಮ ಕನ್ನಡ ಭಾಷೆಗಾಗಿ ಪ್ರಚಾರಮಾಡುವಾಗ ಹೀಗೆಯೇ ವಾದಿಸುತ್ತೇವೆ. ನಾವು ಯಾವ ಜನದ ಮಧ್ಯೆ ಬದುಕುತ್ತಿದ್ದೇವೆಯೋ ಅವರ ಭಾಷೆಯನ್ನು ಕಲಿತು ಅವರೊಡನೆ ಅದರಲ್ಲಿ ವ್ಯವಹಾರ

ಮಾಡುವುದು ಕರ್ತವ್ಯ. ನಮ್ಮಲ್ಲಿ ಈಗ ಕನ್ನಡ ಸಾಹಿತ್ಯ ನಿರ್ಮಾಣ ಮಾಡುತ್ತಿರುವವರಲ್ಲಿ ಎಷ್ಟೋ ಜನರ ಮಾತೃಭಾಷೆ ಕನ್ನಡವಲ್ಲ, ಅದನ್ನು ಅವರು ತಮ್ಮ ಭಾಷೆಯಾಗಿ ಮಾಡಿಕೊಂಡಿದ್ದಾರೆ.

ಇಂಗ್ಲಿಷ್ ವಿಷಯದಲ್ಲಿ ನೀವು ಹೇಳಿದ್ದನ್ನೂ ಮನಸಾರ ಒಪ್ಪುತ್ತೇನೆ. ಯಾವ ವಿಷಯದಲ್ಲಾಗಲಿ ಅತಿರೇಕದ ಶ್ರದ್ಧೆ ನನಗೆ ಹಿಡಿಸುವುದಿಲ್ಲ. ಆದರೆ ನಾವು ಇಂಗ್ಲಿಷಿನ ಮೇಲೆ ಯುದ್ಧ ಹೂಡಬೇಕಾದ ಕಾಲವೊಂದಿತ್ತು—ಅದು ನಮ್ಮನ್ನು ಮುಳುಗಿಸುವಂತಿತ್ತು, ಆಗ ವೀರಾಭಿಮಾನ (fanaticism) ಅವಶ್ಯಕವಾಗಿತ್ತು. ಇಂಗ್ಲಿಷ್ ಸರ್ವವ್ಯಾಪಿಯಾಗುತ್ತಿತ್ತು, ನೋಡಿ."

"ಸರ್ವವ್ಯಾಪಿ ಎಂದಿರಲ್ಲ, ಹತ್ತು ಸಲ ಹೇಳಿ ಆ ಮಾತನ್ನ. ಈ ಇಂಗ್ಲಿಷ್ ಜನ ಕಾಲಿಟ್ಟಕೂಡಲೆ ಹರಡಿಕೊಳ್ಳುತ್ತಾರೆ. ಸುತ್ತ ಇರುವುದನ್ನೆಲ್ಲ ನುಂಗುತ್ತಾರೆ. ನೀವು ವಾಸ್ಪ್ (Wasp) ಎಂಬ ಪದ ಕೇಳಿದ್ದೀರಲ್ಲವೆ?"

"ಹಾರಾಡುವ ಕೀಟ? ಅದು ಎಲ್ಲರಿಗೂ ಪರಿಚಿತವಾದದ್ದು ತಾನೆ."

"ಅಲ್ಲ. ಅಮೆರಿಕದಲ್ಲಿ ಆ ಪದಕ್ಕೆ ವಿಶೇಷಾರ್ಥವಿದೆ. White Anglo-Saxon Protestant ಎಂಬ ಪದಗಳ ಮೊದಲ ಅಕ್ಷರಗಳನ್ನು ಸೇರಿಸಿದರೆ ವಾಸ್ಪ್ (WASP) ಆಗುತ್ತದೆ."

"ಭೇಷ್. ಅರ್ಥಗರ್ಭಿತವಾದ ಮಾತು, ವಾಸ್ಪ್ ಕಚ್ಚಿ ಹೊರಟು ಹೋದ ಮೇಲೂ ಆ ಸ್ಥಳ ಉರಿಯುತ್ತಿರುತ್ತದೆ. ವಾಸ್ಪ್‌ಗಳು ಇಂಡಿಯವನ್ನು ಬಿಟ್ಟು ಹೋಗಿ ಕಾಲು ಶತಮಾನವಾಯಿತು. ಉರಿಯೂ ನವೆಯೂ ಇನ್ನೂ ನಿಂತಿಲ್ಲ! ವಾಸ್ಪ್ ಪದವನ್ನು ಈ ಅರ್ಥದಲ್ಲಿ ಬಳಸುತ್ತಾರೆಂದು ನನಗೆ ಗೊತ್ತಿರಲಿಲ್ಲ." (ಆಮೇಲೆ ನಾನು ಅಮೆರಿಕನ್ ವೆಬ್‌ಸ್ಟರ್ ಡಿಕ್ಷನರಿಯನ್ನು ತೆಗೆದು ನೋಡಿದೆ. ಅದರಲ್ಲಿ ಈ ಅರ್ಥವನ್ನು ಕಾಣಿಸಿದೆ.*)

"ಅಮೆರಿಕದಲ್ಲಿ ಎಲ್ಲ ಅಧಿಕಾರವೂ ಈ ವಾಸ್ಪ್‌ಗಳದ್ದೇ ಆಗಿತ್ತು. ಕಾಲೇಜುಗಳಲ್ಲಿ, ಅದರಲ್ಲೂ ಮೆಡಿಕಲ್ ಎಂಜಿನಿಯರಿಂಗ್ ಮುಂತಾದ ಕಾಲೇಜುಗಳಲ್ಲಿ ಉಳಿದ ಪಂಗಡಗಳವರಿಗೆ ಸೀಟೇ ಸಿಕ್ಕುತ್ತಿರಲಿಲ್ಲ. ಮೆಥಡಿಸ್ಟ್ ಪಂಗಡದವರು ಸ್ಥಾಪಿಸಿದ ಕಾಲೇಜಾದರೆ ಸೀಟುಗಳೆಲ್ಲ ಅವರಿಗೇ ಮೀಸಲು. ಇತರರಿಗೆ ಎಲ್ಲೋ ಒಂದು ಸಣ್ಣ 'ಕ್ವೋಟ'. ಏನಾದರೂ ತಗರುಬುಗರು ಮಾಡಿ ಆ ಕ್ವೋಟವನ್ನೂ ತಾವೇ ದಕ್ಕಿಸಿಕೊಳ್ಳುತ್ತಿದ್ದರು. ಪ್ರಾಟೆಸ್ಟೆಂಟರು ಸ್ಥಾಪಿಸಿದ ಬ್ಯಾಂಕಿನಲ್ಲಿ, ವ್ಯಾಪಾರೀ ಸಂಸ್ಥೆಯಲ್ಲಿ, ಕಾರ್ಖಾನೆಯಲ್ಲಿ ಎಲ್ಲ

---

*ಈಚೆಗೆ Wasp ಪದ—ಈ ಅರ್ಥದಲ್ಲಿ—ನಾಲ್ಕಾರು ಸಲ ಕಿವಿಗೆ ಬಿದ್ದಿದೆ.

ಕೆಲಸಗಳೂ ಅವರಿಗೇ. ಈಚೆಗೆ ಸರ್ಕಾರ ವಿದ್ಯಾಸಂಸ್ಥೆಗಳಿಗೆ ಹೆಚ್ಚು ಗ್ರಾಂಟು ಕೊಡುತ್ತಿದೆಯಾದ್ದರಿಂದ ವಾಸ್ಪುಗಳು ಸರ್ಕಾರೀ ನಿಯಮಗಳಿಗೆ ಹೆಚ್ಚು ಬೆಲೆ ಕೊಡಬೇಕಾಗಿದೆ. ಆದರೂ ಒಟ್ಟಿನಲ್ಲಿ ಅವರ ದರ್ಬಾರು ಈಗಲೂ ನಡೆಯುತ್ತಲೇ ಇದೆ."

ಸ್ಕಿನರ್ ಹೇಳಿದ ಮಾತನ್ನು ಇತರರು ಯೆಹೂದ್ಯರ ವಿಷಯದಲ್ಲಿ ಹೇಳುತ್ತಾರೆ. ನ್ಯೂಯಾರ್ಕ್‌ನಲ್ಲಿ ನನ್ನ ಮಿತ್ರರೊಬ್ಬರು ಯಾವುದೋ ಆಸ್ಪತ್ರೆಯ ಮಾತಾಡುತ್ತಾ 'ಅದರ ಆಡಳಿತವೆಲ್ಲ ಯೆಹೂದ್ಯನ ಕೈಯಲ್ಲಿದೆ' ಎಂದರು. ಹತ್ತಿರದಲ್ಲಿದ್ದ ಅಮೆರಿಕನ್ನರೊಬ್ಬರು (ಅವರು ಯಾವ ಪಂಗಡದವರೋ ಕಾಣೆ, ಯೆಹೂದ್ಯರಲ್ಲವೆಂಬುದೇನೋ ಸ್ಪಷ್ಟ) 'ಆ ಆಸ್ಪತ್ರೆಯೊಂದರ ಮಾತೇಕೆ? ನ್ಯೂಯಾರ್ಕ್‌ನ ಆಡಳಿತವೇ ಅವರ ಕೈಯಲ್ಲಿದೆ!' ಎಂದರು.

ಇಂಥ ಮಾತುಗಳಲ್ಲಿ ಸತ್ಯಾಂಶ ಎಷ್ಟಿದೆಯೋ ಹೇಳುವುದು ಕಷ್ಟ. ಅಂತೂ ಪಶ್ಚಿಮದಲ್ಲೆಲ್ಲ ಬ್ಯಾಂಕಿಂಗ್‌ನಲ್ಲೂ ವ್ಯಾಪಾರೋದ್ಯಮಗಳಲ್ಲೂ ಪ್ರಮುಖರು ಎಂದು ಅವರಿಗೆ ಬಹುಕಾಲದಿಂದ ಪ್ರಸಿದ್ಧಿಯಿದೆ. ವಾಟರ್‌ಲೂ ಯುದ್ಧದ ದಿನ ನೆಪೋಲಿಯನ್ ಗೆಲ್ಲುತ್ತಾನೆಂಬ ನಂಬಿಕೆಯಿಂದಾಗಿ ಷೇರುಗಳ ಬೆಲೆ ತೀರ ಕೆಳಮಟ್ಟಕ್ಕೆ ಇಳಿಯಿತಂತೆ. ಆಗ ರಾತ್ಸ್‌ಚೈಲ್ಡ್ ಸಂಸ್ಥೆಯವರು ಅವನ್ನೆಲ್ಲ ಕೊಂಡು ಮಾರನೆಯ ದಿನ—ನೆಪೋಲಿಯನ್ ಸೋತನೆಂಬ ವರ್ತಮಾನ ಬಂದ ಮೇಲೆ—ಹೆಚ್ಚು ಬೆಲೆಗೆ ಮಾರಿ ಅದೊಂದು ದಿನದಲ್ಲೇ ಐದು ಮಿಲಿಯನ್ ಪೌಂಡು ಸಂಪಾದಿಸಿದರಂತೆ! ಇಂಥ ಕಥೆಗಳನ್ನು ಈಗಲೂ ಯೆಹೂದ್ಯರ ವಿಷಯದಲ್ಲಿ ಹೇಳುತ್ತಾರೆ. ಸಂಯುಕ್ತ ಸಂಸ್ಥಾನಗಳಲ್ಲಿ ಅವರ ಸಾಹಸ ದಕ್ಷತೆಗಳಿಂದಾಗಿ ಕೆಲವು ದೈತ್ಯ ಪ್ರಮಾಣದ ಸಂಸ್ಥೆಗಳು ಉಚ್ಛ್ರಾಯ ಸ್ಥಿತಿಯಲ್ಲಿವೆಯೆಂಬುದೇನೊ ಸತ್ಯ. ಸಿಯರ್ಸ್‌ರೋಬಕ್ ಗೋಲ್ಡ್‌ಬ್ಲಾಟ್ಸ್ ಮುಂತಾದ ಭಾರಿ ಸಂಸ್ಥೆಗಳನ್ನು ಅವರೇ ಸ್ಥಾಪಿಸಿ ನಡೆಸುತ್ತಿದ್ದಾರಂತೆ. ಯೆಹೂದ್ಯರ ವಿಷಯದಲ್ಲಿ ಅಸಹನೆಯಿರುವುದಕ್ಕೆ ಮತೀಯ ಕಾರಣಗಳ ಜೊತೆಗೆ ಅವರ ಪ್ರತಿಭೆ, ಅಭ್ಯುದಯ, ಐಶ್ವರ್ಯ—ಇವೂ ಒಂದು ಕಾರಣ. ಅವರು ಸಮರ್ಥರೆಂದು ಬಹುಶಃ ಎಲ್ಲರೂ ಒಪ್ಪುತ್ತಾರೆ.

ತಮ್ಮ ಜನ ಎಂಥ ಔನ್ನತ್ಯವನ್ನು ಸಾಧಿಸಿದ್ದಾರೆ ಎಂಬುದನ್ನು ಸ್ಕಿನರ್ ಒತ್ತಿ ಹೇಳಲಿಲ್ಲ. ಆದರೆ ಅದೂ ಅವರ ಮನಸ್ಸಿನಲ್ಲಿದ್ದಿರಬೇಕು. "ಇತರ ಜನಾಂಗದವರಲ್ಲಿ ಎಷ್ಟೋ ಜನ ವ್ಯಾಪಾರ, ಕೈಗಾರಿಕೆ, ಬ್ಯಾಂಕಿಂಗ್ ಮುಂತಾದ ಕ್ಷೇತ್ರಗಳಲ್ಲಿ ಭಾರೀ ಸಂಸ್ಥೆಗಳನ್ನು ಸ್ಥಾಪಿಸಿಲ್ಲವೆ? ಅದು ಜನರ

ಕಣ್ಣನ್ನು ಕುಕ್ಕುವುದಿಲ್ಲ. ಯೆಹೂದ್ಯರ ಸಾಧನೆಗಳನ್ನು ಮಾತ್ರ ನೋಡಿ ಹೊಟ್ಟೆಕಿಚ್ಚು ಪಡುತ್ತಾರೆ. ನಮ್ಮಲ್ಲಿ ಬಡವರೂ ಇಲ್ಲವೆ? ಇದೆಲ್ಲ ಹಿಂದಿನಿಂದ ಬಂದ ಪೂರ್ವಗ್ರಹಗಳ ಫಲ. ನಾವು ಹೊಡೆದಾಟಕ್ಕೆ ನಿಂತವರಲ್ಲ. ಅಮೆರಿಕದಲ್ಲಿ ಬಂದೂಕ ಇಟ್ಟುಕೊಳ್ಳದವರು ಅಪರೂಪ. ಆದರೆ ನನ್ನ ಮನೆಯಲ್ಲಿ ಇವತ್ತೂ ಬಂದೂಕವಿಲ್ಲ, ಯಾವ ಆಯುಧವೂ ಇಲ್ಲ. ಹಿಂಸೆಗೂ ಕೊಲೆಗೂ ನಾವು ಸಿದ್ಧರಾಗಿಲ್ಲವಾದ್ದರಿಂದ ಎಲ್ಲರೂ ನಮ್ಮನ್ನು ಹಳಿಯುತ್ತಾರೆ, ತುಳಿಯುತ್ತಾರೆ, ಇಡೀ ಜನಾಂಗವನ್ನೇ ದೂರುವುದು ತಪ್ಪು. ಗುಣವಾಗಲಿ ದೋಷವಾಗಲಿ ಯಾವುದೊಂದು ಜನಾಂಗದ ಸ್ವತ್ತಲ್ಲ!" ಎಂದರು.

ಸ್ಕಿನರ್ ಸ್ವತಃ ಸಾತ್ವಿಕರು. ಅವರು ಹೇಳಿದ ಕೊನೆಯ ಮಾತೇನೊ ಖಂಡಿತ ಒಪ್ಪತಕ್ಕದ್ದು. ಯೆಹೂದ್ಯರ ಮಾತು ಬಂದಾಗ ಹಣವಂತರನ್ನು ಮಾತ್ರವಲ್ಲದೆ ದೈವಮತ್ತನೆಂದು ಹೆಸರುಗೊಂಡ ತತ್ವಶಾಸ್ತ್ರಜ್ಞ ಸ್ಪಿನೋಜನನ್ನೂ ಐನ್‌ಸ್ಟೈನ್ ಮಹರ್ಷಿಯನ್ನೂ ಏಕೆ ನೆನೆಯಬಾರದು! ಯೇಸುಸ್ವಾಮಿಯೂ ಯೆಹೂದ್ಯರಲ್ಲಿ ಹುಟ್ಟಿದವನಲ್ಲವೆ?

## ಯೆಹೂದ್ಯರನ್ನು ಕುರಿತ ಸಿನಿಮಾ ಚಿತ್ರ

ನಿನ್ನೆ ಶನಿವಾರ. ರಾಮು ಸಂಜೆಯ ಹೊತ್ತಿನಲ್ಲಿ 'ಆನ್ ಕಾಲ್' ಇರುವ (ಕರೆ ಬಂದಾಗ ಹೊರಡಲು ಸಿದ್ಧವಾಗಿರುವ) ಅವಶ್ಯಕತೆಯಿಲ್ಲ. 'ಟಾಮ್ ಸಾಯರ್'—ಮೊನ್ನೆ ತಾನೆ ಇಲ್ಲಿ ಬಿಡುಗಡೆ ಮಾಡಿದ ಚಿತ್ರ, ರೀಡರ್ಸ್ ಡೈಜೆಸ್ಟ್‌ನವರ ಪ್ರಪ್ರಥಮ ಚಿತ್ರೋದ್ಯಮದ ಫಲ. ಅದನ್ನು ನಾನು ನ್ಯೂಯಾರ್ಕಿನಲ್ಲೇ ನೋಡಿದ್ದೆ—ಚಿತ್ರವನ್ನು ನೋಡಲು ಹೋಗೋಣವೆಂದು ಬೇಗ ಊಟ ಮಾಡಿ ಮುಗಿಸಿದೆವು. ಅಷ್ಟು ಹೊತ್ತಿಗೆ ಸ್ಕಿನರ್ ಬಂದು "ಇವತ್ತು....ಚಿತ್ರಶಾಲೆಯಲ್ಲಿ 'ದಿ ಫಿಡ್ಲರ್ ಆನ್ ದಿ ರೂಫ್' ಚಿತ್ರದ ಪ್ರದರ್ಶನವಿದೆ. ನಾನು ಅದನ್ನು ನಾಟಕ ರೂಪದಲ್ಲಿ ಹಿಂದೆಯೇ ನೋಡಿದ್ದೇನೆ. ಬಹಳ ಚೆನ್ನಾಗಿತ್ತು. ಬನ್ನಿ, ನೋಡಿಕೊಂಡು ಬರೋಣ" ಎಂದರು. ನನಗೆ ಸಿನಿಮಾ ವಿಷಯದಲ್ಲಿ ಅಷ್ಟೇನೂ ಉತ್ಸಾಹವಿಲ್ಲ. ಆದರೆ ರಾಮು ದಯಾನ ಕೂಡ ಆ ಚಿತ್ರವನ್ನು ಬಹಳ ಹೊಗಳಿದ್ದನ್ನು ಕೇಳಿ ಸ್ಕಿನರ್ ಜೊತೆಯಲ್ಲಿ ಹೊರಟೆ.

ಚಿತ್ರ ನಿಜವಾಗಿಯೂ ಸೊಗಸಾಗಿತ್ತು. ಕಾಲ: ಈ ಶತಮಾನದ ಆದಿ; ದೇಶ: ರಷ್ಯ, ಯೆಹೂದ್ಯರ ವಿಷಯದಲ್ಲಿ ತಿರಸ್ಕಾರ ತುಂಬಿದ್ದ ವಾತಾವರಣದಲ್ಲೂ ಸುಖವಾಗಿ ಬದುಕುತ್ತಿದ್ದ ಯೆಹೂದ್ಯ ಸಂಸಾರವೊಂದರ ಚಿತ್ರ.

ಮನೆಯ ಯಜಮಾನನಿಗೆ ಮೂರು ಜನ ಹೆಣ್ಣುಮಕ್ಕಳು. ಮೂರು ಜನವೂ ಅವನ ಇಷ್ಟಕ್ಕೆ ವಿರೋಧವಾಗಿ ಮದುವೆ ಮಾಡಿಕೊಂಡರು. ಮೊದಲ ಎರಡು ಸಲ ಅವನಿಗೆ ಕೋಪ ಬಂದರೂ ತಾನು ತನ್ನ ಹೆಂಡತಿಯನ್ನು ಪ್ರೇಮಿಸಿದ್ದನ್ನು ನೆನೆದುಕೊಂಡ. ತನ್ನ ಮಗಳ ಕಣ್ಣಿನಲ್ಲಿ ಕಂಡ ಪ್ರೇಮದ ಹೊಳಪು—ಅದು ಮುಕ್ಕಾಗಬಾರದು ಎಂದುಕೊಂಡು ಮಕ್ಕಳನ್ನು ಕ್ಷಮಿಸಿದ ಮಾತ್ರವಲ್ಲ, ತಾನೇ ಉತ್ಸಾಹದಿಂದ ನಿಂತು ಮದುವೆಯನ್ನು ನಡೆಸಿದ. ಕೊನೆಯ ಮಗಳ ಮದುವೆ —ಅದು ಬೇರೆ ದಾರಿ ಹಿಡಿಯಿತು. ಅವಳು ಮದುವೆಯಾದದ್ದು ಒಬ್ಬ ಜೆಂಟೈಲ್ (ಯೆಹೂದ್ಯನಲ್ಲದವನು)ನನ್ನು. ತಂದೆಗೆ ಇದನ್ನು ಜೀರ್ಣಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. 'ನನ್ನ ಮಗಳು ಸತ್ತಳು' ಎಂದುಕೊಂಡ. ಅವಳು ಪತಿಯೊಡನೆ ಒಂದು ಎಷ್ಟು ಅಂಗಲಾಚಿದರೂ ಅವಳ ಕಡೆ ತಿರುಗಿಯೂ ನೋಡಲಿಲ್ಲ. ಅದು ರಷ್ಯದ ಜೆಂಟೈಲ್ ಸರ್ಕಾರ ಯೆಹೂದ್ಯರನ್ನು ದೇಶದಿಂದ ಓಡಿಸುತ್ತಿದ್ದ ಕಾಲ. ಮನೆಮಠಗಳನ್ನು ಬಿಟ್ಟು ಎಲ್ಲರೂ ಅಮೆರಿಕಕ್ಕೆ ಹೊರಟು ನಿಂತಿದ್ದಾಗ, ಮತ್ತೆ ಆ ಮಗಳು ಪತಿಯೊಡನೆ ಒಂದು ಕ್ಷಮೆ ಬೇಡಿದರೆ ಅವನೇನು ಮಾಡಬೇಕು! ಅವನ ಮತ ಅವನಿಗೆ ಸರ್ವಸ್ವ. ಅದನ್ನು ಮಗಳು ಕಡೆಗಣಿಸಿದ್ದಾಳೆ; ಅವಳ ಗಂಡ—ತಮ್ಮನ್ನು ದೇಶದಿಂದ ಹೊರಡಿಸುತ್ತಿದ್ದ ಜನರ ಕಡೆಯವನು. ಅವನು ಮಗಳ ಕೈಯಲ್ಲಿ ಒಂದು ಮಾತನ್ನೂ ಆಡಲಿಲ್ಲ. ಅವಳು ದುಃಖಿಸುತ್ತಾ ಹೊರಟುಹೋದಳು. ತಂದೆ ಆಗ God be with you ಎಂದ, ಮನಸ್ಸು ತಡೆಯಲಾರದೆ. ಆ ಮಾತು ಮಗಳಿಗೆ ಕೇಳಲಿಲ್ಲ.

ಚಿತ್ರಗ್ರಹಣ, ಕಥೆಯ ಸಂವಿಧಾನ, ಮುಖ್ಯಪಾತ್ರದ ಚಿತ್ರಣ, ಅವನ ಮನಸ್ಸಿನ ಹೊಯ್ದಾಟ, ಸಂಪ್ರದಾಯ ಸುಧಾರಣೆಗಳನ್ನು ಕುರಿತ ಗಂಭೀರ ಭಾವನೆಗಳ ಜೊತೆಗೆ ಅಲ್ಲಲ್ಲೇ ಹಿತವಾಗಿ ಬೆರೆದ ಹಾಸ್ಯ, ಯೆಹೂದ್ಯರ ಜೀವನದ ಮತ್ತು ಸಂಸ್ಕೃತಿಯ ಚಿತ್ರಗಳು—ಎಲ್ಲ ದೃಷ್ಟಿಯಿಂದಲ್ಲೂ ಅದು ಸೊಗಸಾದ ಚಿತ್ರ. ದಿ ಫಿಡ್ಲರ್ ಆನ್ ದಿ ರೂಫ್—ಭಗವಂತ ರಾಗ ಬಾರಿಸುತ್ತಾನೆ, ಅವರ ಲಯಕ್ಕೆ ನಮ್ಮ ಜೀವನ ಸಾಗುತ್ತದೆ. ಮದುವೆಗೆ ಸಂಬಂಧಪಟ್ಟ ಆಚರಣೆಗಳ ಚಿತ್ರ ನನಗೆ ಬಹಳ ಆಕರ್ಷಕವಾಗಿತ್ತು. ನಮ್ಮಲ್ಲಿ ಮದುವೆಯ ಸಂದರ್ಭದಲ್ಲಿ ನಡೆಯುವ ದುಂದುವೆಚ್ಚ, ಗಂಡಿನವರ ಅರ್ಥವಿಲ್ಲದ ದರ್ಪ, ಆಡಂಬರ, ಒಡವೆಗಳ ಸೀರೆಗಳ ಪ್ರದರ್ಶನ ಇವನ್ನೆಲ್ಲ ಕಂಡು ಕಂಡು ನಾನು ಅಸಹ್ಯಪಟ್ಟಿದ್ದೇನೆ. ವಧುವಿನ ಪ್ರಥಮದರ್ಶನ, ಧಾರೆಯೆರೆಯುವುದು, ವಧೂವರರು ಒಟ್ಟುಗೂಡಿ ಹೋಮಮಾಡುವುದು, ಸಪ್ತಪದಿ, ಒಬ್ಬರಿಗೊಬ್ಬರು ಕೊಡುವ ಆಶ್ವಾಸನ, ಸುವಾಸಿನಿಯರು ಆರತಿಯೆತ್ತುವುದು, ಸಭಾಪೂಜೆ,

ವೇದೋಕ್ತ ಆಶೀರ್ವಾದ ಮಂತ್ರದ ಪಠನೆ—ಇವೆಲ್ಲದರ ಸೌಂದರ್ಯಕ್ಕೆ ಮಾರುಹೋಗಿಯೂ ಇದ್ದೇನೆ. ಈ ಯೆಹೂದ್ಯರ ಮದುವೆಯ ಚಿತ್ರದಲ್ಲಿ—ಬಂಧುಗಳೆಲ್ಲ ಒಬ್ಬೊಬ್ಬರು ಒಂದೊಂದು ಮೋಂಬತ್ತಿಯ ದೀಪವನ್ನು ಕೈಯಲ್ಲಿ ಹಿಡಿದು ಗಂಭೀರವಾಗಿ ವಧೂವರರನ್ನು ಮುಮ್ಮಧ್ಯದಲ್ಲಿ ನಡೆಸಿಕೊಂಡು ಬರುವುದು. ರಬ್ಬಿ ಸಂದರ್ಭೋಚಿತವಾದ ವಾಕ್ಯಗಳನ್ನು ಉಚ್ಚರಿಸುವುದು, ಹೆಂಗಸರ ಸಂಭ್ರಮ—ಅದೇ ಸೌಂದರ್ಯವನ್ನು ಕಂಡೆ. ನಮ್ಮ ಪದ್ಧತಿಗಳೇ ಬೇರೆ. ಅವರವೇ ಬೇರೆ. ಆದರೆ ಅವುಗಳ ಉದ್ದೇಶ, ಅವುಗಳ ಹಿಂದಿರುವ ಭಾವಸಂಪತ್ತು, ಅವುಗಳಿಂದ ವಧೂವರರ ಮೇಲಾಗುವ ಪರಿಣಾಮ—ಇವೆಲ್ಲ ಒಂದೇ. ಪದ್ಧತಿಯಲ್ಲಿ ಕೂಡ ಒಂದು ಸಾಮ್ಯವನ್ನು ಗುರುತಿಸಿದೆ. ನಮ್ಮಲ್ಲಿ ದೇವರಿಗೆ ಮಂಗಳಾರತಿ ಎತ್ತಿದ ಮೇಲೆ ಅದನ್ನು ಎಲ್ಲರ ಬಳಿಗೂ ತರುತ್ತಾರೆಯಷ್ಟೆ. ಆಗ ನಾವು ಆ ಜ್ಯೋತಿಯ ಮೇಲೆ ಎರಡು ಅಂಗೈಗಳನ್ನು ಹಿಡಿದು ಅನಂತರ ಕಣ್ಣಿಗೆ ಒತ್ತಿಕೊಳ್ಳುತ್ತೇವೆ. ಇಲ್ಲಿ ಯೆಹೂದ್ಯರು ಹಾಗೆಯೇ ಮೋಂಬತ್ತಿಯ ದೀಪಗಳ ಮೇಲೆ ಕೈ ಆಡಿಸಿ ಕಣ್ಣಿಗೆ ಒತ್ತಿಕೊಂಡರು.

ಯೆಹೂದ್ಯರ ಜೀವನವನ್ನು ಕುರಿತ ಚಿತ್ರ ನನಗೆ ಅಷ್ಟೊಂದು ಆನಂದ ಕೊಟ್ಟಿದ್ದನ್ನು ನೋಡಿ ಸ್ಕಿನರ್‌ಗೂ ಆನಂದವಾಯಿತು.

"ಒಂದು ದಿನ ನಮ್ಮ ಸಿನಗಾಗ್‌ಗೆ (synagogue) ಕರೆದುಕೊಂಡು ಹೋಗುತ್ತೇನೆ, ಬರುತ್ತೀರಾ" ಎಂದು ಕೇಳಿದರು.

"ಖಂಡಿತ ಬರುತ್ತೇನೆ, ವಂದನೆಗಳು. ನಾನು ಸಿನಗಾಗ್ ನೋಡಿಯೇ ಇಲ್ಲ. ನಿಮ್ಮ ವಾಸ್ಪ್‌ಗಳ ಚರ್ಚಿನಲ್ಲಿ 'ಸರ್ವಿಸ್' ನೋಡಿದ್ದೇನೆ...."

"ದೂರದಿಂದ ನೋಡಿದಿರಿ ತಾನೆ ? ಕಚ್ಚುವುದಕ್ಕೆ ಅವಕಾಶ ಕೊಡಲಿಲ್ಲವಷ್ಟೆ !" ಎಂದು ಸ್ಕಿನರ್ ನಕ್ಕರು.

## ನೈಲ್ಸ್‌ನ ಪುಸ್ತಕಭಂಡಾರ, ಸ್ಟೈಪರ್ಡ್ ರಾಕ್

ಇವತ್ತು ನಮ್ಮ ಮನೆಯ ಹಿಂದಿನ ಸಾಲಿನಲ್ಲಿರುವ ಬಾರ್ಬರ ತಮ್ಮ ಮಗ ಜೇಸನ್ ಅನ್ನು ಕರೆದುಕೊಂಡು ಇತ್ತ ಬಂದಳು. ಅವರ ವಂಶನಾಮ (surname) ನನಗೆ ಇಂದೂ ಗೊತ್ತಿಲ್ಲ. ಅವರ ಪರಿಚಯಮಾಡಿಕೊಡುವಾಗ ಡಯಾನ ಇವರು ಬಾರ್ಬರ ಎಂದು ಮಾತ್ರ ಹೇಳಿದ್ದಳು. ಇದರಿಂದಾಗಿ ನನಗೆ ಅವರೊಡನೆ ಮಾತಾಡುವಾಗ ಅವರ ಹೆಸರನ್ನು ಹೇಳದೆಯೇ ಸಂಭಾಷಣೆಯನ್ನು ನಿರ್ವಹಿಸುವ ಕಷ್ಟ ಒದಗುತ್ತದೆ. ಪಾಶ್ಚಾತ್ಯರಲ್ಲಿ ಸಾಮಾನ್ಯ

ವಾಗಿ ಹೆಚ್ಚು ಸಲಿಗೆಯಿದ್ದ ಹೊರತು ಯಾರನ್ನು ಸಂಬೋಧಿಸಬೇಕಾದರೂ ವಂಶನಾಮವನ್ನು ಬಳಸುತ್ತಾರೆಯೇ ಹೊರತು ಕ್ರೈಸ್ತನಾಮವನ್ನು ಬಳಸುವುದಿಲ್ಲ. ಅಮೆರಿಕದಲ್ಲಿ ಈ ನಿಯಮವನ್ನು ಅಷ್ಟು ಕಟ್ಟುನಿಟ್ಟಾಗಿ ಪಾಲಿಸುವದಿಲ್ಲವೇನೊ.

ಬಾರ್ಬರ ನೈಲ್ಸ್ ಲೈಬ್ರರಿಗೆ ಹೊರಟಿದ್ದರು. "ಮೊನ್ನೆ ಡಯಾನ ಹೇಳುತ್ತಿದ್ದಳು. ನಿಮ್ಮನ್ನು ಶನಿವಾರ ಲೈಬ್ರರಿಗೆ ಕರೆದುಕೊಂಡು ಹೋಗಬೇಕೆಂದಿದ್ದೇನೆ ಎಂದು. ಈಗ ನಾನು ಅಲ್ಲಿಗೆ ಹೋಗುತ್ತಿದ್ದೇನೆ. ನೀವೂ ಬರುತ್ತೀರಾ, ಬೇರೆ ಕೆಲಸವಿಲ್ಲದಿದ್ದರೆ?" ಎಂದು ಕೇಳಿದರು.

"ನಿಮಗೆ ತೊಂದರೆಯಾಗದಿದ್ದರೆ ಬರುತ್ತೇನೆ. ವಂದನೆಗಳು."

"ತೊಂದರೆಯೇನು! ಹೇಗಿದ್ದರೂ ಕಾರ್ ಹೋಗುತ್ತದೆ. ಇವನು ನನ್ನ ಮಗ, ಜೇಸನ್. ಸುನೀಲನ ಜೊತೆ ಆಡುವುದಕ್ಕೆ ಬರುತ್ತಾನೆ, ನೀವು ನೋಡಿರಬಹುದು, ಜೇಸನ್, 'ಹಲ್ಲೋ' ಹೇಳು."

ಜೇಸನ್‌ನ ತಲೆಗೂದಲು ಅಪ್ಪಟ ಅಪರಂಜಿಯ ಬಣ್ಣದ್ದು. ನಾನು ಅವನ ತಲೆಯಮೇಲೆ ಕೈಯಾಡಿಸಿ "ಗೋಲ್ಡನ್ ಫ್ಲೀಸ್ (golden fleece) ತಂದೇ ಬಿಟ್ಟಿದ್ದಾನೆ!" ಎಂದೆ.

ಬಾರ್ಬರ ಏನೋ ಒಗಟೆಯನ್ನು ಕೇಳಿದವರಂತೆ ಮುಖ ನೋಡಿ "ಅರ್ಥವಾಗಲಿಲ್ಲ" ಎಂದರು.

"ವಿಶೇಷವೇನೂ ಇಲ್ಲ. ನಿಮ್ಮ ಮಗನ ಅಪರಂಜಿ ಬಣ್ಣದ ಕೂದಲನ್ನು ನೋಡಿ ಗ್ರೀಕರ ಪುರಾಣದ ಕಥೆಯೊಂದು ನೆನಪಿಗೆ ಬಂತು" ಎಂದು 'ಗೋಲ್ಡನ್ ಫ್ಲೀಸ್' ವಿಷಯ ಹೇಳಿದೆ. ನಾನು ಆದರ ಮಾತನ್ನೆತ್ತಿದೆನಲ್ಲ ಎಂದು ಸ್ವಲ್ಪ ನಾಚಿಕೆಯಾಯಿತು. ಆಕೆಗೂ ಆದರ ವಿಷಯ ಗೊತ್ತಿದ್ದರೆ ಸರಿಹೋಗುತ್ತಿತ್ತು; ಈಗ ನನ್ನ ಮಾತು ಆಕೆಗೆ ಪಾಂಡಿತ್ಯಪ್ರದರ್ಶನವಾಗಿ ಕಂಡಿರುವುದು ಸಾಧ್ಯ. ಆ ಮಗುವಿನ ಹೆಸರು ಜೇಸನ್, ಅವನ ತಲೆಗೂದಲು ಚಿನ್ನದಂತಿದೆ—ಆಲೋಚಿಸುವುದಕ್ಕಿಂತ ಮೊದಲೇ ನನ್ನ ಬಾಯಿಂದ 'ಗೋಲ್ಡನ್ ಫ್ಲೀಸ್' ಎಂಬ ಮಾತು ಹೊರಟುಬಿಟ್ಟಿತ್ತು!

ಬಾರ್ಬರ ಅವರಿಗೆ ಭಾರತದ ವಿಷಯದಲ್ಲಿ ಬಹಳ ಕುತೂಹಲವಿದ್ದಂತೆ ತೋರಿತು. ಕರ್ಣಾಟಕ ಇಂಡಿಯಾದ ಯಾವ ಭಾಗದಲ್ಲಿದೆ? ಅದರ ಹವಾಗುಣ ಹೇಗೆ? ಇಂಡಿಯದಲ್ಲಿ ಗಣರಾಜ್ಯ ಎಷ್ಟುಮಟ್ಟಿಗೆ ಯಶಸ್ವಿಯಾಗಿದೆ? ನಾನು ವಿಶ್ವವಿದ್ಯಾಲಯದ ಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಹೋಗಬೇಕಾಯಿತೆ ಅಥವಾ ಭಾರತದಲ್ಲೇ ಅನುಕೂಲವಿತ್ತೆ? ಈ ಬಗೆಯ ಪ್ರಶ್ನೆಗಳನ್ನು ಕೇಳಿ

ದರು. ನಾನು ಉತ್ತರರೂಪವಾಗಿ ಎರಡು ಮೂರು ಮಾತಾಡುವುದರೊಳಗೆ ಲೈಬ್ರೆರಿ ಬಂದೇಬಿಟ್ಟಿತು.

ಲೈಬ್ರೆರಿ ಅಷ್ಟೇನೂ ದೊಡ್ಡದಲ್ಲ ; ಆದರೆ ಸುತ್ತಮುತ್ತ (ಸುಮಾರು 20 ಮೈಲಿ ಫಾಸಲೆಯಲ್ಲಿ ?) ಇರುವ 31 ಲೈಬ್ರೆರಿಗಳ ಸಮೂಹಕ್ಕೆ ಸೇರಿದ್ದು. ಇವುಗಳಲ್ಲಿ ಯಾವುದೊಂದು ಲೈಬ್ರೆರಿಗೆ ಸದಸ್ಯರಾದರೂ ಉಳಿದೆಲ್ಲವುಗಳಿಂದಲೂ ಪುಸ್ತಕಗಳನ್ನು ತರುವ ಸೌಲಭ್ಯವುಂಟು—ನಮ್ಮ ಸದಸ್ಯತ್ವದ ಕಾರ್ಡನ್ನು ತೋರಿಸಿದರೆ ಸಾಕು. ಒಂದು ಲೈಬ್ರೆರಿಯಿಂದ ತಂದ ಪುಸ್ತಕವನ್ನು ಆ ಸಮೂಹದ ಬೇರೆ ಯಾವ ಲೈಬ್ರೆರಿಗಾದರೂ ವಾಪಸು ಮಾಡಬಹುದು. ಈ ವ್ಯವಸ್ಥೆಯಿರುವುದರಿಂದ ನಮಗೆ ಲೈಬ್ರೆರಿಗೆ ಹೋಗುವುದೇ ಒಂದು ಕೆಲಸವಾಗಿ ಪರಿಣಮಿಸುವುದಿಲ್ಲ. ಬೇರೆ ಯಾವುದೋ ಕೆಲಸಕ್ಕೆ ಹೋಗುತ್ತಿರುವಾಗ ದಾರಿಯಲ್ಲಿ ಯಾವ ಲೈಬ್ರೆರಿ ಸಿಕ್ಕಿದರೆ ಅದರಲ್ಲಿ ನಮಗೆ ಬೇಕಾದ ಪುಸ್ತಕವನ್ನು ತೆಗೆದುಕೊಳ್ಳಬಹುದು, ಅಥವಾ ಓದಿ ಮುಗಿಸಿದ ಪುಸ್ತಕವನ್ನು ವಾಪಸು ಮಾಡಬಹುದು. ಒಂದು ಲೈಬ್ರೆರಿಯ ಮೆಂಬರಾದರೆ 30 ಲಕ್ಷ ಪುಸ್ತಕಗಳ ಪ್ರಯೋಜನವನ್ನು ಪಡೆಯಬಹುದು.

ಶ್ರೀ ಬಿ. ಎಸ್. ಕೇಶವನ್ ಕಲ್ಕತ್ತೆಯ ನ್ಯಾಷನಲ್ ಲೈಬ್ರೆರಿಯ ಮುಖ್ಯಾಧಿಕಾರಿಗಳಾಗಿದ್ದಾಗ ಭಾರತದ ಎಲ್ಲ ಕಡೆಯಲ್ಲೂ ಓದುಗರಿಗೆ ಇಂಥ ಸೌಲಭ್ಯಗಳು ದೊರೆಯುವಂತೆ ಮಾಡಲು ದೊಡ್ಡ ಯೋಜನೆಯನ್ನು ತಯಾರಿಸಿದರು ; ಅದನ್ನು ಕಾರ್ಯರೂಪಕ್ಕೆ ತರಲು ವಿಶ್ವಪ್ರಯತ್ನ ಮಾಡಿದರು. ಈಗ ಅದು ಜಾರಿಯಲ್ಲಿದ್ದರೂ ಇರಬಹುದು. ಅವರು ಇನ್ನೂ ಹೆಚ್ಚಿನ ಸೌಕರ್ಯಗಳನ್ನು ಸಹ ಕಲ್ಪಿಸಿಕೊಡುತ್ತಿದ್ದರು—ಅಮೆರಿಕದಲ್ಲಿ ಕಲ್ಪಿಸಿಕೊಡುವಂತೆ. ಒಂದು ಸಾರಿ ನಾನು ಮೈಥಾನ್‌ನಲ್ಲಿದ್ದಾಗ ಯಾವುದೋ ಸಂದರ್ಭದಲ್ಲಿ ಕಥಾಸರಿತ್ಸಾಗರದ ಒಂದು ಭಾಗವನ್ನು (ಸುಮಾರು 2–3 ಪುಟಗಳಷ್ಟು) ನೋಡಬೇಕಾಗಿ ಬಂತು. ಅವರಿಗೆ ಕಾಗದ ಬರೆದೆ. ಒಂದು ವಾರದೊಳಗಾಗಿ ಆ ಭಾಗವನ್ನು ಪತ್ತೆಮಾಡಿ ಅದನ್ನು ಟೈಪ್‌ಮಾಡಿಸಿ ಕಳಿಸಿಕೊಟ್ಟರು. ಆದರೂ ಭಾರತದ ಅನೇಕ ಕಡೆಗಳಲ್ಲಿ ನಾವು ಕೆಂಪು ಟೇಪಿನ ಅಡ್ಡಗಟ್ಟೆಗಳನ್ನು ದಾಟುವುದು ಸಾಧ್ಯವಾಗಿಲ್ಲ.

ಬಾರ್ಜರ ನನ್ನನ್ನು ಮನೆಗೆ ತಂದುಬಿಟ್ಟು "ಇಂಡಿಯದ ವಿಷಯವಾಗಿ ಕೇಳತಕ್ಕ ಪ್ರಶ್ನೆಗಳು ಬೇಕಾದಹಾಗಿವೆ. ಇವತ್ತು ಪುರಸತ್ತೇ ಆಗಲಿಲ್ಲ. ಇನ್ನೊಂದು ಸಾರಿ ಬರುತ್ತೇನೆ" ಎಂದರು. ಆದರೆ ನಾನು ಹೊರಡುವುದರೊಳಗೆ ಬರಲು ಅವರಿಗೆ ಸಾಧ್ಯವಾಗಲಿಲ್ಲ. ಭಾರತಕ್ಕೆ ಭೇಟಿಕೊಡಬೇಕೆಂದು ಅವರಿಗೆ

ಬಹಳ ಆಸೆಯಂತೆ. "ಬಹಳ ದಿನಗಳಿಂದ ಅಲ್ಲಿಗೆ ಬರಬೇಕು ಎಂದುಕೊಳ್ಳು ತ್ತಿದ್ದೇವೆ. ಆದರೆ ನಾವು ಬಡವರು, ಸಾಕಾದಷ್ಟು ಹಣವನ್ನು ಉಳಿಸುವುದು ಸಾಧ್ಯವಾಗಿಲ್ಲ" ಎಂದರು. ಅವರು ಇಟ್ಟುಕೊಂಡಿದ್ದ ಕಾರು ಯಾವ ಹೆಸರಿನ ದೆಂದು ನಾನು ನೋಡಲಿಲ್ಲ—ಷೆವ್ರೊಲೆ ಇಂಪಾಲದಂಥ ಭಾರಿ ಕಾರು. ಆದರೂ ಬಹುಶಃ ಅವರು 'ನಾವು ಬಡವರು' ಎಂದದ್ದು ಕೃತಕ ನಮ್ರತೆಯಲ್ಲ. ಅಂಥ ಕಾರ್ ಇಟ್ಟಿರುವವರನ್ನು ಕೂಡ ಅಮೆರಿಕದಲ್ಲಿ 'ಬಡವರ' ಗುಂಪಿಗೆ ಸೇರಿಸು ವುದು ಸಾಧ್ಯವಿರಬಹುದು!

ನಾಳೆ ಬೆಳಿಗ್ಗೆ ಸ್ಟಾರ್ವ್ಡ್ ರಾಕ್ (Starved Rock) ಸ್ಟೇಟ್ ಪಾರ್ಕಿಗೆ ಹೋಗುವ ಏರ್ಪಾಡಿದೆ. ಹೊತ್ತಿಗೆ ಮುಂಚೆ ಏಳಬೇಕು.

## ಸ್ಟಾರ್ವ್ಡ್ ರಾಕ್ ಸ್ಟೇಟ್ ಪಾರ್ಕ್

ಅಮೆರಿಕದಲ್ಲಿ ಯಾವುದಕ್ಕೂ ಅಭಾವವಿಲ್ಲ ಎಂಬ ಭಾವನೆ ತಪ್ಪಾಗ ಬಹುದೆಂದು ಇವತ್ತು ಮನವರಿಕೆಯಾಯಿತು. ಹಿಂದೆಂದೂ ಇಲ್ಲಿ ಕಾಣದಿದ್ದ ಪೆಟ್ರೋಲ್ ಅಭಾವ ಈಗ ಕಾಣಿಸಿಕೊಂಡಿದೆ. ಹೊರಡುವಾಗ ಅಕಸ್ಮಾತ್ ಪೆಟ್ರೋಲನ್ನು ಭರ್ತಿಮಾಡಿಕೊಳ್ಳುವುದು ಮರೆತುಹೋಯಿತು. ದಾರಿಯಲ್ಲಿ ನಾಲ್ಕೈದು ಗ್ಯಾಸ್‌ಸ್ಟೇಷನ್ನು (ಇಲ್ಲಿ ಪೆಟ್ರೋಲನ್ನು ಗ್ಯಾಸ್ ಎಂದು ಕರೆಯು ವುದೇ ರೂಢಿ) ಹೋಗಿ 'ಗ್ಯಾಸ್‌ನ ಅಭಾವದಿಂದಾಗಿ ಭಾನುವಾರ ಮುಚ್ಚಿರುತ್ತೆ' ಎಂಬ ಬೋರ್ಡ್ ನೋಡಿಕೊಂಡು ಎಲ್ಲೆಲ್ಲೋ ತಿರುಗಿ ಕೊನೆಗೆ ಒಂದು ಹಳ್ಳಿಯಲ್ಲಿ ಗ್ಯಾಸ್ ತುಂಬಿಕೊಂಡೆವು.

ಸ್ಟಾರ್ವ್ಡ್ ರಾಕ್ ಸ್ಟೇಟ್ ಪಾರ್ಕು ಷಿಕಾಗೋವಿಗೆ ಸುಮಾರು ನೂರು ಮೈಲಿ ದೂರದಲ್ಲಿದೆ. ಕೊನೆಯ ನಾಲ್ಕಾರು ಮೈಲಿಯಲ್ಲಿ ರಸ್ತೆ ಇಲ್ಲಿನಾಯ್ ನದಿಯ ಪಕ್ಕದಲ್ಲೇ ಹೋಗುತ್ತದೆ. ಗುಡ್ಡಗಾಡಿನ ಪ್ರಾಂತ. ಎರಡೂ ಕಡೆಯ ಕಾಡಿನಲ್ಲೂ ಲಘು ಹಸುರು ಬಣ್ಣ; 'ಅನತಿ ಪ್ರೌಢ ವಂಶ ಪ್ರಕಾಶ' (ಇನ್ನೂ ಬಲಿತಿಲ್ಲದ ಬಿದಿರನ ಹಸುರು) ಅದು ಮನೋಹರವಾದರೂ ಸ್ವಲ್ಪ ಹೊತ್ತಿನ ಮೇಲೆ ವೈವಿಧ್ಯ ಬೇಕು ಎನ್ನಿಸಿತು—ವೈವಿಧ್ಯದ ಕೊರತೆ ಬಣ್ಣದಲ್ಲಿ ಮಾತ್ರ. ರಸ್ತೆ ಗುಡ್ಡಗಳನ್ನು ಬಳಸಿ ಬಳಸಿ ಹೋಗುತ್ತದೆ. ನನಗೆ ನಮ್ಮ ಪಶ್ಚಿಮಘಟ್ಟಗಳ ನೆನಪಾಯಿತು. ಮಡಿಕೇರಿಯ ಬಳಿ ಇರುವ ಘಾಟಿ, ಆಗುಂಬೆ ಘಾಟಿ, ಚಾರ್ಮಾಡಿ ಇಂಥ ಕಡೆಗಳಲ್ಲಿರುವಷ್ಟು ಕಡಿದಲ್ಲ ಇಲ್ಲಿಯ ಬೆಟ್ಟಗಳು; ಅಷ್ಟು ಎತ್ತರವೂ ಅಲ್ಲ. ಆದರೂ ಇಲ್ಲಿ ನದಿಯ ಹರವು, ಅಲ್ಲಿ ಕಂದರ, ಮತ್ತೊಂದು ಕಡೆ ಇಕ್ಕೆಲ್ಲದಲ್ಲೂ ಎದ್ದಿರುವ ಬೆಟ್ಟ ಪ್ರತಿಯೊಂದು

ತಿರುವನ್ನು ದಾಟಿದಾಗಲೂ ಪ್ರಕೃತಿ ಹೊಸದೊಂದು ಬಗೆಯ ಅಲಂಕಾರ
ಮಾಡಿಕೊಂಡು ಹೊಸದೊಂದು ಭಂಗಿಯಲ್ಲಿ ನಿಂತಂತೆ ತೋರಿತು.

ಪಾರ್ಕಿಗೆ ಪ್ರವೇಶಿಸಿದೊಡನೆಯೇ ಪ್ರವಾಸಿಗಳು ಇಳಿದುಕೊಳ್ಳುವ
'ಲಾಡ್ಜ್' ಕಾಣುತ್ತದೆ. ನಮಗೆ ಅದರಲ್ಲಿ ಆಸಕ್ತಿಯಿಲ್ಲ; ನಾವು ಸಂಜೆ
ವಾಪಸು ಹೋಗುವವರು. ಅಲ್ಲಿಂದ ಮುಂದಕ್ಕೆ ಹೋದರೆ ಯಥಾಪ್ರಕಾರ
ರೆಸ್ಟೊರಾಂಟುಗಳು, ಕೋಕಕೋಲ, ಐಸ್‌ಕ್ರೀಮ್ ಕ್ಯಾಂಡಿ ಮುಂತಾದ್ದನ್ನು
ನೀಡುವ ಯಂತ್ರಗಳು, ಅಲ್ಲಿಗೆ ಬಂದಿದ್ದರ ನೆನಪಿಗಾಗಿ ಕೊಳ್ಳಬಹುದಾದ
ಸಾಮಾನುಗಳ ಅಂಗಡಿಗಳು. ಇವುಗಳನ್ನು ನೋಡಿದಾಗ ಒಂದೊಂದು ವೇಳೆ
ಬೇಸರವಾಗಬಹುದಾದರೂ ಅಂಥ ಸ್ಥಳಗಳಲ್ಲಿ ಅವುಗಳ ಅವಶ್ಯಕತೆಯಿದೆ
ಎಂದು ಒಪ್ಪಬೇಕು. ಅಲ್ಲಿಗೆ ಬರುವವರು ಉಪವಾಸ ವ್ರತ ಕೈಕೊಂಡು ತಪಸ್ಸು
ಮಾಡುವವರಲ್ಲವಲ್ಲ! ಇವತ್ತು ಇಲ್ಲಿ ಜನಸಂದಣಿ ಹೆಚ್ಚು. ಇಲ್ಲಿಯ 'ವಾಸ್ಪ್'
ಗಳು, ದಕ್ಷಿಣ ಅಮೆರಿಕದ ಅರ್ಧ ಸ್ಪ್ಯಾನಿಷ್ ಅರ್ಧ ಇಂಡಿಯನ್ ಜನರು
(ವರ್ಣವ್ಯತ್ಯಾಸದಿಂದಾಗಿ ಇವರನ್ನು ಗುರುತಿಸುವುದು ಸಾಧ್ಯ), ಜಪಾನ್
ಚೀನಾಗಳಿಂದ ಬಂದವರು, ಭಾರತೀಯರು, ನೀಗ್ರೋಗಳು, ಮ್ಯುಲಾಟೋ
ಜನರು—ಇಡೀ ಪ್ರಪಂಚ ಇಲ್ಲಿಗೆ ಪ್ರತಿನಿಧಿಗಳನ್ನು ಕಳಿಸಿದ್ದಂತೆ ತೋರಿತು.
ವೇಷಭೂಷಣಗಳಲ್ಲಿ ಪಾಶ್ಚಾತ್ಯ ಸಂಪ್ರದಾಯ—ಸಂಪೂರ್ಣ ನಗ್ನತೆಯನ್ನು
ಇನ್ನೇನು ಸಾಧಿಸಲಿವೆ ಎನ್ನುವಂಥ ವಿವಸ್ತ್ರತೆಯ ಫ್ಯಾಷನ್ ಕೂಡ—ಇವರೆಲ್ಲ
ರನ್ನೂ ದಾಸ್ಯಕ್ಕೆ ಎಳೆದಿವೆ. ಈ ಮಾತಿಗೆ ವಿನಾಯಿತಿ—ಇದನ್ನು ಆನಂದದಿಂದ
ಹೇಳುತ್ತೇನೆ—ನಮ್ಮ ಭಾರತೀಯ ಸೀರೆ. ಬಿಕಿನಿ ಭಾರತೀಯ ಮಹಿಳೆಯರನ್ನು
ಗೆದ್ದಿಲ್ಲ; ಅಥವಾ ಗೆದ್ದಿದ್ದರೆ ಅದು ನನ್ನ ಗಮನಕ್ಕೆ ಬಂದಿಲ್ಲ.

ಸಾಮಾನ್ಯವಾಗಿ ಇಲ್ಲಿಯ ಜನ ಹರಡ ಹರಡುವುದಿಲ್ಲ. ವಿಸರ್ಜಿತಗಳನ್ನು
ಗೊತ್ತಾದ ಒಂದು ಕಡೆಗೆ ತೆಗೆದುಕೊಂಡು ಹೋಗಿ ಅಲ್ಲೇ ಹಾಕುತ್ತಾರೆ.
ಕಾರಿನಲ್ಲಿ ಹೋಗುವಾಗ ನನ್ನ ಸೊಸೆ ಬಾಳೆಯಹಣ್ಣು ತಿಂದು ಸಿಪ್ಪೆಯನ್ನು
ಹೊರಕ್ಕೆ ಎಸೆಯುವ ಬದಲು ಒಂದು ಪ್ಲಾಸ್ಟಿಕ್ ಚೀಲದಲ್ಲಿಟ್ಟು ಅದನ್ನು
ಮನೆಗೆ ತಂದು ಕಸದಬುಟ್ಟಿಗೆ ಹಾಕಿದ್ದನ್ನು ನೋಡಿದ್ದೇನೆ. ಈ ವಿಷಯದಲ್ಲಿ
ನಾವು ಅವರಿಂದ ಪಾಠ ಕಲಿಯಬೇಕು. ಆದರೆ ಇಲ್ಲೇನೋ—ಹೆಚ್ಚಲ್ಲ ಸ್ವಲ್ಪ
—ವಿಸರ್ಜಿತಗಳು ಅಲ್ಲಲ್ಲೇ ಬಿದ್ದಿದ್ದನ್ನು ನೋಡಿದೆ. ಒಬ್ಬ ಶೂಲದಂತೆ
ಮೊನಚಾದ ತುದಿಯುಳ್ಳ ಕೋಲನ್ನು ಹಿಡಿದು ಕಾಗದ, ಪ್ಲಾಸ್ಟಿಕ್ ಚೀಲ
ಮುಂತಾದ್ದನ್ನು ಚುಚ್ಚಿ ಸಂಗ್ರಹಿಸಿಕೊಂಡು ಹೋಗಿ ಬುಟ್ಟಿಗೆ ಎಸೆಯುತ್ತಿದ್ದ
—ಅವನಿಗೆ ಸಾಕಾದಷ್ಟು ಕೆಲಸವಿತ್ತು! ಇದಕ್ಕೆ ಕಾರಣ ಅಲ್ಲಿ ಹಲವಂಗದ

ಜನ ಸೇರಿದ್ದುದಿರಬಹುದು, ಅಥವಾ ಇತ್ತೀಚೆಗೆ ನಾಗರಿಕ ನಿಯಮಗಳ ಪಾಲನೆ ಅಷ್ಟು ಕಟ್ಟುನಿಟ್ಟಾಗಿಲ್ಲದಿರಬಹುದು. ಮೆಕ್‌ಮಿಲನ್‌ರೇನೋ "ನಾವು ಈಚೀಚೆಗೆ ಕೆಡುತ್ತಿದ್ದೇವೆ, ಶಿಸ್ತು ಕಡಿಮೆಯಾಗುತ್ತಿದೆ. ಹೇಗೋ ಸಾವರಿಸಿ ಕೊಂಡು ಹೋದರಾಯಿತು ಎಂಬ ಸಡಿಲತೆ ಬರುತ್ತಿದೆ", ಎಂದು ಒಂದು ಸಾರಿ ಹೇಳಿದ್ದರು.

ನಾವು ಮನೆಯಿಂದಲೇ ತಂದಿದ್ದ ಹುಳಿಯನ್ನ ಮೊಸರನ್ನ ಉಪ್ಪೇರಿ ಸಂಡಿಗೆಗಳನ್ನು ಮುಗಿಸಿ ನೋಟ ನೋಡಲು ಸಿದ್ಧರಾದೆವು. ಈ ಸ್ಟೇಟ್ ಪಾರ್ಕು ಇತ್ತೀಚೆಗೆ ಆದದ್ದು ; ಆದರೆ ಈ ಸ್ಥಳ 'ಪುರಾಣ' ಪ್ರಸಿದ್ಧವಾದದ್ದಂತೆ. ನಮ್ಮೆಲ್ಲರ ಮನಸ್ಸಿಗೆ ಇಲ್ಲಿನಾಯ್ ಹೆಸರು ಕೇಳಿದಾಗ ಏಬ್ರಹಮ್ ಲಿಂಕನ್ನನ ನೆನಪು ಬರುತ್ತದೆ. ಈಗಿನವರೆಗೆ ಇದು Land of Lincoln, ಲಿಂಕನ್ ಪ್ರಾಂತ. ಆದರೆ ಈ ನಾಡು ಲಿಂಕನ್‌ಗಿಂತ ಮುಂಚೆ ಇಲ್ಲಿನಾಯ್ (ಅಥವಾ 'ಇಲ್ಲಿನಿ') ಇಂಡಿಯನ್ನರ ವಾಸಸ್ಥಾನವಾಗಿತ್ತು. ಅವರ ಹೆಸರನ್ನೇ ಈ ನಾಡಿಗೂ ಇಲ್ಲಿಯ ನದಿಗೂ ಇಟ್ಟಿದ್ದಾರೆ. ಆ ಪದದ ಅರ್ಥ 'ಉತ್ಕೃಷ್ಟ ಅಥವಾ ಪರಿಪೂರ್ಣ' ಎಂದು ಹೇಳುತ್ತಾರೆ. ಇಲ್ಲಿಯ ಕಾಡುಗಳಲ್ಲಿ ವನ್ಯ ಮೃಗಗಳ ಸಂಪತ್ತು ಬೇಕಾದ ಹಾಗಿತ್ತು ; ಸಮೃದ್ಧಿಯಾಗಿ ನೀರು ; ಫಲವತ್ತಾದ ಜಮೀನು. ಸುತ್ತ ಮುತ್ತಿನವರೆಲ್ಲರಿಗಿಂತ ಇಲ್ಲಿನಿಯವರು ಸುಖ ಜೀವನ ನಡೆಸುತ್ತಿದ್ದರು. ಆದ್ದರಿಂದ ಅವರ ಮೇಲೆ ಇತರ ಇಂಡಿಯನ್ನರ ಕಣ್ಣು ಬಿತ್ತು. ಯೂರೋಪಿನವರು (ಇಲ್ಲಿಗೆ ಬಂದವರು ಫ್ರೆಂಚರು ಮತ್ತು ಇಂಗ್ಲಿಷರು) ಬರುವ ವೇಳೆಗಾಗಲೇ ಅಲ್ಲಿ ಯಾದವೀ ಯುದ್ಧ ನಡೆಯುತ್ತಿತ್ತು. ಪರಂಗಿಯವರು ಬಂದು ಅಲ್ಲಲ್ಲಿ ನೆಲಸಿದ ಮೇಲೆ ಒಟ್ಟವ (Ottawa) ಇಂಡಿಯನ್ನರ ಪಾಳೆಯಗಾರ—ಪಾಂಟಿಯಾಕ್—ಇತರ ಪಂಗಡಗಳವರನ್ನು ಸೇರಿಸಿಕೊಂಡು ಪರಂಗಿಯವರನ್ನು ಓಡಿಸಲು ಹವಣಿಸುತ್ತಿದ್ದ. ಇಲ್ಲಿನಿಯವರು ಪರಂಗಿಯವರೊಡನೆ ಸ್ನೇಹದಿಂದಿದ್ದರು. ಆದ್ದರಿಂದ ಪಾಂಟಿಯಾಕ್ ಇವರ ಮೇಲೆ ಬಿದ್ದ. ಇಲ್ಲಿನಿಯವರು ಬಲಗುಂದಿ ಸಂಧಿ ಮಾಡಿಕೊಳ್ಳಬಯಸಿದರು. ಸಭೆಯಲ್ಲಿ ಇಲ್ಲಿನ ಮುಖ್ಯಸ್ಥ. ಪಾಂಟಿಯಾಕ್‌ನನ್ನು ಕೊಂದ. ಆಮೇಲೆ ಇಲ್ಲಿನಿಯವರು ಈ 'ಸ್ಟಾರ್ವ್‌ಡ್ ರಾಕ್'ಗೆ ಬಂದು ಶಿಬಿರಹೂಡಿದರು. ಶತ್ರುಗಳು ಆ ಬಂಡೆಯನ್ನು ಹತ್ತುವುದು ಅಸಾಧ್ಯ. ಆದರೆ ಇಲ್ಲಿನಿಯವರು ಇಳಿಯುವುದೂ ಅಷ್ಟೇ ಅಸಾಧ್ಯ. ಹೀಗಾಗಿ ಅವರೆಲ್ಲ ಅನ್ನ ನೀರುಗಳಿಲ್ಲದೆ ಅಲ್ಲೇ ಸತ್ತರು. ಆದರಿಂದ ಅದಕ್ಕೆ ಸ್ಟಾರ್ವ್‌ಡ್ ರಾಕ್ ಎಂಬ ಹೆಸರು ಬಂತು— ಇದು ಜನಸಾಮಾನ್ಯರಲ್ಲಿ ಹರಡಿರುವ ಕಥೆ; ವಾಸ್ತವವಾಗಿ ನಡೆದದ್ದೇ

ಎಂದು ಅನೇಕರ ಅಭಿಪ್ರಾಯ. ಸತ್ತವರ ಪ್ರೇತಗಳು ಅಲ್ಲಿ ಸುಳಿದಾಡುತ್ತವೆ ಯೆಂದು ಬಹು ಕಾಲ ಜನ ನಂಬಿದ್ದರು.

ಇಲ್ಲಿ ನೋಡಬೇಕಾದ ಸ್ಥಳಗಳಿಗೆ ಹೋಗಲು ಪಾರ್ಕಿನ ವ್ಯವಸ್ಥಾಪಕರು ದೊಡ್ಡ ದೋಣಿಗಳನ್ನಿಟ್ಟಿದ್ದಾರೆ. ಸ್ಟಾರ್ವ್‌ಡ್ ರಾಕ್‌ಅನ್ನು ದಾಟಿ ಮುಂದಕ್ಕೆ ಹೋದರೆ 'ಪ್ರೇಮಿಗಳ ಪ್ರಪಾತ' ಸಿಕ್ಕುತ್ತದೆ. ಮದುವೆಯಾಗುವುದು ಸಾಧ್ಯವಿಲ್ಲವೆಂದು ತಿಳಿದು ಇಬ್ಬರು ಪ್ರೇಮಿಗಳು ಅಲ್ಲಿಂದ ಹಾರಿಕೊಂಡು ಸತ್ತರಂತೆ. ಅಲ್ಲಿಂದ ಸ್ವಲ್ಪ ಮುಂದೆ ಗಿಡುಗನ ಬಂಡೆ. ನದಿಗೆ ಇಲ್ಲೊಂದು ಅಡ್ಡಗಟ್ಟೆ ಕಟ್ಟಿ ಲಾಕ್ ವ್ಯವಸ್ಥೆ ಮಾಡಿದ್ದಾರೆ. 'ಇಲ್ಲಿನಾಯ್ ಜಲಮಾರ್ಗ'ದ ವ್ಯವಸ್ಥೆಯಲ್ಲಿ ಇದೂ ಒಂದು ಯೂನಿಟ್. ಕೆನಡ ಮತ್ತು ಸಂಯುಕ್ತ ಸಂಸ್ಥಾನಗಳ ನಡುವೆ ಭಾರಿ ಸರೋವರ ಮಂಡಲ (ಸುಪೀರಿಯರ್, ಹ್ಯೂರನ್, ಮಿಷಿಗನ್, ಈರಿ, ಆಂಟೇರಿಯೊ) ಇದೆಯಷ್ಟೆ. ಈ ಜಲಮಾರ್ಗದಿಂದಾಗಿ ಮಿಸಿಸಿಪಿ ಇಲ್ಲಿ ನಾಯ್ ನದಿಗಳಿಂದ ಆ ಸರೋವರಗಳಿಗೆ ಜಲಯಾನ ಸಾಧ್ಯವಂತೆ.

ಅಡ್ಡಗಟ್ಟೆಯಿಂದ ಆಚೆಗೆ (ಅಲ್ಲಿ ದೋಣಿಯಿಂದಿಳಿದು ಬೇರೊಂದು ದೋಣಿಯನ್ನು ಹತ್ತಬೇಕು) ಸಿಕ್ಕುವ ಕಾಡುದಾರಿಯಲ್ಲಿ ಹೋದರೆ 'ಲಾಳದ ಕಮರಿ'ಯನ್ನು (Horse-shoe canyon) ನೋಡಬಹುದು. ನ್ಯಾಷನಲ್ ಪಾರ್ಕುಗಳಲ್ಲಿರುವ ಬೆಟ್ಟಗುಡ್ಡಗಳನ್ನೂ ಸುಂದರವಾದ ಸ್ಥಳಗಳನ್ನೂ ನೋಡಲು ಅನುಕೂಲವಾಗುವಂತೆ ಮೈಲಿಗಟ್ಟಲೆ ಕಾಡುದಾರಿಗಳನ್ನು ಮಾಡಿದ್ದಾರೆ. ವಾಹನಗಳಲ್ಲಿ ಹೋಗುವುದಕ್ಕಿಂತ ಈ ದಾರಿಗಳಲ್ಲಿ ನಡೆದೋ ಅಥವಾ ಕುದುರೆಗಳ ಮೇಲೋ ಹೋಗುವುದು ಹಿತ. ಸಂಯುಕ್ತ ಸಂಸ್ಥಾನಗಳ ಪೂರ್ವಭಾಗದಲ್ಲಿರುವ ಅಪಲೇಚಿಯನ್ ಪರ್ವತಮಾಲೆಯನ್ನು ಹೀಗೆ ನೋಡಬೇಕೆನ್ನುವವರಿಗಾಗಿ ದಕ್ಷಿಣದಜಾರ್ಜಿಯದಿಂದ ಉತ್ತರದ ಮೆಯ್ನ್‌ವರೆಗೆ ಅಪಲೇಚಿಯನ್ ಟ್ರೆಯ್ಲ್ (Appalachian trail) ಎಂಬ 2000 ಮೈಲಿ ಉದ್ದದ ಕಾಡುದಾರಿಯನ್ನು ಮಾಡಿದ್ದಾರೆಂದು ನಾನು ಓದಿದ್ದೆ. ನಾನು ನಮ್ಮ ಪಶ್ಚಿಮ ಘಟ್ಟಗಳಲ್ಲೂ ಬಾಬಾಬುಡನ್ ಪರ್ವತದಲ್ಲೂ ತಕ್ಕಮಟ್ಟಿಗೆ ಕಾಲುನಡಗೆಯ ಪ್ರಯಾಣದ ಆನಂದವನ್ನು ಅನುಭವಿಸಿದ್ದೇನೆ. ಅಪಲೇಚಿಯನ್ ಟ್ರೆಯ್ಲ್‌ನಲ್ಲಿ ಸುತ್ತುವ ವಯಸ್ಸು ಕಳೆದುಹೋಯಿತಲ್ಲ ಎಂದು ಮನಸ್ಸು ಮರುಗುತ್ತಿದೆ. ಆ ಟ್ರೆಯ್ಲ್‌ನಲ್ಲಿ ಕೊಲೆಗಾರರ ಚಟುವಟಿಕೆ ಎಷ್ಟು ಮಟ್ಟಿಗಿದೆ ಎಂಬುದೂ ವಿಚಾರಿಸಬೇಕಾದ ವಿಷಯ!

ಸ್ಟಾರ್ವ್‌ಡ್ ರಾಕ್ ಪಾರ್ಕಿನಲ್ಲಿ ದಾರಿಗಳು ನೂರಾರು ಮೈಲಿ ಉದ್ದವಿಲ್ಲದಿದ್ದರೂ ಬಹು ಸುಂದರವಾದ ಸ್ಥಳಗಳಿಗೆ ಒಯ್ಯುತ್ತವೆ.

ನಾವು ಲಾಳದ ಕಮರಿಗೆ ನಡೆದೇ ಹೋದೆವು. ಆ ಕಮರಿಯ ತುದಿಯಲ್ಲಿ, 'ಲಾಳ' ಅರ್ಧಚಂದ್ರಾಕಾರವಾಗಿ ಬಾಗಿರುವ ಕಡೆ, ಸಣ್ಣದೊಂದು ಜಲಪಾತವಿದೆ. ಬೀಳುನೀರಿಗೆ ಮೈಯೊಡ್ಡಲಾಗುವುದಿಲ್ಲವಾದರೂ ತುಂತುರು ತುಂತುರಾಗಿ ಸಿಡಿಯುವ ಜಲಪಾತದ ಸೆರಗಿನಲ್ಲಿ ಸ್ನಾನಮಾಡುವುದು ಹಿತ. ಬಣ್ಣ ಬಣ್ಣದ ಬಟ್ಟೆಗಳನ್ನು ಧರಿಸಿ ಸ್ನಾನಮಾಡುತ್ತಿರುವ, ಜಲಕೇಳಿಯಾಡುತ್ತಿರುವ, ಬಲೂನುಗಳನ್ನು ಹಾರಿಸುತ್ತಿರುವ ಮಕ್ಕಳನ್ನು ನೋಡುವುದೂ ಹಿತ. ಬಿಕಿನಿ ಕೂಡ ಈಗ ಅಭ್ಯಾಸವಾಗಿಹೋಗಿದೆ. ಮೊದಮೊದಲು ಆದ ಅಸಹ್ಯ ಈಗ ಆಗುತ್ತಿಲ್ಲ. ಅದನ್ನು ಈಗಲೂ ಸಮರ್ಥಿಸಲಾರೆನಾದರೂ 'ಹಾಳಾಯಿತು ಬಿಡು' ಎಂದುಕೊಂಡು ಅದನ್ನು ಮನಸ್ಸಿನಿಂದ ಹೊರದೂಡಬಲ್ಲೆ.

ಅಲ್ಲೇ ಅರ್ಧ ಘಂಟೆ ಕಳೆದವು. ದೋಣಿಯು ನಿಲ್ದಾಣಕ್ಕೆ ಬಂದ 10–15 ನಿಮಿಷಗಳಲ್ಲೇ ಮತ್ತೊಂದು ದೋಣಿ ನಮ್ಮನ್ನು ಮುಂದಕ್ಕೆ ಒಯ್ದಿತು. ಸ್ವಲ್ಪ ದೂರ ಮುಂದೆ ಹೋದರೆ ಲಿಂಕನ್ ಇಳಿದುಕೊಳ್ಳುತ್ತಿದ್ದ ಮನೆಯೊಂದನ್ನು ತೋರಿಸುತ್ತಾರೆ. ಅಷ್ಟು ಹೊರತು ಇನ್ನೇನೂ ವಿಶೇಷವಿಲ್ಲ. ಐತಿಹಾಸಿಕ ದೃಷ್ಟಿಯಿಂದ ಈ ಪ್ರಾಂತಕ್ಕೆ ಸ್ವಲ್ಪ ಪ್ರಾಮುಖ್ಯವಿದೆ. ಇಲ್ಲಿಗೆ ಮೊದಲು ಬಂದವರು ಫ್ರೆಂಚರಂತೆ. ಆಗಿನ ಪ್ರಸಿದ್ಧ ಪುರುಷರಾದ ಲಾ ಸಾಲ್, ಮಾರ್ಕೆತ್ (La Salle, Marquette) ಮೊದಲಾದವರ ಹೆಸರುಗಳನ್ನು ಇಲ್ಲಿನ ಊರುಗಳಿಗೆ ಇಟ್ಟಿದ್ದಾರೆ. ಇದು ಫ್ರೆಂಚರು, ಸ್ಪೆಯ್ನಿನವರು, ಇಂಗ್ಲಿಷರು ಹೊಡೆದಾಡಿದ ಸ್ಥಳ. ಅವರ ವಂಶಸ್ಥರಿದ ಈಗ ಸಂಯುಕ್ತ ಸಂಸ್ಥಾನಗಳ ಪೌರರು; ತಮ್ಮ ದೇಶದ ವಿಷಯದಲ್ಲಿ ಅಭಿಮಾನವನ್ನೂ ಬೆಳೆಸಿಕೊಂಡಿದ್ದಾರೆ. ಆದರೂ ತಮ್ಮ ಪೂರ್ವಜರ ದೇಶವೆಂದರೆ ಈಗಲೂ ಅವರ ಮನಸ್ಸು ಉಬ್ಬುತ್ತದೆ. "ನನ್ನ ಪೂರ್ವಿಕರು ಫ್ರಾನ್ಸ್‌ನಿಂದ—ಸ್ವಾತಂತ್ರ್ಯಕ್ಕಾಗಿ ಮೊಟ್ಟಮೊದಲು ಹೋರಾಡಿದ ದೇಶದಿಂದ—ಬಂದವರು" ಎಂದು ಒಬ್ಬ ಹೆಮ್ಮೆಯಿಂದ ಹೇಳಿದ,

ನಾವು ನೈಲ್ಸ್‌ಗೆ ಹಿಂದಿರುಗುವಾಗ ದಾರಿಯಲ್ಲಿ ಒಂದು ಸಣ್ಣ ರಕ್ಷಿತ ವನದಲ್ಲಿ ಸ್ವಲ್ಪ ಹೊತ್ತು ತಂಗಿದೆವು. ಅಲ್ಲೂ ಒಂದು ಸಣ್ಣ ಕೃತಕ ಜಲಪಾತ, ಅಡ್ಡಗಟ್ಟೆಯ ಮೇಲಿನಿಂದ ಇಳಿಯುವ ಹೊಳೆ. ಇದುವರೆಗೆ ನಾನು ಕಂಡ ನದಿಯೊಂದರ ನೀರಿನಲ್ಲೂ ನೀರಿನ ಲಕ್ಷಣವಿಲ್ಲ. ನೀರಿನಲ್ಲಿ ನಾನು ಹಲವಾರು ಬಗೆಯ ಸೊಬಗನ್ನು ಕಂಡಿದ್ದೇನೆ. ನಮ್ಮ ಕೃಷ್ಣಾ ಗೋದಾವರಿ ನದಿಗಳಲ್ಲಿ ಮಳೆ ಹುಯ್ದ ಮಾರನೆಯ ದಿನ ಕಪ್ಪಗೆ ಬಗ್ಗಡವಾದ ನೀರು ಹರಿಯುತ್ತದೆ.... ಹತ್ತಿಯ ಕ್ಷೇತ್ರದ ಕಪ್ಪುಮಣ್ಣಿನಿಂದಾಗಿ. ಇತರ ಕಡೆ, ಕೆಂಪು ಮಣ್ಣಿರುವ ಪ್ರಾಂತದಲ್ಲಿ ಬಗ್ಗಡದ ನೀರು ಬಂದರೂ ಆ ನೀರಿಗೆ ಕರಗಿಸಿ ಪುಟಕ್ಕಿಟ್ಟ

ಅಪಗಂಜಿಯ ಬಣ್ಣ ಬರುತ್ತದೆ. ಅದರ ಮೇಲೆ ಬಿಸಿಲು ಬಿದ್ದಾಗಲಂತೂ ಅದು ನಿಜವಾಗಿಯೂ 'ಸ್ವರ್ಣದೀ, ಸುರದೀರ್ಘಿಕಾ'—ಸ್ವರ್ಗದ ನದಿ, ದೇವಗಂಗೆ!

ಮಳೆಗಾಲ ಕಳೆದ ಮೇಲೆ ನದಿಗಳಲ್ಲಿ ಕಾಣುವ ತಿಳಿನೀರಿನ ಸೌಂದರ್ಯ ಮತ್ತೊಂದು ಬಗೆಯದು. ನಮ್ಮ ಊರಿನ ಬಳಿ ಹರಿಯುವ ಹೇಮಾವತಿಯಲ್ಲಿ ಇದನ್ನು ಮನಸಾರ ಸವಿದಿದ್ದೇನೆ. ನೀರಿನಲ್ಲಿ ಪಾತ್ರದ ಮರಳಿನ ಒಂದೊಂದು ಕಣವೂ ಪ್ರತ್ಯೇಕವಾದಂತೆ ಕಾಣುತ್ತದೆ; ಅಲ್ಲಲ್ಲಿ ನುಣುಪಾದ ಬಟಾಣಿ ಕಲ್ಲು; ಮೇಲೆ ಬಿಸಿಲಿನ ಹರವು ಸಣ್ಣ ಸಣ್ಣ ಅಲೆಗಳಿಗೆ ಅಲಗಿನ ಹೊಳಪು ಕೊಡುತ್ತದೆ—'ಬೇರೆ ಮೆರುಗು ನೀರಿಗೆ!' ಫಿಲಿಪೀನ್ಸ್‌ನಲ್ಲಿ ಮೆಯೋನ್ ಅಗ್ನಿಪರ್ವತದ ತಪ್ಪಲಿನ ಕೊಳಗಳಲ್ಲಿ 'ಇದೇನು ನೀರೋ ಗಾಜೋ!' ಎಂದು ಭ್ರಮೆ ತರುವಂಥ ಪಾರದರ್ಶಕ ಸ್ವಚ್ಛತೆಯನ್ನು ಕಂಡಿದ್ದೇನೆ. ನಂದ್ಯಾಲ್ ಹತ್ತಿರದಲ್ಲಿರುವ ಮಹಾನಂದಿ ಕ್ಷೇತ್ರದ ಕೊಳದಲ್ಲಿ ಕಂಡಂಥ ಸ್ವಚ್ಛತೆಯನ್ನು ಇನ್ನೆಲ್ಲೂ ಕಂಡಿಲ್ಲ, ಹೇಮಾವತಿಯೊಂದನ್ನು ವಿನಾಯಿಸಿ. ನನ್ನ ಹೇಮಾವತಿ ಸ್ಪರ್ಧೆಗೆ ಮೀರಿದ್ದು—not for competition!

ಇವತ್ತು ನೋಡಿದ ನೀರಿನಲ್ಲಿ ಹೊಂಬಣ್ಣ ಹಾಗಿರಲಿ, ಸ್ವಚ್ಛತೆ ಹಾಗಿರಲಿ, ನಮ್ಮ ಹತ್ತಿ ಪ್ರಾಂತದ ನದಿಗಳಲ್ಲಿ ಕಾಣುವ ಕಪ್ಪಿನ ಸಂಪತ್ತು ಕೂಡ ಇಲ್ಲ! ಇದು ಏನೋ ಒಂದು ಬಗೆಯ ಕೊಳಕು ಕಂದುಬಣ್ಣ—a dirty grey. ಇದು ಪ್ರಕೃತಿಗೆ ಮಾನವ ಕೊಟ್ಟ ಕೊಡುಗೆಯಿರಬೇಕು. ಬೈಬಲ್ ಹೇಳುವ ಪ್ರಕಾರ ದೇವರು ಪ್ರಪಂಚವನ್ನು ನಿರ್ಮಿಸಿದ ನಂತರ ಅದರ ಮೇಲೆ ಕಣ್ಣು ಹಾಯಿಸಿ 'ಚೆನ್ನಾಗಿದೆ' ಅಂದುಕೊಂಡನಂತೆ. ಕೈಗಾರಿಕೆಯ ಯುಗದ ಮಾನವ 'ಚೆನ್ನಾಗಿದೆ ಅಂತೀಯಾ? ಒಂದು ನಿಮಿಷ ತಾಳು' ಎಂದು ತನ್ನ ಕೈಚಳಕ ತೋರಿಸಿದ!

## ನನ್ನ ಅಮೆರಿಕನ್ ಬೀಗರು (3)

### ಲೇಕ್ ಜಿನೀವಾ, ಲಡಿಂಗ್ಟನ್; ಲಿಂಡಳ ಭೇಟಿ

ಮೆಕ್‌ಮಿಲನ್ ದಂಪತಿಗಳನ್ನು ಲೇಕ್ ಜಿನೀವಾದಲ್ಲಿ ಸಂಧಿಸಬೇಕೆಂದು ಗೊತ್ತಾಗಿದ್ದ ಕಾರ್ಯಕ್ರಮವನ್ನು ಒಂದೆರಡು ವಾರ ಮುಂದಕ್ಕೆ ಹಾಕಬೇಕಾಯಿತು. ಆ ವೇಳೆಗೆ ಬೇಸಗೆ ಸ್ವಲ್ಪ ಮುಂದುವರಿದಿತ್ತಾದ್ದರಿಂದ

ಸರೋವರದ ಸಾಮೀಪ್ಯ ಮತ್ತಷ್ಟು ಹಿತವಾಯಿತು. ಈ ಸ್ಥಳಕ್ಕೆ (ಊರಿಗೆ ಮತ್ತು ಸರೋವರಕ್ಕೆ) ಸ್ವಿಟ್ಸರ್ಲೆಂಡಿನ ಪ್ರಸಿದ್ಧ ಸರೋವರದ ಹೆಸರನ್ನಿಟ್ಟಿದ್ದಾರೆ. ಇಂದು 'ಅಮೆರಿಕನ್ನರು' ಎನ್ನಿಸಿಕೊಳ್ಳುವವರ ಪೂರ್ವಿಕರು ಯೂರೋಪಿನ ಬೇರೆ ಬೇರೆ ದೇಶಗಳಿಂದ ಬಂದು ಇಲ್ಲಿ ನೆಲಸಿದವರಷ್ಟೆ. ಆದ್ದರಿಂದ ಇಲ್ಲಿಯ ಸ್ಥಳನಾಮ ವ್ಯಕ್ತಿನಾಮಗಳಲ್ಲಿ ಯೂರೋಪಿನ ಪ್ರಭಾವ ಕಾಣುತ್ತದೆ. ಬಿಳಿಯರು ತಾವು ಜಯಿಸಿ ಹೆಚ್ಚು ಕಡಮೆ ನಿರ್ನಾಮಮಾಡಿದ ಕೆಂಪು ಇಂಡಿಯನ್ನರ ಹೆಸರುಗಳನ್ನೂ ಅನೇಕ ಕಡೆ ಉಳಿಸಿಕೊಂಡಿದ್ದಾರೆ— ಷಿಕಾಗೊ, ವಿಸ್ಕಾನ್ಸಿನ್, ಮಾನಿಟೋಬ ಇತ್ಯಾದಿ. ಇವುಗಳ ಜೊತೆಗೆ ಇತರ ದೇಶಗಳ ಹೆಸರುಗಳನ್ನೂ ಅಲ್ಲಲ್ಲಿ ಕಾಣಬಹುದು. ಅಮೆರಿಕದಲ್ಲಿ ಮಾಸ್ಕೋ ಇವೆ, ದೆಹಲಿಯೂ ಇದೆ! ಆದರೆ ಒಟ್ಟಿನಲ್ಲಿ ಬಿಳಿಯರು ನೆಲಸಿದ ಸ್ಥಳಗಳಿಗೆ ಯೂರೋಪಿನ ಹೆಸರುಗಳನ್ನಿಟ್ಟಿರುವುದೇ ಹೆಚ್ಚು.

ಲೇಕ್ ಜಿನೀವಾದ ಸುತ್ತ ಏರು ಭೂಮಿಯಿದ್ದರೂ ಅದು ಬೆಟ್ಟ, ಗುಡ್ಡ ಎನ್ನಿಸಿಕೊಳ್ಳುವಷ್ಟು ಎತ್ತರವಾಗಿಲ್ಲ. ಸ್ವಿಟ್ಸರ್ಲೆಂಡಿನ ಜಿನೀವಾ ಸರೋವರಕ್ಕೆ ಹಿನ್ನೆಲೆಯಾಗಿರುವ ಹಿಮಕಿರೀಟವನ್ನು ಧರಿಸಿದ ಪರ್ವತಪಂಕ್ತಿಯನ್ನು ನೆನೆದರೆ —ಅದನ್ನು ಚಿತ್ರದಲ್ಲಿ ಮಾತ್ರ ನೋಡಿರುವ ನನ್ನಂಥವನು ಹೋಲಿಕೆಗೆ ಕೈ ಹಾಕಬಾರದು—ಇಲ್ಲಿಯ ದೃಶ್ಯ ಅಷ್ಟೇನೂ ಭವ್ಯವಲ್ಲ ಎನ್ನಿಸಬಹುದು. ಆದರೂ ಇಲ್ಲಿ ಪರ್ವತದ ಭವ್ಯತೆಯಿಲ್ಲದಿದ್ದರೂ ವನರಾಜಿಯ ಸೌಂದರ್ಯವಿದೆ. ವಾಸ್ತವವಾಗಿ ಈ ಸರೋವರದ ದಡದಲ್ಲಿರುವುದು ವನವಲ್ಲ, ಉಪವನ. ಷಿಕಾಗೋವಿನ ಕೋಟೀಶ್ವರರು ಇಲ್ಲಿಯ ತೀರ ಪ್ರದೇಶವನ್ನೆಲ್ಲ ಕೊಂಡು ವಾರಾಂತ್ಯದಲ್ಲಿ ಇಲ್ಲಿಗೆ ಬಂದು ಒಂದೆರಡು ದಿನ ಇರುವುದಕ್ಕಾಗಿ ಉಪವನಗಳ ನಡುವೆ ಅರಮನೆಗಳನ್ನು ಕಟ್ಟಿಕೊಂಡಿದ್ದಾರೆ; ಸ್ವಂತ ವಿಹಾರನೌಕೆಗಳನ್ನೂ ವಿಮಾನಗಳನ್ನೂ ಇಟ್ಟುಕೊಂಡಿದ್ದಾರೆ. ಅವರ ಮನೆಗಳಿಗೆಲ್ಲ ಟಪಾಲುಹಂಚಲು ಸುಂದರವಾದ ಪುಟ್ಟ ಹಡಗಿದೆ. ನಾಲ್ಕು ಡಾಲರು ಕೊಟ್ಟರೆ ಅದರಲ್ಲಿ ಕುಳಿತು ಸರೋವರವನ್ನು ಸುತ್ತುಗಟ್ಟಬಹುದು. ಹಡಗು ನಡಸುವವನು ಆ ಸೌಧಗಳನ್ನು ಬೆರಳಿಟ್ಟು ತೋರಿಸಿ 'ಇದು ಚ್ಯೂಯಿಂಗ್ ಗಮ್ (chewing gum) ಚಕ್ರವರ್ತಿಯ ಮನೆ. ಇದಕ್ಕೆ ಆರು ಮಿಲಿಯನ್ ಡಾಲರು ಖರ್ಚಾಯಿತು. ಇದು ಸಾಬೂನು ಸಾಮ್ರಾಟನ ಮನೆ, ಇದಕ್ಕೆ ಎಂಟು ಮಿಲಿಯನ್ ಖರ್ಚಾಯಿತು' ಎಂದು ಮುಂತಾಗಿ ತಾನೇ ಲೆಕ್ಕಬರೆದು ತಿಳಿದುಕೊಂಡವನಂತೆ ಆ ಭಾರಿ ಸಂಖ್ಯೆಗಳನ್ನು ಚಪ್ಪರಿಸುತ್ತಾನೆ. ನೀವು 'ಹಾಗೇ! ಆರು ಮಿಲಿಯನ್! ಎಂಟು ಮಿಲಿಯನ್ !' ಎಂದು ಕಣ್ಣರಳಿಸಿ ಆಶ್ಚರ್ಯದಿಂದ ತಲೆದೂಗಿದರೆ

ಅವನಿಗೆ ಆನಂದ. ಬಾಯಲ್ಲಿ ಆರು ಮಿಲಿಯನ್ ಹತ್ತು ಮಿಲಿಯನ್ ಎಂದು ಉಚ್ಚರಿಸಿದ್ದರಿಂದಲೇ ಆ ಒಡಪಾಯಿಗೆ ಇಂದ್ರಲೋಕ ಪ್ರಾಪ್ತಿ !

ಮೆಕ್‌ಮಿಲನ್ ದಂಪತಿಗಳು ತಮ್ಮ ಟ್ರೇಯ್ಲರ್ ತಂದು ಅದರಲ್ಲೇ ಇಳಿದು ಕೊಂಡಿದ್ದರು. ಅವರು ತಮ್ಮ ಊರಿನಲ್ಲಿರುವಾಗಲೂ ಮನೆಯಲ್ಲಿ ಅಡಿಗೆ ಮಾಡುವುದನ್ನು ಸಾಧ್ಯವಾದಮಟ್ಟಿಗೂ ತಪ್ಪಿಸಿಕೊಳ್ಳುತ್ತಾರೆ. ಪ್ರವಾಸ ಹೊರಟಾಗಲಂತೂ ರೆಸ್ಟೋರಾಂಟುಗಳನ್ನೇ ನೆಚ್ಚಬೇಕಷ್ಟೆ. ಅವತ್ತು ನಮಗೂ ಅವರ ಆತಿಥ್ಯ. ಲೇಕ್ ಜಿನೀವಾದ ರೆಸ್ಟೋರಾಂಟು ಉತ್ತಮದರ್ಜೆಯದು. ಅದರ ಸುತ್ತಮುತ್ತ ಇಂಡಿಯನ್ ವಾತಾವರಣವನ್ನು ಕಲ್ಪಿಸಲು ಪ್ರಯತ್ನ ಮಾಡಿದ್ದದ್ದು ಒಂದು ವಿಶೇಷ. ಒಂದು ಕಡೆ ಇಂಡಿಯನ್ನರ ಟೀಪೀಯನ್ನು (tepee—ಕೋನಾಕಾರದ ಇಂಡಿಯನ್ ಗುಡಿಸಲು) ಹೋಲುತ್ತಿದ್ದ ಸಣ್ಣ ಕಟ್ಟಡ. ಪರಿಚಾರಿಕೆಯರೆಲ್ಲ ಕುಚ್ಚುಗಳಿರುವ ಲಂಗ ಹಾಕಿಕೊಂಡಿದ್ದರು; ತಲೆಗೆ ಒಂದು ಪಟ್ಟಿಕಟ್ಟಿ ಅದಕ್ಕೆ ಹಕ್ಕಿಯ ಗರಿಗಳನ್ನು ಸಿಕ್ಕಿಸಿಕೊಂಡಿದ್ದರು. ಬಹುಶಃ ಈ ವೇಷವೆಲ್ಲ ಇಂಡಿಯನ್ನರಿಗೆ ಗೌರವ ತೋರುವುದಕ್ಕಾಗಿ ಕಟ್ಟಿದ್ದಲ್ಲ; ತಮ್ಮ ರೆಸ್ಟೋರಾಂಟಿಗೆ ಒಂದು ವೈಶಿಷ್ಟ್ಯವನ್ನು ಒದಗಿಸಿ ಗಿರಾಕಿಗಳನ್ನು ಸೆಳೆಯುವುದಕ್ಕಾಗಿ ಮಾಡಿದ ಉಪಾಯವಿರಬೇಕು. ಅದು ಹೇಗಾದರೂ ಇರಲಿ, ಆ ಗರಿಗಳ ಪ್ರದರ್ಶನ ಸುನೀಲನಿಗೆ ಬಹಳ ಆನಂದ ಕೊಟ್ಟಿತು. ನಮಗೆ ತಿಂಡಿ ತೀರ್ಥಗಳನ್ನು ಬಡಿಸಿದ ಸೇವಕಿ ಅವನಿಗೆ ಗರಿಗಳಿಂದ ಮಾಡಿದ ಶಿರಪೇಷನ್ನು ತಂದು ಕೊಟ್ಟಾಗಲಂತೂ ಅವನನ್ನು ಹಿಡಿಯುವವರೇ ಇಲ್ಲ.

ಇಲ್ಲಿಯ ರೆಸ್ಟೋರಾಂಟುಗಳಿಗೆ ಹೋದರೆ ಏನು ತರಿಸಬೇಕೆನ್ನುವುದು ನನಗೆ ಇನ್ನೂ ನಿಶ್ಚಯವಾಗಿಲ್ಲ. ಗ್ರಿಲ್ಡ್ ಚೀಸ್ ಸ್ಯಾಂಡ್‌ವಿಚ್, ಫ್ರೆಂಚ್‌ಫ್ರೈ (grilled cheese sandwich, french fry) ಇವೆರಡು ನನಗೆ ಪರಿಚಿತವಾಗಿದ್ದ ಹೆಸರುಗಳು. ಮೆಕ್‌ಮಿಲನ್ 'ನೀವೇನು ತೆಗೆದಕೊಳ್ಳುತ್ತೀರಿ?' ಎಂದಾಗ ನಾನು ಚಿಕ್ಕಂದಿನಿಂದಲೂ ಅಮೆರಿಕನ್ ರೆಸ್ಟೋರಾಂಟುಗಳಲ್ಲೇ ಬೆಳೆದವನಂತೆ ಸೋಗು ಹಾಕಿಕೊಂಡು 'ಎಲ್ಲಿ, ನೋಡೋಣ. ಅಂ....ಒಂದು ಪ್ಲೇಟು ಗ್ರಿಲ್ಡ್ ಚೀಸ್ ಸ್ಯಾಂಡ್‌ವಿಚ್, ಜೊತೆಗೆ ಫ್ರೆಂಚ್ ಫ್ರೈ. ಅಂ.... ಒಂದು ಎಳೆಗೆಂಪಿನ ಅಳಿಲು ತಿಂಡಿಯನ್ನೆಲ್ಲ ಇಳಿಸುವುದಕ್ಕೆ' ಎಂದು ಹೇಳಿದೆ. ಎಳೆಗೆಂಪಿನ ಅಳಿಲು (Pink Squirrel) ಎಂಬ ಪದಗಳು ಮೆನುಕಾರ್ಡಿನ (menu card) ಪಾನೀಯಗಳ ಪಟ್ಟಿಯಲ್ಲಿ ನನ್ನ ಕಣ್ಣಿಗೆ ಬಿದ್ದಿತ್ತು. ಅಮೆರಿಕನ್ನರು ಕೆಲವು ವೇಳೆ (ಜನರ ಗಮನವನ್ನು ಕೇಂದ್ರೀಕರಿಸುವುದಕ್ಕಾಗಿ ?) ಕೊಡುವ ಹೆಸರುಗಳು ವಿಚಿತ್ರ ಮಾತ್ರವಲ್ಲ, ಅಸಹ್ಯವಾದ ಚಿತ್ರಗಳನ್ನು

ಮನಸ್ಸಿಗೆ ತರುತ್ತವೆ: Tombstone Pizza (ಗೋರಿ ಕಲ್ಲಿನ ಪೀಟ್ಜ). Hell-roaring Motel ('ಗರ್ಜಿಸುವ ನರಕ' ಮೋಟೆಲು,) Hanging Tree Inn ('ಗಲ್ಲುಮರ' ಇನ್)—ಈ ಹೆಸರುಗಳೆಲ್ಲ ನಾನು ವಾಸ್ತವವಾಗಿ ಜಾಹಿರಾತುಗಳಲ್ಲಿ, ಬೋರ್ಡುಗಳಲ್ಲಿ ಕಂಡದ್ದು! ಇಂಥ ಹೆಸರನ್ನೇಕೆ ಕೊಡುತ್ತಾರೆಂಬುದನ್ನು ಮನಶ್ಶಾಸ್ತ್ರಜ್ಞರು ನಿರ್ಣಯಿಸಬೇಕು!

ನಾನು 'ಎಳೆಗೆಂಪಿನ ಅಳಿಲು' ಎಂಬ ಹೆಸರನ್ನು ಉಚ್ಚರಿಸಿದಾಗ ನಸು ನಕ್ಕದ್ದನ್ನು ಗಮನಿಸಿ ಮೆಕ್‌ಮಿಲನ್ ಹೇಳಿದರು:

"ಪರವಾಯಿಲ್ಲ ರಾಯರೆ, ಚೆನ್ನಾಗಿ ಮುಂದುವರಿಯುತ್ತಾ ಇದೀರಿ. ಹುಷಾರಾಗಿರಿ, ಇಲ್ಲದಿದ್ದರೆ ಅದರಲ್ಲಿ (ಪಿಂಗ್ ಸ್ಕ್ವಿರಲ್‌ನಲ್ಲಿ) ಮುಳುಗಿ ಹೋದೀರಿ. ಆದರೆ ಹಾಗೆ ನೀವು ಕುಡಿದು ಮತ್ತರಾದರೆ 'ನೀವೂ ಅಮೆರಿಕನ್ನರು' ಎಂದು ನಾವು ಒಪ್ಪಿಕೊಳ್ಳುತ್ತೇವೆ!"

ಪಿಂಕ್ ಸ್ಕ್ವಿರಲ್ ಎನ್ನುವ್ದು ಮಾದಕಪಾನೀಯ. ನಾನು ಕುಚೋದ್ಯ ಮಾಡುತ್ತಿದ್ದೆನೆಂದು ಮನಗಂಡ ಮೆಕ್‌ಮಿಲನ್ ನನಗೆ ಫಲಾಮೃತ ತರಿಸಿ ಕೊಟ್ಟರು. ಅವರೂ ಮದ್ಯ ಕುಡಿಯುವವರಲ್ಲ.

* * *

ಮೆಕ್‌ಮಿಲನ್ ದಂಪತಿಗಳು ಲೇಕ್ ಜಿನೀವಾದಿಂದ ಲಿಂಕನ್‌ಗೆ ಹೋಗಿ ಕೆಲವು ದಿನಗಳಿದ್ದು ಅನಂತರ ಮತ್ತೆ ಹೊರಟು ಮಿಷಿಗನ್ ರಾಜ್ಯದ ಲಡಿಂಗ್ಟನ್‌ನಲ್ಲಿ ಕೆಲವು ವಾರ ಇರುವ ಏರ್ಪಾಡುಮಾಡಿಕೊಂಡಿದ್ದರು. "ನೀವೂ ಅಲ್ಲಿಗೆ ಬನ್ನಿ. ಒಂದು ವಾರವಾದರೂ ನಮ್ಮೊಡನೆ ಇರಬೇಕು. ಸುತ್ತ ಮುತ್ತ ನೋಡಬೇಕಾದ ಸ್ಥಳಗಳು ಬೇಕಾದಷ್ಟಿವೆ" ಎಂದು ನನಗೆ ಬಹಳ ಆದರದ ಆಹ್ವಾನ ಕೊಟ್ಟರು. ಲಡಿಂಗ್ಟನ್ ಕೈಗಾರಿಕೆಯ ದಟ್ಟಣೆಯುಳ್ಳ ಸ್ಥಳಗಳಿಂದ ದೂರವಾಗಿದೆಯೆಂದೂ ವಾತಾವರಣ ಹೊಲಸಾಗಿಲ್ಲವೆಂದೂ ರಾಮು ಹೇಳಿದ್ದ. ಮೈಯಲುಗದಂತೆ ಸುಖವಾದ ಪ್ರಯಾಣ, ಹಸುರಿನ ಸಂಪತ್ತು, ಸರೋವರಗಳ ಪ್ರಸನ್ನತೆ—ಈ ಸುಂದರ ದೇಶದಲ್ಲಿ ಸುತ್ತುವುದೇನೋ ಆನಂದ. ಆದರೆ ರಾಮು ತನ್ನ ರೋಗಿಗಳನ್ನು ಒಂದು ವಾರ ಮರೆತು ನನ್ನ ಜೊತೆ ಅಲೆಯುವಂತಿಲ್ಲ. ಲಡಿಂಗ್ಟನ್‌ಗೆ ಹೋದರೆ ನಾನೊಬ್ಬನೇ ಹೋಗಬೇಕು. ಮೆಕ್‌ಮಿಲನ್‌ರ ಸಹವಾಸವೇನೋ ಹಿತವಾಗಿತ್ತು. ಅವರ ಹಾಸ್ಯ ಮನೋವೃತ್ತಿ, ಸರಳತೆ, ವಿಶ್ವಾಸ, ನನ್ನ ಭೇಟಿ ಸಂತೋಷಕರವಾಗಲೆಂದು ಅವರು ವಹಿಸಿಕೊಂಡ ತೊಂದರೆ—ಇದೆಲ್ಲವನ್ನೂ ನಾನು ಮೆಚ್ಚಿಕೊಂಡಿದ್ದೆ. ಆದರೂ ಒಂದು ವಾರ ಅವರೊಡನಿರುವುದೆಂದರೆ ಯುಕ್ತ ಮಿತಿಯನ್ನು ಮೀರಿ

ದಂತಾಗಬಹುದೇನೊ ಎಂಬ ಶಂಕೆ. "ನಿಮ್ಮ ಆದರದ ಆಹ್ವಾನಕ್ಕಾಗಿ ವಂದನೆಗಳು. ಸಂತೋಷದಿಂದ ಬರುತ್ತೇನೆ. ಇಬ್ಬರ ಅನುಕೂಲವನ್ನೂ ನೋಡಿಕೊಂಡು, ಭೇಟಿಯ ಕಾಲವನ್ನು ನಿಶ್ಚಯಿಸೋಣ. ನಿಮಗೆ ಫೋನ್ ಮಾಡುತ್ತೇನೆ" ಎಂದು ಹೇಳಿ ಸಮಸ್ಯೆಯನ್ನು ಮುಂದೂಡಿದೆ.

## ಅತಿಥಿ, ಅತಿಥೇಯ—ಭಾರತದಲ್ಲಿ ಮತ್ತು ಅಮೆರಿಕದಲ್ಲಿ

ಅಮೆರಿಕನ್ನರ ಮನೆಯಲ್ಲಿ ಅತಿಥಿಯಾಗಿರುವುದಕ್ಕೂ ಭಾರತದಲ್ಲಿ ನಮ್ಮ ಬಂಧುಮಿತ್ರರ ಮನೆಯಲ್ಲಿ ಅತಿಥಿಯಾಗಿರುವುದಕ್ಕೂ ವ್ಯತ್ಯಾಸವಿದೆ. ಇವರಲ್ಲಿ ಬಂಧುಗಳು ಒಬ್ಬರನ್ನೊಬ್ಬರು ನೋಡಬೇಕೆನ್ನಿಸಿದಾಗ, ಅಥವಾ ಕೇವಲ ಯೋಗಕ್ಷೇಮ ವಿಚಾರಿಸಬೇಕೆನ್ನಿಸಿದಾಗ ಮೊದಲೇ ವರ್ತಮಾನ ಕೊಡದೆ ಯಾವಾಗ ಬೇಕಾದರೂ ಹೋಗುವುದುಂಟು. ಫೋನ್ ಸೌಕರ್ಯ ಬಹಳ ಸುಲಭವಾದ್ದರಿಂದ ಫೋನ್ ಮಾಡಿ ಅವರ ಅನುಕೂಲ ತಿಳಿದುಕೊಳ್ಳುವುದು ಸಾಮಾನ್ಯ. ಆದರೆ ಒಬ್ಬರು ಮತ್ತೊಬ್ಬರ ಮನೆಯಲ್ಲಿ ನಾಲ್ಕು ದಿನ ಇರುವ ಉದ್ದೇಶವಿದ್ದರೆ ಔತನವಿಲ್ಲದೆ ಹೋಗುವುದು ಅಪರೂಪ. It is just not done !— ಅಂದರೆ ಹಾಗೆ ಮಾಡುವುದು ಅಸಭ್ಯತನ! (ಎಲ್ಲ ಸಾಮಾನ್ಯ ನಿಯಮಗಳಿಗೂ ಇರುವಂತೆ ಇದಕ್ಕೂ ವಿನಾಯಿತಿಗಳುಂಟು.) ತಂದೆಮಕ್ಕಳು ಒಬ್ಬರ ಮನೆಗೊಬ್ಬರು ಹೋಗಿ ನಾಲ್ಕು ದಿನ ಇದ್ದುಬರಬೇಕೆನ್ನಿಸಿದರೂ ಅವರು ಆಹ್ವಾನಕ್ಕಾಗಿ ಕಾಯುವುದು ಒಳ್ಳೆಯದು. ಒಂದು ವೇಳೆ ಕಾಯದಿದ್ದರೆ ಮೊದಲೇ ಫೋನು ಮಾಡಿ 'ನಾನು ಬರಲೇ ? ನಿನ್ನ ಅನುಕೂಲ ಹೇಗಿದೆ ? ಯಾವತ್ತು ಬರಲಿ ?' ಎಂದು ಕೇಳಬೇಕು. ಎಷ್ಟು ದಿನ ಅಲ್ಲಿರಬಹುದೆಂಬುದನ್ನೂ ಮೊದಲೇ ನಿಶ್ಚಯಿಸಿಕೊಂಡಿರಬೇಕು. ಒಬ್ಬಾಕೆ ತನ್ನ ಅಣ್ಣನನ್ನು 8–10 ವರ್ಷಕಾಲ ನೋಡಿರಲಿಲ್ಲ. "ನಿಮ್ಮ ಮನೆಗೆ ಯಾವಾಗ ಬರಲಿ ? ನಾಲ್ಕು ದಿನ ನಿಮ್ಮೊಡನೆ ಇರಬೇಕೆಂದಿದ್ದೇನೆ" ಎಂದು ಕೇಳಿದಾಗ ಆತ "ಎರಡು ದಿನಗಳಿಗಿಂತ ಹೆಚ್ಚಾಗಿ ಆತಿಥ್ಯ ನಡೆಸಲಾಗುವುದಿಲ್ಲ" ಎಂದು ಉತ್ತರ ಕೊಟ್ಟ. ಇನ್ನೊಬ್ಬಳು ತನ್ನ ಅಕ್ಕನನ್ನು ನೋಡಲು ಸಾವಿರ ಮೈಲಿ ಪ್ರಯಾಣಮಾಡಿ ಬಂದಳು. ಆಕೆ ಮಧ್ಯಾಹ್ನ 2 ಘಂಟೆಗೆ ಬರಬೇಕೆಂದು ಗೊತ್ತಾಗಿತ್ತು. ಆದರೆ ಅವಳು ಬಂದದ್ದು ಹನ್ನೆರಡು ಘಂಟೆಗೆ. ಅಕ್ಕ "ನಾನು ಈವಾಳನ್ನು ಈಗ ನೋಡಲು ಸಿದ್ಧಳಾಗಿಲ್ಲ. ಎರಡು ಘಂಟೆಗೆ ಬರಹೇಳು" ಎಂದು ಹೇಳಿಕಳಿಸಿದಳು. ತಂಗಿಗೆ ಮನೆಯೊಳಕ್ಕೆ ಪ್ರವೇಶವೇ ದೊರೆಯಲಿಲ್ಲ ! ಇವೆರಡೂ ಕಟ್ಟುಕಥೆಯುಲ್ಲ. ವಾಸ್ತವವಾಗಿ ನಡೆದದ್ದೆಂದು ನಾನೇ ಬಲ್ಲೆ. ಎಲ್ಲ

ಅಮೆರಿಕನ್ನರೂ ಹೀಗೆ ಮಾಡುತ್ತಾರೆಂದು ಹೇಳಲಾಗುವುದಿಲ್ಲ. ಅಮೆರಿಕದಲ್ಲೂ ಕೂಡ ಈ ಜನ ವಿಚಿತ್ರ ವ್ಯಕ್ತಿಗಳೇ. ಆದರೆ ಅವರ ನಡತೆಯು ಹೊಂದಿರುವ ಮನೋವೃತ್ತಿ ಅಮೆರಿಕದಲ್ಲಿರುವ ಒಂದು ವಿಶೇಷ ಮನೋವೃತ್ತಿಯ ಅತಿರೇಕ 'reductio ad absurdum.'

ಪಾಶ್ಚಾತ್ಯರ ಪದ್ಧತಿಯ ಪ್ರಕಾರ, ಅವರು ತಮ್ಮ ಅತಿಥಿಗೆ ಬೇರೆ ಒಂದು ಕೊಠಡಿಯನ್ನು ಬಿಟ್ಟುಕೊಡಬೇಕು. ಅವನಿರುವಷ್ಟು ಕಾಲ ಆ ಕೊಠಡಿ ಅವನಿಗೇ ಮೀಸಲು. ಅವನಿಗೆ ಕುರ್ಚಿ, ಮೇಜು, ಮಂಚ, ಮೊದಲಾದ ಸೌಕರ್ಯಗಳನ್ನು ಒದಗಿಸಬೇಕು. ಊಟದ ಸಮಯದಲ್ಲಿ ಯಾರನ್ನು ಯಾರ ಮಗ್ಗುಲಲ್ಲಿ ಕೂರಿಸಬೇಕು, ಯಾವ ಮಾತೆತ್ತಬೇಕು, ಯಾವ ಮಾತೆತ್ತಬಾರದು, ಮುಂತಾದ್ದನ್ನೆಲ್ಲ ನಿಶ್ಚಯಿಸಿಕೊಳ್ಳಬೇಕು. ಪಾರ್ಟಿ ನಡೆಯುತ್ತಿರುವಾಗ ಕ್ಷಣಕಾಲ ಮೌನ ಕಂಡುಬಂದರೆ ಪಾರ್ಟಿ ಕೆಟ್ಟುಹೋಯಿತೆಂದೇ ಭಾವನೆ. ಎಲ್ಲರೂ ಏನಾದರೂ ಹೇಳುತ್ತಿರಬೇಕು ಅಥವಾ ಕೇಳುತ್ತಿರಬೇಕು. 'ನಾನು ಅತಿಥೇಯನ ಗಮನದಲ್ಲಿದ್ದೇನೆ' ಎಂಬ ಭಾವನೆ ಎಲ್ಲರ ಮನಸ್ಸಿಗೂ ಬರಬೇಕು. ಇನೆಲ್ಲ ಸಾಧ್ಯವಲ್ಲದಿದ್ದರೆ ಅವರು ಆಹ್ವಾನ ಕೊಡುವುದೇ ಇಲ್ಲ. ಅತಿಥೇಯನಾಗಿರುವುದೆಂದರೆ ಸುಲಭದ ಕೆಲಸವಲ್ಲ! ಅಮೆರಿಕದಲ್ಲಿ ನೆಲಸಿರುವ ಭಾರತೀಯರು ಕೂಡ ಈ ವಿಷಯದಲ್ಲಿ ಅಮೆರಿಕನ್ನರಂತೆಯೇ ನಡೆಯಲಾರಂಭಿಸಿದ್ದಾರೆ. ನನ್ನ ಬಂಧುಗಳೊಬ್ಬರು ತಮ್ಮ ಸ್ನೇಹಿತರನ್ನು (ಅವರೂ ಭಾರತೀಯರು) ಊಟಕ್ಕೆ ಕರೆದರು. ಅದಕ್ಕಾಗಿ ಮೂರು ದಿನ ಹಿಂದಿನಿಂದ ಮನೆಯಲ್ಲಿ ಸಡಗರದ ಏರ್ಪಾಡು! "ಇದೇನಮ್ಮ, ಇಷ್ಟೊಂದು ಅವಾಂತರ?" ಎಂದು ನಾನು ಮನೆಯ ಯಜಮಾನಿತಿಯನ್ನು ಕೇಳಿದ್ದಕ್ಕೆ ಬಂದ ಉತ್ತರ: "ಇಂಥ ವಿಷಯಗಳಲ್ಲಿ ಎಷ್ಟು ಜಾಗರೂಕತೆ ವಹಿಸಿದರೂ ಸಾಲದು, ಲೋಪ ಕಂಡುಬಂದರೆ ಇಲ್ಲಿ ನಮ್ಮ ಮಾನಕ್ಕೆ ಕಡಮೆ!"

ನಮ್ಮಲ್ಲಿ—ಅಂದರೆ ಭಾರತದಲ್ಲಿ—ಅತಿಥಿ ಸತ್ಕಾರ ಮೇಲೆ ಹೇಳಿದ ಮಟ್ಟದಲ್ಲಿ ನಡೆಯುವುದು ಅಪರೂಪ. ನಾನು ಎಷ್ಟೋ ಸಾರಿ ಬಂಧುಮಿತ್ರರ ಮನೆಯಲ್ಲಿ ಅತಿಥಿಯಾಗಿ ನಾಲ್ಕಾರು ದಿನ ಇದ್ದದ್ದುಂಟು; ಹಾಗೆಯೇ ನನ್ನ ಮನೆಗೂ ಅತಿಥಿಗಳನ್ನು ಬರಮಾಡಿಕೊಂಡದ್ದುಂಟು. ನನ್ನ ಅತಿಥೇಯ ನನಗಾಗಿ ಒಂದು ಕೊಠಡಿಯನ್ನು ಮೀಸಲಾಗಿ ಬಿಟ್ಟುಕೊಟ್ಟಿದ್ದು ಒಂದೇ ಒಂದು ಕಡೆ. ನಾನಂತೂ ನನ್ನ ಅತಿಥಿಗಳಿಗೆ ಆ ಸೌಕರ್ಯ ಒದಗಿಸಿಕೊಟ್ಟಿಲ್ಲ. 'ನಿಮಗೆ ಗತಿಯಿಲ್ಲ, ಆದ್ದರಿಂದ ನೀವು ಮಾಡುವುದಿಲ್ಲ!' ಎನ್ನಬಹುದು. ಈ ಮಾತಿನಲ್ಲಿ ಸತ್ಯಾಂಶ ಇಲ್ಲದಿಲ್ಲ. ಬಡತನದ ಕಲ್ಪನೆ ಸಾಪೇಕ್ಷವಾದದ್ದು; ಅದು

ಕುಚೇಲನ ಬಡತನವೇ ಆಗಬೇಕಾದದ್ದಿಲ್ಲ. ಆದರೂ ನಮ್ಮಲ್ಲಿ ತಕ್ಕಮಟ್ಟಿಗೆ ಅನುಕೂಲಸ್ಥರೆನ್ನಿಸಿಕೊಳ್ಳುವ ಮಧ್ಯಮವರ್ಗದ ಜನರಲ್ಲಿ ಕೂಡಾ ಅತಿಥಿಗೆ ಕುರ್ಚಿ, ಮೇಜು, ಮಂಚ, ಪರದೆಗಳು, ಇತ್ಯಾದಿಗಳಿಂದ ಸುಸಜ್ಜಿತವಾದ ಕೊಠಡಿಯನ್ನು ಬಿಟ್ಟುಕೊಡುವಷ್ಟು ತ್ರಾಣ ಎಷ್ಟು ಜನರಿಗಿದೆ!

ಅತಿಥಿಗಳಿಗೆ ಎಲ್ಲ ಸೌಕರ್ಯಗಳನ್ನೂ ಕಲ್ಪಿಸಿಕೊಡಬೇಕೆಂಬ ಆಸೆ ಯೇನೋ ನಮಗೂ ಇದೆ. ಹಾಗೆ ಮಾಡದಿರುವುದಕ್ಕೆ ಕಾರಣ ಬಡತನವೊಂದೇ ಅಲ್ಲ. ನಮ್ಮ ಜೀವನಕ್ರಮವೇ ಬೇರೆ. ದಿನದಿನದ ಜೀವನಕ್ಕಾಗಿ ನಾವು ಬಳ ಸುವ ವಸ್ತುಗಳ ಸಂಖ್ಯೆ ಕಡಮೆ; ನಮ್ಮ ಅವಶ್ಯಕತೆಗಳೇ ಕಡಮೆ. ಮಂಚ ವಿಲ್ಲದೆ ನೆಲದ ಮೇಲೆಯೇ ಹಾಸಿಗೆ ಹಾಸಿ (ಕೆಲವು ವೇಳೆ ಬರೀ ಚಾಪೆ ಹಾಸಿ) ಮಲಗುವುದು, ಕುರ್ಚಿಯಿಲ್ಲದಿದ್ದರೆ ಚಾಪೆಯ ಮೇಲೋ ಜಮಖಾನದ ಮೇಲೋ ಕೂರುವುದು, ರೆಫ್ರಿಜರೇಟರಿನಲ್ಲಿಡದ ಪಾನೀಯಗಳನ್ನು ಬಳಸು ವುದು, ಟೀವಿ ಮತ್ತು ರೇಡಿಯೋಗಳ ಅಭಾವ—ಇವೆಲ್ಲ ನಮಗೆ ಸರ್ವ ಸಾಮಾನ್ಯ. ನನ್ನ ವಿಷಯವನ್ನೇ ಹೇಳಬಹುದಾದರೆ—ನನ್ನ ಮನೆಯಲ್ಲಿ ಸೋಫಾ ಸೆಟ್ ಯಾವಾಗಲೂ ಇರಲಿಲ್ಲ. ಬೆತ್ತದ ಕುರ್ಚಿಗಳು ಮೆತ್ತೆಯಿಂದ ಅಲಂಕೃತವಾದದ್ದು ಕೂಡ ಇತ್ತೀಚೆಗೆ. ಪಿಂಗಾಣಿ 'ಕಪ್ ಸಾಸರ್'ಗಳನ್ನು ನಮ್ಮ ಮನೆಗೆ ತಂದೇ ಇಲ್ಲ. ನನ್ನ ಮಕ್ಕಳು ಬೆಳೆದ ಮೇಲೆ ಅವರ ಮನೆಯಲ್ಲಿ ಏನೋ ಇವೆಲ್ಲ ಮೆರೆಯುತ್ತಿವೆ. ಆದರೆ ನಾನು ಸಂಸಾರ ಮಾಡುತ್ತಿದ್ದ ಕಾಲದಲ್ಲಿ ನನ್ನ ಅತಿಥಿಗಳಿಗೆ ದೊರೆತ ಉಪಚಾರವೇನಿದ್ದರೂ ಮೇಲೆ ಹೇಳಿದ ಮಿತಿಯಲ್ಲಿಯೇ. ಅವರು ನನಗೆ ತಿಳಿದಮಟ್ಟಿಗೆ ಸೌಲಭ್ಯಗಳಿಲ್ಲವಲ್ಲ ಎಂದು ನನ್ನನ್ನು ತಿರಸ್ಕರಿಸಿಲ್ಲ. ಪಾಶ್ಚಾತ್ಯರು ನನ್ನ ಮನೆಗೆ ಬಂದಾಗಲೂ ನಾನು ನಮ್ಮ ಮನೆಯಲ್ಲಿ ಸಾಮಾನ್ಯವಾಗಿ ಬಳಸುವ ತಟ್ಟೆ ಗ್ಲಾಸುಗಳಲ್ಲೇ ತಿಂಡಿ ಕಾಫಿ ಕೊಟ್ಟಿದ್ದೇನೆ—"ನಮ್ಮ ಮನೆಯಲ್ಲಿ ಪಿಂಗಾಣಿ ಸಾಮಾನು ಬಳಸುವ ರೂಢಿಯಿಲ್ಲ, ಕ್ಷಮಿಸಬೇಕು" ಎಂದು ಉಪಚಾರದ ಪೀಠಿಕೆ ಹಾಕಿ, ಅವರು ಜುಗುಪ್ಸೆಗೊಂಡಂತೆ ತೋರಲಿಲ್ಲ. ಅಥವಾ ಜುಗುಪ್ಸೆಗೊಂಡಿದ್ದರೆ ಅದನ್ನು ಬಹಳ ಯಶಸ್ವಿಯಾಗಿ ಮರಸಿದರು!

ಮನೆಗೆ ಬಂದವರೊಡನೆ ನಮ್ಮ ವ್ಯವಹಾರವೂ ಸರಳ ರೀತಿಯದು. ನಮ್ಮ ಅತಿಥಿಗಳು ಅದಕ್ಕೆ ಹೊಂದಿಕೊಳ್ಳುತ್ತಾರೆ—ಅವರೂ ನಮ್ಮ ಮನೋ ವೃತ್ತಿಯವರೇ ತಾನೆ. ಅವರಿಗೂ ನಮಗೂ ಮುಖ್ಯವಾಗಿ ಬೇಕಾದದ್ದು ಸಹವಾಸ ಸೌಖ್ಯ. ಇತರ ಸೌಲಭ್ಯಗಳಿದ್ದರೆ ಸಂತೋಷಪಡುವುದಿಲ್ಲವೆಂದಲ್ಲ; ಇಲ್ಲದಿದ್ದರೆ ನೊಂದುಕೊಳ್ಳುವುದಿಲ್ಲ. ಈ ಬಗೆಯ ಜೀವನ ಪಾಶ್ಚಾತ್ಯರ

ಮೆಚ್ಚಿಕೆಯನ್ನೂ ಗಳಿಸಿದ್ದುಂಟು. ನನ್ನ ಮಿತ್ರರೊಬ್ಬರ ಮನೆಯಲ್ಲಿ ನಡೆದ ಪ್ರಸಂಗ ಈ ಸಂದರ್ಭದಲ್ಲಿ ನೆನಪಿಗೆ ಬರುತ್ತದೆ. ಸುಮಾರು ಎರಡು ದಶಕಗಳ ಹಿಂದೆ ಪಾಶ್ಚಾತ್ಯಸಂಸ್ಥೆಯೊಂದು (ಫೋರ್ಡ್ ಪ್ರತಿಷ್ಠಾನ?) 'ಅಂತರ ರಾಷ್ಟ್ರೀಯ ಜೀವನ'ವನ್ನು ಅಭ್ಯಾಸಮಾಡಿಸಬೇಕೆಂದ ಒಂದು ಪ್ರಯೋಗ ನಡೆಸಿತು. (ಅದು ಈಗಲೂ ನಡೆಯುತ್ತಿದೆಯೋ ಏನೊ.) ಆ ಸಂಬಂಧದಲ್ಲಿ ನನ್ನ ಮಿತ್ರರ ಮನೆಗೆ ಒಬ್ಬ ಹದಿವಯಸ್ಸಿನ ಅಮೆರಿಕನ್ ಹುಡುಗನನ್ನು ಕಳಿಸಿದರು. ಅವನು ಒಂದು ವಾರ ಅವರ ಮನೆಯಲ್ಲಿದ್ದು ಅವರಂತೆಯೇ ಜೀವನ ನಡೆಸತಕ್ಕದ್ದು; ಅವರು ಅನುಭವಿಸಿದ ಸೌಲಭ್ಯಗಳನ್ನು ಅವನು ಕೇಳಲೂ ಬಾರದು, ಅವರು ಕೊಡಲೂ ಬಾರದು—ಇದು ಆ ಪ್ರಯೋಗದ ನಿಯಮ. ನನ್ನ ಆ ಮಿತ್ರರು ಅನುಕೂಲಸ್ಥರೆಂಬುದೂ ನೆನಪಿನಲ್ಲಿಡಬೇಕಾದ ವಿಷಯ.

ಆ ಹುಡುಗ ಅವರ ಮನೆಯ ಜೀವನಕ್ರಮಕ್ಕೆ ಹೊಂದಿಕೊಂಡು ಒಂದು ವಾರ ಇದ್ದ; ಸುಖವಾಗಿಯೇ ಇದ್ದ—ಅವನ ಮಾತಿನಿಂದಲೂ ಮುಖ ಚರ್ಯೆಗಳಿಂದಲೂ ತೀರ್ಮಾನಕ್ಕೆ ಬರಬಹುದಾದರೆ. ಅದಾಗಿ ಕೆಲವು ವಾರ ಕಳೆದನಂತರ ಪ್ರಯೋಗ ಎಷ್ಟು ಯಶಸ್ವಿಯಾಯಿತೆಂದು ವಿಚಾರಿಸುವುದ ಕ್ಕಾಗಿ ಆ ಪ್ರತಿಷ್ಠಾನದ ಪ್ರತಿನಿಧಿಯೊಬ್ಬ ಬಂದು ನನ್ನ ಮಿತ್ರರೊಡನೆ ಮಾತಾಡುತ್ತ ಕುಳಿತಿದ್ದಾಗ ಅವರ ಮನೆಯ ನಡವಳಿಕೆಯನ್ನೂ ಗಮನಿಸು ತ್ತಿದ್ದ. ಆತನನ್ನು ನೋಡುವುದಕ್ಕಾಗಿ ನನ್ನ ಮಿತ್ರರು ಬೇರೆ ಪೋಷಾಕೇನನ್ನೂ ಧರಿಸಲಿಲ್ಲ. ಷರ್ಟುಲುಂಗಿಗಳನ್ನು ಧರಿಸಿದ್ದವರು ಹಾಗೇ 'ಹಾಲ್'ಗೆ ಬಂದು ಆತನನ್ನು ಸ್ವಾಗತಿಸಿದರು. ಹಾಲ್‌ನಲ್ಲಿ ಅಸ್ತವ್ಯಸ್ತತೆಯೇನೂ ಇರಲಿಲ್ಲ: ಕಣ್ಣುಕೋರೈಸುವಂಥ ಶೃಂಗಾರವೂ ಇರಲಿಲ್ಲ; ವ್ಯವಸ್ಥೆಯೆಲ್ಲ ಆಡಂಬರ ವಿಲ್ಲದ್ದು: ಅವರಿಬ್ಬರೂ ಮಾತಾಡುತ್ತಿದ್ದಾಗಲೇ ನನ್ನ ಮಿತ್ರರನ್ನು ನೋಡಲು ಮೂರು ನಾಲ್ಕು ಜನ ಬಂದರು. ಒಬ್ಬರನ್ನು ಅಮೆರಿಕನ್ನನ ಜೊತೆಗೇ ಕೂರಿಸಿ ಪರಿಚಯಮಾಡಿಕೊಟ್ಟರು; ಮತ್ತೊಬ್ಬನೊಡನೆ ಒಂದೆರಡು ಮಾತಾಡಿ ಅವನನ್ನು ಕಳಿಸಿಕೊಟ್ಟರು. 'ನನ್ನೊಬ್ಬನೊಡನೆಯೇ ಆಡಬೇಕಾದ ಮಾತಿ ದ್ದರೆ ಹೇಳಿ'; 'ಹಾಲು ಈಗ ಸ್ವಲ್ಪ ಹೊತ್ತಿನ ಕೆಳಗೆ ಉರುಟೆಹೋಯಿತು. ಪಾನಕ ಮಾಡಿಸಿದ್ದೇನೆ, ಆಗಬಹುದೆ?' 'ನಿಮಗೆ ಬಿಸಿ ಪಾನಕ ಹಿತವೋ ತಣ್ಣಗೇ ಇರಲೊ?' ಇತ್ಯಾದಿ ಕ್ಷಮಾಯಾಚನೆಯ ಮತ್ತು ಉಪಚಾರದ ಮಾತುಗಳು ಬಂದವು. ಒಟ್ಟಿನಲ್ಲಿ ಆದರದ ನಡವಳಿಕೆ, ತಮ್ಮ ಸಂಪತ್ತ ನ್ನಾಗಲಿ ಸಂಸ್ಕೃತಿಯನ್ನಾಗಲಿ ಮೆರೆಸಬೇಕೆಂಬ ಇಚ್ಛೆಯಿರಲಿಲ್ಲ. ಮುಖ್ಯ

ವಾದ ಅಂಶವೆಂದರೆ; ಕೃತಕತೆ ಎಳ್ಳಷ್ಟೂ ಇರಲಿಲ್ಲ; ಸರಳತೆ ಸ್ವಾಭಾವಿಕತೆ ಗಳಿದ್ದವು.

ಆ ಅಮೆರಿಕನ್ ಅಭ್ಯಾಗತ ಹೊರಡುವ ಮುನ್ನ "ನಾನು ಈ ಮಾತು ಹೇಳಬಹುದೋ ಇಲ್ಲವೋ ಕಾಣೆ, ಕ್ಷಮಿಸಿ" ಎಂದು ಪೀಠಿಕೆ ಹಾಕಿ ನನ್ನ ಮಿತ್ರರಿಗೆ ಹೇಳಿದ: "ನಿಮ್ಮ ಜೀವನ ಕ್ರಮವನ್ನು ನೋಡಿ ನನಗೆ ಬಹಳ ಆನಂದವಾಯಿತು; ಸ್ವಲ್ಪ ಹೊಟ್ಟೆಕಿಚ್ಚೂ ಬಂತೆಂದು ಒಪ್ಪುತ್ತೇನೆ. ನಮ್ಮಲ್ಲಿ ಮನೆಗೆ ಅತಿಥಿಗಳು ಬಂದರೆ ಇಷ್ಟು ಸರಳ ಅವಿಧ್ಯುಕ್ತ (informal) ಸ್ವಾಭಾವಿಕ ವಾತಾವರಣ ಏರ್ಪಡುವುದು—ಅಸಾಧ್ಯವಲ್ಲ—ಕಷ್ಟ. ನಮ್ಮ ನಡವಳಿಕೆಯಲ್ಲಿ ತೋರಿಕೆಯ ಮರ್ಯಾದೆ ಹೆಚ್ಚು, ಕೃತಕತೆ ಹೆಚ್ಚು. ಅತಿಥಿ ಅಭ್ಯಾಗತರು ಬಂದರೆ ನಾವು ಹತ್ತಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ನಿಮ್ಮಲ್ಲಿ ಯಾವ ಸಮಸ್ಯೆಯೂ ಇಲ್ಲ!"

ಆ ಮಾತನ್ನು ಆತ ಹೇಳಬೇಕಾದ ಅವಶ್ಯಕತೆ ಇರಲಿಲ್ಲ. ಅಂದ ಮೇಲೆ ಅದು ಪ್ರಾಮಾಣಿಕವಾದ ಹೊಗಳಿಕೆ; ಕೇವಲ ಉಪಚಾರಕ್ಕಾಗಿ ಹೇಳಿದ್ದಲ್ಲ. ನಾವು ಕೆಲವು ವೇಳೆ ಇನ್ನೊಂದು ಬಗೆಯ ಅತಿರೇಕಕ್ಕೆ ಹೋಗುತ್ತೇವೆಂದು ನನಗೆ ಅನ್ನಿಸಿದೆ. ಆದರೂ ಒಟ್ಟಿನಲ್ಲಿ ನಮ್ಮ ಸಂಸ್ಕೃತಿಗೆ ಆ ಅಮೆರಿಕನ್ನನ ಹೊಗಳಿಕೆ ಸಲ್ಲತಕ್ಕದ್ದು. ಇತರ ಕೆಲವು ಕ್ಷೇತ್ರಗಳಲ್ಲೂ ಸಂದರ್ಭಗಳಲ್ಲೂ (ಉದಾ: ನಮ್ಮ ಜಾತಿ ಪದ್ಧತಿ) ನಮ್ಮಲ್ಲಿ ವಿಧಿನಿಷೇಧಗಳು ಸಾಕಪ್ಪ ಸಾಕು ಎನ್ನಿಸುವಷ್ಟಿವೆ. ಆದರೆ ಅತಿಥಿ-ಆತಿಥೇಯ ಸಂಬಂಧದಲ್ಲಿ ನಾವು ಸರಳರೇ ಹೌದು. ಇದು ನಮ್ಮ ಸಂಸ್ಕೃತಿ ಕೊಟ್ಟ ವರ ಎನ್ನಬಹುದು. ಅಥವಾ ನಮ್ಮ ಬಡತನದ ಶಾಪ ಎಂದರೂ ಎನ್ನಬಹುದು. ನನಗೇನೋ ಇದು ವರ ಎಂದೇ ತೋರುತ್ತಿದೆ. ನಾನು ಮೇಲೆ ಬಣ್ಣಿಸಿದ ಪಾಶ್ಚಾತ್ಯ ಪದ್ಧತಿಗಳನ್ನು ಹಳಿಯುತ್ತಿಲ್ಲ. ಅವು ಬೆಳೆದಿರುವುದು ಸದ್ಭಾವನೆಗಳ ಆಧಾರದ ಮೇಲೆ. ಬಂಧುಗಳೂ ಸ್ನೇಹಿತರೂ ಒಟ್ಟಿಗೆ ಸೇರಿದಾಗ ಜೀವನರಥದ ಚಕ್ರಗಳು ಕಿರಿಕಿರಿಗುಟ್ಟದೆ ನಯವಾಗಿ ಸಾಗಬೇಕು; ಮನೆಗೆ ಬಂದವರೆಲ್ಲ ಸುಖವಾಗಿರಬೇಕು; ಅತಿಥಿಗಳು ಆತಿಥೇಯನ ಮನೆಗೆ ಹೊಂದಿಕೊಳ್ಳಲು ಅನುಕೂಲವಾಗುವಂಥ ವಾತಾವರಣವನ್ನು ಕಲ್ಪಿಸಬೇಕು; They must feel that they 'belong'—ಇದು, ಅವರ ವಿಧಿನಿಷೇಧಗಳ ಹಿಂದಿರುವ ತತ್ತ್ವ. ಪಾಶ್ಚಾತ್ಯರು ಅತಿಥಿ-ಆತಿಥೇಯ ಸಂಬಂಧವನ್ನು ಅದೊಂದು ಲಲಿತ ಕಲೆಯೋ ಎಂಬಂತೆ ರೂಢಿಸಿಕೊಂಡಿದ್ದಾರೆ. ಅದರಲ್ಲಿ ಮೆಚ್ಚತಕ್ಕ ಅಂಶಗಳಿವೆ; ಆದರೆ ಅದು ಮಾನವೀಯ ಭಾವನೆಯನ್ನು ಹಿಂದೂಡಿ 'ಕಲೆಗಾಗಿ ಕಲೆ'ಯಾಗಿ ಪರಿಣಮಿ

ಸಿವೆಯೆಂದು ತೋರುತ್ತದೆ. ಅವರ ನಿಯಮಗಳನ್ನೆಲ್ಲ ಕಟ್ಟುನಿಟ್ಟಾಗಿ ಪಾಲಿಸಿ, ಆದರೂ ಯಾರೊಡನೆಯೂ ಸ್ನೇಹವಿಟ್ಟುಕೊಳ್ಳದೆ ಇರುವುದು ಸಾಧ್ಯ! ಮತಧರ್ಮಗಳಿಗೆ ಸಂಬಂಧಪಟ್ಟ ಕರ್ಮಗಳನ್ನು ಆಚರಿಸುವಾಗ ನಮ್ಮ ಉಪಕರಣಗಳು, ಮಂತ್ರೋಚ್ಚಾರಣೆ, ಕ್ರೈಕರಣ–ಇವುಗಳೆಲ್ಲ ಪರಿಷ್ಕಾರವಾಗಿದ್ದರೂ ಮತಧರ್ಮದ ತಿರುಳೇ ಇಲ್ಲವಾಗಬಹುದಷ್ಟೆ. ಹಾಗೆಯೇ ಸಮಾಜ ಜೀವನದಲ್ಲೂ ಸ್ನೇಹ ಬಾಂಧವ್ಯಗಳಿಗಿಂತ ನಿಯಮಪಾಲನೆಯೇ ಮುಖ್ಯವಾಗಬಹುದು; ಬಾಹ್ಯಾಚರಣೆಯೇ ದೊಡ್ಡದೆನಿಸಿ ಕೃತಕತೆ ಕವಿಯಬಹುದು. ಅತಿಥಿಗಳನ್ನು ಆದರಿಸವುದೂ ಅಷ್ಟು ಕಷ್ಟವಾದರೆ ಅವರನ್ನು ದೂರವಾಗಿಯೇ ಇಡಬೇಕಾಗಬಹುದು. ಅತಿಥಿಗಳಿಗೂ 'ನಾವು ಹೋದರೆ ಅವರಿಗೆ ತೊಂದರೆ, ಅವರಲ್ಲಿಗೆ ಹೆಚ್ಚಾಗಿ ಹೋಗಬಾರದು' ಎನ್ನಿಸಬಹುದು. ನಮ್ಮನ್ನು ಕರೆದಾಗಲೆಲ್ಲ ಔತನದ ಅಡಿಗೆ ಮಾಡಿಸುತ್ತಿದ್ದ ಮಿತ್ರರೊಬ್ಬರಿಗೆ ರಾಮು "ನಮಗಾಗಿ ನೀವು ಇಷ್ಟೊಂದು ತೊಂದರೆ ತೆಗೆದುಕೊಂಡರೆ ನಿಮ್ಮ ಆಹ್ವಾನವನ್ನು ಒಪ್ಪಿಕೊಳ್ಳಲು ಸಂಕೋಚವಾಗುತ್ತದೆ" ಎಂದು ಹೇಳಿದ್ದು ನೆನಪಿನಲ್ಲಿದೆ. ಹೀಗೆ ಹೋಗುವುದಕ್ಕೂ ಬರುವುದಕ್ಕೂ ಸಂಕೋಚವಾಗಬಾರದು. ನಮ್ಮ ಮನೆಗೆ ಜನ ಬರಬೇಕು, ನಮಗೆ ಅವರನ್ನು ಆದರಿಸುವ ಭಾಗ್ಯ ಬೇಕು; ಹಾಗೆಯೇ ಅವರ ಆದರವನ್ನು ಸವಿಯುವ ಭಾಗ್ಯವೂ ಬೇಕು. ಅದಿಲ್ಲದಿದ್ದರೆ ನಮ್ಮ ಆತ್ಮವೇ ಬಡಕಲಾಗಿ ಸವೆಯಲಾರಂಭಿಸೀತು!

ಪಾಶ್ಚಾತ್ಯ ಪದ್ಧತಿಗೂ ನಮ್ಮದಕ್ಕೂ ನಡುವೆ—ನಮ್ಮ ಪದ್ಧತಿಗೆ ಹತ್ತಿರವಾಗಿ—ಸುವರ್ಣಮಧ್ಯಮಾರ್ಗವೊಂದಿದೆ. 'ಅತಿಥಿಗಳನ್ನು ಆದರದಿಂದ ಬರಮಾಡಿಕೊಳ್ಳಬೇಕು, ಅವರನ್ನು ಸಂತೋಷಪಡಿಸಬೇಕು,' ಎಂಬ ಆಸೆ ಒಂದು ಕಡೆ: 'ಅತಿಥೇಯನಿಗೆ ತೊಂದರೆಯಾಗಬಾರದು, ಸೌಕರ್ಯಗಳಿಲ್ಲದಿದ್ದರೇನು, ಸ್ನೇಹ ಮುಖ್ಯ!' ಎಂಬ ಭಾವನೆ ಮತ್ತೊಂದು ಕಡೆ—ಇವೆರಡೂ ಇದ್ದರೆ ಆ ಸುವರ್ಣಮಧ್ಯಮಾರ್ಗ ಸಿಕ್ಕಿಯೇ ಸಿಕ್ಕುತ್ತದೆ. ನನ್ನ ಮನಸ್ಸೇನೋ ಸರಳತೆಯ ಕಡೆಗೇ ಒಲೆಯುತ್ತದೆ! 'Ignorance and bungling, with love, are better than wisdom and skill without. There may be courtesy, there may be even temper, and wit, and talent, and sparkling conversation, there may be goodwill even—and yet the humanest and divinest faculties pine for exercise.' "ಆದರರಹಿತವಾದ ಸುಜ್ಞಾನ ಕುಶಲತೆಗಳಿಗಿಂತ ಆದರಸಹಿತವಾದ ಅಜ್ಞಾನ ಅವ್ಯವಸ್ಥೆಗಳೇ ಲೇಸು. ಸಭ್ಯನಡತೆಯಿರಬಹುದು, ಏಳುಬೀಳುಗಳಿಲ್ಲದ ಶಾಂತ ಮನೋಧರ್ಮವಿರಬಹುದು,

ಚತುರ ಹಾಸ್ಯವಿರಬಹುದು, ಸಾಮರ್ಥ್ಯವಿರಬಹುದು, ಮಿಂಚಿನಂಥ ಮಾತುಗಾರಿಕೆಯಿರಬಹುದು, ಒಳ್ಳೆಯ ಮನಸ್ಸು ಕೂಡ ಇರಬಹುದು—ಇಷ್ಟೆಲ್ಲಾ ಇದ್ದರೂ ನಮ್ಮಲ್ಲಿರುವ ಮಾನವೀಯ ಮತ್ತು ದೈವಿಕ ಶಕ್ತಿಗಳಲ್ಲಿ ಶ್ರೇಷ್ಠತಮವಾದದ್ದು 'ನನಗೆ ಕೆಲಸವೇ ಇಲ್ಲವಲ್ಲ!' ಎಂದು ಕೊರಗಬಹುದು."

ಈ ವಾಕ್ಯಗಳನ್ನು* ಬರೆದವನು ಭಾರತೀಯನಲ್ಲ, ಅಮೆರಿಕದ ಪ್ರಸಿದ್ಧ ಲೇಖಕ ಥೋರೊ (Thoreau).

ಮೆಕ್‌ಮಿಲನ್‌ರ ಆಹ್ವಾನ ಬಂದಾಗ ನನ್ನ ಮನಸ್ಸಿನಲ್ಲಿ ಈ ಯೋಚನೆಗಳೆಲ್ಲ ಹೊಳೆದುಹೋದವು. ಅವರು ಒಳ್ಳೆಯ ಜನ. ಅವರ ಆಹ್ವಾನ ಎದ್ದುಹೋಗುವ ಮಾತು ಬಿದ್ದುಹೋಗಲಿ ಎಂದುಕೊಂಡು ತುದಿನಾಲಿಗೆಯಿಂದ ಕೊಟ್ಟದ್ದಲ್ಲ ; ಹೃದಯದಿಂದಲೇ ಬಂದದ್ದು. ಆದರೂ ಒಂದು ವಾರ ಅವರ ಅತಿಥಿಯಾಗಿ ವಕ್ರಿಸುವುದು ಸರಿಯೆ ? ಅದು ಅವರಿಗಾಗಲಿ ನನಗಾಗಲಿ ಸುಖವಲ್ಲದಿರಬಹುದು. ಇನ್ನೂ ಅವರ ಪರಿಚಯ ಹೊಸದೇ, ಅವರೊಡನೆ ಯಾವ ವಿಷಯ ಮಾತಾಡಬೇಕು ? ನನ್ನ ಆಸಕ್ತಿ ಉತ್ಸಾಹಗಳಲ್ಲಿ ಯಾವುದನ್ನು ಅವರ ಮೇಲೆ ಪ್ರಯೋಗಿಸಬಹುದು ? ಅವರ ಆಸಕ್ತಿ ಉತ್ಸಾಹಗಳೇನು ? ಅವರೇನು ಬಲಪಕ್ಷದವರೆ ಎಡಪಕ್ಷದವರೆ ? ಇವೆಲ್ಲ ಪ್ರಶ್ನೆಗಳು ಕಾಡತೊಡಗಿದವು. ಸ್ನೇಹ ಓಡುತ್ತ ಹೊರಟರೆ ಎಲ್ಲಾದರೂ ಮುಗ್ಗರಿಸಬಹುದು. ಸಾವಧಾನವಾಗಿಯೇ ಸಾಗಲಿ ಎನ್ನಿಸಿತು. ಕೊನೆಗೆ 'ಒಂದು ದಿನ ಸಂಜೆ ಅಲ್ಲಿಗೆ ತಲಪುವುದು ; ಮರುದಿನವೆಲ್ಲ ಅಲ್ಲಿದ್ದು ಅದರ ಮರುದಿನ ಬೆಳಗ್ಗೆ ಏನಾದರೂ ನೆಪ ಹೇಳಿ ಹೊರಟುಬಿಡಬಹುದು' ಎಂದು ನಿಶ್ಚಯಿಸಿಕೊಂಡೆ.

## ಲಡಿಂಗ್ಟನ್‌ನಲ್ಲಿ

ನೈಲ್ಸ್ ಇರುವುದು ಇಲ್ಲಿನಾಯ್ (Illinois) ರಾಜ್ಯದಲ್ಲಿ, ಷಿಕಾಗೋವಿನ ಹತ್ತಿರ; ಹೆಚ್ಚು ಕಡಿಮೆ ಮಿಷಿಗನ್ ಸರೋವರದ ದಕ್ಷಿಣ ತುದಿಯಲ್ಲಿ. ಲಡಿಂಗ್ಟನ್ ಮಿಷಿಗನ್ ರಾಜ್ಯಕ್ಕೆ ಸೇರಿದ್ದು, ಸರೋವರದ ಪೂರ್ವತೀರದ ಮಧ್ಯದಲ್ಲಿದೆ. ನೈಲ್ಸ್‌ನಿಂದ ಅಲ್ಲಿಗೆ ರಸ್ತೆಯ ಪ್ರಯಾಣವೆಂದರೆ ತುಂಬ ಬಳಸು. ರಾಮು ಜೊತೆಗೆ ಬರುವಂತಿಲ್ಲವಾದ್ದರಿಂದ ಬಸ್ಸಿನಲ್ಲೇ ಹೋಗಬೇಕು. ಅದು ಹಿತವೆನಿಸಲಿಲ್ಲ. ವಿಸ್ಕಾನ್ಸಿನ್ ರಾಜದಲ್ಲಿರುವ ಮಿಲ್ವಾಕಿ (Milwaukee)

---

* ಥೋರೋ ಬರೆದ 'Friendship' ಎಂಬ ಪ್ರಬಂಧದಿಂದ ತೆಗೆದ ವಾಕ್ಯಗಳು.

ಬಂದರಿಗೆ ಹೋಗಿ ಅಲ್ಲಿಂದ ರಾತ್ರಿ ಹೊರಡುವ ಹಡಗಿನಲ್ಲಿ ಸರೋವರವನ್ನು ದಾಟಿ ಬೆಳಗಿನ ಹೊತ್ತಿಗೆ ಲಡಿಂಗ್ಟನ್ನಿಗೆ ತಲಪಬಹುದು. ಹಡಗಿನ ಪ್ರಯಾಣ ಬಹಳ ಚೆನ್ನಾಗಿರುತ್ತದೆಂದು ಮೆಕ್‌ಮಿಲನ್ ಹೇಳಿದ್ದರು. ಆದರೆ ರಾಮುವಿಗೆ ನನ್ನನ್ನು ಮಿಲ್ವಾಕಿಗೆ ಕರೆದುಕೊಂಡು ಹೋಗುವಷ್ಟು ಪುರಸತ್ತೂ ಇರಲಿಲ್ಲ. ಆದ್ದರಿಂದ ಪ್ಲೇನಿನಲ್ಲೇ ಹೊರಟೆ.

ಲಡಿಂಗ್ಟನ್‌ಗೆ ಹತ್ತಿರದಲ್ಲಿರುವ ವಾಯುಬಂದರು ಮಸ್ಕೀಗನ್ (Muskegon). ನೈಲ್ಸ್‌ನಿಂದ ಮಸ್ಕೀಗನ್‌ಗೆ 40 ನಿಮಿಷದ ಪ್ರಯಾಣ, ಅಲ್ಲಿಂದ ಲಡಿಂಗ್ಟನ್‌ಗೆ 60 ಮೈಲಿ. ಮೆಕ್‌ಮಿಲನ್ ದಂಪತಿಗಳು ಮಸ್ಕೀಗನ್‌ಗೆ ಬಂದು ವಿಮಾನ ನಿಲ್ದಾಣದಲ್ಲಿ ಕಾದಿದ್ದರು. ನಾವು ಲಡಿಂಗ್ಟನ್ ತಲಪುವ ಹೊತ್ತಿಗೆ ರಾತ್ರಿ 9.30 ಘಂಟೆಯಾಗಿತ್ತು—ಅಲ್ಲಿ ಆ ಹೊತ್ತಿಗೆ ಆಗ ತಾನೆ ಕತ್ತಲಾಗಿರುತ್ತದೆ. ರೆಸ್ಟೋರಾಂಟಿನಲ್ಲಿ ಊಟ ಮುಗಿಸಿ ಮೊದಲೇ ಗೊತ್ತು ಮಾಡಿದ್ದ ಮೋಟಲ್ ಕೊಠಡಿಯಲ್ಲಿ ನನ್ನನ್ನು ಬಿಟ್ಟು ಮೆಕ್‌ಮಿಲನ್ ದಂಪತಿಗಳು ತಮ್ಮ ಟ್ರೈಯ್ಲರಿಗೆ ಹೋದರು.

ರಾತ್ರಿ ಚೆನ್ನಾಗಿ ನಿದ್ದೆ ಬರಲಿಲ್ಲ. ಆಗಾಗ ದೂರದಿಂದ ಮೈನಡುಗಿಸುವಂಥ ಬೂಂ ಬೂಂ ಶಬ್ದ ಕೇಳಿಬರುತ್ತಿತ್ತು—ದೈತ್ಯಪ್ರಮಾಣದ ಗೂಬೆಗಳು ಸಂಭಾಷಣೆ ನಡಸುತ್ತಿವೆಯೋ ಎಂಬಂತೆ! ಅದು ಹಡಗುಗಳ ಮಂಜುಗೊಂಬಿನ (fog-horn) ಸದ್ದೆಂದು ನನಗೆ ಗೊತ್ತಿತ್ತಾದರೂ ಅದರಿಂದ ನಿದ್ದೆಯೇನೋ ಕೆಟ್ಟಿತು. ಕೊಠಡಿಯಲ್ಲಿ ಟೀವಿ ಇತ್ತಾದರೂ ನನಗೆ ಅದರಲ್ಲಿ ಆಸಕ್ತಿಯಿಲ್ಲ—ಪಾಶ್ಚಾತ್ಯಸಂಗೀತ ನನಗೆ ಅರ್ಥವಾಗುವುದಿಲ್ಲ, ಇತರ ಕಾರ್ಯಕ್ರಮಗಳು ಸಾಮಾನ್ಯವಾಗಿ ರುಚಿಸುವುದಿಲ್ಲ. ಈ ಮೋಟಲುಗಳ ಕೊಠಡಿಯೊಂದೊಂದರಲ್ಲೂ ಗಿಡಿಯನ್ (Gideon) ಸಂಸ್ಥೆಯವರು ಒಂದೊಂದು ಬೈಬಲ್ ಪ್ರತಿ ಇಟ್ಟಿರುತ್ತಾರೆ. ಅದನ್ನು ತೆಗೆದು ಮ್ಯಾಥ್ಯು ಬರೆದ ಸುವಾರ್ತೆಯನ್ನು (the Gospel according to St. Matthew) ಓದಿ ಮುಗಿಸಿದ ಮೇಲೆ ನಿದ್ದೆ ಬಂತು.

ಮೋಟಲಿನ ಕೊಠಡಿ ಚೆನ್ನಾಗಿತ್ತು. ಗೋಡೆಯಿಂದ ಗೋಡೆಯವರೆಗೂ ನೆಲವನ್ನು ಮುಚ್ಚುವ ಒಳ್ಳೆಯ ರತ್ನಗಂಬಳಿ, ಕುರ್ಚಿ, ಮೇಜು, ಟೀವಿ, ಜೊತೆಗೆ ತುಂತುರ ಸ್ನಾನದ ವ್ಯವಸ್ಥೆ. ಬೆಳಗ್ಗೆ ಎದ್ದವನೇ ತುಂತುರನ್ನು ತಿರುಗಿಸಿ ಕಾಲು ಘಂಟೆ ಹೊತ್ತು ಬಿಸಿನೀರಿನ ಮಳೆಗೆ ಮೈಕೊಟ್ಟು ಸ್ನಾನದ ಸೌಖ್ಯವನ್ನು ಸಾವಧಾನವಾಗಿ ಸವಿದೆ. ಅಮೆರಿಕದಲ್ಲಿ ಏನಿರಲಿ ಇಲ್ಲದಿರಲಿ, ಈ ಸ್ನಾನದ ಸೌಖ್ಯಕ್ಕೆ ಅಭಾವವಿಲ್ಲ. ಮೋಟಲನ್ನು ಕಟ್ಟಿದ್ದ ಸ್ಥಳವೂ ಸುಂದರ

ವಾದದ್ದು. ಒಂದು ಕಡೆ 3–4 ನಿಮಿಷ ನಡೆದರೆ ಮಿಷಿಗನ್ ಸರೋವರ; ಇನ್ನೊಂದು ಕಡೆ ಆಕಾಶದಂತೆ ನೀಲಿಯ ಬಣ್ಣದಿಂದ ಮೆರೆಯುವ ಬಿಸಿನೀರಿನ ಈಜುಕೊಳ; ಸುತ್ತ ತೋಪು, ಸುಂದರವಾದ ಉಪವನ....

ಎಂಟು ಘಂಟೆಗೆ ಸರಿಯಾಗಿ ಮೆಕ್‌ಮಿಲನ್ ಬಂದು ಹತ್ತಿರದಲ್ಲೇ ಇದ್ದ ಸ್ವೀಡಿಷ್ ಕಾಫಿ ಹೌಸ್‌ಗೆ ಕರೆದುಕೊಂಡು ಹೋದರು. ಅವರು ಪ್ರತಿ ವರ್ಷವೂ ಬೇಸಗೆಯಲ್ಲಿ ಲಡಿಂಗ್ಟನ್‌ಗೆ ಹೋಗಿ ಅಲ್ಲಿ ಒಂದೆರಡು ತಿಂಗಳು ಕಳೆಯುವ ಪದ್ಧತಿ, ಆದ್ದರಿಂದ ಆ ಕಾಫಿ ಹೌಸಿನ ಮಾಲೀಕನಾದ ರಾಜರ್ಸ್‌ಗೂ ಅವರಿಗೂ ತುಂಬ ಬಳಕೆಯಿತ್ತು. "ನಿಮಗೆ ಗ್ರಿಲ್ಡ್ ಚೀಸ್ ಸ್ಯಾಂಡ್‌ವಿಚ್ ತಿಂದು ತಿಂದು ಬೇಸರವಾಗಿದೆ. ನಮ್ಮ ರಾಜರ್ಸ್‌ನ ಪ್ಯಾನ್ ಕೇಕ್ ಹೇಗಿದೆ ನೋಡಿ" ಎಂದು ಮೆಕ್‌ಮಿಲನ್ ಶಿಫಾರಸು ಮಾಡಿದರು. ನಾನು ಅದುವರೆಗೆ ಅಮೆರಿಕದಲ್ಲಿ ಅಷ್ಟು ರುಚಿಯಾದ ದೋಸೆಯನ್ನು ತಿಂದಿರಲಿಲ್ಲ. ಅದು ನಮ್ಮ ಮೆಂತ್ಯದ ದೋಸೆ ಕಾಯಿ ದೋಸೆಗಳ ಸಮಕ್ಕೆ ಬರಲಾರದೆಂದರೂ ಅವುಗಳ ಹತ್ತಿರ ನಿಲ್ಲಬಹುದು—ರಾಮನ ಬಳಿಯಲ್ಲಿ ಆಂಜನೇಯ ನಿಲ್ಲುವಂತೆ. ಅಮೆರಿಕನ್ನರಿಗೆ ಜಯೋಪಾಖ್ಯಾನ (success stories)ಗಳನ್ನು ಹೇಳುವುದೆಂದರೆ ಆನಂದವಷ್ಟೆ. ಈ ರಾಜರ್ಸನದೂ ಒಂದು ಜಯೋಪಾಖ್ಯಾನ. ಗುಡಿಸಲಿನಲ್ಲಿ ವ್ಯಾಪಾರವನ್ನು ಆರಂಭಿಸಿದ ರಾಜರ್ಸ್ ತನ್ನ ಪ್ಯಾನ್‌ಕೇಕಿನ ಮಹಿಮೆಯಿಂದಾಗಿ ಈಗ ಮಿಷಿಗನ್ ಸರೋವರದ ತೀರಕ್ಕೆ ಸಮೀಪದಲ್ಲಿರುವ ಗುಡ್ಡದ ಮೇಲೆ ಸೊಗಸಾದ ಸ್ಥಳದಲ್ಲಿ ದೊಡ್ಡ ಮನೆ ಕಟ್ಟಿಕೊಂಡಿದ್ದಾನೆ. ಮೆಕ್‌ಮಿಲನ್ ನನಗೆ ಆ ಮನೆಯನ್ನೂ ತೋರಿಸಿದರು.

"ಅಮೆರಿಕದಲ್ಲಿ ನಿಮ್ಮ ಪ್ಯಾನ್‌ಕೇಕ್‌ನಷ್ಟು ಆನಂದವನ್ನು ಮತ್ತಾವ ಆಹಾರವೂ ಕೊಟ್ಟಿಲ್ಲ" ಎಂದು ನಾನು ಹೊಗಳಿದಾಗ ರಾಜರ್ಸ್‌ಗೂ ಮೆಕ್‌ಮಿಲನ್‌ರಿಗೂ ಎದೆ ಆರಂಗುಲ ಉಬ್ಬಿತು!

"ನೀವು ಇಂಡಿಯಕ್ಕೆ ಹೋದ ಮೇಲೆ ಪ್ಯಾನ್‌ಕೇಕನ್ನು ಹೊಗಳಿ ರಾಜರ್ಸ್‌ಗೆ ಕಾಗದ ಬರೆಯಿರಿ. ಅದರಿಂದ ಅವನು ಪ್ರಯೋಜನ ಪಡೆಯುತ್ತಾನೆ. We are experts in cashing appreciation, you know! (ಹೊಗಳಿಕೆಯನ್ನು ಹಣವಾಗಿ ಮಾರ್ಪಡಿಸುವುದರಲ್ಲಿ ನಾವು ಚತುರರು. ನಿಮಗೆ ಗೊತ್ತಷ್ಟೆ!)" ಎಂದು ಮೆಕ್‌ಮಿಲನ್ ಸಲಹೆ ಕೊಟ್ಟರು.

ನಾನು ಒಪ್ಪಿದೆ: "ಅಷ್ಟು ಸುಲಭವಾಗಿ ಆತನಿಗೆ ಒಳ್ಳೆಯದಾಗಿ ನನಗೆ ಆತನ ವಿಶ್ವಾಸ ದೊರೆಯುವುದಾದರೆ ಯಾಕಾಗಬಾರದು! ಬರೆಯೋಣ, ಅದಕ್ಕೇನು ಮುಟ್ಟಬೇಕು! ಮುಂದೆ ಇಲ್ಲಿಗೆ ಬರುವ ಭಾರತೀಯರ ವಿಷಯ

ದಲ್ಲೂ ರಾಜರ್ಸ್‌ಗೆ ವಿಶ್ವಾಸ ಹುಟ್ಟಬಹುದು. I shall also compose headlines for display in his advertisements, and it won't cost him a cent :

'Roger's pancakes take the cake! A connoisseur's compliment! Pancake-pleased professor proffers profuse praise!' will that do ?' ("ಅವರಿಗೆ ಜಾಹಿರಾತಿನ ಶೀರ್ಷಿಕೆಗಳನ್ನು ನಾನೇ ಬರೆದುಕೊಡುತ್ತೇನೆ. ಅದಕ್ಕಾಗಿ ಆತ ಒಂದು ಕಾಸೂ ಕೊಡಬೇಕಾಗಿಲ್ಲ: 'ರಾಜರ್ಸನ ದೋಸೆಯೋ ಲೇಸು. ಪೂರ್ಣಪ್ರಜ್ಞನ ಪ್ರಕೀರ್ತನ! ಪ್ರಭೂತಾನಂದ ಪಡೆದ ಪ್ರಾಧ್ಯಾಪಕನಿಂದ ಪ್ರಶಂಸಾದಾನ!' ಸಾಕೋ, ಇನ್ನಷ್ಟು ಹೊಗಳಿಕೆ ಬೇಕೊ ?")

ನಾನು ಭಾರತಕ್ಕೆ ಬಂದ ಮೇಲೆ ರಾಜರ್ಸ್‌ಗೆ ಕಾಗದ ಬರೆದೆ.

ಅವನ ರೆಸ್ಟೊರಾಂಟಿನಲ್ಲಿಟ್ಟದ್ದ ಕಾಗದದ ಬೆಂಕಿಕಡ್ಡಿಯ ಪ್ಯಾಕೆಟ್ ಒಂದನ್ನು ಮೆಕ್‌ಮಿಲನ್ ತೆಗೆದುಕೊಟ್ಟರು. ಅದರ ಮೇಲೆ ರಾಜರ್ಸ್‌ನ ಮತ್ತೂ ಅವನ ರೆಸ್ಟೊರಾಂಟಿನ ಹೆಸರು ವಿಳಾಸಗಳನ್ನು ಮುದ್ರಿಸಿತ್ತು. ಅಮೆರಿಕನ್ನರು ತಾವು ಹೋಗಿದ್ದ ಸ್ಥಳಗಳ ನೆನಪಿಗಾಗಿ ಇಂಥ ವಸ್ತುಗಳನ್ನು ಶೇಖರಿಸಿಡುತ್ತಾರಂತೆ. ಮಿಸಿಸ್ ಮೆಕ್‌ಮಿಲನ್‌ರಿಗೆ ಅವನ್ನು ಸಂಗ್ರಹಿಸುವುದೊಂದು ಚಟ.

ರೆಸ್ಟೊರಾಂಟಿನಿಂದ ಬಂದರಿಗೆ ಹೋದೆವು. ಮಿಲ್ವಾಕಿ ಲಡಿಂಗ್ಟನ್‌ಗಳ ನಡುವೆ ಹಡಗಿನ ಪ್ರಯಾಣವೇ ಚೆನ್ನಂತೆ. ಪ್ರಯಾಣಿಕರು ತಮ್ಮ ಕಾರಿನಿಂದ ಇಳಿಯದೆ ನೇರವಾಗಿ ಹಡಗಿನ ಡೆಕ್ ಮೇಲಕ್ಕೆ ಅದನ್ನು ನಡೆಸಿಕೊಂಡು ಹೋಗಿ ಪಾರ್ಕ್‌ಮಾಡಿ ಅನಂತರ ತಮ್ಮ ಕೇಬಿನ್‌ಗೆ ಹೋಗಬಹುದು. ಇಂಥ ವಿಶೇಷ ವ್ಯವಸ್ಥೆಗಳನ್ನೆಲ್ಲ ನೋಡಬೇಕೆಂಬ ಆಸೆ ನನಗಿದ್ದದ್ದಕ್ಕಿಂತ ಅವನ್ನು ನನಗೆ—ನಾಗರಿಕತೆಯ ಮೊದಮೊದಲ ಮೆಟ್ಟಲುಗಳ ಮೇಲೆ ತಪ್ಪು ಹೆಜ್ಜೆ ಹಾಕುತ್ತಿರುವ ಭಾರತೀಯನಿಗೆ?—ತೋರಿಸಬೇಕೆಂಬ ಆಸೆ ಮೆಕ್‌ಮಿಲನ್‌ರನ್ನು ಹೆಚ್ಚಾಗಿ ಕಾಡುತ್ತಿತ್ತು !

ಲಡಿಂಗ್ಟನ್‌ನಲ್ಲಿ ಮುಖ್ಯವಾಗಿ ನೋಡಬೇಕಾದ್ದೊಂದರೆ: ಗುಡ್ಡದ ಮೇಲಿರುವ ಬೃಹತ್ಪ್ರಮಾಣದ ಜಲಾಶಯಕ್ಕೆ ಮಿಷಿಗನ್ ಸರೋವರದಿಂದ ನೀರೆತ್ತಿ, ಅನಂತರ ಅದೇ ನೀರನ್ನು ಪೆನ್‌ಸ್ಟಾಕ್ ನಳಗಳಿಂದ ಸರೋವರಕ್ಕೆ ಮತ್ತೆ ಬಿಟ್ಟು ಆ ಮೂಲಕ ವಿದ್ಯುಚ್ಛಕ್ತಿಯನ್ನು ಉತ್ಪಾದಿಸುವ ವ್ಯವಸ್ಥೆ. ವಿದ್ಯುಚ್ಛಕ್ತಿಯ ಬಳಕೆ ರಾತ್ರಿಯ ಹೊತ್ತು ಕಡಮೆ. ಆಗ ಅದನ್ನು ಜಲಾಶಯಕ್ಕೆ ನೀರು ತುಂಬಲು ಬಳಸುತ್ತಾರೆ. ಹಗಲುಹೊತ್ತು ಅದೇ ನೀರಿನಿಂದ

ವಿದ್ಯುತ್ತನ್ನು ಪಡೆಯುತ್ತಾರೆ. ಒಟ್ಟಿನಲ್ಲಿ ರಾತ್ರಿ ಬಳಸುವ ಶಕ್ತಿಗಿಂತ ಹಗಲು ಉತ್ಪಾದಿಸುವ ಶಕ್ತಿ ಹೆಚ್ಚಂತೆ. ಈ ಕೇಂದ್ರದ ಸ್ಥಾಪನೆಯನ್ನು ಕುರಿತು ಒಂದು ಡಾಕ್ಯುಮೆಂಟರಿ ಚಿತ್ರವನ್ನು ತಯಾರಿಸಿದ್ದಾರೆ ; ಬಂದವರಿಗೆಲ್ಲ ಅದನ್ನು ಉಚಿತವಾಗಿ ತೋರಿಸುತ್ತಾರೆ. ಈ ಬಗೆಯ ವಿದ್ಯುತ್ತಿನ ಉತ್ಪಾದನೆ ಯೂರೋಪಿನಲ್ಲೂ ಕೆಲವು ಕಡೆ ಉಂಟೆಂದು ನನ್ನ ಮಗ ಸುಬ್ಬರಾಮುವಿನಿಂದ ಆಮೇಲೆ ತಿಳಿಯಿತು. ಪ್ರಪಂಚದಲ್ಲಿರುವ ಇಂಥ ಉತ್ಪಾದನಾಕೇಂದ್ರಗಳೆಲ್ಲ ಕ್ಕಿಂತ ಲಡಿಂಗ್ಟನ್ನಿನಲ್ಲಿರುವುದೇ ಭಾರಿಪ್ರಮಾಣದ್ದಂತೆ. ಇದ್ದರೂ ಇರಬಹುದು. ಇಂಥ ಮಾತನ್ನು ಅಮೆರಿಕನ್ನರು ಹೇಳಿಕೊಳ್ಳುವುದು ಸಾಮಾನ್ಯ. ಹೇಳಿ ತಮ್ಮನ್ನು ತಾವೇ ಹಾಸ್ಯಮಾಡಿಕೊಳ್ಳುವುದೂ ಉಂಟು. ಅವರ ದೇಶ, ಅವರ ಪರ್ವತಪಂಕ್ತಿಗಳು, ನದಿಗಳು, ಜಲಪಾತಗಳು, ವ್ಯಾಪಾರದ ಮತ್ತು ಕೈಗಾರಿಕೆಯ ಸಂಸ್ಥೆಗಳು—ಉಳಿದೆಲ್ಲ ಕಡೆಯಲ್ಲಿರುವುದಕ್ಕಿಂತ ಅಮೆರಿಕದವೇ ದೊಡ್ಡವು !

ಅವತ್ತು ಮೆಕ್‌ಮಿಲನ್‌ರಿಗೆ ಆರೋಗ್ಯ ಅಷ್ಟು ಚೆನ್ನಾಗಿರಲಿಲ್ಲ; ಸ್ವಲ್ಪ ತಲೆಸುತ್ತು ಬಂದಿತ್ತು. ಅದರಿಂದಾಗಿ ವಿದ್ಯುತ್ಕೇಂದ್ರದಿಂದ ನೇರವಾಗಿ ಅವರ ಟ್ರೈಯ್ಲರ್ ಬಳಿಗೆ ಹೋದೆವು. ಗ್ರಾಮಡೆಟ "ಮ್ಯಾಕ್, ನೀನು ಮಲಗಿ ವಿಶ್ರಾಂತಿ ತೆಗೆದುಕೊ ರಾಯರನ್ನು ನಾನೇ ಸುತ್ತಿಸುತ್ತೇನೆ" ಎಂದರು. ವಾಸ್ತವವಾಗಿ ಆಕೆಗೂ ಮೈಯಲ್ಲಿ ಆಲಸ್ಯವೇ. ನಾವು ಲಿಂಕನ್‌ಗೆ ಹೋಗಿದ್ದಾಗ ರಾಮು ಅವರನ್ನು ಪರೀಕ್ಷಿಸಿ ಏನೇನೋ ಔಷಧಿಗಳನ್ನು ಬರೆದುಕೊಟ್ಟಿದ್ದ. ಅವರು ಇನ್ನೂ ಔಷಧಿ ತೆಗೆದುಕೊಳ್ಳುವ ಸ್ಥಿತಿಯಲ್ಲೇ ಇದ್ದರು. ಅಲ್ಲದೆ ಅಮೆರಿಕದಲ್ಲಿ ಕಾರ್ ನಡಸುವುದು ಸುಲಭದ ಕೆಲಸವಲ್ಲ. ರಸ್ತೆಯನ್ನು ಒಂದೇ ಸಮನೆ ದಿಟ್ಟಿಸುವ ಕಣ್ಣು, ಸ್ಟಿಯರಿಂಗ್ ಚಕ್ರವನ್ನು ಹಿಡಿದಿರುವ ಕೈಗಳು, ಬ್ರೇಕ್ ಹಾಕಲು ಸಿದ್ಧವಾಗಿರುವ ಕಾಲು—ಪಂಚಪ್ರಾಣಗಳ ಶಕ್ತಿಯನ್ನೂ ಈ ಅವಯವಗಳಲ್ಲಿ ಕೇಂದ್ರೀಕರಿಸಬೇಕು; ಯಾವ ಯೋಗಿಗಿಂತಲೂ ಹೆಚ್ಚಾಗಿ ಸ್ಥಿರಚಿತ್ತರಾಗಿರಬೇಕು. ಆದ್ದರಿಂದ ಕೂತಕಡೆ ಕೂತಿದ್ದರೂ ನೂರು ಮೈಲಿ ಓಡಿಸುವುದರಲ್ಲಿ ಆಯಾಸವಾಗುತ್ತದೆ. ಗ್ರಾಮಡೆಟ ನನ್ನನ್ನು ಸುತ್ತಿಸಲು ನಿಶ್ಚಯಿಸಿದ್ದು ನನಗೆ ಸರ್ವಥಾ ಇಷ್ಟವಿರಲಿಲ್ಲ. ಅದನ್ನು ಹೇಳಿಯೂ ಹೇಳಿದೆ.

"ಮಿಸಿಸ್ ಮೆಕ್‌ಮಿಲನ್, ನನಗೆ ದೇಶ ನೋಡುವ ಚಟ ಏನೇನೂ ಇಲ್ಲ. ಎಲ್ಲಿಗೆ ಹೋಗುವುದೂ ಬೇಡ. ತಿರುಗಾಟಕ್ಕಿಂತ ಮಾತು ಚೆನ್ನ. ನಿಮಗೆ ಕೂತಿರುವುದು ಕಷ್ಟವಲ್ಲದಿದ್ದರೆ ಹರಟೆ ಬಡಿಯೋಣ. ಅಥವಾ ನೀವಿಬ್ಬರೂ

ವಿಶ್ರಾಂತಿ ತೆಗೆದುಕೊಳ್ಳಿ. ಸಂಜೆ ಮತ್ತೆ ಸೇರೋಣ."

"ಹಾಗೆಂದರೇನು ! ನಿಮ್ಮ ಸೊಸೆ ಕೆಲಸ ಮಾಡುತ್ತಿದ್ದ ಸ್ಥಳ-ಎಪ್‌ವರ್ತ್ ಹೈಟ್ಸ್ (Epworth Heights)—ಹತ್ತಿರದಲ್ಲೇ ಇದೆ. ಅದನ್ನು ನಿಮಗೆ ತೋರಿಸಬೇಡವೆ? ನಮ್ಮ ಲಿಂಡ (ಅವರ ಎರಡನೆಯ ಮಗಳು) ಸಂಗೀತ ಕಲಿಯುವುದಕ್ಕಾಗಿ ಕೆಲವು ತಿಂಗಳ ಕಾಲ ಇಂಟರ್‌ಲೋಕನ್‌ನಲ್ಲಿದ್ದಳು. ಅದೂ ನೀವು ನೋಡಬೇಕಾದ ಸ್ಥಳ. ಎಲ್ಲಕ್ಕಿಂತ ಹೆಚ್ಚಾಗಿ ನೀವು ಬ್ಯೂಲಾದಲ್ಲಿ (Beulah) ಚೆರಿ ಪೈ (Cherry pie) ತಿನ್ನಲೇ ಬೇಕು. ಪ್ರಪಂಚದಲ್ಲಿ ಇನ್ನೆಲ್ಲೂ ಅಂಥ ಪೈ ಸಿಕ್ಕುವುದಿಲ್ಲ !"

'ಮೆಕ್‌ಮಿಲನ್ ಚರ್ಚೆಗೆ ಮುಕ್ತಾಯ ಹಾಕಿದರು. "No use arguing, Mr. Rao. Just obey !" (ಚರ್ಚೆಯಿಂದೇನೂ ಪ್ರಯೋಜನವಿಲ್ಲ, ರಾಯರೆ. ಹೇಳಿದ ಹಾಗೆ ಕೇಳಿ!)

ಅವರ ವಾಕ್ಯ ಮುಗಿಯುವ ವೇಳೆಗಾಗಲೇ ಗ್ರಾಮಡೆಟ ಕಾರಿನ ಬಾಗಿಲು ತೆಗೆಯುತ್ತಿದ್ದರು.

ನಾವು ಹೋದದ್ದು ಲಡಿಂಗ್ಟನ್‌ನಿಂದ ಉತ್ತರಕ್ಕೆ. ಅಂದಿನ ಪ್ರಯಾಣವೆಲ್ಲ ಮಿಷಿಗನ್ ರಾಜ್ಯದಲ್ಲಿ. ಆಗಾಗ ರಸ್ತೆಯ ಒಂದು ಪಕ್ಕದಲ್ಲಿ ಮಿಷಿಗನ್ ಸರೋವರ ಕಾಣುತ್ತಿತ್ತು. ಇನ್ನೊಂದು ಪಕ್ಕದಲ್ಲೂ ಸಣ್ಣ ಸಣ್ಣ-ಮಿಷಿಗನ್‌ಗೆ ಹೋಲಿಸಿದರೆ ಸಣ್ಣ ಸರೋವರಗಳು : ಕ್ರಿಸ್ಟಲ್ ಲೇಕ್, ಬೇಅರ್ ಲೇಕ್, ಗ್ಲೆನ್ ಲೇಕ್, ಬ್ಲೂ ಲೇಕ್ (Crystal lake, Bear lake, Glen lake, Blue lake)—ಇತರ ಕೆಲವು ಹೆಸರುಗಳು ಮರೆತು ಹೋಗಿವೆ. ಅಮೆರಿಕ (ಸಂ. ಸಂಸ್ಥಾನಗಳು) ಸರೋವರಗಳ ನಾಡು. ಮಿನಿಸೋಟ (Minnesota) ರಾಜ್ಯದ ಕಾರುಗಳ ನಂಬರು ಪ್ಲೇಟಿನ ಮೇಲೆ 'Ten thousand lakes' (ಹತ್ತು ಸಾವಿರ ಸರೋವರಗಳು) ಎಂಬ ಒಕ್ಕಣೆ ಇರುತ್ತದೆ. ವಾಸ್ತವವಾಗಿ ಅಲ್ಲಿ ಹತ್ತು ಸಾವಿರಕ್ಕಿಂತ ಹೆಚ್ಚು ಸರೋವರಗಳಿವೆಯಂತೆ! ಅಮೆರಿಕನ್ನರ ಐಶ್ವರ್ಯ, ಅವರು ಕಟ್ಟಿರುವ ವಾಣಿಜ್ಯ ಸಾಮ್ರಾಜ್ಯ, ಕೈಗಾರಿಕೆಯಲ್ಲಿ ಅವರು ಸಾಧಿಸಿರುವ ಔನ್ನತ್ಯ, ಅವರ ಅನುಪಮವಾದ ಟೆಕ್ನಾಲಜಿ-ಇವೆಲ್ಲವನ್ನೂ ಮರೆಸುತ್ತದೆ, ಈ ನಾಡಿನ ಪ್ರಕೃತಿ ಸೌಂದರ್ಯ.

ಸ್ಯಾಸ್ಸಿ ಸ್ವಲ್ಪಕಾಲ ಎಪ್‌ವರ್ತ್ ಹೈಟ್ಸ್‌ನಲ್ಲಿದ್ದಳಂತೆ. ಆ ಸ್ಥಳವನ್ನು ತೋರಿಸಬೇಕೆಂಬ ಆಸೆ ಅವಳ ತಾಯಿಯಲ್ಲಿ ಸಹಜವಾದದ್ದು. ಅಲ್ಲಿ ಹಿಂದೆ, ಕೇವಲ ಹತ್ತು ವರ್ಷಗಳ ಹಿಂದೆ, ಬಹಳ ಸೊಗಸಾದ ಬೀಚ್ ಇದ್ದಿತಂತೆ. ಮಿಷಿಗನ್ ಸರೋವರದಲ್ಲಿ ಎದ್ದ ಬಿರುಗಾಳಿಗಳ ಮತ್ತು ಅಲೆಗಳ ಹೊಡೆತ

ದಿಂದ ತೀರ ಪ್ರದೇಶದ ಸೊಬಗು ಈಗ ನಾಶವಾಗಿದೆ. ಈಗ ಅಲ್ಲಿ ನೋಡ ಬೇಕಾದದ್ದೇನೂ ಇಲ್ಲ. ಅಲ್ಲಿಂದ ನಾವು ಬ್ಯೂಲಾಕ್ಕೆ ಹೋದೆವು. ಆ ಪ್ರಾಂತ ದಲ್ಲೆಲ್ಲಾ ಚೆರಿ, ಪ್ಲಮ್, ಸ್ಟ್ರಾಬೆರಿ, ಸೇಬು ಮುಂತಾದ ಹಣ್ಣುಗಳನ್ನು ಬೆಳೆಯುವುದು ಹೆಚ್ಚು. ಬ್ಯೂಲಾವನ್ನು 'ಚೆರಿ ಪ್ರಪಂಚದ ರಾಜಧಾನಿ' (the cherry capital of the world) ಎಂದು ಕರೆಯುತ್ತಾರಂತೆ. ಅಮೆ ರಿಕನ್ನರು ಮಾತ್ರವಲ್ಲದೆ ಇತರರೂ ಹಾಗೆ ಕರೆಯುತ್ತಾರೆಯೋ ಇಲ್ಲವೋ ನನಗೆ ತಿಳಿಯದು! ಗ್ರಾಮಡೆಟ ನನ್ನನ್ನು ಕರೆತಂದದ್ದು ಮುಖ್ಯವಾಗಿ ಬ್ಯೂಲಾದ ಚೆರಿ ಪೈ ತಿನ್ನಲೆಂದು ತಾನೆ. ಇಲ್ಲಿಯ ಚೆರಿ ಹಟ್ ಮಾಲೀಕನದ್ದೂ ಒಂದು ಜಯೋಪಾಖ್ಯಾನ : ಅವನು ನಿರ್ಗತಿಕನಾಗಿ ಬಂದ ; ಕೂಲಿ ನಾಲಿ ಮಾಡಿ ಹೊಟ್ಟೆ ಬಟ್ಟೆ ಕಟ್ಟಿ 500 ಡಾಲರು ಗಳಿಸಿ ಚೆರಿ ಹಟ್ (ಆಗ ಅದು ನಿಜ ವಾಗಿಯೂ 'ಹಟ್' (ಗುಡಿಸಲು) ಆಗಿಯೇ ಇತ್ತು) ಆರಂಭಿಸಿದ. ಈಗ ನೋಡಿ! He grosses 500000 and makes a net 100000!—5 ಲಕ್ಷ ಡಾಲರಿನ ವ್ಯಾಪಾರ, ಖರ್ಚು ಕಳೆದು ಒಂದು ಲಕ್ಷ ಲಾಭ! ಗ್ರಾಮಡೆಟ ಈ ಕಥೆ ಹೇಳಿದಾಗ ನಾನು 'ಭೂತು ಮಝು ಭಾಪುರೇ ಭಾಪು' ಎಂದು ಉದ್ಗಾರ ತೆಗೆಯಬೇಕಾಗಿತ್ತು. ಆದರೆ ಇಂಥ ಉಪಾಖ್ಯಾನಗಳನ್ನು ಕೇಳಿಕೇಳಿ ಜಡ್ಡುಗಟ್ಟಿದ್ದ ನನ್ನ ಮನಸ್ಸು ತನ್ನ ಕರ್ತವ್ಯವನ್ನು ಮರೆತಿತು. ಆತ ಎಷ್ಟಾ ದರೂ 'ಗ್ರೋಸ್' ಮಾಡಲಿ ಎಷ್ಟಾದರೂ 'ನೆಟ್' ಮಾಡಲಿ. ನನ್ನ ಆಕ್ಷೇಪಣೆ ಯೇನೂ ಇಲ್ಲ. ಆತನ ಚೆರಿ ಪೈ ಸೊಗಸಾಗಿತ್ತು. ಅದನ್ನೇನೊ ಮನಸಾರೆ ಹೊಗಳಿದೆ.

ಮಿಷಿಗನ್ ತೀರದಲ್ಲಿರುವ ಇಂಟರ್‌ಲೋಕನ್ (Interlochen) ನಿಜವಾಗಿಯೂ ನೋಡಬೇಕಾದ ಸ್ಥಳ. ನಾವು ಅಲ್ಲಿಗೆ ತಲಪುವ ವೇಳೆಗೆ ಮಧ್ಯಾಹ್ನ ಮೂರುಘಂಟೆ; ಗ್ರಾಮಡೆಟ ಬಹಳ ಆಯಾಸಗೊಂಡಿದ್ದಿರಬೇಕು. "ರಾಯರೆ, ಇನ್ನು ಅರ್ಧಗಂಟೆಯ ಕಾಲ ನಿಮ್ಮ ಯೋಗಕ್ಷೇಮ ನೀವು ನೋಡಿ ಕೊಳ್ಳಿ. ನಾನು ಯಾವಾಗಲೂ ಹೀಗೆಯೇ: ದೇಹ ದಂಗೆ ಏಳುವವರೆಗೂ ದುಡಿದು ಬಿಡುತ್ತೇನೆ. ಆಮೇಲೆ ಸೊರಗಿ ಮುದುರಿಕೊಂಡು ಮಲಗಿಬಿಡುವುದು! (I drive myself to the limit, and then fold up)" ಎಂದು ಹೇಳಿ ಕಾರಿನಲ್ಲೇ ಮಲಗಿ ನಿದ್ದೆಹೋದರು. ನನಗೂ ಮನಬಂದಂತೆ ಒಂಟಿಯಾಗಿ ಅಲೆಯುವ ಅಪೇಕ್ಷೆಯಿತ್ತು !

ಇಂಟರ್‌ಲೋಕನ್ ಪ್ರಸಿದ್ಧವಾಗಿರುವುದು ಅಲ್ಲಿಯ ಆರ್ಟ್ಸ್ ಅಕಾ ಡೆಮಿ (Academy of Arts) ಯಿಂದಾಗಿ. ಜೋಸೆಫ್ ಮ್ಯಾಡಿ ಎಂಬಾತ

ಅದನ್ನು 1962 ರಲ್ಲಿ ಸ್ಥಾಪಿಸಿದನಂತೆ. ಆ ಸಂಸ್ಥೆಯ ಆದರ್ಶ : ಪಾಠಕ್ರಮವೆಲ್ಲ (curriculum) ವಿದ್ಯಾರ್ಥಿಗಳ ಶಕ್ತಿಯನ್ನೂ ಅವರ ವಿಶಿಷ್ಟ ಮನೋಧರ್ಮ ವನ್ನೂ ಅವಲಂಬಿಸಿರಬೇಕು: ಬಡತಿ ಕೊಡುವುದೆಲ್ಲ ಅವರ ಸಾಧನೆಯನ್ನವ ಲಂಬಿಸಿರಬೇಕು. ಅಲ್ಲಿ ಗಣಿತ, ವಿಜ್ಞಾನ, ಅಮೆರಿಕನ್ ಇತಿಹಾಸ ಮೊದ ಲಾದ ವಿಷಯಗಳನ್ನು ಬೋಧಿಸುತ್ತಾರಾದರೂ ಚಿತ್ರಕಲೆ, ಲೋಹಶಿಲ್ಪ, ಸಂಗೀತ ಮುಂತಾದ ಲಲಿತ ಕಲೆಗಳಿಗೆ ಪ್ರಾಶಸ್ತ್ಯ. ವಿದ್ಯಾರ್ಥಿಗಳನ್ನು ತಯಾರುಮಾಡಲು ಮೊದಮೊದಲ (preparatory) ಬೋರ್ಡಿಂಗ್ ಸ್ಕೂಲಿನಿಂದ ವಿಶ್ವವಿದ್ಯಾನಿಲಯದ ಮಟ್ಟದವರೆಗೂ ತರಗತಿಗಳಿವೆ. ಮಿಷಿಗನ್ ವಿಶ್ವವಿದ್ಯಾನಿಲಯ ಈ ಅಕಾಡೆಮಿಯನ್ನು ಅಂಗೀಕರಿಸಿದೆ. 1972ರಲ್ಲಿ 34 ಅಮೆರಿಕನ್ ರಾಜ್ಯಗಳಿಂದ ಮತ್ತು 4 ಪರದೇಶಗಳಿಂದ ಬಂದ ವಿದ್ಯಾರ್ಥಿ ಗಳು ಇಲ್ಲಿ ಶಿಕ್ಷಣ ಪಡೆಯುತ್ತಿದ್ದರು. ಸೆಮಿನರ್, ಸಿಂಪೋಸಿಯಂ, ವಿಶ್ವ ವಿಖ್ಯಾತರಾದ ಕಲಾವಿದರಿಂದ ವಿಶೇಷ ಶಿಕ್ಷಣ—ಇವೆಲ್ಲಕ್ಕೂ ಏರ್ಪಾಡಿದೆ.

ಈ ಅಕಾಡೆಮಿ 1400 ಎಕರೆಯಷ್ಟು ವಿಸ್ತಾರವಾದ ಪ್ರದೇಶದಲ್ಲಿದೆ. ಅಲ್ಲಿ ಇತ್ತ ಕಾಡಿನ ವೃಕ್ಷಸಂಪತ್ತು, ಅತ್ತ ನಗರದ ನೈರ್ಮಲ್ಯ ವ್ಯವಸ್ಥೆ ಸೌಲಭ್ಯಗಳು, ಎರಡೂ ಇವೆ. ಅಲ್ಲಲ್ಲೇ ಮರದ ಬುಡಕ್ಕೆ ಒರಗಿಕೊಂಡು ಯುವಕರು ಓದುತ್ತಿರುತ್ತಾರೆ; ಚಿತ್ರ ಬರೆಯುತ್ತಿರುತ್ತಾರೆ, ಸಂಗೀತ ಅಭ್ಯಾಸ ಮಾಡುತ್ತಿರುತ್ತಾರೆ; ಮಿಷಿಗನ್ ಸರೋವರದಲ್ಲಿ ನೀರಾಟವಾಡುತ್ತಿರುತ್ತಾರೆ. ಇವೆಲ್ಲ ಚಟುವಟಿಕೆಗಳಿಗೂ ಹಿನ್ನೆಲೆಯಾಗಿ ಅಲೆಗಳ ಸಂತತವಾದ ಮರ್ಮರ ಶಬ್ದ; ಪ್ರಶಾಂತವಾದ ನೆಳಲುಬೆಳಕಿನ ವಾತಾವರಣ. 3000 ವರ್ಷಗಳ ಹಿಂದಿನ ಯಾವುದೋ ಋಷ್ಯಾಶ್ರಮಕ್ಕೆ ಬಂದೆನೇನೋ ಎನ್ನಿಸಿತು. ನಾನೂ ಒಂದು ಮರವನ್ನೊರಗಿಕೊಂಡು ಕುಳಿತೆ. ನನ್ನ ಅರಿವಿಲ್ಲದೆ ನನಗೂ ಬಹಳ ಆಯಾಸವಾಗಿದ್ದಿರಬೇಕು. ಕುಳಿತ ಒಂದೆರಡು ನಿಮಿಷಗಳಲ್ಲೇ ನನ್ನ ಪ್ರಯತ್ನ ವಿಲ್ಲದೆ ದೇಹದ ಬಿಗುಪು ತಾನಾಗಿಯೇ ಇಳಿದುಹೋಯಿತು; ಇಂದ್ರಿಯಗಳು ತಮ್ಮ ಕರ್ತವ್ಯವನ್ನು ಮರೆತುವು; ಯೋಚನೆಗಳೆಲ್ಲ ಎಲ್ಲಿಗೋ ಓಡಿಹೋಗಿ ಮನಸ್ಸನ್ನು ತೆರವು ಮಾಡಿದುವು. ನಿದ್ದೆ ಬರದಿದ್ದರೂ ವಿಚಿತ್ರವಾದ ಜೇಂದು ಸ್ಥಿತಿ ಬಂತು—ಅದನ್ನು ಅನುಭವದ ಅಭಾವ a cessation of experience ಎಂದು ಕರೆಯಬಹುದೇನೊ. ನಾನು ಮತ್ತೆ ಇಂಟರ್‌ಲೋಕನ್‌ಗೆ ಭೇಟಿ ಕೊಡುವುದು ತೀರ ಅಸಂಭವ. ಆದರೆ ಈ ಅನುಭವದಿಂದಾಗಿ—ಅನು ಭವವಿಲ್ಲದ ಸ್ಥಿತಿಯ ಅನುಭವದಿಂದಾಗಿ!—ಅದು ಮನಸ್ಸಿನಲ್ಲಿ ನಿಲ್ಲುತ್ತದೆ.... ....ಯಾವನೋ ಪಾಪಿಯ ಮೋಟಾರ್ ಸೈಕಲ್ಲಿನ ಸದ್ದು ನನ್ನನ್ನು ಮತ್ತೆ

ಅನುಭವದ ಸೆರೆಗೆ ಎಳೆತಂದಿತು. ಎದ್ದು ಸ್ವಲ್ಪ ಸುತ್ತಾಡಿ ಹತ್ತಿರದಲ್ಲಿದ್ದ ವಿಶಾಲವಾದ ಗಾನಮಂದಿರವೊಳಕ್ಕೆ ಹೋದೆ. ಅದು ಸುಮಾರು 2500 ಜನ ಕೂರಬಹುದಾದ ಸುಸಜ್ಜಿತವಾದ ಮಂದಿರ. ವೇದಿಕೆಯ ಮೇಲೆ 60–70 ಜನ ಆರ್ಕೆಸ್ಟ್ರ ಅಭ್ಯಾಸಮಾಡುತ್ತಿದ್ದರು. ಸಂಗೀತವೇನಾದರೂ ಹಿಡಿಸೀತೇನೋ ನೋಡೋಣ ಎಂದುಕೊಂಡು ಸ್ವಲ್ಪ ಹೊತ್ತು ಕುಳಿತೆ—ಏನೂ ಗೊತ್ತಾಗ ಲಿಲ್ಲ. ಎದ್ದು ಕಾರಿನ ಕಡೆಗೆ ಹೊರಟೆ. ಲಡಿಂಗ್ಟನ್‌ಗೆ ವಾಪಸಾಗುವ ವೇಳೆಗೆ ಸಂಜೆಯಾಗಿತ್ತು.

ಮಾರನೆಯ ದಿನ ಬೆಳಗ್ಗೆ ಮೆಕ್‌ಮಿಲನ್ ಬರುವುದಕ್ಕಿಂತ ಮುಂಚೆ ಮೋಟಲಿನವನ ಬಿಲ್ ಕೊಟ್ಟುಬಿಡೋಣವೆಂದು ಹೋದೆ. ಆದರೆ ಸಲ್ಲ ಬೇಕಾದ ಹಣವನ್ನು ಮೆಕ್‌ಮಿಲನ್ ಎರಡು ದಿನ ಮುಂಚೆಯೇ ಸಲ್ಲಿಸಿದ್ದ ರೆಂದು ತಿಳಿಯಿತು. ಮೋಟಲಿನ ಮಾಲೀಕನ ಹೆಸರು ನೇಡರ್. ನನಗೆ ಅಮೆರಿಕ ದಲ್ಲಿ ಬಳಕೆದಾರ ಚಳುವಳಿಯ ('Consumer movement'ನ) ನಾಯಕ ನಾದ ರ್‍ಯಾಲ್ಫ್ ನೇಡರ್‌ನ ನೆನಪಾಯಿತು. ಆ ಮಹನೀಯ ಯಾವುದೋ ಭಾರಿ ಸಂಸ್ಥೆಯ ಮೇಲೆ ಬಳಕೆದಾರರ ಪರವಾಗಿ ದಾವಾ ಹಾಕಿ ಗೆದ್ದು 6–7 ಲಕ್ಷ ಡಾಲರುಗಳನ್ನು ಪಡೆದು ಅದನ್ನು ಮತ್ತೆ ಬಳಕೆದಾರರ ಚಳುವಳಿಗಾಗಿ ಉಪಯೋಗಿಸಿದನೆಂದು ಪ್ರಸಿದ್ಧಿ.

ನಾನು ಮೋಟಲಿನವನನ್ನು ಕೇಳಿದೆ : "ನಿಮ್ಮ ನಾಮಕರಣದ ಹೆಸರು ರ್‍ಯಾಲ್ಫ್ ಅಲ್ಲ ತಾನೆ?"

ಆತ ನಕ್ಕ. "ಅಲ್ಲ, ಆ ನೇಡರ್‌ನನ್ನು ಕಂಡರೆ ಈ ನೇಡರ್ ಹೆದರುತ್ತಾನೆ!"

ಮೆಕ್‌ಮಿಲನ್ ದಂಪತಿಗಳು 8 ಘಂಟೆಗೆ ಬಂದು ತಮ್ಮ ಕಾರಿಗೆ ಮತ್ತು ನನ್ನ ಹೊಟ್ಟೆಗೆ ಉಚಿತವಾದ ಇಂಧನ ವಿಶೇಷಗಳನ್ನು ತುಂಬಿಸಿ ಮಸ್ಕೀಗನ್‌ಗೆ ಕರೆದುಕೊಂಡು ಹೋದರು. ವಿಮಾನಕ್ಕಾಗಿ ಕಾಯುತ್ತಿದ್ದಾಗ ಗ್ರ್ಯಾಮಡೆಟ ನನ್ನ ಸಾಮಾನು ತುಂಬಿದ್ದ ಚೀಲದ ಕಡೆಗೆ ದೃಷ್ಟಿ ಬೀರಿದರು. ಅದು ಸೊಗ ಸಾದ ಮುತ್ತಿನ ಬಣ್ಣದ ಚೀಲ. ಫಿಲಿಪೀನ್ಸ್‌ನಲ್ಲಿ ಕೊಂಡದ್ದು; ಅದರ ಮೇಲೆ 'ಫಿಲಿಪೀನ್ ಏರ್‌ಲೈನ್ಸ್'ನ ಹೆಸರಿತ್ತು. ಅದನ್ನು ಗಮನಿಸಿ ಗ್ರ್ಯಾಮಡೆಟ ಕೇಳಿದರು :

"ಅದನ್ನು ಫಿಲಿಪೀನ್ಸ್‌ನಲ್ಲಿ ಕೊಂಡಿರಬೇಕಲ್ಲವೆ?"

"ಹೌದು."

"ನಾಗರಾಜ್ ಅಲ್ಲಿದ್ದದ್ದು 1964 ರಲ್ಲಿ. ಇದು ಅಷ್ಟು ಹಳೆಯ ಚೀಲವೆ?"

"ವಯಸ್ಸಿನಲ್ಲಿ ಹಳೆಯದು. ಆದರೆ ಗಟ್ಟಿಯಾಗಿದೆ. ನನಗೆ ಅದನ್ನು ಕಂಡರೆ ಬಹಳ ಇಷ್ಟ."

"ಛೀ ಛೀ ! ಹತ್ತು ವರ್ಷದ ಚೀಲ ! ಎಸೆಯಬೇಕು."

ಮೆಕ್‌ಮಿಲನ್ "ಅವರಿಗೆ ಅದು ಇಷ್ಟ ಎಂದರಲ್ಲವೆ ?" ಎಂದು ನಡುವೆ ಮಾತು ಹಾಕಿದರು.

ಗ್ರಾಮಡೆಟ : "ನೀನು ತೆಪ್ಪಗಿರು ಮ್ಯಾಕ್!" (you shut up, Mac) ಎಂದವರೇ ನೇರವಾಗಿ ಆ ಕಟ್ಟಡದಲ್ಲೇ ಇದ್ದ ಸೂವೆನಿರ್ ಅಂಗಡಿಗೆ ಹೋಗಿ ಬಂದು ನೀಲಿ ಬಣ್ಣದ ಚೀಲವನ್ನೂ ನನ್ನ ಹೆಸರು ಬರೆದು ಅದಕ್ಕೆ ಅಂಟಿಸಲು ಅನುಕೂಲವಾಗುವಂತೆ 'ಸ್ಟಿಕರ್' ಅನ್ನೂ ತಂದು ನನ್ನ ಕೈಯಲ್ಲಿಟ್ಟರು. ಹಣ ಕೊಡಹೋದಾಗ ತೆಗೆದುಕೊಳ್ಳಲಿಲ್ಲ. ಬಹುಶಃ ನನ್ನ ಭೇಟಿಯ ಜ್ಞಾಪಕಾರ್ಥವಾಗಿ ಏನನ್ನಾದರೂ ಕೊಡಬೇಕೆಂಬ ಉದ್ದೇಶದಿಂದ ಈ ನಾಟಕವನ್ನಾಡಿರಬಹುದು. ಅದು ಹೇಗೇ ಇರಲಿ, ಅಮೆರಿಕದವರಿಗೆ ಬೇಗ ಬೇಗ ತಮ್ಮ ವಸ್ತುಗಳನ್ನು ಎಸೆದು ಹೊಸದನ್ನು ಕೊಳ್ಳುವ ಚಟ ಹೆಚ್ಚು. ಸಾಮಾನುಗಳನ್ನು ತಯಾರಿಸುವವರು ಈ ಮನೋವೃತ್ತಿಗೆ ಪ್ರೋತ್ಸಾಹವನ್ನೂ ಕೊಡುತ್ತಾರೆ.

"ಲಡಿಂಗ್ಟನ್‌ನಿಂದ ಲಿಂಕನ್‌ಗೆ ಹಿಂದಿರುವಾಗ ನಿಮಗೆ ಭೇಟಿ ಕೊಟ್ಟು ಮುಂದಕ್ಕೆ ಹೋಗುತ್ತೇವೆ" ಎಂದು ಭರವಸೆ ಕೊಟ್ಟು ಮೆಕ್‌ಮಿಲನ್‌ರು ನನ್ನನ್ನು ಕಳಿಸಿಕೊಟ್ಟರು.

* * *

ನ್ಯಾನ್ಸಿಯ ತಂಗಿ ಲಿಂಡ 4–5 ದಿನಗಳ ಕೆಳಗೆ ಫೋನ್‌ಮಾಡಿ "ನಮ್ಮ ಊರಿಗೆ ಯಾವಾಗ ಬರುತ್ತೀರಿ?" ಎಂದು ಕೇಳಿದಳು. ಅವಳ ಸಾತ್ವಿಕ ಸ್ವಭಾವವನ್ನೂ ಆಲೋಚನಾಪರತೆಯನ್ನೂ ನಾನು ಬಹಳ ಮೆಚ್ಚಿಕೊಂಡಿದ್ದೆ. ಆದರೆ ಇತರ ಕಾರ್ಯಕ್ರಮಗಳಿಂದಾಗಿ ಅವಳ ಊರಿಗೆ ಹೋಗುವುದು ಸಾಧ್ಯವಿರಲಿಲ್ಲ. ಅದಕ್ಕಾಗಿ ಕ್ಷಮೆ ಬೇಡಿದೆ. ಆಕೆ "ನೀವು 9–10 ಸಾವಿರ ಮೈಲಿ ಪ್ರಯಾಣ ಮಾಡಿ ನಮ್ಮ ದೇಶಕ್ಕೆ ಬಂದಿದ್ದೀರಿ. ನಿಮಗಿರುವ ಅಲ್ಪ ಕಾಲದಲ್ಲಿ ನನ್ನ ಆಹ್ವಾನವನ್ನು ಮನ್ನಿಸುವುದು ಕಷ್ಟ, ನಾನು ಬಲ್ಲೆ, ಆದ್ದರಿಂದ ನಾನೇ ಬರುತ್ತೇನೆ. ನಿಮ್ಮೊಡನೆ ತುಂಬ ಮಾತಾಡಬೇಕು" ಎಂದಿದ್ದಳು. ಮೊನ್ನೆ ಮತ್ತೆ ಫೋನ್‌ಮಾಡಿ "ನಾಳೆ ಭಾನುವಾರ ನನ್ನ ಸ್ನೇಹಿತರಾದ ಮಿಲ್ಲರ್ ದಂಪತಿಗಳೊಡನೆ ಎಲ್ಜಿನ್‌ಗೆ ಬರುತ್ತೇನೆ; ನೀವು ಅಲ್ಲಿಂದ ನನ್ನನ್ನು ನೈಲ್ಸ್‌ಗೆ ಕರೆದುಕೊಂಡು ಹೋಗಲಾದೀತೆ? ವಾಪಸು ಹೋಗುವಾಗ ಮಿಲ್ಲರ್ ದಂಪತಿಗಳೇ ಬಂದು ಕರೆದುಕೊಂಡು ಹೋಗುತ್ತಾರೆ" ಎಂದು ಕೇಳಿದರು. ರಾಮು

ಬಿಗೆ ಆ ದಿನ ಪುರಸತ್ತಿತ್ತು, ಹೋಗಿ ಆಕೆಯನ್ನು ಕರೆತಂದೆವು.

ಲಿಂಡ ಬಾಯಿತುಂಬ ಮಾತಾಡುತ್ತಾಳೆ. ಅವಳಿಗೆ ಅನೇಕ ವಿಷಯಗಳಲ್ಲಿ ಆಸಕ್ತಿಯುಂಟು, ಕುತೂಹಲವುಂಟು, ಅವರ ಮನೆಯವರೆಲ್ಲರಿಗಿಂತ ಹೆಚ್ಚಾಗಿ ಅವಳು ನಮ್ಮ ದೇಶವನ್ನು ಜೀವನಕ್ರಮವನ್ನು ಕುರಿತು ಪ್ರಶ್ನೆ ಕೇಳಿದಳು. ಸಾಮಾನ್ಯವಾಗಿ ಅಮೆರಿಕನ್ನರು ನಮ್ಮ ವಿಷಯದಲ್ಲಿ ಹೆಚ್ಚು ಆಸಕ್ತಿ ತೋರಿಸುವುದಿಲ್ಲ. ಇದು ನನ್ನ ಅನುಭವದ ಮಟ್ಟಿನ ಮಾತು; ನನ್ನ ಅನುಭವ ಅಷ್ಟೇನೂ ವಿಶಾಲವಾದದ್ದಲ್ಲ! ನಾವು ಪ್ರಶ್ನೆ ಕೇಳಿದರೆ ಅವರು ತಮ್ಮ ದೇಶದ ವಿಷಯ ಬೇಕಾದಷ್ಟು ಹೇಳುತ್ತಾರೆ. ತಮ್ಮ ದೇಶ ನಮಗೆ ಹೇಗನ್ನಿಸುತ್ತದೆ ಎಂದು ನಮ್ಮ ಅಭಿಪ್ರಾಯವನ್ನು ತಿಳಿಯಬಯಸುತ್ತಾರೆ. ನಮ್ಮ ದೇಶದ ವಿಷಯ ಕೇಳುವುದೇ ಇಲ್ಲವೆಂದಲ್ಲ; ಕೇಳುವ ವೈಖರಿ ಇದು : “Hi, nice meeting you. We must get together some time. You must tell me all about India. I have read about Gandy.” (ನಿಮ್ಮ ಭೇಟಿಯಾದದ್ದು ಸಂತೋಷ. ಯಾವಾಗಲಾದರೂ ಒಂದು ದಿನ ಸೇರೋಣ. ನೀವು ನನಗೆ ಇಂಡಿಯಾದ ವಿಷಯ ಎಲ್ಲಾ ಹೇಳಬೇಕು. ನಾನು ಗ್ಯಾಂಡಿಯ (ಗಾಂಧಿಯ) ವಿಷಯ ಓದಿದ್ದೇನೆ.) ಆ ‘ಯಾವಾಗಲಾದರೂ ಒಂದು ದಿನ’ ಬರುವುದೇ ಇಲ್ಲ. ಇದೇನೂ ಅಸ್ವಾಭಾವಿಕವಲ್ಲ; ಸಾಮಾನ್ಯವಾಗಿ ಜನರು ತಮ್ಮ ಜೀವನಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಮಾತ್ರ ಕುತೂಹಲಿಗಳಾಗಿರುತ್ತಾರೆ. ಭಾರತದಲ್ಲೇನೊ ವಿದ್ಯಾವಂತರಾದವರಿಗೆ ಇತರ ದೇಶಗಳ ವಿಷಯ ಬಹುಶಃ ಅಮೆರಿಕನ್ನರಿಗೆ ತಿಳಿದಿರುವುದಕ್ಕಿಂತ ಹೆಚ್ಚು ತಿಳಿದಿರುತ್ತದೆ. ಇದಕ್ಕೆ ಕಾರಣ ವಿಶ್ವದಾದ್ಯಂತ ವ್ಯವಹಾರ ಇಟ್ಟುಕೊಂಡಿದ್ದ ಬ್ರಿಟಿಷರು ನಮ್ಮನ್ನು ಆಳುತ್ತಿದ್ದರೆಂಬುದು ಮತ್ತು ಅವರು ರೂಪಿಸಿದ ವಿದ್ಯಾಭ್ಯಾಸಕ್ರಮ. ನಾನು ಹೈಸ್ಕೂಲಿನಲ್ಲಿದ್ದಾಗ 4, 5, 6ನೇ ಫಾರಂಗಳಲ್ಲಿ ನಮಗೆ ಇಂಗ್ಲೆಂಡಿನ ಇತಿಹಾಸ ಪಠ್ಯವಿಷಯವಾಗಿತ್ತು !

ಭಾರತದ ವಿಷಯ ಲಿಂಡಳಿಗೆ ಆಸಕ್ತಿಯಿದ್ದದ್ದಕ್ಕೆ ವಿಶೇಷ ಕಾರಣವೂ ಇತ್ತು. ಅವಳ ಅಕ್ಕ (ನ್ಯಾನ್ಸಿ) ಭಾರತೀಯನನ್ನು ಮದುವೆಯಾಗಿದ್ದಳಷ್ಟೆ ! ಭಾರತದಲ್ಲಿ ಮದುವೆಗೆ ಸಂಬಂಧಪಟ್ಟ ಆಚರಣೆ ಹೇಗೆ ರೂಪುಗೊಂಡಿದೆ ; ‘ಕೋರ್ಟ್‌ಷಿಪ್’ ಉಂಟೆ, ಮದುವೆಗೆ ಮುಂಚೆ ಗಂಡುಹೆಣ್ಣು ಜೊತೆಯಾಗಿ ತಿರುಗುವುದುಂಟೆ; ಯುವಕ ಯುವತಿಯರ ಮದುವೆಯನ್ನು ಬಹುಮಟ್ಟಿಗೆ ಹಿರಿಯರೇ ಗೊತ್ತುಮಾಡುತ್ತಾರಂತಲ್ಲ ; ಹೀಗೆ ಪರಸ್ಪರ ಪರಿಚಯವಿಲ್ಲದೆ ಮದುವೆಯಾದರೆ ಸಂಸಾರದಲ್ಲಿ ಸಾಮರಸ್ಯ ಬರುವುದು ಹೇಗೆ; ಗಂಡ ದುಡಿಯು

ವಂತೆ ಹೆಂಡತಿಯೂ ಹೊರಗೆ ದುಡಿದು ಸಂಪಾದನೆ ಮಾಡಿದರೆ ಸಂಸಾರ ಮತ್ತಷ್ಟು ಸುಖವಾಗಿ ಸಾಗಬಹುದಲ್ಲವೆ—ಇತ್ಯಾದಿ ಪ್ರಶ್ನೆಗಳನ್ನು ಹಾಕಿದಳು. ಲಿಂಡಳಿಗೆ ಉತ್ತರಕೊಡುತ್ತಿದ್ದಾಗ ನನ್ನ ಮನಸ್ಸಿನಲ್ಲಿದ್ದ ಆಧಾರತತ್ವಗಳನ್ನು ಮಾತ್ರ ಇಲ್ಲಿ ಕಾಣಿಸಿದ್ದೇನೆ :

1. ಪಾಶ್ಚಾತ್ಯರು ಅನೇಕ ವೇಳೆ 'ಸಂಸಾರ' (family) ಎಂದರೆ ಗಂಡ ಹೆಂಡತಿ ಇಬ್ಬರೇ ಎಂದು ಭಾವಿಸುವಂತೆ ತೋರುತ್ತದೆ. Family ಎಂಬ ಪದಕ್ಕೆ ಅವರೂ ನಾವು ಕೊಡುವ ಅರ್ಥವನ್ನೇ ಕೊಡುತ್ತಾರಾದರೂ ಅವರ ಮಾತು ಕೇಳಿದರೆ ಮೇಲ್ಕಂಡ ಭಾವನೆ ಬರುತ್ತದೆ. ಸಂಸಾರದಲ್ಲಿ ಮಕ್ಕಳೂ ಸೇರಿವೆ; ನಮ್ಮಲ್ಲಿ ಅಣ್ಣತಮ್ಮಂದಿರೂ ಸೇರುತ್ತಾರೆ. ಅದರಲ್ಲಿ ಪ್ರತಿಯೊಬ್ಬರ ಮನಸ್ಸೂ (ಮನಸ್ಸಿನಿಂದ ಹೊರಡುವ ವಾಕ್ಕರ್ಮಗಳು) ಇತರರ ಮನಸ್ಸನ್ನು ಮಾರ್ಪಡಿಸಿ ರೂಪಿಸುತ್ತಿರುತ್ತದೆ; ಮತ್ತು ಇತರರ ಮನಸ್ಸಿನಿಂದ ಮಾರ್ಪಟ್ಟು ರೂಪುಗೊಳ್ಳುತ್ತಿರುತ್ತದೆ. ಆ ಮಾರ್ಪಾಟು ಒಟ್ಟು ಸಂಸಾರದ ಕಲ್ಯಾಣಕ್ಕೆ ಭಂಗ ತರುವಂತಾಗಬಾರದು, ಹೊಂದುವಂತಾಗಬೇಕು.

2. ಹಾಗಾದರೆ ವ್ಯಕ್ತಿವಿಕಾಸಕ್ಕೆ ಬೆಲೆಯಿಲ್ಲವೆ? ಉಂಟು. ಆದರೆ ವ್ಯಕ್ತಿಯ ವಿಕಾಸವಾಗುವುದು ಶೂನ್ಯದಲ್ಲಲ್ಲ, ಸಮಾಜದಲ್ಲಿ. ಇದನ್ನು ಗಮನದಲ್ಲಿಟ್ಟುಕೊಂಡು ಸಮಾಜ ವ್ಯಕ್ತಿಗಳಿಬ್ಬರ ಹಿತಕ್ಕೂ ಹೊಂದಿಕೆ ಕಲ್ಪಿಸಬೇಕು.

3. ಪ್ರತಿ ಸಂಸಾರವೂ ಇಡೀ ಮಾನವಸಂಸಾರದಲ್ಲಿ ಒಂದು ಯೂನಿಟ್. ಅದು ದಾಟಲಸಾಧ್ಯವಾದ ಸಮುದ್ರದ ಮಧ್ಯದಲ್ಲಿರುವ ಸ್ವಸಂಪೂರ್ಣವೂ ಸ್ವಾವಲಂಬಿಯೂ ಆದ ದ್ವೀಪವಲ್ಲ. ನಂಟರು, ಸ್ನೇಹಿತರು, ಬಗೆಬಗೆಯ ವ್ಯವಹಾರಗಳಲ್ಲಿ ನಮ್ಮೊಡನೆ ಭಾಗಿಗಳಾಗುವ ಇತರರು—ಎಲ್ಲರೂ ನಮ್ಮ ಪುಟ್ಟ ಸಂಸಾರದ ಮೇಲೆ ಪ್ರಭಾವ ಬೀರುತ್ತಾರೆ, ಮತ್ತು ನಮ್ಮ ಪುಟ್ಟ ಸಂಸಾರದಿಂದ ಪ್ರಭಾವಿತರಾಗುತ್ತಾರೆ. ಆ ಪ್ರಭಾವ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ರೀತಿಯದಾಗಬಹುದು, ಅನೇಕ ವೇಳೆ ಸ್ವವಿರುದ್ಧವಾದಂತೆಯೂ ತೋರಬಹುದು. ಇದನ್ನು ಮರೆಯಲಾಗದು.

4. ಮಾನವ ಜೀವನದಲ್ಲಿ 'ಸಾಮರಸ್ಯ' ಎನ್ನುವುದು (ಅದು ಗಂಡ ಹೆಂಡಿರ ಸಾಮರಸ್ಯವಾಗಲಿ, ವ್ಯಕ್ತಿ ಸಮಾಜಗಳ ಸಾಮರಸ್ಯವಾಗಲಿ) ಪ್ರಕೃತಿಯೋ ದೇವರೋ ಮೊದಲೇ ಏರ್ಪಡಿಸಿರುವ ಸಾಮರಸ್ಯವಲ್ಲ. ಪೂರ್ವಸ್ಥಾಪಿತ ಸಾಮರಸ್ಯ (pre-established harmony) ಬರೀ ಗಗನಕುಸುಮ. ಸಾಮರಸ್ಯ ನಾವೇ ಪ್ರಯತ್ನಪೂರ್ವಕವಾಗಿ ಸಾಧಿಸಬೇಕಾದದ್ದು. ಹಾಗೆ ಸಾಧಿಸುವುದು 100ಕ್ಕೆ 90 ರಷ್ಟಾದರೂ ಸಾಧ್ಯ—ನಾವು ವ್ಯಕ್ತಿತ್ವಪೂಜೆಯನ್ನು

ಸ್ವಲ್ಪ ಕಡಮೆ ಮಾಡಿದರೆ! ವ್ಯಕ್ತಿತ್ವವಿಕಾಸ ಮಾನವನ ಅಂತಿಮ ಗುರಿಯಲ್ಲ. ಮಾನವ ಜೀವನದ ಶ್ರೇಯಸ್ಸನ್ನು—ಪ್ರೇಯಸ್ಸನ್ನಲ್ಲ—ಹೆಚ್ಚಿಸುವುದಕ್ಕಾಗಿ ಇರುವ ಇತರ ಸಾಧನಗಳ ಜೊತೆಗೆ ವ್ಯಕ್ತಿ ವಿಕಾಸವೂ ಒಂದು ಸಾಧನ.

ನಾನು ಮೇಲ್ಕಂಡ ಅಂಶಗಳ ಮೇಲೆ ಒಂದು ಉಪನ್ಯಾಸವನ್ನು ಬಿಗಿದೆನೆಂದು ಭಾವಿಸಲಾಗದು. ಲಿಂಡ ಕೇಳಿದ ಪ್ರಶ್ನೆಗಳನ್ನು ಕುರಿತು ನಾನು ಆಡಿದ ಮಾತಿಗೆ ಆ ನಂಬಿಕೆಗಳು ಹಿನ್ನೆಲೆಯಾಗಿದ್ದವು. ಒಟ್ಟಿನಲ್ಲಿ ಆಕೆ ನನ್ನ ವಿಚಾರಸರಣಿಯನ್ನು ಒಪ್ಪಿದಂತೆ ತೋರಿತು. ಆದರೆ ಇಂಥ ವಿಷಯಗಳನ್ನು ಚರ್ಚಿಸುವಾಗ ತರ್ಕಕ್ಕಿಂತ ನಾವು ಯಾವ ಸಂಪ್ರದಾಯದಲ್ಲಿ ಬೆಳೆದಿರುತ್ತೇವೆಯೋ ಅದರ ಕೈಯೇ ಮೇಲಾಗುತ್ತದೆ. ಬೆಳೆದ ಗಂಡು–ಹೆಣ್ಣುಗಳ ಮದುವೆಯನ್ನು ತಂದೆತಾಯಿಯರು ನಿಶ್ಚಯಿಸುವ ಪದ್ಧತಿ ಅವಳಿಗೆ ಕೊನೆಯವರೆಗೂ ವಿಚಿತ್ರವಾಗಿಯೇ ಉಳಿಯಿತು. ಇತ್ತ ನನಗೆ ಪರಸ್ಪರ ಪರಿಚಯವಿಲ್ಲದ ಗಂಡು-ಹೆಣ್ಣು ಮದುವೆಯಾದರೆ ಸಾಮರಸ್ಯ ಹೇಗೆ ಬಂದೀತು ಎಂಬ ವಾದದಲ್ಲಿ ಹುರುಳಿದೆ ಎಂದು ಒಪ್ಪಿದೆನಾದರೂ ತಂದೆತಾಯಿಯರು ನಿಶ್ಚಯಿಸುವ ಮದುವೆ ಅಷ್ಟೇನೂ ದೊಡ್ಡ ಅನಾಹುತವಾಗಿ ಕಾಣಲಿಲ್ಲ. ಮದುವೆಯಾಗದ ಗಂಡು ಹೆಣ್ಣು ತಾವಿಬ್ಬರೇ ಜೊತೆಜೊತೆಯಾಗಿ ತಿರುಗುವುದು ಅವಳ ದೃಷ್ಟಿಯಲ್ಲಿ ದೊಡ್ಡ ಅನಾಹುತವಲ್ಲ! ಅವಳು 'ಡೇಟಿಂಗ್' ಪದ್ಧತಿಯಿರುವ ಸಮಾಜದಲ್ಲಿ ಬೆಳೆದವಳು ತಾನೆ.

ಲಿಂಡಳ ಮಾತಿನಲ್ಲಿ ವಿಷಯಪರಿಶೀಲನೆಯಿತ್ತೇ ಹೊರತು ಉದ್ರೇಕವಿರಲಿಲ್ಲ. ಅವಳು ಯಾವ ಮಾತನ್ನೂ ಮರ್ಯಾದೆಗಾಗಿ ಒಪ್ಪಲಿಲ್ಲ; ಗೆಲ್ಲಬೇಕೆಂಬ ಹಟದಿಂದ ವಾದವನ್ನು ಬೆಳೆಸಲೂ ಇಲ್ಲ. ಈ ಗುಣ ಮೆಚ್ಚಬೇಕಾದದ್ದು. ಅವಳ ಮನೋಧರ್ಮದ ಪರಿಚಯ ಮಾಡಿಕೊಡುವ ಕೆಲವು ಮಾತುಗಳನ್ನೂ ಅವಕ್ಕೆ ನನ್ನ ಪ್ರತಿಕ್ರಿಯೆಯನ್ನೂ ಇಲ್ಲಿ ಕಾಣಿಸಿದ್ದೇನೆ:

"ನನ್ನನ್ನು ಎಲ್ಜಿನ್‌ಗೆ ಕರೆತಂದರಲ್ಲ, ಮಿಲ್ಲರ್ ದಂಪತಿಗಳು—ಅವರವರಲ್ಲಿ ವಿರಸ ಬೆಳೆದು ಕೆಲವು ವರ್ಷಗಳ ಹಿಂದೆ ವಿವಾಹ ವಿಚ್ಛೇದನ ಮಾಡಿಕೊಳ್ಳುವ ಘಟ್ಟಕ್ಕೆ ಬಂದಿತ್ತು. ಆದರೆ ಅವರ ಮಗಳು ಆಗ ಬಹಳ ಚಿಕ್ಕ ಹುಡುಗಿ. ಅವಳ ಬೆಳವಣಿಗೆಗೆ ಧಕ್ಕೆ ಬಂದೀತು ಎಂಬುದನ್ನು ಗಮನಿಸಿ ಅವರು ತಮ್ಮತಮ್ಮಲ್ಲಿದ್ದ ಅಸಮಾಧಾನವನ್ನು ಸಹಿಸಿಕೊಂಡರು. ಅವರ ವಿವಾಹ ಮುರಿದು ಹೋಗಲಿಲ್ಲ."

"ಭಾರತದಲ್ಲಿ ನಾವು ಬಹಳ ಮೆಚ್ಚುವುದು ಅದೇ ಗುಣವನ್ನು: ಸಹಿಸಿ

ಕೊಳ್ಳುವುದು, ತಡೆದುಕೊಳ್ಳುವುದು. ಮಗುವಿನ ಹಿತವನ್ನು ಮುಂದುಮಾಡಿ ತಮ್ಮ ವ್ಯಕ್ತಿ ಹಿತವನ್ನು (ಅದು ನಿಜವಾಗಿಯೂ 'ಹಿತ'ವಾದರೆ!) ಕಡೆಗಣಿಸಿದರಲ್ಲ, ಆ ದಂಪತಿಗಳನ್ನು ನಾನು ಬಹಳ ಗೌರವಿಸುತ್ತೇನೆ."

"ನನ್ನ ಗಂಡ ಒಂದು ಸ್ಕೂಲಿನಲ್ಲಿ ಅಧ್ಯಾಪಕರು. ಕೆಲವು ವೇಳೆ ಅವರು ಹೆಂಗಸರನ್ನು ಭೇಟಿಮಾಡಬೇಕಾಗುತ್ತದೆ. ಅವರನ್ನು ನಮ್ಮ ಮನೆಗೇ ಬರ ಹೇಳಿ ನನ್ನೆದುರಿಗೇ ಮಾತಾಡಿ ಕಳಿಸುತ್ತಾರೆ. ಇದು ನನ್ನ ಮನಸ್ಸಿಗೆ ಬಹಳ ನೆಮ್ಮದಿ ಕೊಟ್ಟಿದೆ."

"ನೋಡಿ, ಗಂಡು ಹೆಣ್ಣು ಏಕಾಂತವಾಗಿ ತಿರುಗುವುದು ಒಳ್ಳೆಯದಲ್ಲ ಎಂಬ ಭಾವನೆ ನಿಮ್ಮಲ್ಲೂ ಇದೆ."

"ಹೌದು, ಆದರೆ ನಾನು ಹೇಳಿದ್ದು ಮದುವೆಯಾದವರ ವಿಷಯ."

"ಮದುವೆಯಾದವರಿಗೇ ಅದು ಒಳ್ಳೆಯದಲ್ಲ ಎಂದರೆ ಆಗದವರಿಗೆ ಹೆಚ್ಚು ಅಪಾಯಕರವಲ್ಲವೆ?"

"ಹೌದೇನೊ. ಆದರೆ ಅವರು ಒಬ್ಬರ ಸ್ವಭಾವವನ್ನು ಮತ್ತೊಬ್ಬರು ಅರಿತುಕೊಳ್ಳುವುದಕ್ಕೆ ಏನಾದರೂ ಒಂದು ದಾರಿ ಬೇಕಲ್ಲ!....ಗಂಡ ಹೆಂಡತಿಯರಿಬ್ಬರೂ ಬೇರೆ ಬೇರೆ ಕಡೆ ಕೆಲಸ ಮಾಡುವುದು ನಮ್ಮ ಅಮೆರಿಕನ್ ಸಮಾಜದಲ್ಲಿ ಸಾಧಾರಣ. ಆದರೆ ಅವರಿಬ್ಬರೂ ದಿನದ ಬಹುಭಾಗವನ್ನು ಬೇರೊಬ್ಬರ (ಗಂಡಿನ ಅಥವಾ ಹೆಣ್ಣಿನ) ಸಹವಾಸದಲ್ಲಿ ಕಳೆಯುವುದು ಒಳ್ಳೆಯದಲ್ಲವೇನೋ !"

"ನನಗೂ ಆ ಯೋಚನೆ ಬಂದಿದೆ. ಭಾರತದಲ್ಲೂ ಈಚೆಗೆ ಗಂಡ ಹೆಂಡತಿಯರಿಬ್ಬರೂ ಬೇರೆ ಬೇರೆ ಕಡೆ ಕೆಲಸ ಮಾಡುವುದು ಚಾಲತಿಗೆ ಬರುತ್ತಿದೆ."

* * *

"ನಿಮ್ಮಲ್ಲಿ ಈಗ ವಿವಾಹವಿಚ್ಛೇದನಕ್ಕೆ ಒಪ್ಪಿಗೆ ಕೊಡುವ ಕಾನೂನು ಬಂದಿದೆಯಂತಲ್ಲ ? ಅದರಿಂದ ಡಿವೋರ್ಸ್ (ವಿವಾಹವಿಚ್ಛೇದ) ಹೆಚ್ಚಾಗಿದೆಯೆ ?"

"ಇಲ್ಲ, ಈಗಲೂ ಡಿವೋರ್ಸ್ ಅಪರೂಪವೇ."

"ಅದಕ್ಕೆ ಕಾರಣ ಹೆಂಗಸರಿಗೆ ಸ್ವಾವಲಂಬನೆ ಇಲ್ಲದಿರುವುದು, ಅಲ್ಲವೆ?"

"ಇರಬಹುದು, ಕೆಲವು ಸಂದರ್ಭಗಳಲ್ಲಿ. ಆದರೆ ಸ್ವಾವಲಂಬನೆ ಇರುವ ಗಂಡಸರೂ ವಿಚ್ಛೇದನವನ್ನು ಬಯಸುವುದಿಲ್ಲವಲ್ಲ !"

"ಮತ್ತೆ ಮದುವೆಯಾಗಲು ಅವರಿಗೆ ಬೇರೆ ಹೆಂಗಸರು ಸಿಕ್ಕುವುದಿಲ್ಲ.

ಹೆಂಗಸರಲ್ಲಿ ವಿಚ್ಛೇದನಾಪೇಕ್ಷೆ ಹೆಚ್ಚಿದರೆ ಗಂಡಸರಲ್ಲೂ ಹೆಚ್ಚುತ್ತದೆ."

"ನಿಮ್ಮ ತರ್ಕ ತಪ್ಪೆನ್ನಲಾರೆ. ಆದರೂ ಭಾರತದಲ್ಲಿ ವಿಚ್ಛೇದನವನ್ನು ಸಮಾಜ ತಿರಸ್ಕಾರ ದೃಷ್ಟಿಯಿಂದ ನೋಡುತ್ತದೆ. ಅದರಿಂದ ವ್ಯಕ್ತಿ ಎಚ್ಚರಿಕೆಯಿಂದ ವರ್ತಿಸುತ್ತಾನೆ (ಳೆ) ಎಂದು ನನ್ನ ನಂಬಿಕೆ."

ಲಿಂಡ ನ್ಯಾನ್ಸಿಯ ಮತ್ತು ರಾಜುವಿನ ವಿಷಯದಲ್ಲಿ ಬಹಳ ಪ್ರಶ್ನೆಗಳನ್ನು ಕೇಳಿದಳು. ಅವರು ಫಿಲಿಪೀನ್ಸ್ ಬಿಟ್ಟು ಬಂದದ್ದೇಕೆ? ಅವರ ಜೀವನಕ್ರಮ ಹೇಗೆ? ಕಾರ್ ಮಾರಿಬಿಟ್ಟರಂತಲ್ಲ, ಈಗ ಹೇಗೆ ನಿಭಾಯಿಸುತ್ತಾರೆ? ಇತ್ಯಾದಿ ಇತ್ಯಾದಿ. "ನೀವು ನ್ಯಾನ್ಸಿಯ ಮನೆಯಲ್ಲಿರುವುದು ಅವಳಿಗೂ ಮಕ್ಕಳಿಗೂ ಸಂತೋಷವಂತೆ. ಅವಳು ಹಾಗೆಂದು ಬರೆದಿದ್ದಳು" ಎಂದು ಹೇಳಿದಳು. ಇದನ್ನು ಕೇಳಿ ನನಗೆ ಸಂತೋಷವಾಯಿತು. "ಹಾಗೆ ಮಗನ ಮನೆಯಲ್ಲಿರುವುದು ನಮ್ಮಲ್ಲಿ ಸಾಮಾನ್ಯ" ಎಂದದ್ದಕ್ಕೆ ಲಿಂಡ "ಅಮೆರಿಕದ ವ್ಯಕ್ತಿಪ್ರಧಾನ ಸಮಾಜದಲ್ಲಿ ಅದು ವಿಚಿತ್ರವಾಗಿ ಕಾಣುತ್ತದೆ. ಬಹುಶಃ ನಿಮ್ಮ ಪದ್ಧತಿಯೇ ಉತ್ತಮವೇನೊ. ಆದರೆ ನನ್ನ ಅತ್ತೆ ಮಾವ ನನ್ನ ಮನೆಯಲ್ಲೇ ನೆಲಸಿದರೆ ಹೇಗನ್ನಿಸುತ್ತದೆಯೋ ಹೇಳಲಾರೆ" ಎಂದಳು. ಅವಳ ಪ್ರಾಮಾಣಿಕತೆಯನ್ನು ನಾನು ಮೆಚ್ಚಿದೆ.

ನಮ್ಮ ಮಾತೆಲ್ಲ ಬಹುಮಟ್ಟಿಗೆ ಸಮಾಜಪದ್ಧತಿಗಳನ್ನು ಕುರಿತದ್ದೇ ಆಯಿತು. ಮತಧರ್ಮಗಳ ವಿಷಯ ಬಂದಿತಾದರೂ ಹೆಚ್ಚಾಗಲಿಲ್ಲ. ಆದರೆ ಅವಳು ಕೇಳಿದ ಒಂದು ಪ್ರಶ್ನೆ ಇಲ್ಲಿ ಕಾಣಿಸಬೇಕಾದದ್ದು: "ಹಿಂದೂಗಳಲ್ಲಿ ಬೇಕಾದಷ್ಟು ಒಳಪಂಗಡಗಳಿವೆಯಂತಲ್ಲ, ನೀವು ಯಾವ ಪಂಗಡಕ್ಕೆ ಸೇರಿದವರು? ಮುಸಲ್ಮಾನರೋ ಬೌದ್ಧರೋ ಅಥವಾ ಮತ್ತಾವುದಾದರೂ ಪಂಗಡವೊ?"

ಅಮೆರಿಕದ ವಿದ್ಯಾವಂತ ಶ್ರೀಸಾಮಾನ್ಯನಿಗೆ ಕೂಡ ಭಾರತದ ವಿಷಯದಲ್ಲಿರುವ ತಿಳಿವಳಿಕೆಯೆಷ್ಟೆಂಬುದನ್ನು ಈ ಪ್ರಶ್ನೆಯ ಆಧಾರದ ಮೇಲೆ ತೀರ್ಮಾನಿಸಬಹುದೋ ಇಲ್ಲವೋ ಕಾಣೆ. "ಲಿಂಡ ಈ ವಿಷಯದಲ್ಲಿ ಅಮೆರಿಕದ ಪ್ರತಿನಿಧಿಯಲ್ಲ, ಏನೋ ಅವಳ ಮನಸ್ಸು ನಮ್ಮ ಮತಧರ್ಮಗಳ ಕಡೆಗೆ ಹರಿಯಲಿಲ್ಲ" ಎಂದುಕೊಳ್ಳುವುದೇ ಸರಿಯಿರಬಹುದು.

ಈ ಮಾತೆಲ್ಲ ನಡೆದ ಮಾರನೆಯ ದಿನ ಲಿಂಡ ತನ್ನ ಊರಿಗೆ ಹೊರಟಳು.

# ಗೆಲೀನ ಮತ್ತು ವಿಸ್ಕಾನ್ಸಿನ್ ಡೆಲ್ಸ್

"ನೀವು ಭಾರತಕ್ಕೆ ವಾಪಸು ಹೋಗುವ ಮುನ್ನ ಗೆಲೀನಾವನ್ನು ನೋಡಲೇಬೇಕು" ಎಂದು ಗ್ರಾಮಡೆಟ ಹೇಳಿದ್ದರು. ಅದು ಬಹಳ ಪುರಾತನವಾದ ಊರಂತೆ; ಪೂರ್ವಕಾಲದ ಪೂರ್ವದಲ್ಲಿ ವಾಸ್ತುಶಿಲ್ಪ ಹೇಗಿತ್ತೆಂಬುದಕ್ಕೆ ಅಲ್ಲಿಯ ಮನೆಗಳು ಸಾಕ್ಷಿಯಂತೆ: ಅಲ್ಲೊಂದು ಸೀಸದ ಗಣಿ—ಎಂದೋ ಕೈಬಿಟ್ಟದ್ದು—ಬೇರೆ ಇದೆಯಂತೆ! ಭಾರತೀಯರ ದೃಷ್ಟಿಯಲ್ಲಿ ಜನಮೇಜಯ ರಾಯ ಸರ್ಪಯಾಗ ಮಾಡಿದ್ದು ನಿನ್ನೆ ಮೊನ್ನೆ, (ಅದು ನಡೆದ ಸ್ಥಳವನ್ನು ಇವತ್ತು ಬೇಕಾದರೂ ನೋಡಬಹುದು; ಹಿರಿಯೂರಿನ ಬಳಿ ಇದೆ. ಇದು ನನಗೆ 'ಹಯವದನಾತ್' ಬಂದ ವರ್ತಮಾನ, ಹಿರಿಯೂರಿನವರೇ ಹೇಳಿದ್ದು; ಆದ್ದರಿಂದ ನಂಬಬೇಕಾದ್ದು.) ಹೀಗಿರುವಾಗ 'ಪುರಾತನ' ಎಂಬ ಪದಕ್ಕೆ ಭಾರತೀಯನಾದವನು ಏನು ಅರ್ಥ ಮಾಡಬಹುದು? ಶಿಲಾಯುಗದ ಅಥವಾ ಮೆಸೊಜೋಯಿಕ್ (Mesozoic) ಯುಗದ ಊರಿನ ಅವಶೇಷವನ್ನು ನೋಡಬಹುದೆಂದು ನನ್ನ ನಿರೀಕ್ಷೆ. ವಾಸ್ತವವಾಗಿ ಆ ಊರಿಗೆ ಇನ್ನೂರು ವರ್ಷ ತುಂಬಿಲ್ಲ. ಕಳೆದ ಶತಮಾನದ ಮಧ್ಯಕಾಲದಲ್ಲಿ ಅದು ಇಲ್ಲಿನಾಯ್ ರಾಜ್ಯದಲ್ಲೆಲ್ಲ ಶ್ರೀಮಂತತಮ ನಗರವಾಗಿತ್ತಂತೆ. ಇವತ್ತು 'ಪುರಾತನತೆ'ಯೇ ಅದರ ಸಂಪತ್ತು. ಅದನ್ನು ಹೊಗಳಿಕೊಂಡು ಅಲ್ಲಿಯ ಜನ ಟೂರಿಸ್ಟ್ ಜನರ ಹಣವನ್ನು ಸುಲಿಯುತ್ತಿದ್ದಾರೆ.

ನೀವು ಊರಿಗೆ ಕಾಲಿಡುವುದೇ ತಡ, ಕರಪತ್ರ (hand-outs) ಪಿಶಾಚಿಗಳು ನಿಮ್ಮನ್ನು ಮುತ್ತಿ ಜಾಹಿರಾತಿನ ಮಡಿಕೆಗಳನ್ನು ನಿಮ್ಮ ಕೈಗೆ ತುರುಕುತ್ತಾರೆ. "ಗೆಲೀನ! ಪುರಾತನತೆಯ ಮಂಜು ಮುಸುಕಿದ್ದರಿಂದಾಗಿ ಮತ್ತಷ್ಟು ಆಕರ್ಷಕವಾದ ಗತವೈಭವವನ್ನು ನೋಡಬೇಕೆ? ಮಾನವ ನಿರ್ಮಿತಿಯ ಕ್ಷಣಿಕತೆಯ ಪ್ರತ್ಯಕ್ಷಾನುಭವ ಪಡೆಯಬೇಕೆ? ಹುಲುಮನುಜನ ಪ್ರಸಾದಗಳನ್ನುರುಳಿಸಿ ಕೈಯಲ್ಲಿ ಕುಯುಕ್ತಿಯನ್ನು ಹಿಡಿದು ತಾನು ಪಾಳುಮಾಡಿದ ಭೂಮಿಯ ಮೇಲೆ ಅಟ್ಟಹಾಸದಿಂದ ನರ್ತಿಸುವ ಕಾಲರಾಯನ ಹೂಂಕಾರವನ್ನು ಕೇಳಿ ವಿಚಾರತರಂಗಗಳಿಗೆ ಎಡೆಗೊಡಬೇಕೆ? ಹಾಗಾದರೆ ಗೆಲೀನಕ್ಕೆ ಬನ್ನಿ. ಸೀಸದ ಗಣಿ! ಭೂಗರ್ಭಶಾಸ್ತ್ರದ ಮ್ಯೂಸಿಯಂ! ಮೊಟ್ಟ ಮೊದಲು ಇಲ್ಲಿ ಬಂದು ನೆಲಸಿದ ಡೌಲಿಂಗನ ಮನೆ (Dowling House), ಅಮೆರಿಕದ

ವೀರಾಗ್ರಣಿ, ಸೇನಾನಿಗಳ ನಾಯಕಮಣಿ ಜನರಲ್ ಗ್ರಾಂಟನ ಮನೆ!" ಇತ್ಯಾದಿ ಇತ್ಯಾದಿ....ಇದೆಲ್ಲ ನನ್ನ ಕೈಗೆ ಬಂದ ಕರಪತ್ರಗಳ ಅಧಿಕೃತ ವರದಿಯಲ್ಲ; ಅವೂ ಅಲ್ಲಿಯ ಜನರ ಮಾತುಗಳೂ ಸೃಷ್ಟಿಸಿದ ವಾತಾವರಣವನ್ನು ಮತ್ತೆ ಸೃಷ್ಟಿಸುವ ನಮ್ರ ಪ್ರಯತ್ನ.

ಗತವೈಭವ :–ಗೆಲೀನ ಹಿಂದೆ ಬಹಳ ಉಚ್ಛ್ರಾಯ ಸ್ಥಿತಿಯಲ್ಲಿದ್ದು ಈಗ ಕ್ಷೀಣಸ್ಥಿತಿಯಲ್ಲಿದೆ ಎಂದು ಗ್ರಾವಡೆಟ ಹೇಳಿದ್ದರು. ಕ್ಷೀಣಸ್ಥಿತಿಯೇನೋ ಕಾಣುತ್ತಿದೆ. ಹಾಳುಹಂಪೆಯ ಕ್ಷೀಣಸ್ಥಿತಿಯ ಗತವೈಭವದ ಅವಶೇಷ. ಇಲ್ಲಿಯ ಕ್ಷೀಣಸ್ಥಿತಿ ಆ ಬಗೆಯದಲ್ಲ, ಕಾಲರಾಯನ ನೆರವಿಗಾಗಿ ಕೈಯೊಡ್ಡದೆ ಇತ್ತೀಚಿನ ಜನ ಸ್ವಶಕ್ತಿಯಿಂದ ನಿರ್ಮಿಸಿದ್ದು, ಎಂದು ತೋರಿತು. ಆದರೆ ಗತವಾದ ವೈಭವ ಇರಲಿಲ್ಲವೆಂದು ಯಾವ ಧೈರ್ಯದಿಂದ ಹೇಳಲಿ? ಇಷ್ಟೊಂದು ಜನ ಇತ್ತೆಂದು ಹೇಳುವಾಗ ಅವರೆಲ್ಲ ಸುಳ್ಳುಗಾರರು ಎನ್ನಲಾದೀತೆ!

ಸೀಸದ ಗಣಿ :–ಗಣಿ ಇದೆ. ಅದರ ಪರವಾಗಿ ಹೇಳತಕ್ಕ ಅಂಶಗಳೂ ಇವೆ. ನಮ್ಮ ಕೋಲಾರದ ಬಳಿ ಇರುವ ಚಿನ್ನದ ಗಣಿಗಳಿಗೆ ಇದನ್ನು ಹೋಲಿಸಿ ನೋಡಿದರೆ ಇದರ ವೈಶಿಷ್ಟ್ಯ ಸುಲಭವಾಗಿ ಗೊತ್ತಾಗುತ್ತದೆ. ಇದು ನಮ್ಮ ಗಣಿಯಂತೆ ಹುಚ್ಚು ಹುಚ್ಚಾಗಿ ಒಂದು ಮೈಲಿ ಆಳಕ್ಕೆ ಹೋಗಿಲ್ಲ, ನಾಲ್ಕಾರು ಚದರಮೈಲಿ ಹರಡಿಕೊಂಡಿಲ್ಲ. ಇದರ ಆಳದಲ್ಲೂ ಉದ್ದಗಲದಲ್ಲೂ ಹದವಾದ ಯುಕ್ತವಾದ ಮಿತಿಯಿದೆ. ಆದ್ದರಿಂದ ಇದನ್ನು ನೋಡುವುದಕ್ಕೆ ಯಾವ ಇಲೆಕ್ಟ್ರಿಕ್ ಲಿಫ್ಟನ್ನೂ ಆಶ್ರಯಿಸಬೇಕಾಗಿಲ್ಲ; ಒಂದು ದಿನವನ್ನೆಲ್ಲಾ ಅದಕ್ಕಾಗಿ ಮೀಸಲುಮಾಡಬೇಕಾಗಿಲ್ಲ, 20–30 ನಿಮಿಷಗಳಲ್ಲಿ ಶ್ರಮವಿಲ್ಲದೆ ನಡೆದೇ (ಸ್ವಲ್ಪ ಇಳಿಯಬೇಕಾಗಬಹುದು) ಹೋಗಿ ನೋಡಿ ಮುಗಿಸಬಹುದು. ಇಂಥ ಅನುಕೂಲಗಳಿರುವಾಗ ಒಂದು ಡಾಲರ್ ರುಸುಂ ಕೊಡುವುದೇನೂ ಹೆಚ್ಚಲ್ಲ. ಈ ಗಣಿಯಿಂದ ಸೀಸವನ್ನು ತೆಗೆಯುತ್ತಿದ್ದಾಗ ಅದು ಎಷ್ಟು ಲಾಭ ಕೊಟ್ಟಿತೊ ನನಗೆ ತಿಳಿಯದು; ಆ ಕೆಲಸ ನಿಲ್ಲಿಸಿ ಅದನ್ನು 'ಪ್ರೇಕ್ಷಣೀಯ ಸ್ಥಳ'ವಾಗಿ ಮಾರ್ಪಡಿಸಿದ ಮೇಲಂತೂ ಅದರಿಂದ ಚೆನ್ನಾಗಿ ಸಂಪಾದನೆಯಾಗುತ್ತಿದೆ. ನಾವು ಅಲ್ಲಿದ್ದಷ್ಟು ಕಾಲದಲ್ಲೇ 20–30 ಜನರ ನಾಲ್ಕು ತಂಡಗಳು ಗಣಿಯನ್ನು ನೋಡಿಕೊಂಡು ಬಂದವು—ಅಂದರೆ ಸುಮಾರು 120 ಡಾಲರ್! ಯಾರನ್ನು ಕೆಡಿಸಿತು!

ಡೌಲಿಂಗ್ ಮನೆ ಮತ್ತು ಜನರಲ್ ಗ್ರಾಂಟನ ಮನೆ:–ಡೌಲಿಂಗ್ ಹೌಸ್‌ನಂಥ ಹಳೆಯ ಮನೆಗಳನ್ನು ನಾನು ಭಾರತದಲ್ಲಿ—ನನ್ನ ಅಕ್ಕಿಹೆಬ್ಬಾಳಿನಲ್ಲಿ ಕೂಡ—ನೋಡಿದ್ದೇನೆ. ಡೌಲಿಂಗ್‌ನ ಹೆಸರಿಗಾಗಿ 75 ಸೆಂಟು ಕೊಟ್ಟ

ದ್ದಾಯಿತು. ಜನರಲ್ ಗ್ರಾಂಟ್ ಪ್ರಸಿದ್ಧ ಸೇನಾನಾಯಕ, ಪ್ರೆಸಿಡೆಂಟ್ ಪದವಿಗೂ ಏರಿದವನು. ಗೆಲೀನದಲ್ಲಿರುವ ಆ ಮನೆ ಅವನಿಗೆ ಇಲ್ಲಿನಾಯ್ ರಾಜ್ಯದವರು ಇನಾಮಾಗಿ ಕೊಟ್ಟದ್ದಂತೆ. ಅವನು ಬದುಕಿದ್ದಾಗ ಉಪಯೋಗಿಸುತ್ತಿದ್ದ ಫರ್ನಿಚರ್ ಮುಂತಾದ್ದನ್ನು ಆಗಿದ್ದಂತೆಯೇ ಕಾದಿಟ್ಟದ್ದಾರೆ. ಅವನ ಮಲಗುವ ಮನೆ, ಮಗನ ಮಲಗುವ ಮನೆ, ಮಗಳ ಮಲಗುವ ಮನೆ, ಊಟದ ಮನೆ, ಮೇಜು, ತಟ್ಟೆ, ಚಂಚ—ಎಲ್ಲವನ್ನೂ ತೋರಿಸಿದರು. ಅವೆಲ್ಲದರ ಮೇಲೂ ಗ್ರಾಂಟನ ವ್ಯಕ್ತಿತ್ವದ ಮುದ್ರೆಯೇನಾದರೂ ಇದ್ದಿದ್ದರೆ—ಅದು ನನ್ನ ಕಣ್ಣಿಗೆ ಕಾಣಲಿಲ್ಲ. ಆ ಬಗೆಯ ಸಾಮಾನುಗಳನ್ನು ಯಾವ 'antique' ಅಂಗಡಿಯಲ್ಲಾದರೂ ಕೊಳ್ಳಬಹುದೇನೊ........ಈ ತರದ ವೀರಪೂಜೆ (hero-worship) ನಮ್ಮಲ್ಲೂ ಇಲ್ಲದಿಲ್ಲ.

ಅಂತೂ ಗೆಲೀನವನ್ನು ನೋಡಿದ್ದಾಯಿತು—ಅಮೆರಿಕದ ಹಿಂಡಿನ ಜೊತೆಗೆ ಭಾರತೀಯ ಹಿಂಡು! ಅಲ್ಲಿಂದ ಹೊರಟು ಮಿಸಿಸಿಪಿ ನದಿಯ ಪಕ್ಕದಲ್ಲೇ ಹೋಗುವ ರಸ್ತೆಯಲ್ಲಿ ಸ್ವಲ್ಪ ದೂರ ಪ್ರಯಾಣ ಮಾಡಿದೆವು. ಆ ಮಹಾನದಿಯ ಸೌಂದರ್ಯವೂ ಜೊತೆಗೆ ಮಾರ್ಕ್‌ಟ್ವೆಯ್ನನ ನೆನಪೂ ಗೆಲೀನ ತಂದ ಬೇಸರವನ್ನು ಹೋಗಲಾಡಿಸಿದವು.

ವಾಸ್ತವವಾಗಿ ನಾವು ಈ ವಾರಾಂತ್ಯದ ಪ್ರವಾಸ ಕೈಗೊಂಡದ್ದು ವಿಸ್ಕಾನ್ಸಿನ್ ಡೆಲ್ಸ್‌ಗೆ (Wisconsin Dells) ಹೋಗೋಣವೆಂದು, ಗೆಲೀನದ ಕಡೆಗೆ ತಿರುಗಿದ್ದು ಗ್ರಾಮಡೆಟ ಅಸಮಾಧಾನಗೊಳ್ಳದಿರಲೆಂದು. 'ಡೆಲ್ಸ್' ಬಳಿಯಲ್ಲಿ ವಿಸ್ಕಾನ್ಸಿನ್ ನದಿ ಗುಡ್ಡಗಳನ್ನು ಕರಗಿಸಿ ಬಂಡೆಗಳನ್ನು ಕೊರೆದು ಕಣಿವೆಯನ್ನು ನಿರ್ಮಿಸಿಕೊಂಡು ಹರಿಯುತ್ತದೆ. ನಮ್ಮ ಕಾವೇರಿಗಿಂತ ಉದ್ದ ಕಡಮೆಯಾದರೂ ಪಾತ್ರವಿಸ್ತಾರದಲ್ಲೂ ನೀರಿನ ಪ್ರಮಾಣದಲ್ಲೂ ಕಾವೇರಿಗಿಂತ ಎಷ್ಟೋ ಪಟ್ಟು ದೊಡ್ಡದು. 'ಪ್ರಪಂಚದ ಮತ್ತಾವ ನದಿಯೂ ಮಾನವ ಕಲ್ಯಾಣಕ್ಕಾಗಿ ಇಷ್ಟು ದುಡಿದಿಲ್ಲ' ಎಂದು ನಮ್ಮ ದೋಣಿ ನಡೆಸುತ್ತಿದ್ದವನು ಹೇಳಿದ. ಸಾಮಾನ್ಯವಾಗಿ ಅಮೆರಿಕದಲ್ಲಿ ಇಂಥ ಮಾತನ್ನು ನಂಬಬೇಕಾದರೆ ನಮ್ಮ ಮನಸ್ಸಿನ ಔದಾರ್ಯವನ್ನು ಹೆಚ್ಚಿಸಿಕೊಳ್ಳಬೇಕು. ಆದರೂ ಅದರಲ್ಲಿ ನಿಜಾಂಶವಿರಬಹುದು. ವಿಸ್ಕಾನ್ಸಿನ್ ನದಿಯ ನೀರನ್ನು ಆರಂಬಕ್ಕೂ ವಿದ್ಯುತ್ತಿನ ಉತ್ಪಾದನೆಗೂ ಬಳಸಿಕೊಳ್ಳಲೂ 37 ಕಟ್ಟೆಗಳನ್ನು ಕಟ್ಟಿದ್ದಾರಂತೆ. ಪ್ರಸಿದ್ಧ ಶಿಲ್ಪಿ ಫ್ರ್ಯಾಂಕ್ ಲಾಯ್ಡ್ ರೈಟ್ (Frank Lloyd Wright) ಡೆಲ್ಸ್ ಬಳಿ ದೊಡ್ಡ ಸೇತುವೆ ಕಟ್ಟುವುದಕ್ಕೆ ಉಚಿತವಾಗಿ ನಕ್ಷೆ ಬರೆದುಕೊಡುವುದಾಗಿ ಭರವಸೆ ಕೊಟ್ಟದ್ದನಂತೆ. ಆದರೆ ಆ ಯೋಜನೆ ಬಿದ್ದುಹೋಯಿತು. ಕಟ್ಟಿದ್ದರೆ

ಈ ಪ್ರದೇಶದ ಸೌಂದರ್ಯಕ್ಕೆ ಕುಂದುಬರುತ್ತಿತ್ತೋ ಏನೊ.

ಅಮೆರಿಕದಲ್ಲಿ ಎಲ್ಲೆಲ್ಲೂ ಇರುವಂತೆ ಇಲ್ಲೂ ಮರಗಳ ದಟ್ಟಣೆ. ಈ ಸ್ಥಳದ ಸೌಂದರ್ಯವನ್ನು ಮನದಣಿಯ ಸವಿಯಬೇಕಾದರೆ ಇಲ್ಲಿರುವ 'ಡಕ್' ನಲ್ಲಿ ಕೂತು ಸಂಚರಿಸಬೇಕು. 'ಡಕ್' ಎಂದರೆ ಬಾತು. ಬಾತು ನೀರು ನೆಲಗಳೆರಡರಲ್ಲೂ ಧಾರಾಳವಾಗಿ ಸಂಚರಿಸುತ್ತವೆಯಷ್ಟೆ. ಈ ಡಕ್‌ಗಳೂ ಹಾಗೆಯೇ. ಅಮೆರಿಕದ ಸರ್ಕಾರ ಈ ವಾಹನಗಳನ್ನು ಎರಡನೇ ಮಹಾಯುದ್ಧದ ಕಾಲದಲ್ಲಿ ಮಿಲಿಟರಿಯವರ ಉಪಯೋಗಕ್ಕಾಗಿ ತಯಾರಿಸಿತಂತೆ. ಯುದ್ಧ ಮುಗಿದ ಮೇಲೆ ಅವನ್ನು ಸಾರ್ವಜನಿಕರು ಬಳಸಲೆಂದು ಮಾರಿದರು. ಅವು ಸುಮಾರು 12 ಅಡಿ ಅಗಲ 30 ಅಡಿ ಉದ್ದ ಇರುವ ಬಸ್ಸುಗಳಂತಿವೆ. ಅವುಗಳ ವೇಗ ನೆಲದಮೇಲೆ ಘಂಟೆಗೆ 60 ಮೈಲಿ, ನೀರಿನ ಮೇಲೆ 10–12 ಮೈಲಿ. ಡಕ್ ಕಡಿದಾದ ಜಾಗದಲ್ಲೂ ಹತ್ತಬಲ್ಲದು, ಇಳಿಯಬಲ್ಲದು; ಇಕ್ಕಟ್ಟಾದ ಕಣಿವೆಗಳಲ್ಲಿ ಓಡಬಲ್ಲದು—ಒಳ್ಳೆಯ ರಸ್ತೆಯಿರಬೇಕೆಂಬ ನಿಯಮವಿಲ್ಲ. ವಾಹನದ ತಳಕ್ಕೆ ನೆಲ ಬಡಿಯದಂತಿದ್ದರೆ ಸಾಕು. ಎಲ್ಲೆಂದರೆ ಅಲ್ಲಿ ನೀರಿನಿಂದ ನೆಲಕ್ಕೂ ನೆಲದಿಂದ ನೀರಿಗೂ ನುಗ್ಗಿ ಸಂಚರಿಸಬಹುದು. 3–4 ಅಡಿ ಎತ್ತರದಿಂದ ನೀರಿಗೆ ಹಾರಬಲ್ಲದು—ಕುಳಿತಿರುವವರಿಗೆ ತುಷಾರಸ್ನಾನವಾಗದಂತೆ. ವಿಸ್ಕಾನ್ಸಿನ್ ಡೆಲ್ಸ್‌ನಂಥ ಏರು ತಗ್ಗಿನ, ನದಿ ಸರೋವರಗಳ ಪ್ರದೇಶದಲ್ಲಿ ಈ ವಾಹನದ ಪ್ರಯೋಜನ ಅಷ್ಟಿಷ್ಟಲ್ಲ.

ಡಕ್ ನಿಲ್ದಾಣ ಕಾಡಿನ ಅಂಚಿನಲ್ಲಿದ್ದರೂ ಊರಿಗೆ ಸೇರಿದಂತೆಯೇ ಇದೆ. ಅಲ್ಲಿ ಒಂದಲ್ಲ ಒಂದು ಡಕ್ ಯಾವಾಗಲೂ ಸಿದ್ಧವಾಗಿ ನಿಂತಿರುತ್ತದೆ. ಅದು ಊರಿನ ರಸ್ತೆಯಲ್ಲಿ ಪ್ರಯಾಣ ಮಾಡುವುದು ಐದಾರು ನಿಮಿಷ ಮಾತ್ರ; ಅನಂತರ ಕಾಡುರಸ್ತೆ, ಅಲ್ಲಿ ಮರಗಳು ಹೊರತು ದಟ್ಟವಾದ ಪೊದೆಗಳು ಹೆಚ್ಚು ಕಾಣಲಿಲ್ಲ. ಮೇಲೆ ಮರಗಳ ಹಸುರು, ಕೆಳಗೆ ಹುಲ್ಲಿನ ಹಸುರು; ಜೊತೆಗೆ ಕಾಡು ಹೂವುಗಳು. ನಾವು ಹೊರಟಾಗ ಬೆಳಗ್ಗೆ ಹತ್ತು ಘಂಟೆಯ ಸಮಯ. ತಗ್ಗು ಪ್ರದೇಶಗಳನ್ನು ಮುಚ್ಚಿದ್ದ ಮಂಜು ಹರಿದಿತ್ತಾದರೂ ಹುಲ್ಲಿನ ಮೇಲೆ ಹಿಮಮಣಿಗಳು ಇನ್ನೂ ಮಿನುಗುತ್ತಿದ್ದವು. ಅಲ್ಲಲ್ಲೇ ಮರಗಳಿಲ್ಲದೆ ತೆರವಾಗಿದ್ದ ಕಡೆ ಸೂರ್ಯನ ಬೆಳಕಿನಲ್ಲಿ ತೊಯ್ದ ಹುಲ್ಲುಗಾವಲು. ಡಕ್ ಹೋಗುತ್ತಿದ್ದ ದಾರಿಯಲ್ಲಿ ಸುಮಾರು ಒಂದು ಫರ್ಲಾಂಗಿನವರೆಗೆ ಎರಡು ಕಡೆಗಳಲ್ಲೂ ಗ್ರಾನಿಟ್ (granite) ಕಲ್ಲಿನಲ್ಲಿ ಕಡೆದ ವಿಗ್ರಹಗಳನ್ನಿಟ್ಟಿದ್ದರು. ಆ ವಿಗ್ರಹಗಳಿಗೂ ಅಲ್ಲಿಯ ವಾತಾವರಣಕ್ಕೂ ಹೊಂದಿಕೆಯಿದ್ದಂತೆ ಕಾಣಲಿಲ್ಲ. ಅವುಗಳನ್ನು ದಾಟಿ ಸುಂದರವಾದ ಫರ್ನ(ferns)ಗಳು ಬೆಳೆದಿದ್ದ ಕತ್ತಲುಕತ್ತ

ಲಾದ ಫರ್ನ್‌ಡೆಲ್‌ಗೆ ಇಳಿದೆವು. ಅಲ್ಲಿಂದ ಮುಂದೆ ರಸ್ತೆಯು ಒಂದು ತಿರುವಿನ ಆಚೆ ಕೇವಲ ನಾಲ್ಕು ಮಾರು ದೂರದಲ್ಲಿ—ಆಗ ತಾನೆ ನಮ್ಮ ಕಣ್ಣೆದುರಿಗೇ ಸೃಷ್ಟಿಯಾಯಿತೋ ಎಂಬಂತೆ—ಹಠಾತ್ತಾಗಿ ನದಿ ಕಾಣಿಸಿಕೊಂಡಿತು. ಡಕ್ ವೇಗವಾಗಿ ಓಡುತ್ತಿತ್ತು. ಅದರ ಚಾಲಕ ವೇಗವನ್ನು ಕಡಮೆ ಮಾಡುವುದಕ್ಕೆ ಬದಲು ಮತ್ತಷ್ಟು ಹೆಚ್ಚಿಸಿದ. ಅದು ಮೂರಡಿ ಎತ್ತರದ ದಡದಿಂದ ಜಿಂಕೆ ನೆಗೆಯುವಂತೆ ನದಿಗೆ ನೆಗೆಯಿತು. ನನ್ನ ಹಿಂದಿನ ಸಾಲಿನಲ್ಲಿ ಕೂತು ತಾವು ಕಂಡ ದೃಶ್ಯಗಳನ್ನೆಲ್ಲ "Oh how luvly; Oh how naaice" (ಅಬ್ಬ, ಎಷ್ಟು ಸುಂದರವಾಗಿದೆಯೆ ? ಚೆಂದುಳ್ಳಿ ಚೆಲುವು ಅಲ್ಲವೇನೆ ? ಎಂದು ಅವೆರಡೇ ಪದ ಗಳಲ್ಲಿ ಒಣ್ಣಿಸುತ್ತಿದ್ದ ಇಬ್ಬರು ಮಹಿಳೆಯರು 'ಅವವ್ವೋ' ಎಂದು ವಿಕಾರವಾಗಿ ಕಿರಿಚಿದರು. ಡಕ್ಕು ದೈತ್ಯಪ್ರಮಾಣದ ಹಂಸದಂತೆ ಗಂಭೀರವಾಗಿ ನದಿಯಲ್ಲಿ ಮುಂದುವರಿಯಿತು. ನಮ್ಮನ್ನೆಲ್ಲ ಹೆದರಿಸಬೇಕೆಂದೇ ವೇಗವನ್ನು ಹೆಚ್ಚಿಸಿದ್ದ ಚಾಲಕನ ಮುಖದ ಮೇಲೆ ನಗೆ ಮೂಡಿತು.

ನಾವು ನೀರಿಗೆ ಹಾರಿದ ಬಳಿ ನೆರಳುನೆರಳಾಗಿತ್ತು. ಆಚೆಯ ದಡದಲ್ಲಿ ಎತ್ತರವಾದ ಗುಡ್ಡ, ಕಾಡೂ ಗುಡ್ಡವೂ ಏನೋ ಒಳಸಂಚು ಮಾಡಿ ನಿಶ್ಶಬ್ದ ವಾಗಿ ನಮ್ಮನ್ನು ಸುತ್ತುವರಿದು ಸೆರೆಹಾಕಿದಂತಾಯಿತು. ನದಿ ಯಾವ ದಿಕ್ಕಿ ನಿಂದ ಬಂತೋ ಯಾವ ದಿಕ್ಕಿಗೆ ಹರಿಯುತ್ತಿತ್ತೋ ತಿಳಿಯಲೊಲ್ಲದು—ನೀರಿ ನಲ್ಲಿ ಚಲನೆಯೇ ಕಾಣಲಿಲ್ಲ. ಅಲ್ಲಲ್ಲೇ ನಾಲ್ಕಾರು ಪಟದ ದೋಣಿಗಳು (sailing boats)—ದಿಕ್ಕು ತೋರದೆ ?—ನಿಶ್ಚಲವಾಗಿ ನಿಂತಿದ್ದವು. ಮೋಟಾರ್ ದೋಣಿಯೊಂದು ಅಬ್ಬರ ಮಾಡಿಕೊಂಡು ತನ್ನ ಹಿಂದೆ ಕ್ಷೀರ ಪಥವನ್ನು ನಿರ್ಮಿಸುತ್ತ ಸುತ್ತು ಹಾಕುತ್ತಿತ್ತು—ಸೆರೆಯಿಂದ ತಪ್ಪಿಸಿಕೊಂಡು ಹೋಗಲಾರದೆ ಪರದಾಡುವ ಮೃಗದ ವ್ಯರ್ಥ ಪರಿಭ್ರಮಣ ! ನಮ್ಮ ಡಕ್ ಮಾತ್ರ ಸ್ಥಿರಚಿತ್ತದಿಂದ ಗಂಭೀರವಾಗಿ ಮುಂದುವರಿಯಿತು.

ಸನ್ನಿವೇಶವೇನೋ ಬಹು ಸುಂದರವಾದದ್ದು. ನೀರಿನ ಮೇಲೆ ನೆಳಲು ಬೆಳಕಿನ ಮನೋಹರವಾದ ಮಿಶ್ರಣ. ಒಂದು ದಡದ ಬಳಿ ಮರಗಳ ಪ್ರತಿಬಿಂಬ. ಎದುರು ದಡದ ಮರಳುಗಲ್ಲಿನ (sand–stone) ಕೋಟೆಯ ಮೇಲೆ ವಾಯು ವರುಣರಿಬ್ಬರೂ ಶತಶತಮಾನಗಳ ಕಾಲ ಆಕ್ರಮಣ ನಡೆಸಿ ಚಿತ್ರವಿಚಿತ್ರವಾದ ಶಿಲ್ಪಕೃತಿಗಳನ್ನು ನಿರ್ಮಿಸಿದ್ದರು. ಒಂದು ಕಡೆ 200–300 ಅಡಿ ಎತ್ತರದಲ್ಲಿ ಬಂಡೆಯೊಂದು ಮುಂದಕ್ಕೆ ಚಾಚಿಕೊಂಡಿದೆ. ಅದರ ತುದಿ ಗರುಡನ ಕೊಕ್ಕಿ ನಂತೆ ಕಾಣುತ್ತದೆ—ಮೇಲುಕೊಕ್ಕು, ಕೆಳಕೊಕ್ಕು, ಬಾಯಿ, ಎಲ್ಲವನ್ನೂ ಗುರುತಿಸಬಹುದು ; ಸ್ವಲ್ಪ ಮಾತ್ರ ಕಲ್ಪನೆಯು ನೆರವಿದ್ದರೆ ಸಾಕು. ನಮ್ಮ

ಬಲಗಡೆ ನದಿಯ ದಡದಲ್ಲಿ ಚಿಕ್ಕದೊಂದು ಗುಡಿ. ಮುಂದೆ ಎರಡು ಕಂಬ, ಏಳೆಂಟು ಅಡಿ ಎತ್ತರದ ಕೋನಾಕಾರದ ಗೋಪುರ, ಕತ್ತಲುಕತ್ತಲಾಗಿ ಕಾಣುವ ಗರ್ಭಗುಡಿ--'ಒಳಗೆ ಗಣಪತಿಯೋ ಆಂಜನೇಯನೋ ಪ್ರತಿಷ್ಠಿತ ನಾಗಿರಬೇಕು, ಹೋಗಿ ನೋಡೋಣ,' ಎನ್ನಿಸುವಷ್ಟು ಬಲವಾಗಿತ್ತು, ನನ್ನ ಭ್ರಮೆ. ಆ ಗುಡಿಯನ್ನು ಕಟ್ಟಿದವನು ರೂವಾರಿ ವರುಣ!

ಮತ್ತೊಂದು ಕಡೆ ಪದರಪದರವಾಗಿ ಯಾರೋ ಕಲ್ಲುಗಳನ್ನು ಸೇರಿಸಿ ಗೋಡೆ ಕಟ್ಟಿರಬೇಕು ಎನ್ನಿಸುವ ಗುಡ್ಡ. ಅದನ್ನು ಅವಲಂಬಿಸಿರುವ ದೊಡ್ಡ ವೇದಿಕೆ. ಅದನ್ನು 'ಪುಲ್ಪಿಟ್ ರಾಕ್' (pulpit rock) ಎಂದು ಕರೆಯುತ್ತಾರೆ. ವೇದಿಕೆಯ ಮುಂದೆ 40–50 ಅಡಿಗಳ ಪ್ರಪಾತ. ಅದರ ತಳದಲ್ಲಿ, ನೀರಿನ ಮಟ್ಟಕ್ಕಿಂತ ಸ್ವಲ್ಪ ಮೇಲೆ ಪಿಯಾನೋ ಆಕಾರದ ಬಂಡೆಯೊಂದು ಬಿದ್ದಿದೆ. ಶತಮಾನದ ಹಿಂದೆ ಒಂದು ದಿನ ವೇದಿಕೆಯ ಮೇಲೆ ಪಾದ್ರಿಯೊಬ್ಬ ನಿಂತು ಜನರಿಗೆ ಧರ್ಮಬೋಧೆ ಮಾಡುತ್ತಿದ್ದನಂತೆ. ಅದು ಮುಗಿದ ಮೇಲೆ ಅವನು 'ಈಗ 22ನೆಯ ಸಾಮ್ (psalm) ಹಾಡೋಣ' ಎಂದು ಅದನ್ನು ಆರಂಭಿಸಿದ. ಆದರೆ ಅವನ ಜೊತೆಗೆ ಪಿಯಾನೊ ನುಡಿಸಿಕೊಂಡು ಹಾಡಬೇಕಾಗಿದ್ದ ಗಾಯಕಿ ಲಕ್ಷಣವಾಗಿ ನಿದ್ದೆ ಮಾಡುತ್ತಿದ್ದಳು (ಅದು ಪಾದ್ರಿಯ ಭಾಷಣದ ಪ್ರಭಾವವಿರಲಾರದು!) ಪಾದ್ರಿ ಕೋಪಗೊಂಡು ಆ ಪಿಯಾನೋವನ್ನು ಒದ್ದುಬಿಟ್ಟ, ಅದು ಕೆಳಕ್ಕೆ ಬಿತ್ತು. ನಮ್ಮ ಡೆಕ್ ನಡಸುತ್ತಿದ್ದವನು ಈ ಕಥೆ ಹೇಳಿ "ನೀವು ಇದನ್ನು ನಂಬುವುದಿಲ್ಲ ಎನ್ನುತ್ತೀರಾ? ಕೆಟ್ಟರಿ ಬಿಡಿ! ನೀವು ನಂಬಿದರೆಷ್ಟು ಬಿಟ್ಟರೆಷ್ಟು!" ಎಂದು ತನ್ನ ಮಾತನ್ನು ಮುಗಿಸಿದ.

ಎಲ್ಲ ದೇಶದವರೂ ಇಂಥ ಕಥೆಗಳನ್ನು ಕಟ್ಟುತ್ತಾರೆ. ಹಂಪೆಯಲ್ಲಿ ತುಂಗಭದ್ರೆಯ ದಡದಲ್ಲಿರುವ ಬಂಡೆಯೊಂದರ ಮೇಲೆ ಸೀತೆ ತನ್ನ ಸೀರೆಯನ್ನು ಒಣಗಹಾಕಿದ್ದಳು; ಅದರ ಅಂಚು ಈಗಲೂ ಆ ಬಂಡೆಯ ಮೇಲೆ ಕಾಣುತ್ತದೆ. ಕೃಷ್ಣರಾಜನಗರದ ಹತ್ತಿರ ಇರುವ ಚುಂಚನಕಟ್ಟೆ ಶ್ರೀರಾಮಕ್ಷೇತ್ರ. ಅಲ್ಲಿ ಒಂದು ಕಡೆ ಕಾವೇರಿಯ ನೀರು ಸ್ವಲ್ಪ ಹಳದಿಯ ಬಣ್ಣ ತಾಳಿದೆ. ಅದು ಸೀತೆ ಸ್ನಾನ ಮಾಡಿದಾಗ ಬಳಸಿದ ಅರಿಸಿನದ ಬಣ್ಣ!

ಡೆಕ್-ಚಾಲಕ ಹೇಳಿದ ಕಥೆಯಿಂದಾಗಿ ನನ್ನ ಗಮನ ಅವನ ಕಡೆಗೆ ತಿರುಗಿತು. ದಾರಿಯುದ್ದಕ್ಕೂ ಅವನು ಪ್ರೇಕ್ಷಣೀಯ ಸ್ಥಳಗಳನ್ನು ಕುರಿತು ವಿವರಣೆ ಕೊಡುತ್ತಿದ್ದ. ಏರಿಳಿತಗಳಿಲ್ಲದ ಒಂದೇ ಮಟ್ಟದ ದನಿ; ಅರ್ಧ ಮೂಗಿನಿಂದ ಅರ್ಧ ಬಾಯಿನಿಂದ ಹೊರಡುವ ಮಾತು; ಹೊರಗಿದ್ದ ಸೊಬಗನ್ನು ಮನಸ್ಸಿಗೆ ತುಂಬಿಕೊಳ್ಳುವ ಆತುರದಲ್ಲಿದ್ದ ನನ್ನನ್ನು ಮೊದಮೊದಲು

ಈ ಏಕನಾದ ತಾಳ್ಮೆಗೆಡಿಸಿತು. 'ಬೇಗ ಬಡಿಯಿರೊ ಇವನ ಬಾಯಿಗೆ!' ಎಂದು ಕಿರಿಚೋಣ ಎನ್ನಿಸಿತು. ಗಮನವಿಟ್ಟು ಕೇಳಿದ ಮೇಲೆ ಅವನ ಮಾತಿನಲ್ಲಿ ಆಸಕ್ತಿ ಹುಟ್ಟಿತು; ಅದು ಶುಷ್ಕ ಜಲ್ಪನೆಯಲ್ಲ. ಅದರಲ್ಲಿ ಸೊಗಸಾದ ಹಾಸ್ಯ ಗುಣವಿದೆ, ಎಂಬುದರ ಅರಿವಾಯಿತು:

"ಈ ಡಕ್ ಅನ್ನು ನಾನು ಘಂಟೆಗೆ 35–40 ಮೈಲಿಗಿಂತ ಹೆಚ್ಚು ವೇಗ ದಲ್ಲಿ ಓಡಿಸುವುದಿಲ್ಲ. ನೆಲದ ಮೇಲಾದರೆ ಅದು 60 ಮೈಲಿ ಓಡಬಲ್ಲದು. ಅದಕ್ಕಿಂತ ಹೆಚ್ಚಿನ ವೇಗವೂ ಸಾಧ್ಯ. ಪ್ರಪಾತದಿಂದ ಕೆಳಕ್ಕೆ ಉರುಳುವಾಗ 250 ಮೈಲಿಯವರೆಗೂ ಹೋಗುತ್ತದೆ." ಡಕ್ ಅನ್ನು ಹತ್ತಾರು ಸಾರಿ ಉರುಳಿಸಿ ವೇಗವನ್ನು ಅಳೆದು ನೋಡಿದವನಂತೆ ಹೇಳಿದ, ಈ ಮಾತನ್ನು

"ಅಗೋ ನೋಡಿ, ಅಲ್ಲಿ ಕಾಣುತ್ತದಲ್ಲ ಆ ಚಾಚುಬಂಡೆ, ಅದಕ್ಕೆ ಎಕೋ ಪಾಯಿಂಟ್ (echo point) ಅಂತ ಹೆಸರು. ಅದರೆದುರಿಗೆ ಡಕ್ ಅನ್ನು ನಿಲ್ಲಿಸುತ್ತೇನೆ. ನೀವು ಆಡಿದ ಮಾತನ್ನೆಲ್ಲ ಬಂಡೆ ನಿಮಗೆ ಹಿಂದಿರುಗಿಸು ತ್ತದೆ. ಒಂದೊಂದು ಮಾತೂ ಬೂಮರಾಂಗ್ (boomerang–ಎಸೆದವನ ಬಳಿಗೇ ವಾಪಸು ಬರುವ ಶಸ್ತ್ರ), ಆಗುತ್ತೆ, ಕೂಗಿ ನೋಡಿ, ಆದರೆ 'you idiot!' 'silly ass !' ಎಂದು ಮುಂತಾಗಿ ಕೂಗಬೇಡಿ. ಕೆಲವು ವೇಳೆ ನಮ್ಮ ಬಿರುದುಗಳು ನಮ್ಮ ಕಿವಿಗೂ ಹಿತವಾಗುವುದಿಲ್ಲ!"

ಇಂಥ ಚಟಾಕಿಗಳು ಒಂದೆರಡು ಕಿವಿಗೆ ಬಿದ್ದ ಮೇಲೆ ಅವನ ಮಾತಿಗೂ ಪ್ರಕೃತಿ ಸೌಂದರ್ಯಕ್ಕೂ ವಿರೋಧವೇನೂ ಕಾಣಲಿಲ್ಲ. ಕ್ಷೀರಾನ್ನವನ್ನು ಸವಿ ಯುವಾಗ ಮಧ್ಯೆ ಸ್ವಲ್ಪ ಉಪ್ಪಿನಕಾಯನ್ನು ನಂಜಿಕೊಂಡರೆ ಹಿತವಾಗಿಯೇ ಇರುತ್ತೆ.

"ಸಧ್ಯದಲ್ಲೇ ಒಂದು ಬಾರ್ (sand–bar–ಮರುಳದಿಬ್ಬ) ಮೇಲೆ ಹೋಗಬೇಕಾಗುತ್ತೆ. ಒಂದೊಂದು ವೇಳೆ ಡಕ್ ಅದರಲ್ಲಿ ಸಿಕ್ಕಿಕೊಳ್ಳುವುದೂ ಉಂಟು. ನನಗೆ ಬಾರ್‌ನಲ್ಲಿ ಸಿಕ್ಕಿಬೀಳುವ ಅನುಭವವಾಗಿದೆ–ಅರ್ಧ ರಾತ್ರಿ ಯಲ್ಲಿ!" 'ಬಾರ್' ಪದಕ್ಕೆ 'ಮದ್ಯಶಾಲೆ' ಎಂದೂ ಅರ್ಥ ಮಾಡಬಹುದಷ್ಟೆ!

ಅವನು ನಮ್ಮನ್ನು ಮರಳು ದಿಬ್ಬದ ಮೇಲೆ ಕರೆದುಕೊಂಡು ಹೋದದ್ದು ಹಿಂದೆ ಅಲ್ಲಿದ್ದ ನ್ಯೂಪೋರ್ಟ್ (Newport) ಎಂಬ ಊರಿನ ಅವಶೇಷವನ್ನು ತೋರಿಸುವುದಕ್ಕೆ. ಆ ಸ್ಥಳದಲ್ಲಿ ದೊಡ್ಡದೊಂದು ರೈಲುಮಾರ್ಗ ಬರುತ್ತ ದೆಂಬ ನಿರೀಕ್ಷೆಯಿಂದ ಜನ ಆತುರದಲ್ಲಿ ಭೂಮಿಯನ್ನು ಕೊಂಡರು. ದೊಡ್ಡ ಅಂಗಡಿಗಳು, ಹೋಟಲುಗಳು, ಸ್ಕೂಲುಗಳು—ಎಲ್ಲಾ ನಾಯಿಕೊಡೆಗಳಂತೆ ಹುಟ್ಟಿಕೊಂಡವು. ಜಮೀನಿನ ಬೆಲೆ ಆಕಾಶಕ್ಕೇರಿತು, ಕೆಲವರು ಬುದ್ಧಿವಂತರು

ಬೇಗ ತಮ್ಮ ಜಮೀನನ್ನು ಮಾರಿ ಹಣ ಮಾಡಿಕೊಂಡು ಕಾಲುಕಿತ್ತರು. ಉಳಿದವರು—ರೈಲು ರಸ್ತೆ ಬೇರೆ ಕಡೆ ಹೋದದ್ದರಿಂದಾಗಿ—ತಮ್ಮ ಹಣಕ್ಕೆ ತರ್ಪಣಕೊಟ್ಟು ಮುಸುಗು ಹಾಕಿಕೊಂಡು ಹೊರಟರು. ಅಲ್ಲಿ ಆ ಊರಿದ್ದದ್ದಕ್ಕೆ ಗುರುತಾಗಿ ಇನ್ನೂ ಉಳಿದಿರುವುದು ಡಾನ್ ಮೇನರ್ ( Dawn Manor) ಎಂಬ ಮನೆಯೊಂದೇ.

ಅಮೆರಿಕನ್ನರು ಹಣಮಾಡಿಕೊಂಡವರ ಜಯೋಪಾಖ್ಯಾನವನ್ನು ಚಪ್ಪರಿಸಿಕೊಂಡು ಹೇಳುತ್ತಾರೆ. ಹಣ ಕಳೆದುಕೊಂಡವರು.... The devil take the hindmost! (ಹಿಂದುಳಿದವರು ಸೈತಾನನ ಪಾಲು).

ಅಲ್ಲಿಂದ ಡಕ್ ಡೆಲ್ಟನ್ ಸರೋವರಕ್ಕೆ ಹಾರಿತು. ಆಮೇಲೆ ಇಕ್ಕಟ್ಟಾದ ದಾರಿಯಲ್ಲಿ ಅತಿ ವೇಗದಿಂದ ಓಡಿ (ಡ್ರೈವರ್ ಮಹಾಶಯ 'Relax, ladies and gentlemen, relax and meditate' ಎನ್ನುತ್ತಿದ್ದ!) ಒಂದು ಕಡೆ ನಿಂತಿತು. ನಮ್ಮ ಮಾತಲಿ ಒಂದು ಪುಟ್ಟ ಭಾಷಣ ಮಾಡಿದ :

“ಇಲ್ಲಿಯ ಸುಂದರ ದೃಶ್ಯಗಳ ಚಿತ್ರಗಳನ್ನೊಳಗೊಂಡ ಈ ಪುಸ್ತಕ ನೋಡಿದಿರ? ಒಂದೇ ಒಂದು ಡಾಲರ್! ನೀವು ಕೊಳ್ಳಲೇಬೇಕೆಂಬ ನಿಯಮವಿಲ್ಲ-ನಿಮ್ಮ ಖುಷಿ, ನಿಮ್ಮ ರಾಜಿ, ನಿಮ್ಮ ಚಿತ್ತ! ಆದರೆ....ಈ ಡಕ್‌ಗೆ ಒಂದು ದುರಭ್ಯಾಸ ; ನನಗೆ ಅಸಮಾಧಾನವಾದಾಗಲೆಲ್ಲ ಅದು ಕೆಟ್ಟು ಹೋಗುತ್ತೆ. ಹಾಗೇನಾದರೂ ಆದರೆ ನೀವು ಒಂದು ಮೈಲಿ ನಡೆಯಬೇಕಾಗುತ್ತೆ. ದಾರಿಯಲ್ಲಿ ಎರಡು ಕಡೆಯಲ್ಲೂ ಪಾಯ್ಸನ್ ಐವಿ (poison ivy—ನಮ್ಮ ತುರಿಚಂಗಿ ಗಿಡದಂಥ ಒಂದು ಗಿಡ. ಅದರ ಸೊಪ್ಪು ತಗುಲಿದರೆ ಮೈಯೆಲ್ಲ ಗಂಧೆಯಾಗಿ ಉರಿಯುತ್ತದೆ) ಬೆಳೆದುಕೊಂಡಿದೆ. ಆದರೇನಂತೆ ! ಒಂದು ದಿನ ಉರಿಯುತ್ತೆ, ಆಮೇಲೆ ತಾನಾಗಿಯೇ ಸರಿಹೋಗುತ್ತೆ !”

ನಾವೆಲ್ಲ ನಕ್ಕು ಒಂದೊಂದು ಪುಸ್ತಕ ಕೊಂಡೆವು.

[ 1976 ರಲ್ಲಿ ಸೇರಿಸಿದ ಮಾತು: ಈ ಡಕ್ ಸಾರಥಿಯ ಹಾಸ್ಯವೆಲ್ಲ ಬರೆದಿಟ್ಟುಕೊಂಡು ಉರು ಹಚ್ಚಿದ್ದೋ ಅಥವಾ ಆ ಘಳಿಗೆಯಲ್ಲಿ ತಾನಾಗಿ ಹೊರಹೊಮ್ಮಿದ್ದೋ, ಎಂಬ ಸಂದೇಹ ನನ್ನನ್ನು ಬಾಧಿಸಿತ್ತು. ನಾನು ಮತ್ತೆ ಎರಡು ಮೂರು ಸಾರಿ ವಿಸ್ಕಾನ್ಸಿನ್ ಡೆಲ್ಸ್‌ಗೆ ಹೋದೆನಾದರೂ ಡಕ್ ಪ್ರಯಾಣ ಮಾಡಲಿಲ್ಲ. ಒಂದೊಂದು ಸಲವೂ ನಾಲ್ಕು ಡಾಲರ್ ತೆರಬೇಕು! ಕಳೆದ ಸಾರಿ ಅಲ್ಲಿಗೆ ಹೋದಾಗ ನನ್ನೊಡನೆ ನನ್ನ ತಮ್ಮನ ಮಗಳು ವಸಂತ ಮತ್ತು ಅಳಿಯ ಪ್ರೊ. ಕೊ. ಸು. ಸೀತಾರಾಮ್, ಇಬ್ಬರೂ ಬಂದಿದ್ದರು. ಅವರು ಡಕ್ ಸವಾರಿ ಹೊರಡುವ ಮುನ್ನ ನಾನು ಆ ಚಾಲಕನ ಚಟಾಕಿಗಳಲ್ಲಿ

ಸೆನಪಿದ್ದಷ್ಟನ್ನು ಹೇಳಿ, "ನಿಮ್ಮ ಡಕ್ ಸಾರಥಿ ಹೇಳುವುದನ್ನು ಗಮನವಿಟ್ಟು ಕೇಳಿ. ಅವನು ಹಿಂದೆ ಹೇಳಿದ್ದನ್ನೇ ಪುನರಾವರ್ತನೆ ಮಾಡುತ್ತಾನೆಯೆ ಎಂದು ಪರೀಕ್ಷೆ ಮಾಡೋಣ" ಎಂದು ಬೇಡಿದೆ. ಅವರು ಸವಾರಿ ಮುಗಿಸಿ ಕೊಂಡು ಬಂದ ಮೇಲೆ ಹೇಳಿದರು : "ನೀವು ಹೇಳಿದ ಚಟಾಕಿಗಳೆಲ್ಲದರ ಪುನರಾವರ್ತನೆಯಾಯಿತು" ಎಂದು. ಸೀತಾರಾಮ್ ಅವರಿಗೆ ಸಾರಥಿಯಾಗಿ ದ್ದವನೂ ನಮ್ಮ ಸಾರಥಿಯೂ ಬೇರೆ ಬೇರೆ ಮನುಷ್ಯರಿರಬಹುದು. ಅಂತೂ ನಾನು ಮೆಚ್ಚಿದ ಹಾಸ್ಯ ಸಮಯ ಸ್ಫೂರ್ತಿಯಿಂದ ಬಂದದ್ದಲ್ಲ, ಮುಂಚೆಯೇ ತಯಾರಿಸಿದ್ದು ಎಂಬುದೇನೋ ಸ್ಪಷ್ಟ. ಆದರೂ ಸಮಯ ಸ್ಫೂರ್ತಿಯಿಂದಲೇ ಬಂದದ್ದು ಎನ್ನಿಸುವಷ್ಟು ಚೆನ್ನಾಗಿ ಹೇಳಿದನಲ್ಲ, ಆ ಸಾರಥಿ! ಆ ಕಲೆಗಾದರೂ ಹೊಗಳಿಕೆ ಸಲ್ಲಬೇಕು.

ವಿಸ್ಕಾನ್ಸಿನ್ ಡೆಲ್ಸ್‌ನಲ್ಲಿ ನೋಡಬೇಕಾದ ಇತರ ಸ್ಥಳಗಳೂ ಇವೆ. ನಾವು ಡಕ್ ಸವಾರಿಯಾದ ಮೇಲೆ ಟಾಮಿ ಬಾರ್ಟ್ಲೆಟ್‌ನ ನೀರಾಟ ಪ್ರದರ್ಶನ (Tommy Bartlet's Water-show) ನೋಡಲು ಹೋದೆವು. ವೇಗ ವಾಗಿ ಓಡುವ ಮೋಟಾರ್ ದೋಣಿ, ಅದಕ್ಕೆ ಕಟ್ಟಿದ 40-50 ಅಡಿ ಉದ್ದದ ಹಗ್ಗಗಳನ್ನು ಹಿಡಿದು ಕಾಲಿಗೆ ನೀರಿನ ಸ್ಕೀ (ski)ಗಳನ್ನು ಧರಿಸಿರುವ ನಾಲ್ಕು ಜನ ಹೆಂಗಸರು. ನೀರಿನ ಮೇಲಿದ್ದರೂ ಮುಳುಗದಂತೆ ಅವರನ್ನು ದೋಣಿ ಶರವೇಗದಿಂದ ಒಯ್ಯುತ್ತದೆ. ಅವರು ಒಬ್ಬರ ಹೆಗಲಿನ ಮೇಲೆ ಮತ್ತೆ ಒಬ್ಬರು ಹತ್ತಿ ಛತ್ರಿ ಹಿಡಿದು ನಿಲ್ಲುವುದು ಮುಂತಾದ ಸಾಹಸಗಳನ್ನು ಮಾಡು ತ್ತಾರೆ. ಇತ್ತ ಈ ಪ್ರದರ್ಶನವಾಗುತ್ತಿರುವಾಗ ಅತ್ತ ಹೆಲಿಕಾಪ್ಟರು ಬೇಡಿದ ಜನರನ್ನು ಅಂತರಿಕ್ಷದಲ್ಲಿ ಸುತ್ತಿಸುತ್ತದೆ—ನಾಲ್ಕು ಡಾಲರ್ ಕೊಟ್ಟರೆ. ನದೀ ತೀರವನ್ನು ಬಿಟ್ಟು ಉಪವನಗಳಲ್ಲಿ ಎಷ್ಟು ಬೇಕಾದರೂ ಸುತ್ತಬಹುದು. ಒಂದು ಕಡೆ ಸಣ್ಣ ಇಲೆಕ್ಟ್ರಿಕ್ ಕಾರುಗಳನ್ನಿಟ್ಟಿದ್ದಾರೆ ; ಮಕ್ಕಳು ಅವನ್ನು ನಡಸಬಹುದು. ಮತ್ತೊಂದು ಕಡೆ 'ಕಥೆಗಳ ತೋಟ'. ಅಲ್ಲಿ 'ಸುಪ್ತಸುಂದರಿ', 'ಸರಳ ಸೈಮನ್', ಸಿಂಡರೆಲ (Sleeping Beauty, Simple Simon, Cinderella) ಮುಂತಾದ ಕಥೆಗಳನ್ನು ಕಣ್ಣಿಗೆ ಕಟ್ಟಿದಂತೆ ತೋರಿಸುತ್ತಾರೆ —ಚಿತ್ರಗಳ ಮೂಲಕವಲ್ಲ, ಜೀವಂತ ಜನರಿಗೇ ವೇಷ ಹಾಕಿ. ಸಿಂಡರೆಲ ಪಾತ್ರವಹಿಸಿದವಳು ನಿಮ್ಮೊಡನೆ ಮಾತಾಡುತ್ತಾಳೆ; ಫೇರಿಯೊಬ್ಬಳು ಸುನೀಲ ನಿಗೆ ಚಾಕೊಲೆಟ್ ಕೊಟ್ಟಳು. ಮತ್ತೊಂದುಕಡೆ ಕ್ರಿಸ್ತನ ಜೀವನದಿಂದ ಆಯ್ದ 13 ದೃಶ್ಯಗಳ ಪ್ರದರ್ಶನವಿತ್ತು. ನಮ್ಮ ಪುರಾಣಗಳಲ್ಲೂ ರಾಮಾಯಣ ಮಹಾ ಭಾರತಗಳಲ್ಲೂ ಉಪನಿಷತ್ತುಗಳಲ್ಲೂ ಬರುವ ಕಥೆಗಳನ್ನು ಹೀಗೇಕೆ ಪ್ರಚಾರ

ಮಾಡಬಾರದು!

ಆ ರಾತ್ರಿ ಒಂದು 'ಇಂಡಿಯನ್' (red Indian) ಪ್ರದರ್ಶನ. ಪ್ರದರ್ಶನ ಕೊಡಲು ಬಂದಿದ್ದ ಜನ....ಬಹುಶಃ ಇಂಡಿಯನ್ನರೇ. ಅದರಲ್ಲೇನೂ ಮೋಸವಿದ್ದಿರಲಾರದು. ನೃತ್ಯ ಸಂಗೀತಗಳು ಇಂಡಿಯನ್ನರವೇ ಎಂಬ ವಿಷಯದಲ್ಲಿ ನನಗೆ ಸ್ವಲ್ಪ ಸಂದೇಹ. ಆದರೆ ನನಗೆ ಆ ಜನಾಂಗದ ನೃತ್ಯ ಸಂಗೀತಗಳ ಅ ಆ ಇ ಈ ಕೂಡ ತಿಳಿಯದಾದ್ದರಿಂದ ನನ್ನ ಅಭಿಪ್ರಾಯಕ್ಕೆ ಏನೇನೂ ಬೆಲೆಯಿಲ್ಲ. ವಾಸ್ತವವಾಗಿ ನನ್ನ ಮನಸ್ಸು ಆ ಪ್ರದರ್ಶನಕ್ಕೆ ಸಾಕಾದಷ್ಟು ಗಮನ ಕೊಡಲಿಲ್ಲ—ಅಮೆರಿಕದ ಕೆಂಪು ಜನರ ಇಂದಿನ ಪಾಡನ್ನು ನೆನೆದು ಮರುಗುತ್ತಿತ್ತು. ನಾನು ಐದನೆಯ ಫಾರಂನಲ್ಲಿ ಓದುತ್ತಿದ್ದಾಗ ಫೆನಿಮೋರ್ ಕೂಪರ್ (Fenimore Cooper) ಬರೆದ ಕೆಲವು ಕಾದಂಬರಿಗಳು—The Deerslayer. The Path-finder, The Last of the Mohicans—ಕೈಗೆ ಸಿಕ್ಕಿದವು. ಅವುಗಳಲ್ಲಿ ಕೆಲವು ಇಂಡಿಯನ್ ವೀರರ ಚಿತ್ರಗಳು ಬರುತ್ತವೆ. ಕೂಪರ್‌ನ ಕಾದಂಬರಿಗಳನ್ನು ಮಾರ್ಕ್ ಟ್ವೆಯ್ನ್ (Mark Twain) ಲೇವಡಿ ಮಾಡಿದ್ದಾನೆ. ಅವನ ವಿಮರ್ಶೆಯನ್ನು ಅಲ್ಲಗಳೆಯುವಂತಿಲ್ಲ. ಆದರೂ ಚಿಕ್ಕ ವಯಸ್ಸಿನಲ್ಲಿ ಆ ಅರಣ್ಯಗಳ ಚಿತ್ರ, ಅಲ್ಲಿಯ ಸರೋವರಗಳು, ದಿಲಾವೇರ್, ಹ್ಯೂರನ್, ಇರಾಕ್ವಾಯ, ಮುಂತಾದ ಇಂಡಿಯನ್ ಪಂಗಡಗಳ ವರ್ಣನೆ, ಇಂಡಿಯನ್‌ರ ಮತ್ತು ಅವರನ್ನು ತಮ್ಮ ಪ್ರಯೋಜನಕ್ಕಾಗಿ ಬಳಸಿಕೊಂಡ ಬಿಳಿಯರ ಹೋರಾಟ, ಒಬ್ಬೊಬ್ಬರು ಇಂಡಿಯನ್ ವೀರರ ಧೀರ ಗಂಭೀರ ವ್ಯಕ್ತಿತ್ವ—ಇವೆಲ್ಲ ನನ್ನ ಮೇಲೆತುಂಬ ಪರಿಣಾಮವುಂಟುಮಾಡಿದವು. ಪ್ರೆಸ್ಕಾಟನ (Prescott) 'The Conquest of Mexico'ದಲ್ಲಿ ಕೆಲವು ಭಾಗಗಳನ್ನು ಓದಿದ್ದರಿಂದ ಆ ಪರಿಣಾಮಕ್ಕೆ ಪುಷ್ಟಿ ಬಂತು. ಈಗ ದಿಲಾವೇರ್ ನದಿಯಿದೆ, ಹ್ಯೂರನ್ ಸರೋವರವಿದೆ; ಆದರೆ ಆ ಪ್ರಾಂತದ ನಿವಾಸಿಗಳೂ ಒಡೆಯರೂ ಆಗಿದ್ದ ಇಂಡಿಯನ್ ಪಂಗಡಗಳಿಲ್ಲ—ಇರುವಷ್ಟು ಜನ ಮ್ಯೂಸಿಯಂ ವಸ್ತುಗಳಂತಿದ್ದಾರೆ! ಅವರ ಭೂಮಿಯನ್ನು ಕಸಿದುಕೊಂಡು ಸಾಧ್ಯವಾದಷ್ಟು ಜನರನ್ನು ಕೊಂದು ಅಳಿದುಳಿದ ನಾಲ್ಕಾರು ಗುಂಪಿನವರನ್ನು ರಿಸರ್ವೇಷನ್‌ಗಳಿಗೆ ತಳ್ಳಿದ ಬಿಳಿಯರ ವಿಷಯದಲ್ಲಿ ಆಗ ಇದ್ದ ರೋಷ ಜುಗುಪ್ಸೆಗಳು ಈಗಲೂ ಇವೆ. ಬಿಳಿಯರು ಅನ್ಯಾಯ ಮಾಡಿದರೆಂಬುದು ಕೇವಲ ಆದರ್ಶವಾದಿಗಳ ಮತ್ತು ಸಾಹಿತಿಗಳ ಕಲ್ಪನೆಯಲ್ಲ, ಐತಿಹಾಸಿಕ ಸತ್ಯ.

ಸಂಜೆಗತ್ತಲಿನಲ್ಲಿ ನಡೆದ ಆ ಪ್ರದರ್ಶನವನ್ನು ನೋಡುತ್ತಿದ್ದಾಗ ಇವೆಲ್ಲ ನನ್ನ ನೆನಪಿಗೆ ಬಂತು. ಪ್ರದರ್ಶನಕ್ಕಾಗಿ ತೊಗಲುಬೊಂಬೆಗಳನ್ನು ತರುವಂತೆ

ಾಗೆ ಕೆಂಪು ಜನರನ್ನು ಹಿಡಿದು ತಂದು ಕುಣಿಸಿದ್ದನ್ನು ನೋಡಿ ಜುಗುಪ್ಸೆ ಯಾಯಿತು. ನನ್ನ ಹಿಂದಿನ ಸಾಲಿನಲ್ಲಿ ಬಿಳಿಯ ಮಹಿಳೆಯೊಬ್ಬಳು 'By ights we should be there, and they on our seats!' (ನ್ಯಾಯವಾಗಿ ನಾವು ಅಲ್ಲಿರಬೇಕು, ಅವರು ನಮ್ಮ ಸೀಟೆಗಳಲ್ಲಿ ಕೂತಿರ ಬೇಕು) ಎಂದದ್ದು ಕಿವಿಗೆ ಬಿತ್ತು. ಇದನ್ನು ಕೇಳಿ ನನಗೂ ರಾಮುವಿಗೂ ಸ್ವಲ್ಪ ಸಮಾಧಾನವಾಯಿತು. ಸತ್ಯವನ್ನು ನುಡಿದದ್ದಕ್ಕಾಗಿ ಆಕೆಯನ್ನು ಮನಸ್ಸಿನಲ್ಲೇ ಅಭಿನಂದಿಸಿದೆ.

## 'ಏನಾದರೂ ಸರಿಯೆ, ಕೊಳ್ಳುತಿರು ತಮ್ಮ'–ಅರ್ಥಶಾಸ್ತ್ರಕ್ಕೆ ಅತಿಕ್ರಮ ಪ್ರವೇಶ

ಮೊನ್ನೆ ನಮಗೆ ಕ್ಯಾರಲ್ ಮತ್ತು ಯಾನ್ಸೆನ್‌ರ ಮನೆಯಲ್ಲಿ ಊಟ. ಅಲ್ಲಿ ನಡೆದ ಚರ್ಚೆ ಬಹುಮಟ್ಟಿಗೆ ಅಮೆರಿಕದ ಆರ್ಥಿಕ ಸಾಧನೆಗಳನ್ನು ಕುರಿತದ್ದು. ಆ ಸಾಧನೆ ಯಾರನ್ನಾದರೂ ಬೆರಗುಗೊಳಿಸುವಂಥಾದ್ದು. ಇದನ್ನು ಅಮೆರಿಕದ ಶತ್ರುಗಳೂ ಒಪ್ಪಲೇ ಬೇಕು. ಅಮೆರಿಕನ್ನರು ಸಾಹಸಿಗಳು; ಅವರ ಕಾರ್ಖಾನೆ ಗಳು ದೈತ್ಯ ಪ್ರಮಾಣದವು ; ಅವುಗಳ ಉತ್ಪಾದನಾಶಕ್ತಿ ಅದ್ಭುತವಾದದ್ದು ; ಅವರ ವ್ಯಾಪಾರ ಕೋಟಿಗಟ್ಟಲೆ ಬೆಲೆಯದು. ಆದರೆ ಆ ಉತ್ಪಾದನೆಯೂ ವ್ಯಾಪಾರವೂ ನಡೆಯುತ್ತಲೇ ಇರಬೇಕು, ಯಂತ್ರ ಚಕ್ರಗಳು ಬಿಡುವಿಲ್ಲದೆ ತಿರುಗುತ್ತಲೇ ಇರಬೇಕು, ಹಣ ಬಂದು ಸುರಿಯುತ್ತಲೇ ಇರಬೇಕು. ದೆವ್ವ ಗಳನ್ನು ವಶಮಾಡಿಕೊಂಡರೆ ಅವಕ್ಕೆ ಒಂದು ಕ್ಷಣವೂ ಬಿಡುವಿಲ್ಲದಂತೆ ಕೆಲಸ ವನ್ನು ಒದಗಿಸುತ್ತಲೇ ಇರಬೇಕಂತೆ, ಇಲ್ಲದಿದ್ದರೆ ಅವು ನಮ್ಮನ್ನೇ ತಿಂದುಹಾಕಿ ಬಿಡುತ್ತವೆ. ಕೈಗಾರಿಕೆಯ ಬೃಹತ್ ಸಂಸ್ಥೆಗಳು ಆ ದೆವ್ವಗಳ ಹಾಗೆ.

ಕ್ಯಾರಲ್ ತನ್ನ ಮಗ ಆ್ಯಲಿಕ್ಸ್ ಬೆಳೆಯುವುದಕ್ಕೆ ಮುಂಚೆ ಅಮೆರಿಕ ವನ್ನು ಬಿಟ್ಟುಹೋಗಬೇಕೆಂದು ವಾದಿಸುತ್ತಿದ್ದಳು. ಇದನ್ನು ಹಿಂದೆ ಕಾಣಿಸಿ ದ್ದೇನೆ. ಯಾನ್ಸೆನ್‌ರ ಅಧ್ಯಯನ ವಿಷಯ—ಕೈಗಾರಿಕೆಯ ನಿರ್ವಹಣೆ. ಆದ್ದ ರಿಂದಲೋ ಏನೊ, ಆತನಿಗೆ ಅಮೆರಿಕದ ವಿಷಯದಲ್ಲಿ ಹೆಚ್ಚು ಅಭಿಮಾನ. ಆದರೂ ಅವರು ಹೆಂಡತಿಯ ಎದುರಿಗೆ ತಮ್ಮ ಅಭಿಮಾನವನ್ನು ಹೊರಗೆಡವು ತ್ತಿರಲಿಲ್ಲ. ಹಣ ಗಳಿಸುವುದಕ್ಕೆ ಅಮೆರಿಕವೇ ಉತ್ತಮ ಎಂದು ಮಾತ್ರ ವಾದಿ ಸುತ್ತಿದ್ದರು. "ಅಮೆರಿಕ ನಮಗೆ ಅನ್ನ ಕೊಡುತ್ತಿದೆ. ಅದನ್ನು ಒಪ್ಪುತ್ತೀಯೋ

ಇಲ್ಲವೊ ? ನಾನು 'ಬಿಸಿನೆಸ್ ಮ್ಯಾನೇಜ್‌ಮೆಂಟ್'ನಲ್ಲಿ ಡಿಗ್ರಿ ಪಡೆದವ
ಇಲ್ಲಾದರೆ ಒಂದಲ್ಲ ಒಂದು ಕಡೆ ಕೆಲಸ ಸಿಕ್ಕುತ್ತದೆ. ಇಲ್ಲಿಯಷ್ಟು ಬಂಡವ
ಇನ್ಯಾವ ದೇಶದಲ್ಲಿ ಹೂಡಿದ್ದಾರೆ ? ಇಷ್ಟು ಉತ್ಪಾದನೆ, ಇಷ್ಟು ಮಾರಾ
ಇನ್ನೆಲ್ಲೂ ಇಲ್ಲ. ಸೌಲಭ್ಯ ಇರುವ ಸ್ಥಳವನ್ನು ಬಿಟ್ಟು ಯಾವುದೋ ಬ
ದೇಶಕ್ಕೆ ಹೋಗಿ ಏಕೆ ಒದ್ದಾಡಬೇಕು!"

ಪ್ರಪಂಚದ ಎಲ್ಲ ಕಡೆಗಳಿಂದಲೂ ಜನರನ್ನು ಅಮೆರಿಕಕ್ಕೆ ಸೆಳೆಯು
ರುವುದು ಇದೇ ವಾದ. ಅಮೆರಿಕ ಕಾಮಧೇನು ಕಲ್ಪವೃಕ್ಷಗಳ ನಾಡು, ಅ
ಹಾಲುಜೇನಿನ ಹೊಳೆ ಹರಿಯುತ್ತಿದೆ. ಕೆಲವು ದಿನಗಳ ಕೆಳಗೆ ಅಮೆರಿಕ
ಪ್ರೆಸಿಡೆಂಟರೇ ಯಾವುದೋ ಸಂದರ್ಭದಲ್ಲಿ ಕೇಳಿದರಂತೆ: 'ಪ್ರಪಂಚ
ಮತ್ತಾವ ದೇಶದಲ್ಲಿ ತಾನೆ ಶ್ರೀಸಾಮಾನ್ಯ ಇಷ್ಟು ಸುಖವಾಗಿದ್ದಾನೆ?' ಎಂದ
ಯಾನ್ಸೆನ್ ಈ ಮಾತನ್ನು ಉದಾಹರಿಸಿದರು. ಸಾಮಾನ್ಯಮಾನವನ ಆರ್ಥಿ
ಅಭ್ಯುದಯವನ್ನು ಗಮನಿಸಿದರೆ ಸ್ವೀಡನ್‌ಗೆ ಪ್ರಥಮ ಸ್ಥಾನ ಸಲ್ಲುತ್ತ
ಯೆಂದು ಎಲ್ಲೋ ಓದಿದ ನೆನಪಿದೆ. ಅದು ನಿಜವಾದರೆ ಅಮೆರಿಕಕ್ಕೆ ಎರ
ನೆಯ ಸ್ಥಾನ ಸಲ್ಲುತ್ತದೆಯೇನೊ. ಅಂತೂ ಅಲ್ಲಿ ಜನ ಅನುಕೂಲಸ್ಥಿತಿಯ
ದ್ದಾರೆ, ಸುಖವಾಗಿದ್ದಾರೆ, ಅಲ್ಲಿ ತೃಪ್ತಿಯಿದೆ, ಎಂದೇ ಸಾಮಾನ್ಯವಾಗಿ ಎಲ್ಲ
ತಿಳುವಳಿಕೆ. ಅಮೆರಿಕದಲ್ಲೂ ಶೇಕಡ 50 ರಷ್ಟು ಜನ ಬಡವರಿದ್ದಾರೆ, ಅವ
ಸ್ಥಿತಿ ಅಷ್ಟೇನೂ ಸಮರ್ಪಕವಲ್ಲ, ಎಂದು ಹೇಳುವವರೂ ಇದ್ದಾರೆ; ಆದ
ಅಲ್ಲಿಯ ಬಡತನ ಪೂರ್ವದೇಶಗಳ (ಪೆಟ್ರೋಲ್ ಉತ್ಪಾದಿಸುವ ದೇಶಗಳನ
ವಿನಾಯಿಸಿ) ನೆಮ್ಮದಿಗೆ ಸಮ ಎಂದರೆ ಸರಿಹೋಗಬಹುದು.

ಆದರೆ ಈ ಹಾಲುಜೇನಿನ ಹೊಳೆ ಸದಾ ಹೀಗೆಯೇ ಹರಿಯುತ್ತಿರುವುದ
ಸಾಧ್ಯವೆ ? ಚಿನ್ನದ ಚಿಲುಮೆ ಬತ್ತುವುದೇ ಇಲ್ಲವೆ? ನಾನು ಯಾನ್ಸೆನ್‌ರ
ಈ ಪ್ರಶ್ನೆ ಹಾಕಿದೆ. ಅವರ ಉತ್ತರದಲ್ಲಿ ಸ್ವಲ್ಪ ಅಸಹನೆಯಿತ್ತು :

"ಬತ್ತದೆ ಯಾಕಿರಬಾರದು ? ಅಮೆರಿಕದಲ್ಲಿ ಪ್ರಕೃತಿದತ್ತ ಸಂಪತ್
ಹೇರಳವಾಗಿದೆ. ಉತ್ಪಾದನಾಶಕ್ತಿಯಿದೆ ; ಟೆಕ್ನಾಲಜಿಯಿದೆ ; ತಾವು ತಯಾ
ಸುವ ವಸ್ತುಗಳನ್ನು ಪ್ರಪಂಚದಲ್ಲೆಲ್ಲ ಮಾರುವ ಶಕ್ತಿಯಿದೆ; ಮಾರುವುದಕ
ಬೇಕಾದ ಸಾಧನಗಳೂ ಇವೆ ; ದೇಶದೊಳಗೆ ಕೂಡ ಕೊಳ್ಳುವ ಶಕ್ತಿ
ಅಪಾರವಾಗಿದೆ. ಅಂದ ಮೇಲೆ ಉತ್ಪಾದನೆ ನಡರ್ದೇ ನಡೆಯುತ್ತದೆ ; ಜನಕ
ಉದ್ಯೋಗವಿದ್ದೇ ಇರುತ್ತದೆ. ಚಿನ್ನದ ಚಿಲುಮೆ ಬತ್ತಬಹುದೆಂಬ ಶಂಕೆ
ಕಾರಣವಿಲ್ಲ."

ನನ್ನದು ಶುದ್ಧ ಅವಿಚಾರಿಯ ಸಂದೇಹ ಎಂದು ಅವರಿಗೆ ತೋರಿ

ಬೇಕು. ಆದರೆ ಆ ಭಾವನೆಯನ್ನು ಪ್ರಯತ್ನಪೂರ್ವಕವಾಗಿ ಅದುಮಿದರು—ನಾನು ಅವರ ಅತಿಥಿಯಷ್ಟೇ !

ಅವತ್ತು ರಾತ್ರಿ ರಾಮುವೂ ನಾನೂ (ಇಬ್ಬರೂ ಅರ್ಥಶಾಸ್ತ್ರದ ವಿಷಯದಲ್ಲಿ ಅವಜ್ಞರು—laymen) ಬಹಳ ಹೊತ್ತು ಯಾನ್ಸೆನ್‌ರ ವಾದವನ್ನು ಚರ್ಚಿಸಿದೆವು. ಚರ್ಚೆಯ ಫಲವಾಗಿ ನನಗೆ ತೋರಿದ್ದನ್ನೂ ನನಗೆ ಅಮೇರಿಕದಲ್ಲಾದ ಅನುಭವಗಳಲ್ಲಿ ಆ ವಿಷಯಕ್ಕೆ ಸಂಬಂಧಪಟ್ಟ ಕೆಲವನ್ನೂ ಇಲ್ಲಿ ಕಾಣಿಸಿದ್ದೇನೆ. ಅಮೇರಿಕದಲ್ಲಿ ಮಾತ್ರವಲ್ಲ, ಕಮ್ಯುನಿಸ್ಟ್ ಮತ್ತು ಸೋಷಲಿಸ್ಟ್ ದೇಶಗಳನ್ನು ಬಿಟ್ಟರೆ ಉಳಿದೆಲ್ಲ ದೇಶಗಳಲ್ಲೂ ನೂರಕ್ಕೆ ತೊಂಬತ್ತು ಜನ ಯಾನ್ಸೆನ್‌ರ ದೃಷ್ಟಿಯನ್ನು ಒಪ್ಪಿಯಾರು. ಅಮೇರಿಕದಲ್ಲಿರುವ ಅಪಾರ ಪ್ರಕೃತಿದತ್ತ ಸಂಪತ್ತು, ಅಲ್ಲಿಯ ಜನರ ಶಕ್ತಿ, ವೈಜ್ಞಾನಿಕ ಮುನ್ನಡೆ, ದಕ್ಷತೆ, ತಮ್ಮ ಸರಕನ್ನು ಮಾರುವ ಚಾಕಚಕ್ಯ, ಇವುಗಳನ್ನು ಕಂಡು ಪ್ರಪಂಚ ಬೆರಗಾಗಿದೆ. ಹಿಂದಿನ ಕಾಲದ ರಾಜ್ಯಶಾಸ್ತ್ರಜ್ಞರು ಕಲ್ಪಿಸಿಕೊಂಡಿದ್ದ ಸುವರ್ಣಯುಗ! (golden age—ಅದು ಎಂದೂ ಎಲ್ಲೂ ಇರಲಿಲ್ಲ) ! ಈಗ ಅಮೇರಿಕದಲ್ಲಿ ನಡೆಯುತ್ತಿದೆ ಯೆಂಬುದೇ ಎಲ್ಲರ ಭಾವನೆ. ಹಿಂದುಗಳಿಗೆ ಕಾಶಿ ಇರುವಂತೆ, ಮುಹಮ್ಮದೀಯರಿಗೆ ಮೆಕ್ಕ ಇರುವಂತೆ, ಕ್ಯಾಥೊಲಿಕ್ ಕ್ರೈಸ್ತರಿಗೆ ರೋಮ್ ಇರುವಂತೆ, ಕಾಂಚನ ಮತೀಯರಿಗೆ ಅಮೆರಿಕ. ಇತ್ತೀಚೆಗೆ ಈ ನಂಬಿಕೆಯನ್ನು ವಿರೋಧಿಸುವ ಅರ್ಥಶಾಸ್ತ್ರಜ್ಞರು 'ನೆಚ್ಚದಿರು ಈ ಭಾಗ್ಯ ನಿತ್ಯವಲ್ಲ' ಎಂದು ಹಾಡುತ್ತಿದ್ದಾರೆ. ಆದರೆ ಇವರೆಲ್ಲ ಜನರ ಮನಸ್ಸಿನಲ್ಲಿ ಭಯ ಬಿತ್ತಿ ಬದುಕುವ ಜನ—alarmists—ಎಂದು ಅವರನ್ನು ಕಡೆಗಣಿಸುವುದೇ ಹೆಚ್ಚು. ಅಮೆರಿಕನ್ ಭೋಗ ಜೀವನವನ್ನು ಕಂಡವರಿಗೆ ಇದೇನೂ ಆಶ್ಚರ್ಯವಲ್ಲ. ಮಾರ್ಕ್ಸ್‌ವಾದಿಗಳು 'ಬಂಡವಾಳಷಾಹಿ ಸಮಾಜ ತನ್ನನ್ನು ತಾನೇ ನಾಶಮಾಡಿಕೊಳ್ಳುತ್ತದೆ' ಎಂದು ಘೋಷಿಸುತ್ತಾ ಬಂದಿದಾರೆ. ಆ ಮಾತು ಇದುವರೆಗೆ ಅಮೇರಿಕದ ವಿಷಯದಲ್ಲಿ ನಿಜವಾಗಿಲ್ಲ.

ಆದರೆ ಭೋಗಜೀವನ ಅಲ್ಲಿ ಪರಮಾವಧಿಯನ್ನು ಮುಟ್ಟಿದೆಯೆನ್ನುವುದೇ 'ಇದು ನಿತ್ಯವೆ ?' ಎಂಬ ಸಂದೇಹಕ್ಕೆ ಕಾರಣ. ಅಮೆರಿಕದ ಉತ್ಪಾದನಾಶಕ್ತಿಯನ್ನು ಅಲ್ಲಗಳೆಯುವಂತಿಲ್ಲ. ಅವರ ಕೊಳ್ಳುವ ಶಕ್ತಿ—ಅದು ಎಷ್ಟೇ ಹೆಚ್ಚಾಗಿರಲಿ—ಮಿತಿಯುಳ್ಳದ್ದೆ ? ಪರಮಾವಧಿಯನ್ನು ಮುಟ್ಟಿದೆ ಎಂದರೆ 'ಇನ್ನು ಮುಂದಕ್ಕೆ ಹೋಗಲಾರದು, ಇನ್ನು ಎತ್ತರಕ್ಕೆ ಏರಲಾರದು' ಎಂದು ತಾನೆ ಅರ್ಥ? ಪರಿಪೂರ್ಣತೆಯನ್ನು ಸಾಧಿಸಿದ ಮೇಲೆ ಪ್ರಗತಿಗೆಲ್ಲಿ ಅವಕಾಶ? ಈಗ ಅಮೇರಿಕದಲ್ಲಿ ಕಾರ್ ಇಲ್ಲದವರು ಅಪರೂಪ; ಸ್ಟೈಲ್ಸ್‌ನ ರಸೆಗಳ ಮುಗ್ಗುಲಲ್ಲಿ

ಒಂದೊಂದು ಸಂಸಾರಕ್ಕೂ ಎರಡೆರಡು ಕಾರ್ ನಿಲ್ಲಿಸುವಷ್ಟು ಪಾರ್ಕಿಂಗ್ ಸ್ಥಳವನ್ನು ಕಾದಿಟ್ಟಿದ್ದಾರೆ—ಮನೆಗೆರಡು ಕಾರ್‌ಗಳು ಇರುತ್ತವೆಯೆನ್ನುವುದು ಸ್ವತಸ್ಸಿದ್ಧ! ಎಲ್ಲರ ಮನೆಯಲ್ಲೂ ರೆಫ್ರಿಜಿರೇಟರ್ ಇದೆ. ಕೊಠಡಿಗೊಂದರಂತೆ ಏರ್‌ಕಂಡಿಷನರ್, ಸೆಂಟ್ರಲ್ ಹೀಟಿಂಗ್, ತಟ್ಟೆ ತೊಳೆಯುವ ಯಂತ್ರ, ವ್ಯಾಕ್ಯುಅಮ್ ಕ್ಲೀನರ್, ರೇಡಿಯೋ, ಟೆಲಿವಿಷನ್. ಟೇಪ್‌ರಿಕಾರ್ಡರ್, ಟೈಪ್‌ರೈಟರ್, ಟೆಲಿಫೋನ್, ಅಸ್ಪರೈಸರ್, ಪೆನ್ಸಿಲ್ ಚೂಪು ಮಾಡುವ ಯಂತ್ರ, ಎಷ್ಟು ಸೂಟಿದ್ದರೆ ಅಷ್ಟು ಹೊಂದುವ 'ಮ್ಯಾಚಿಂಗ್' ಜೋಡುಗಳು, ಕ್ಷಣಸಿದ್ಧ ಕಾಫಿ, ಎರಡುನಿಮಿಷದಲ್ಲಿ ಸಿದ್ಧ ಮಾಡಬಹುದಾದ 100ಕ್ಕೆ 90ರಷ್ಟು ಬೆಂದಿರುವ ಅನ್ನ, ತರಕಾರಿ—ಅಮೆರಿಕನ್ನರು ಕೊಡ ಇನ್ನೇನು ಕೊಂಡಾರು!

"ನಿಮಗಿನ್ನೇನು ಬೇಕು ಹೇಳಿ, ಒದಗಿಸಿಕೊಡುತ್ತೇವೆ! ಏನು ಕೇಳಬೇಕೆಂಬುದು ನಿಮಗೆ ತೋರಲಿಲ್ಲವೆ? ಅದನ್ನೂ ನಾವೇ ಹೇಳಿಕೊಡುತ್ತೇವೆ!"

ಪ್ರೊ. ಕೊ. ಸು. ಸೀತಾರಾಮ್ ನನ್ನನ್ನು ಫ್ಲಾಸ್‌ಮೂರ್‌ಗೆ ಕರೆದುಕೊಂಡು ಹೋದಾಗ ತಮ್ಮ ಗ್ಯಾರೇಜ್ ಬಾಗಿಲನ್ನು ತೆಗೆಯಲು ಕಾರ್‌ನಿಂದ ಇಳಿಯಲಿಲ್ಲ. ಛೋಟಾ ಟ್ರಾನ್ಸಿಸ್ಟರ್‌ನಂತಿದ್ದ ಏನೋ ಒಂದನ್ನು ಎಡಗೈಯಿಂದ ತೆಗೆದು ಒಂದು ಗುಂಡಿಯನ್ನು ಒತ್ತಿದರು. ಹ್ರಾಂ ಹ್ರೀಂ ಹ್ರೂಂ ಛೂಮಂತ್ರಂ ಗಾಳಿ—ಕೂಡಲೆ ಗ್ಯಾರೇಜ್ ಬಾಗಿಲು ಮೇಲಕ್ಕೆದ್ದಿತು! ಇಂಥ ಸೌಕರ್ಯ ಬೇಕೆಂದು ನಮಗೆ ಗೊತ್ತಿರುವುದಿಲ್ಲ; ಉತ್ಪಾದಕರು ಹೇಳಿಕೊಡುತ್ತಾರೆ, ತೋರಿಸಿಕೊಡುತ್ತಾರೆ.

ಮೆಕ್‌ಮಿಲನ್ ನನ್ನನ್ನು ವುಡ್‌ಫೀಲ್ಡ್‌ಗೆ ಕರೆದುಕೊಂಡು ಹೋಗುತ್ತಿದ್ದಾಗ 'ಕಾರನ್ನು ತೊಳೆಸಿಕೊಂಡು ಹೋಗೋಣ' ಎಂದರು. ಗ್ಯಾಸ್ ಸ್ಟೇಷನ್‌ಗೆ ಹೋದೆವು. ಕಾರನ್ನು ನಿಲ್ಲಿಸಲಿಲ್ಲ. ಗ್ಯಾರೇಜಿನ ಬಾಗಿಲ ಬಳಿ ಒಂದು ಸ್ಥಳ ತಲಪಿದೊಡನೆ ಎಂಜಿನ್ ನಿಲ್ಲಿಸಿದರು. ಕಾರ್ ನಿಂತಿದ್ದ ನೆಲವೇ ಚಲಿಸಿ ಅದನ್ನು ನಿಧಾನವಾಗಿ ಕಟ್ಟಡದೊಳಕ್ಕೆ ಒಯ್ದಿತು. ಮೇಲಿನಿಂದ ಸಾಬೂನಿನ ನೀರು ಧಾರಾಕಾರವಾಗಿ ಸುರಿಯಿತು (ಕಾರ್‌ನ ಕಿಟಕಿಗಳು ಮುಚ್ಚಿಯೇ ಇದ್ದವು. ಅಮೆರಿಕದಲ್ಲಿ ಕಾರ್ ಕಿಟಕಿಗಳನ್ನು ತೆಗೆದಿರುವುದು ಅಪರೂಪ. ಏರ್ ಕಂಡಿಷನರ್ ಇರುವುದರಿಂದ ಪ್ರಾಣದೇವರನ್ನು (ಅಂದರೆ ವಾಯುವನ್ನು) ಸಂಬೋಧಿಸಿ 'ನಿನ್ನ ಹಂಗೇನು!' ಎಂದು ಮೂಗು ಮುರಿಯಬಹುದು). ಕಾರ್ ಮುಂದುವರಿಯುತ್ತಲೇ ಇತ್ತು. ಬ್ರಷ್‌ಗಳು ಪ್ರತ್ಯಕ್ಷವಾದವು, ಎಲ್ಲ ಕಡೆಯಿಂದಲೂ ಕಾರನ್ನು ಬ್ರಷ್ ಮಾಡಿದವು. ಕಾರ್ ಮುಂದುವರಿಯುತ್ತಲೇ ಇತ್ತು. ಅನಂತರ ಶುದ್ಧವಾದ ನೀರಿನ ಕುಂಭದ್ರೋಣ

ರುಳಿ ಕರೆಯಿತು—ಕಾರ್ ಮುಂದುವರಿಯುತ್ತಲೇ ಇತ್ತು. ಮತ್ತೊಂದು ಒಬ್ಬಿ ಬ್ರಷ್‌ಗಳು ನೀರನ್ನು ಒರಸಿದವು. ಕಾರ್ ಮುಂದುವರಿಯುತ್ತಲೇ ಇತ್ತು. ಅನಂತರ ಬಿಸಿಗಾಳಿ ಬೀಸಿ ಕಾರನ್ನು ಒಣಗಿಸಿತು. ಕಾರ್ ಮುಂದುವರಿದು ಪ್ರಯಾಣ ಮಾಡಿತು. ಇದಿಷ್ಟು ಕೆಲಸಕ್ಕೂ 3–4 ನಿಮಿಷ ಹಿಡಿದಿರಬಹುದು. ನಾವು ಕಾರ್‌ನಲ್ಲಿ ಸುಖವಾಗಿ ಕೂತಿದ್ದೆವು. ಇದಕ್ಕಾಗಿ ಕೊಟ್ಟ ಹಣ : 30 ಸೆಂಟ್!

ಈ ಸೌಕರ್ಯ ಬೇಕೆಂದು ನಮಗೆ ತೋರುತ್ತಿತ್ತೆ? ಆ ಯಂತ್ರವನ್ನು ಕಲ್ಪಿಸಿದವನೂ ತಯಾರಕನೂ ಅದನ್ನು ಕಣ್ಣ ಮುಂದಿಟ್ಟು 'ಕಾರು ಜೋಕ್ಕ, ತಿಗೀ ಠೊಕ್ಕ, ಎಲ್ಲ್ತಿವರಾಣೀ ಮೋ' ಎಂದು ಹಾಡಿದ, ನಾವು ಆ ಹಾಡಿಗೆ ತಕ್ಕಂತೆ ಕುಣಿದೆವು!

ಕಾರ್ ತೊಳೆಯುವ ಕೆಲಸ ಮುಗಿದಾಗ ನನ್ನ ಮತ್ತು ಮೆಕ್‌ಮಿಲನ್‌ರ ನೋಟಗಳು ಸಂಧಿಸದಿದ್ದರೂ ಅವರು ನನ್ನ ಕಡೆ ನೋಡುತ್ತಿದ್ದೆಂದು ನನಗೆ ಖಚಿತವಾಗಿತ್ತು. ಭಾರತದಲ್ಲಿ ಹುಟ್ಟಿ ಬೆಳೆದ ಈ ಮನುಷ್ಯ ಇದನ್ನು ನೋಡಿ ಬೆರಗಾಗಬೇಕು—ಇದು ಅವರ ನೋಟದ ಇಂಗಿತ. ಅದನ್ನು ಊಹಿಸಿದ ನನ್ನಲ್ಲಿ ಮಂಗ (impish) ಮನೋವೃತ್ತಿ ಎಚ್ಚರಗೊಂಡಿತು. ಯಾವ ಮಾತನ್ನೂ ಆಡದೆ ಭಾವರಹಿತ ಮುಖವಾಡ ತಂದುಕೊಂಡು ತೆಪ್ಪಗೆ ಕೂತಿದ್ದೆ. ಮೆಕ್‌ಮಿಲನ್ ಬಾಯಿಬಿಟ್ಟು ಕೇಳಬೇಕಾಯಿತು.

"ಬಹಳ ಚೆನ್ನಾಗಿತ್ತು, ಅಲ್ಲವೆ?"

ನಾನು ಅಮೆರಿಕನ್ನರ ಕಾಲೆಳೆದುಕೊಂಡು ಸಾಗುವ 'drawl' ದನಿಯನ್ನು ಅನುಕರಿಸಿ, ನಾನೇ ಸ್ವತಃ ಆ ಕಾರ್ ತೊಳೆಯುವ ಯಂತ್ರವನ್ನು ಸೃಷ್ಟಿಸಿ ಚಾಲತಿಗೆ ತಂದು ಈಗ ಅದರ ವಿಷಯದಲ್ಲಿ ಬೇಸರಗೊಂಡಿರುವವನಂತೆ 'Oh, yah, yah, yah' ಎಂದೆ. ('ಓ, ಯಾ ಯಾ ಯಾ'—ಅಮೆರಿಕನ್ನರು 'ಯೆಸ್' ಎಂಬ ಪದವನ್ನು 'ಯಾ' ಮಾಡುವುದುಂಟು). ಮೆಕ್‌ಮಿಲನ್ ನಕ್ಕರು, ಅವರ ಗುಟ್ಟನ್ನು ನಾನು ಊಹಿಸಿದಂತೆ ನನ್ನ ಗುಟ್ಟನ್ನು ಅವರೂ ಊಹಿಸಿದರು!

ಭೋಗ ಜೀವನಕ್ಕೆ ಹೊಸ ಹೊಸ ಸಾಮಗ್ರಿಗಳನ್ನು ಸೃಷ್ಟಿಸುವ ಚಟ ಇಷ್ಟಕ್ಕೆ ನಿಲ್ಲುವುದಿಲ್ಲ. ಸ್ನಾನ ಮಾಡುವಾಗ ತಲೆಗೆ ಸಾಬೂನು ನೊರೆ ಬಳಿಯುವುದಕ್ಕೊಂದು ಉಪಕರಣ; ನೀರಿನ ಉಷ್ಣಾಂಶ ಇಷ್ಟಿರಬೇಕೆಂದು ಬಾಯಲ್ಲಿ ಹೇಳಿದರೆ ಅದು ಅಷ್ಟಾಗುವಂತೆ ವ್ಯವಸ್ಥೆ (regulating temperature by voice command); ಹಲ್ಲುಜ್ಜುವುದಕ್ಕೊಂದು ಇಲೆಕ್ಟ್ರಿಕ್ ಬ್ರಷ್,

ಬೆನ್ನು ಕೆರೆದುಕೊಳ್ಳುವುದಕ್ಕೊಂದು ಉಪಕರಣ, ಜೋಡಿನ ಲೇಸ್ ಕಟ್ಟು ವುದಕ್ಕೆ ಮತ್ತೊಂದು—ಇವು ಮೂರು ಒಂದರಲ್ಲಿ, (Three in one ಇತ್ಯಾದಿ ಇತ್ಯಾದಿ. ಇದನ್ನೆಲ್ಲ ಅಮೆರಿಕನ್ನರೇ ಹಾಸ್ಯ ಮಾಡಿಕೊಂಡು ನಗ ತ್ತಾರೆ, ಆದರೆ ಕೊಂಡೂ ಕೊಳ್ಳುತ್ತಾರೆ.

ಈಗಾಗಲೇ ಇಷ್ಟೊಂದು ಸಾಮಾನನ್ನು ಮನೆಯಲ್ಲಿ ತುಂಬಿಕೊಂಡಿರುವ ಜನ, ತಮ್ಮ ಕೆಲಸಗಳನ್ನೆಲ್ಲ ಯಂತ್ರಗಳಿಗೆ ವಹಿಸಿಕೊಟ್ಟು ಗುಂಡಿ ಒತ್ತುತ್ತ ಕುಳಿತಿರುವ ಜನ, ಕೊಳ್ಳಬೇಕಾದದ್ದು ಮತ್ತೇನಿವೆ ? ಇದ್ದರೂ ಅದನ್ನು ಎಷ್ಟು ಕೊಂಡಾರು, ಎಷ್ಟು ಸಲ ಕೊಂಡಾರು ! ಭಾರತದಲ್ಲಿ ನನ್ನ ಸ್ನೇಹಿತರೊಬ್ಬರು 1931ರಲ್ಲಿ ಕೊಂಡ ಕಾರನ್ನು 1975ರಲ್ಲೂ ಬಳಸುತ್ತಿದ್ದರು. ನಲವತ್ತು ವರ್ಷ ಕಾಲ ! ಎಲ್ಲರೂ ಹೀಗೆ ಮಾಡಿದರೆ ಕಾರ್ ತಯಾರಕರು ಮೊದಲ ಸಾರಿ ಕಾರ್ ಮಾರಿದಮೇಲೆ ಮೂವತ್ತು ನಲವತ್ತು ವರ್ಷ ತಮ್ಮ ಕಾರ್ಖಾನೆಯನ್ನು ಮುಚ್ಚಬೇಕಾದೀತು. ಇಂಡಿಯದಲ್ಲಿ ಕಾರ್ ಕೊಳ್ಳದಿರುವ ಜನರಿದ್ದಾರೆ, ಆದ್ದ ರಿಂದ ತಯಾರಕರಿಗೆ ಮಾರ್ಕೆಟ್ ಇದೆ. ಆದರೆ ಅಮೆರಿಕದಲ್ಲಿ ಕಾರ್ ಬಳಸ ದಿರುವ ಪಾಪಿ ಇದ್ದಾನೆಯೇ ! ಸರಕನ್ನು ಕೊಳ್ಳದಿದ್ದರೆ ಹೆಚ್ಚು ತಯಾರಿಸು ವಂತಿಲ್ಲ ; ತಯಾರಿಕೆ ಇಲ್ಲದಿದ್ದರೆ ಕಾರ್ಖಾನೆಗಳನ್ನು ಮುಚ್ಚಬೇಕು ; ಕಾರ್ಖಾನೆಗಳನ್ನು ಮುಚ್ಚಿದರೆ ವಿದ್ಯುತ್ತಿನ ಬಳಕೆ ಕಡಿಮೆ, ಉಕ್ಕು, ಅಲ್ಯುಮಿನಿಯಂ, ಕ್ರೋಮ್ ಮುಂತಾದ ಕಚ್ಚಾಮಾಲುಗಳ ಬಳಕೆ ಕಡಮೆ, ಆ ಮಾಲಿಗೆ ಗಿರಾಕಿಯಿಲ್ಲದ್ದರಿಂದ ಅವನ್ನು ತಯಾರಿಸುವವರೂ ಕೈಕಟ್ಟಿ ಕೂರಬೇಕಾಗುತ್ತದೆ ; ನಿರುದ್ಯೋಗಿಗಳು ಹೆಚ್ಚುತ್ತಾರೆ ; ಅವರಿಗೆ ಅನ್ನ ಕೊಡುವ ಭಾರ ಸರ್ಕಾರದ ಮೇಲೆ ಒರಗುತ್ತವೆ.

"ಉಳಿದ ದೇಶಗಳಿಲ್ಲವೆ, ಇನ್ನೂ ಅಭಿವೃದ್ಧಿಗೆ ಬಂದಿಲ್ಲದ ದೇಶಗಳು ? ನಮ್ಮ ಸರಕನ್ನು ಅಲ್ಲಿಗೆ ಕಳಿಸೋಣ" ಎನ್ನಬಹುದು. ಆದರೆ ಆ ದೇಶದವರಿಗೆ ಕೊಳ್ಳುವ ಶಕ್ತಿಯಿದೆಯೆ ? ಅಲ್ಲದೆ ಈ ತರ್ಕವನ್ನು ಮುಂದುವರಿಸಿದರೆ, ವಿಶ್ವೀ ಕರಿಸಿದರೆ (universalise ಮಾಡಿದರೆ) 'ಕೆಲವು ದೇಶಗಳು ಸದಾ ಕೈಗಾರಿಕೆ ಯಲ್ಲಿ ನಿರತರಾಗಿರಬೇಕು, ಇನ್ನು ಕೆಲವು ಸದಾ ಗಿರಾಕಿಗಳಾಗಿರಬೇಕು' ಎಂದು ನಿರ್ಣಯಿಸಿದಂತಾಗುತ್ತದೆ. 'ಒಂದೊಂದು ದೇಶದವರೂ ಬೇರೆ ಬೇರೆ ಪದಾರ್ಥ ಗಳನ್ನು ಉತ್ಪಾದಿಸಲಿ, ಅವುಗಳನ್ನು ವಿನಿಮಯಮಾಡಿಕೊಳ್ಳಲಿ ; ಹೀಗಾದರೆ ಎಲ್ಲರೂ ಉತ್ಪಾದಕರಾಗುತ್ತಾರೆ, ಎಲ್ಲರೂ ಗಿರಾಕಿಗಳೂ ಆಗುತ್ತಾರೆ' ಎನ್ನುವ ವಾದ ಮೇಲುನೋಟಕ್ಕೆ ಸಮರ್ಪಕವಾಗಿ ಕಂಡರೂ ವಾಸ್ತವವಾಗಿ ಹಾಗೆ ನಡೆಯುತ್ತಿಲ್ಲ. ಕೆಲವು ರಾಷ್ಟ್ರಗಳು ಕಚ್ಚಾಮಾಲನ್ನು ಮಾತ್ರ ಸರಬರಾಜು

ಮಾಡುವ ಸ್ಥಿತಿಯಲ್ಲೇ ಉಳಿದಿವೆ; ಆದರಿಂದ ಬಡತನದಲ್ಲೇ ಉಳಿದಿವೆ. ನಾವು ಬ್ರಿಟಿಷರ ಆಳಿಕೆಯಲ್ಲಿದ್ದಾಗ ಅಲ್ಲಿಯ ಅರ್ಥಶಾಸ್ತ್ರಜ್ಞರು 'ಇಂಡಿಯದ ಆರ್ಥಿಕ ಪ್ರಗತಿ ಅದರ ವ್ಯವಸಾಯೋದ್ಯಮವನ್ನು ಅವಲಂಬಿಸುತ್ತದೆ, ಕೈಗಾರಿಕೆಯನ್ನಲ್ಲ' ಎಂದು ವಾದಿಸುತ್ತಿದ್ದರು. ಅವರು ಪ್ರಯೋಗಿಸಿದ ಸಮ್ಮೋಹನಾಸ್ತ್ರಕ್ಕೆ ನಮ್ಮವರೂ ಕೆಲವರು ಬಲಿಯಾದರು. ಈಗಲೇನೊ ಭಾರತದಲ್ಲಿ ಕೈಗಾರಿಕೆ ಸ್ವಲ್ಪ ಮುಂದುವರಿದಿದೆ. ಅದರಿಂದ ಪ್ರಯೋಜನವೂ ಆಗಿದೆ. ಆದರೆ ಅದರ ಫಲವಾಗಿ ಜಟಿಲವಾದ ಮತ್ತು ಕಠಿನವಾದ ಸಮಸ್ಯೆಗಳೂ ಒದಗಿಬಂದಿವೆಯೆಂಬುದನ್ನು ಮರೆಯುವಂತಿಲ್ಲ.

ಯೂರೋಪಿಯನ್ನರೂ ಅಮೆರಿಕನ್ನರೂ ಇಡೀ ಪ್ರಪಂಚವೇ ತಮ್ಮ ಮಾರ್ಕೆಟ್ ಎಂದು ಭಾವಿಸಿದ್ದರು. ಆ ಕಾಲ ಮುಗಿಯುತ್ತ ಬಂದಿದೆ. ಇತರ ರಾಷ್ಟ್ರಗಳವರು ಎಷ್ಟೋ ವಸ್ತುಗಳನ್ನು ತಾವೇ ತಯಾರಿಸಿಕೊಳ್ಳಲಾರಂಭಿಸಿದ್ದಾರೆ. ಪಾಶ್ಚಾತ್ಯರಿಗೆ ಇದರ ಬಿಸಿ ತಡೆಯಲಾರದಷ್ಟಲ್ಲದಿದ್ದರೂ ಸ್ವಲ್ಪ ಮಟ್ಟಿಗಾದರೂ ತಟ್ಟಿದೆ. ಅವರು ತಮ್ಮ ಜನರನ್ನು ಎಚ್ಚರಿಸಲು 'ಬ್ರಿಟಿಷ್ ಮಾಲನ್ನೇ ಕೊಳ್ಳಿ! ಅಮೆರಿಕನ್ ಮಾಲನ್ನೇ ಕೊಳ್ಳಿ' ('Buy British,' 'Buy American') ಮುಂತಾದ ಘೋಷಣೆಗಳನ್ನು ಕೂಗುತ್ತಿರುವುದು ಇದಕ್ಕೆ ಒಂದು ಸಾಕ್ಷಿ. (ಇತರ ಸಾಕ್ಷ್ಯವೂ ಇದೆ). ಹಿಂದೊಂದು ಸಾರಿ ಅಧ್ಯಕ್ಷ ಐಸನ್‌ಹೋವರವರು ಭಾಷಣ ಮಾಡುತ್ತಿದ್ದಾಗ 'ಕೊಳ್ಳಿ, ಕೊಳ್ಳಿ, ಕೊಳ್ಳಿ' (Buy, Buy, Buy) ಎಂದು ಬೋಧಿಸಿದರಂತೆ (ಇದರ ವಿವರಗಳು ಮರೆತುಹೋಗಿವೆ). ಶ್ರೋತೃಗಳಲೊಬ್ಬ, 'ಏನನ್ನು ಕೊಳ್ಳೋಣ?' ಎಂದು ಕೇಳಿದ. ಅದಕ್ಕೆ ಅಧ್ಯಕ್ಷರ ಉತ್ತರ: 'ಏನಾದರೂ ಸರಿಯೆ, ಕೊಳ್ಳುತ್ತಿರಿ.' ಜನರು ಕೊಳ್ಳಬೇಕಾದದ್ದು ಅವರಿಗೆ ಅವಶ್ಯಕವಾದ ಪದಾರ್ಥಗಳನ್ನಲ್ಲ. ಏನಾದರೂ ಸರಿಯೆ, ಕೊಳ್ಳುತಿರು ತಮ್ಮ!

ಈ ಪ್ರಚೋದನೆ ಜನರ ಮನಸ್ಸಿನ ಆಳಕ್ಕೆ ಇಳಿದು ಅಲ್ಲಿ ನೆಲೆಸಿ ಸದಾ ಅವರನ್ನು ಕೊಳ್ಳಲು ಹುರಿದುಂಬಿಸುತ್ತಿರಬೇಕು. ಇದಕ್ಕಾಗಿ ಹಲವಾರು ಉಪಾಯಗಳನ್ನು ಹುಡುಕಿದ್ದಾರೆ. ಒಂದನ್ನು—ಹೊಸ ಹೊಸ ಅವಶ್ಯಕತೆಗಳನ್ನು ಸೃಷ್ಟಿಸುವುದನ್ನು—ಆಗಲೇ ಪ್ರಸ್ತಾಪಿಸಿದ್ದೇನೆ. ಇನ್ನೊಂದು: ಜಾಹಿರಾತು. ನಾವೂ ಈ ದಿಕ್ಕಿನಲ್ಲಿ ಮುಂದುವರಿಯುತ್ತಿದ್ದೇವೆ—ಅದನ್ನು ಮುಂದುವರಿಕೆ ಎನ್ನಬಹುದಾದರೆ! ಯಾವುದೋ ಒಂದು ಕಂಪೆನಿ ಸೂಟಿನ ಬಟ್ಟೆಯ ಗುಣಗಳನ್ನು ಪ್ರಚಾರಮಾಡಬೇಕು. ಅವರ ಜಾಹಿರಾತಿನ ಚಿತ್ರದಲ್ಲಿ ಒಬ್ಬ ಯುವಕ ಮೀಸೆ (ಅದು ಎಂಥ ಮೀಸೆಯಾಗಬೇಕು, ನೊಣ ಮೀಸೆಯೋ

ಅಥವಾ 'ಲ' ಕ್ಕೆ 'ಲ'ವತ್ತು ಮೀಸೆಯೋ ಎಂಬುದನ್ನು ನಿರ್ಣಯಿಸಲು ಅವನು ತೊಂದರೆ ತೆಗೆದುಕೊಳ್ಳಬೇಕಾದ್ದಿಲ್ಲ. ಫ್ಯಾಷನ್ ಆಗಲೇ ನಿರ್ಧರಿಸಿದೆ. ಇವನೂ ಹಿಂಡಿನೊಡನೆ ಸೇರಿದರಾಯಿತು) ಗಡ್ಡಗಳಿಂದ ಶೋಭಿತನಾಗಿ ಆ ಕಂಪೆನಿಯ ಬಟ್ಟೆಯ ಸೂಟ್ ಹಾಕಿಕೊಂಡು ಠೀವಿಯಿಂದ ನಿಂತಿದ್ದಾನೆ. ಬಾಯಲ್ಲಿ ಸಿಗರೇಟ್ ಇದೆ. ಒಂದು ಕೈಯಲ್ಲಿ ಮದ್ಯಪಾತ್ರೆಯನ್ನು ಹಿಡಿದಿದ್ದಾನೆ. ಆವರಣಕ್ಕಿಂತ ಪ್ರದರ್ಶನವೇ ಹೆಚ್ಚಾಗುವಂಥ ವಸ್ತ್ರಗಳನ್ನು ಧರಿಸಿರುವ ಯುವತಿ ಅವನಿಗೆ ಮೆಚ್ಚಿಕೆಯ ಆಕರ್ಷಕ ನೋಟ 'glad eye'— ಬೀರುತ್ತಿದ್ದಾಳೆ. ಬಟ್ಟೆ, ಸಿಗರೇಟ್, ಮದ್ಯ, ಎಲ್ಲಕ್ಕೂ ಪ್ರಚಾರ ಸಿಕ್ಕಿದಂತಾಯಿತು. ಲೈಂಗಿಕ ಪ್ರಚೋದನೆಯೂ ಆಯಿತು. ಒಂದೇಟಿಗೆ ನಾಲ್ಕು ಹಣ್ಣು. ಇದು ನಮ್ಮ ಪತ್ರಿಕೆಗಳಲ್ಲಿ ಸಾಮಾನ್ಯವಾಗಿ ಕಾಣುವ ಜಾಹಿರಾತು. ಮಹಾತ್ಮಾಗಾಂಧಿಯವರು ತಮ್ಮ ಪತ್ರಿಕೆಗಳಲ್ಲಿ ಜಾಹಿರಾತಿಗೆ ಅವಕಾಶ ಕೊಡಲಿಲ್ಲವೆಂಬುದನ್ನು ಈ ಸಂದರ್ಭದಲ್ಲಿ ನೆನೆಯಬಹುದು.

ಅಮೆರಿಕದಲ್ಲಿ ಜಾಹಿರಾತಿನ ದಕ್ಷತೆ ನಮ್ಮಲ್ಲಿರುವುದಕ್ಕಿಂತ ಎಷ್ಟೋ ಪಟ್ಟು ಹೆಚ್ಚು. ಪ್ರಚಾರಸಾಧನಗಳೂ ಹೆಚ್ಚು. ಅದೊಂದು ಲಲಿತಕಲೆಯ ಮಟ್ಟಕ್ಕೇರಿದೆ. ಸರಳತೆಯನ್ನೂ ಸ್ವಾಭಾವಿಕತೆಯನ್ನೂ ಸಾಧಿಸುವುದಕ್ಕೆ ಅವರು ವಿಶೇಷಪ್ರಯತ್ನಮಾಡುತ್ತಾರೆ. ಅದನ್ನು ಕಲಿಸಲು ಶಾಲೆಗಳೂ ಕಾಲೇಜುಗಳೂ ಇವೆಯೆಂದು ಕೇಳಿದ್ದೇನೆ. 'Communication' ಮುಖ್ಯವಾಗಿ 'Mass Communication' ಈಗ ತಾನೇ ಒಂದು ಬೇರೆ ಶಾಸ್ತ್ರವಾಗಿ ಬೆಳೆಯುತ್ತಿದೆ. ನಮ್ಮಲ್ಲಿ ರೇಡಿಯೊ ಪ್ರಾರಂಭವಾಗಿ ಎಷ್ಟೋ ದಶಕಗಳಾಗಿವೆ. ಆದರೆ ಇನ್ನೂ (ಕನ್ನಡದ ಮಟ್ಟಿಗೆ ಹೇಳಬಹುದಾದರೆ) ನಾವು ಸ್ವಾಭಾವಿಕತೆಯನ್ನು ಸಾಧಿಸಿದ್ದೇವೆಂದು ಹೇಳುವುದು ಕಷ್ಟ. ಅಮೆರಿಕದಲ್ಲಿ ನಾನು ರೇಡಿಯೋ ಪ್ರಸಾರವನ್ನು ಹೆಚ್ಚಾಗಿ ಕೇಳಲಿಲ್ಲ. ಟೀವಿಯಲ್ಲಿ ವರ್ತಮಾನ ಕೇಳುವುದೇನೋ ನನಗೆ ಬಹಳ ಹಿತವಾಗಿತ್ತು. ಇಬ್ಬರೋ ಮೂವರೋ ಕುಳಿತಿರುತ್ತಾರೆ. ಪ್ರಸಾರದ ಮಧ್ಯೆ ತಮ್ಮ ತಮ್ಮಲ್ಲೇ ಒಂದೆರಡು ಮಾತಾಡಿಕೊಳ್ಳುತ್ತಾರೆ. ಒಬ್ಬರನ್ನೊಬ್ಬರು ಕರೆಯುವಾಗ ವಂಶನಾಮಗಳನ್ನು ಬಿಟ್ಟು 'ಜ್ಯಾಕ್', 'ಲ್ಯಾರಿ' ಎಂದು ಕ್ರೈಸ್ತನಾಮ (Christian names) ಗಳನ್ನೇ ಬಳಸುತ್ತಾರೆ. ಒಂದೊಂದು ಚಟಾಕಿ ಹಾರಿಸಿ ನಗುತ್ತಾರೆ. ಆ ದಿನವೂ ಮತ್ತು ಮಾರನೆಯ ದಿನವೂ ನಿಮಗೆ ಆಫೀಸಿಗೆ ಹೋಗಲು ಮಳೆಯಿಂದ ತೊಂದರೆಯಾಗಬಹುದೆ, ಸ್ವೆಟರ್ ತೆಗೆದುಕೊಂಡು ಹೋದರೆ ಒಳ್ಳೆಯದೆ, ವಾರಾಂತ್ಯದಲ್ಲಿ ಪಿಕ್‌ನಿಕ್ ಹೋಗಲು ಅನುಕೂಲವುಂಟೆ, ಹೋದರೆ ಟಾರ್ನೇ

ಡೋವಿಗೆ ಸಿಕ್ಕುವ ಭಯವಿಲ್ಲವೆ—ಹವಾಮಾನ ವಿಷಯಪ್ರಸಾರ ಮಾಡು ವವನು ನಗುಮುಖದಿಂದ ಹಾಸ್ಯ ಬೆರೆಸಿ ಈ ಸಲಹೆಗಳನ್ನೆಲ್ಲ ಕೊಡುತ್ತಾನೆ. ಕೊನೆಗೆ ಶುಭಮಸ್ತು (Have a nice time!) ಎಂದು ಹರಸಿ ತನ್ನ ಕೆಲಸ ಮುಗಿಸುತ್ತಾನೆ. ಇದೂ ಜಾಹಿರಾತೇ; ಆದರೆ ಅನುಕರಣೀಯವಾದದ್ದು. ಇದರಿಂದ ಆ ಟೇವಿ ಕಂಪೆನಿಯ ಕೀರ್ತಿ ಹೆಚ್ಚಿ ಅದರಲ್ಲಿ ಜಾಹಿರಾತಿನ ಕಾಲ ಕ್ಕಾಗಿ ಲಕ್ಷಗಟ್ಟಲೆ ಹಣ ತೆರಲು ವ್ಯಾಪಾರಿಗಳು ಹಿಂಜರಿಯುವುದಿಲ್ಲ. ಒಂದು ಘಂಟೆ ಕಾಲ ಪಡೆಯುವುದಕ್ಕೆ ಮಿಲಿಯನ್ ಡಾಲರುಗಳನ್ನು ಕೊಡುವು ದುಂಟೆಂದು ಕೇಳಿದ್ದೇನೆ. ನಾನೇ ಯಾರ ಮಾತು, ಮುಖಚಹರೆ, ಮುಗುಳು ನಗೆ, ಹೆಚ್ಚು ಆತ್ಮೀಯವಾಗಿಯೂ ಸರಳವಾಗಿಯೂ ಇದೆ ಎಂದು ಯೋಚಿಸಿ ಕೊಂಡು ಆ ಟೇವಿಗೆ ಟ್ಯೂನ್ ಮಾಡಿದ್ದೇನೆ. ಪ್ರಸಾರಕರಿಗೆ ತಮ್ಮ ಟೇವಿ ಜಾಲ ಅಭಿವೃದ್ಧಿಗೆ ಬರಲಿ, ತಮ್ಮ ಲಾಭ ಹೆಚ್ಚಲಿ ಎಂಬುದೇ ಮುಖ್ಯೋ ದ್ದೇಶವಾದರೂ ಜನರಿಗೆ ಸಂತೋಷವಾಗಲಿ ಎಂಬ ಅಪೇಕ್ಷೆಯೂ ಇದೆ. ಜೊತೆಗೆ ಅವರೂ ತಮ್ಮ ಪ್ರದರ್ಶನದಿಂದ ಆನಂದಪಡುತ್ತಿದ್ದರೆಂಬುದೂ ಸ್ಪಷ್ಟ ವಾಗಿ ಕಾಣುತ್ತಿತ್ತು.

ಜಾಹಿರಾತಿಗಾಗಿ ಅವರು ಅನುಸರಿಸುವ ಇತರ ಕೆಲವು ಮಾರ್ಗಗಳೂ ಅನುಕರಣೀಯವೇ. ನಾನು ನೈಲ್ಸ್‌ಗೆ ಹೋದಾಗ ರಾಮುವೂ ಅಲ್ಲಿಗೆ ಹೊಸಬ. ಒಂದು ವಾರದ ಹಿಂದೆ ಓಕ್‌ಪಾರ್ಕ್ ಉಪನಗರದಿಂದ ಅಲ್ಲಿಗೆ ಬಂದಿದ್ದ. ನಾನು ಹೋದ ತರುಣದಲ್ಲೇ ಒಂದು ದಿನ ಒಬ್ಬಾಕೆ ಫೋನ್ ಮಾಡಿ 'ಇವತ್ತು ಮಧ್ಯಾಹ್ನ ಮೂರು ಘಂಟೆಗೆ ಪುರಸತ್ತಿದೆಯೆ?' ಎಂದು ಡಯಾನಳನ್ನು ಕೇಳಿ ಆ ಹೊತ್ತಿಗೆ ಸರಿಯಾಗಿ ಬಂದಳು. ಆಕೆ ಯಾವುದೋ ಸಾರ್ವಜನಿಕ ಸಂಸ್ಥೆಯ ಕಾರ್ಯದರ್ಶಿ. 'ನೀವು ಎಲ್ಲಿಂದ ಬಂದಿರಿ, ನೈಲ್ಸ್‌ನ ಮೊದಮೊದಲ ಅನುಭವ ಹಿತವಾಗಿದೆಯೆ'—ಸ್ವಲ್ಪ ಹೊತ್ತು ಇಂಥ ಯೋಗ ಕ್ಷೇಮದ ಮಾತಾಡಿ ಅನಂತರ ಕೆಲವು ಕೈಪಿಡಿಗಳನ್ನೂ ಮಡಿಕೆಗಳನ್ನೂ (folders) ಕೊಟ್ಟಳು: ನೈಲ್ಸ್‌ನ ಭೂಪಟ; ಅಲ್ಲಿಯ ವ್ಯಾಪಾರಕೇಂದ್ರ ಗಳು, ಆಸ್ಪತ್ರೆಗಳು, ಷೆರಿಫ್‌ನ ಕಚೇರಿ, ಸ್ಕೂಲುಗಳು, ಚರ್ಚು, ಅಲ್ಲಿಂದ ಸ್ಕೋಕಿ (Skokie), ಮಾರ್ಟನ್ಸ್ ಗ್ರೌ (Morton's Grove) ಮುಂತಾದ ಉಪನಗರಗಳಿಗೆ ಹೋಗುವ ರಸ್ತೆಗಳು, ಇವೆಲ್ಲವನ್ನೂ ಸ್ಫುಟವಾಗಿ ಕಾಣು ವಂತೆ ಅಚ್ಚುಮಾಡಿತ್ತು. ಅಷ್ಟೇ ಅಲ್ಲದೆ ಇಲ್ಲಿನಾಯ್ ರಾಜ್ಯದ ಭೂಪಟ, ನೈಲ್ಸ್‌ನ ಪುಸ್ತಕಭಂಡಾರಕ್ಕೆ ಸಂಬಂಧಪಟ್ಟ ಕೈಪಿಡಿ ಮಡಿಕೆಗಳು, ಪೆನ್ನಿ, ವಾಲ್‌ಗ್ರೀನ್ಸ್, ಗೋಲ್ಡ್‌ಬ್ಲಾಟ್ಸ್ ಮುಂತಾದ ಭಾರಿ ವ್ಯಾಪಾರ ಸಂಸ್ಥೆಗಳ

ಜಾಹಿರಾತುಗಳು ಮುಂತಾದ್ದೆಲ್ಲವನ್ನೂ ಕೊಟ್ಟಳು. 'ನಿಮ್ಮ ಮನೆಯ ಹತ್ತಿರ ದಲ್ಲೇ ಗಾಲ್ಫ್‌ಮಿಲ್‌ಬ್ಯಾಂಕ್ ಇದೆ; ಅಲ್ಲಿ ಲೆಕ್ಕ ಇಟ್ಟುಕೊಂಡರೆ ಅನುಕೂಲ; ಇಂಥ ಸ್ಕೂಲುಗಳಲ್ಲಿ ಇಂಥ ಅನುಕೂಲಗಳುಂಟು,' ಎಂದು ಮುಂತಾಗಿ ಸಲಹೆಗಳನ್ನೂ ಕೊಟ್ಟಳು. 'We want you to feel that we want you here'(ನೀವು ನಮಗೆ ಬೇಕು ಎಂಬ ಭಾವನೆ ನಿಮಗೆ ಬರ ಲೆಂದು ನಮ್ಮ ಆಸೆ) ಎಂದು ಹೇಳಿ ತನ್ನ ಮಾತನ್ನು ಮುಗಿಸಿದಳು ; ತನ್ನ ಟೆಲಿಫೋನು ನಂಬರನ್ನು ಕೊಟ್ಟಳು.

ಅವಳ ಮಾತಿನಲ್ಲಿ ನಯ, ವಿನಯ, ಆಗಾಗ ಮೃದುವಾದ ನಗೆ, ನಮ್ಮ ಕಾಲವನ್ನು ಅನವಶ್ಯಕವಾಗಿ ವ್ಯರ್ಥಮಾಡಬಾರದೆಂಬ ಅರಿವು, ಸ್ನೇಹ ಬೆಳೆ ಸಲು ಬೇಕಾದಷ್ಟು ಆತ್ಮೀಯತೆ, ಇವೆಲ್ಲ ನಳಪಾಕವಾಗಿ ಬೆರೆದಿದ್ದವು. 'ಸ್ಮೈಲ್ಸ್ ನಲ್ಲಿ ಇರುವಷ್ಟು ಕಾಲ ಇವರಿಗೆ ಸುಖಕರವಾಗಲಿ' ಎಂಬ ಆಸೆ ಈಕೆಯಲ್ಲಿ ಜೀವಂತವಾಗಿದೆ, ಅದಕ್ಕೇ ಭೇಟಿಕೊಟ್ಟಿದ್ದಾಳೆ, ಎನ್ನಿಸಿತು. ಆ ಉದ್ದೇಶ ಆಕೆಯಲ್ಲಿರಲಿಲ್ಲವೆಂದೇಕೆ ಭಾವಿಸಬೇಕು! ಒಂದು ಮಟ್ಟದವರೆಗಾದರೂ 'ಇವರು ಸುಖವಾಗಿದ್ದರೆ ನಮಗೂ ಸುಖ' ಎಂಬ ತತ್ವವನ್ನು ಈ ಜನ ಗ್ರಹಿಸಿದ್ದಾರೆ. ಇದು ನಿಜ. ಜೊತೆಗೆ ಬಹುಶಃ ಅವಳು ಹೆಸರಿಸಿದ ಬ್ಯಾಂಕಿ ನವರೂ ವ್ಯಾಪಾರೀ ಸಂಸ್ಥೆಯವರೂ ಪ್ರಚಾರಕ್ಕಾಗಿ ಅವಳಿಗೆ ಹಣ ಕೊಟ್ಟಿರು ತ್ತಾರೆ—ಅದೂ ನಿಜ. ಅವಳು ಹೇಳಿದ್ದರಲ್ಲಿ ಯಾವುದೂ ಮೋಸವಲ್ಲ, ಎಲ್ಲ ಪ್ರಾಮಾಣಿಕವಾಗಿ ಕೊಟ್ಟ ವರ್ತಮಾನ. ಹೊಸದಾಗಿ ಊರಿಗೆ ಬಂದವರಿಗೆ ಇದರಿಂದ ಅನುಕೂಲ, ಆನಂದ. ಆದ್ದರಿಂದ ಇಂಥ ಪ್ರಚಾರ ಸ್ವಾಗತಾರ್ಹ. ಇದಕ್ಕೆಲ್ಲ ಹಣ ಒದಗಿಸುವುದು ಕಂಪೆನಿಗಳ ಜಾಹಿರಾತು.

ಪ್ರಚಾರದಲ್ಲಿರುವ ತೊಂದರೆಯೆಂದರೆ, ಪ್ರಚಾರಕ್ಕೆ ಹೊರಟವರು ಮೇಲೆ ಹೇಳಿದ ಮಟ್ಟದಲ್ಲಿ ನಿಲ್ಲುವುದಿಲ್ಲ. ತಮ್ಮ ಸರಕನ್ನು ಮಾರುವುದಕ್ಕೆ ಯಾವ ತಂತ್ರವನ್ನು ಬೇಕಾದರೂ ಹೂಡುತ್ತಾರೆ. ಲಾಟರಿಯೂ ಸ್ಟಾಂಪು ಗಳನ್ನು ಕೊಡುವುದೂ ಈಗ ನಮ್ಮಲ್ಲೂ ಚಾಲತಿಗೆ ಬಂದಿವೆ. ಇಷ್ಟು ರೂಪಾಯಿ ಗಳ ಸಾಮಾನು ಕೊಂಡರೆ ಇಷ್ಟು ಸ್ಟಾಂಪು; ಇಷ್ಟು ಸ್ಟಾಂಪು ಕೊಟ್ಟರೆ ಇಂಥ ಬಹುಮಾನ. ಇದರಲ್ಲಿ ಮೋಸವೇನೂ ಇಲ್ಲ; ಅಷ್ಟು ಸ್ಟಾಂಪು ಕೊಟ್ಟರೆ ಆ ಬಹುಮಾನವನ್ನು ಕೊಟ್ಟೇ ಕೊಡುತ್ತಾರೆ. ಮೋಸವಿರುವುದು 'ಆ ಬಹುಮಾನ ಬಿಟ್ಟಿ ಸಿಕ್ಕಿತು' ಎಂಬ ನಂಬಿಕೆಯನ್ನು ನಿಮ್ಮ ಮನಸ್ಸಿಗೆ ತರುವುದರಲ್ಲಿ. ವುಡ್ ಫೀಲ್ಡ್ ಸೂಪರ್ ಮಾರ್ಕೆಟ್‌ನಲ್ಲಿ ಸ್ಕಿನರ್ ಪರಿಚಯ ಮಾಡಿಕೊಟ್ಟ ವ್ಯಾಪಾರಿ ಇದನ್ನು ಮುಚ್ಚುಮರೆಯೇನೂ ಇಲ್ಲದೆ ನನಗೆ ವಿವರಿಸಿದ :

"ಏನೂ ತೆರದೆ ಸಾಮಾನೊಂದು ನಿಮಗೆ ದಕ್ಕಿತು ಎನ್ನುವುದು ಭ್ರಮೆ. ನಾವು ಬೆಲೆ ಹಾಕುವಾಗ ಜಾಹಿರಾತು, ಸಿಬ್ಬಂದಿ, ಅಂಗಡಿಯ ಅಲಂಕಾರ, ಇದನ್ನೆಲ್ಲ ಲೆಕ್ಕಕ್ಕೆ ತೆಗೆದುಕೊಳ್ಳುವಂತೆ ಈ ಸ್ಟ್ಯಾಂಪುಗಳನ್ನೂ ಲೆಕ್ಕಕ್ಕೆ ತೆಗೆದು ಕೊಳ್ಳುತ್ತೇವೆ; ಅದರ ಮೇಲೆ ನಫೆ ಹಾಕುತ್ತೇವೆ. ಅದರಿಂದ ನಮ್ಮ ವ್ಯಾಪಾರ ಹೆಚ್ಚದಿದ್ದರೂ ನಮಗೆ ನಷ್ಟವಂತೂ ಆಗುವುದಿಲ್ಲ."

ನಾನು ಒಪ್ಪಿದೆ: "ಇದು ಎಲ್ಲರಿಗೂ ಗೊತ್ತಲ್ಲವೆ? ಸಾಧಾರಣ ಬುದ್ಧಿ ಯಿದ್ದರೆ ಸಾಕು, ತಿಳಿದೇ ತಿಳಿಯುತ್ತದೆ." (It is just commonsence).

"ಬುದ್ಧಿವಂತಿಗೆ ಅಷ್ಟೇನೂ ಸಾಧಾರಣವಲ್ಲ. ಇದು ಕ್ಲೀಷೆ, ಆದರೆ ನಿಜ. ಅಲ್ಲದೆ ಇದರಲ್ಲಿ ಮಾನವಸ್ವಭಾವವನ್ನು ಕುರಿತ ತಿಳಿವಳಿಕೆಯೂ ಸೇರಿದೆ. ಆ ಸ್ಟ್ಯಾಂಪುಗಳನ್ನು ಶೇಖರಿಸಿ ಇಡುವ ಜನ ಕಡಿಮೆ!"

"ಅಂದ ಮೇಲೆ 'the customer is always right' (ಗಿರಾಕಿ ಹೇಳಿದ್ದೆಲ್ಲ ಸರಿ) ಅನ್ನುವುದು ಸುಳ್ಳು! He is always wrong, (ಅವನು ಯಾವಾಗಲೂ ತಪ್ಪೇ ಮಾಡುತ್ತಾನೆ) ಅನ್ನಬೇಕು!"

"ಹಾಗಂದೋರುಂಟೆ! ಬಾಯಲ್ಲಿ ಆಡತಕ್ಕ ಮಾತಲ್ಲ, ಅದು....ಒಂದು ತರದಲ್ಲಿ ನೋಡಿದರೆ ಗಿರಾಕಿ ಹುಚ್ಚ ಅನ್ನೋದಕ್ಕೂ ಆಗೋದಿಲ್ಲ. ನಾಳೆ ಕ್ರಿಸ್‌ಮಸ್‌ನಲ್ಲಿ ರಿಟೇಲ್ (retail) ಅಂಗಡಿಗಳಲ್ಲೆಲ್ಲ (ಇದನ್ನೆಲ್ಲ ಹೇಳು ತ್ತಿದ್ದವನು 'ಹೋಲ್‌ಸೇಲ್' ವ್ಯಾಪಾರಿ) ದೊಡ್ಡ ಸೇಲ್ ಮಾಡುತ್ತಾರೆ. ನಾಲ್ಕು ಡಾಲರಿನ ಸಾಮಾನಿಗೆ ವರ್ಷವೆಲ್ಲ ಆರು ಡಾಲರ್ ಹಾಕಿರುತ್ತಾರೆ. ಕ್ರಿಸ್‌ಮಸ್‌ನಲ್ಲಿ ಅದನ್ನು ಐದು ಡಾಲರಿಗೆ ಇಳಿಸುತ್ತಾರೆ. ಇದರಿಂದ ಗಿರಾಕಿಗೆ ಒಂದು ಡಾಲರ್ ಉಳಿಯುವುದು ಸುಳ್ಳಲ್ಲವಷ್ಟೆ! ಇದೆಲ್ಲ ಮಾನವಸ್ವಭಾವ ವರ್ತಿಸುವ ರೀತಿ. ನಾನು ಗಿರಾಕಿಯಾಗಿ ಯಾವುದಾದರೂ ಸಾಮಾನನ್ನು ಕೊಳ್ಳಹೋದರೆ ನಾನೂ ನಿಮ್ಮಂತೆಯೇ ವರ್ತಿಸುತ್ತೇನೆ."

ಆತ ಸ್ವಲ್ಪ ತಮಾಷೆಗಾರನಾದ್ದರಿಂದ ಇಷ್ಟೆಲ್ಲ ಮಾತಾಡಿದ. ಅವನು ಹೇಳಿದ್ದು ಸರ್ವಥಾ ನಿಜ. ಮೇಲೆ ಹೇಳಿದ್ದೊಂದೂ ನಮಗೆ ತಿಳಿಯದ ವಿಷಯ ವಲ್ಲ. ಆದರೂ ನಾಳೆ ನಾವು ಆತ ಹೇಳಿದಂತೆಯೇ ವರ್ತಿಸುತ್ತೇವೆ. ಜಾಹಿ ರಾತುಗಳನ್ನು ಸಿದ್ಧಪಡಿಸುವವರು ಮಾನವಸ್ವಭಾವದ ಈ ವೈಚಿತ್ರ್ಯಗಳನ್ನು ಬುದ್ಧಿವಂತಿಕೆಯಿಂದ ತಮ್ಮ ಲಾಭಕ್ಕಾಗಿ ಉಪಯೋಗಿಸಿಕೊಳ್ಳುತ್ತಾರೆ.

"ನಿಮ್ಮ ಮನೆಯಲ್ಲಿದೆಯಲ್ಲ, ಆ ಹಳೆಯ ಗಾಜಿನ ಸಾಮಾನು, ಅದೆ ಲ್ಲಾದರೂ ನಿಮ್ಮ ಅತಿಥಿಗಳ (ಅಥವಾ ನಿಮ್ಮ ಪ್ರೇಯಸಿಯ) ಕಣ್ಣಿಗೆ ಬಿದ್ದೀತು! ಅದರ ಕಾಲ ಆಗಿಹೋಯಿತು—It is dated. ನಮ್ಮ ಗಾಜಿನ

ಸಾಮಾನಿನ (glassware) ರೇಖೆ ರೇಖೆಯಲ್ಲೂ ಆಧುನಿಕತೆ ಎದ್ದು ಕಾಣು ತ್ತದೆ !"

"ನಮ್ಮ ಪೂರ್ವಿಕರಿಗೆ ಉಚ್ಚತರದ ಸುಸಂಸ್ಕೃತ ಜೀವನಕಲೆ (The art of gracious living)ಸಿದ್ಧಿಸಿತ್ತು. ಈಗ ನಾವು ಪ್ರಾಕೃತರಂತೆ ಪ್ರಯೋಜನಪ್ರಧಾನವಾದ ಯುಗದಲ್ಲಿ (in a vulgar utilitarian age) ಸಿಕ್ಕಿಬಿದ್ದಿದ್ದೇವೆ. ನಿಮ್ಮ ಮನೆಯ ದಿವಾನಖಾನೆಯೊಂದಕ್ಕಾದರೂ ನಮ್ಮ ಪೀರಿಯಡ್ ಫರ್ನಿಚರ್ ಅನ್ನು ತರಿಸಿಕೊಳ್ಳಿ. ಅಲ್ಲಿ ಕಲೋನಿಯಲ್ (Colonial) ಕಾಲದ ಆವರಣ ಮತ್ತೆ ಸೃಷ್ಟಿಯಾಗಲಿ !"

ಇವೆರಡೂ ಒಂದೇ ದಿನ—ಆದರೆ ಒಟ್ಟಿಗೆ ಅಲ್ಲ—ನನ್ನ ಗಮನಕ್ಕೆ ಬಂದ ಜಾಹಿರಾತುಗಳು. ಮೊದಲನೆಯದು 'ಹಳೆಯದನ್ನು ಎಸೆಯಿರಿ, ಹೊಸದನ್ನು ಕೊಳ್ಳಿ' ಎಂದು ಬೋಧಿಸಿತು. ಎರಡನೆಯದು 'ಹೊಸದನ್ನು ಎಸೆಯಿರಿ, ಹಳೆಯದನ್ನು ಕೊಳ್ಳಿ' ಎಂದು ಬೋಧಿಸಿತು. ಇವೆರಡೂ ಒಟ್ಟಿಗೆ ಬಂದರೂ ಬಹುಶಃ ಅವುಗಳಲ್ಲಿರುವ ವಿರೋಧಾಭಾಸ ಅನೇಕರಿಗೆ ಗೋಚರವಾಗುವುದಿಲ್ಲ. ಅತ್ಯಾಧುನಿಕ ಅಭಿರುಚಿಯನ್ನು ಪ್ರದರ್ಶಿಸುವ ಮನೋವೃತ್ತಿ, ಪೀರಿಯಡ್ ವಾತಾವರಣಕ್ಕೆ ಮನಸೋಲುವ ಪ್ರತಿಷ್ಠಾಪೂಜಕ 'ಬಾಸ್ಟನ್ ಬ್ರಾಹ್ಮಣ' ಮನೋವೃತ್ತಿ—ಇವೆರಡೂ ನಮ್ಮೆಲ್ಲರಲ್ಲೂ ಇವೆ. ಜಾಹಿರಾತುಗಾರರು ಇವೆರಡನ್ನೂ ಉಪಯೋಗಿಸಿಕೊಳ್ಳುತ್ತಾರೆ.

ನಿಜವಾಗಿಯೂ ನಾವು ಈ ಜಾಹಿರಾತುಗಾರರು ಭಾವಿಸುವಷ್ಟು ಮಂದಮತಿಗಳೆ ಎಂದು ನನಗೆ ನಾನೇ ಪ್ರಶ್ನೆ ಹಾಕಿಕೊಂಡಿದ್ದೇನೆ ; ಹೌದು ಎಂದು ಉತ್ತರವನ್ನೂ ಕೊಟ್ಟುಕೊಂಡಿದ್ದೇನೆ. ನಮ್ಮ ಬುದ್ಧಿ ಮಂದವಲ್ಲದಿರಬಹುದು. ಆದರೆ ಹೊಸ ವಸ್ತುವನ್ನು ತೆಗೆದಿಟ್ಟುಕೊಳ್ಳಬೇಕೆಂಬ ಆಸೆ ಸ್ವಲ್ಪವಾದರೂ ಇರುತ್ತದೆ. ಅದರ ಜೊತೆಗೆ ಜಾಹಿರಾತುಗಾರನ ಚಾಕಚಕ್ಯವೂ ಸೇರಿದರೆ ನಮ್ಮ ಬುದ್ಧಿಯ ಚುರುಕು ಕಡಮೆಯಾಗುತ್ತದೆ. ಚಪ್ಪಲಿಯ ಬೆಲೆ 17.95 ಎಂದು ಬರೆದಿರುವುದನ್ನು ನೋಡಿದರೆ ಈಗಲೂ ನನ್ನ ಮನಸ್ಸು 'ಹದಿನೇಳೂ ಚಿಲ್ಲರೆ' ಎಂದುಕೊಳ್ಳುತ್ತದೆ. ಓಲ್ಡ್ಸ್ ಮೊಬೀಲ್ ಟೋರೊನಾಡೊ ! ಟ್ವೆಂಟಿನೈನ್ ನೈಂಟಿಫೈವ್ (Twentynine ninetyfive), ಅಷ್ಟೆ! ಕೇವಲ ಟ್ವೆಂಟಿನೈನ್ ನೈಂಟಿಫೈವ್ ! ನೀವು 500 ಮೈಲಿಗಿಂತ ಕಡಮೆ ದೂರದಲ್ಲಿದ್ದರೆ, ಕಾಲ್ ಕಲೆಕ್ಟ್[1] (Call collect)!" ಈ ಜಾಹಿರಾತನ್ನು ಕೇಳಿದಾಗ ನನ್ನ

1 ಕಾಲ್ ಕಲೆಕ್ಟ್ :—ನೀವು ಯಾರಿಗೆ ಫೋನ್ ಮಾಡುತ್ತೀರೋ ಅವರೇ ಆ ಫೋನ್‌ಕಾಲ್‌ನ ಖರ್ಚು ವಹಿಸುವುದಾದರೆ, ಅದು 'ಕಾಲ್ ಕಲೆಕ್ಟ್'.

ಜೊತೆಯಲ್ಲಿದ್ದವರೊಬ್ಬರು "Just two thousand and odd! Toronado is a good car you know" (ಕೇವಲ ಎರಡೂ ಚಿಲ್ಲರೆ ಸಾವಿರ. ಟೋರೊನಾಡೊ ಒಳ್ಳೆಯ ಕಾರ್) ಎಂದರು. ಆ 'ಚಿಲ್ಲರೆ'ಯ ಪ್ರಮಾಣ 995 ಎಂಬುದು ಅವರ ಮನಸ್ಸಿಗೆ ಇಳಿದಿರಲಿಲ್ಲ.

"ಈ ದಿವಾನಖಾನೆಯ ಸೆಟ್ಟನ್ನು (living-room set) ನೋಡಿ. ನಿಮ್ಮ ಶಕ್ತಿಗೆ ಮೀರಿದ್ದು ಅಂತೀರ? ಹ ಹ ಹ ! ಹಿಂದಿನ ಕಾಲದಲ್ಲಿ ಹಾಗಿತ್ತು, ಈಗಿಲ್ಲ. ಇದರ ಮೊದಲ ಬೆಲೆ 299-95 ; ಈಗ 110 ರಿಂದ. ಈ ಕುರ್ಚಿಯ ಮೊದಲ ಬೆಲೆ 99-95; ಈಗ 30 ರಿಂದ." ಈ ಜಾಹಿರಾತಿನಲ್ಲಿ ನಮ್ಮ ಕಣ್ಣಿಗೆ ಮೊದಲು ಕಾಣುವುದು 299 ಕ್ಕೂ 110 ಕ್ಕೂ ಇರುವ ವ್ಯತ್ಯಾಸ. 110ರ ಮುಂದಿರುವ 'ರಿಂದ'ವನ್ನು ನಾವು ಗಮನಿಸುವುದಿಲ್ಲ. ಹಿಂದಿನ ಬೆಲೆಯನ್ನು ಹೇಳುವಾಗ ಪರಮಾವಧಿ ಬೆಲೆಯನ್ನು ಮಾತ್ರ ಹೇಳುವುದು, ಇಂದಿನ ಬೆಲೆ ಹೇಳುವಾಗ ಕನಿಷ್ಠ ಬೆಲೆಯನ್ನು ಮಾತ್ರ ಹೇಳಿ ಅದರ ಜೊತೆಗೆ (ಸುಳ್ಳಿನ ಆಪಾದನೆ ತಪ್ಪಿಸಿಕೊಳ್ಳುವುದಕ್ಕಾಗಿ) 'ರಿಂದ' ಸೇರಿಸುವುದು.

ಈ ಜಾಹಿರಾತುಗಳಲ್ಲಿ ನಿಜವೆಷ್ಟೊ ಸುಳ್ಳೆಷ್ಟೊ—ಅಂತೂ ಅವು ಅಮೆರಿಕದಲ್ಲಿ ಭೂಮಿಯಿಂದ ಅಂತರಿಕ್ಷದವರೆಗೂ ಹಬ್ಬಿವೆ. ಅಂಗಡಿಗಳ ತಲೆಬಾಗಿಲಿನಲ್ಲಿರುವ ಬೋರ್ಡುಗಳು; ಜನ ನಿಮ್ಮ ಕೈಗೇ ಕೊಡುವ ಮಡಿಕೆಗಳು; ಛಾವಣಿಯ ಮಟ್ಟದಲ್ಲಿರುವ ನಿಯಾನ್ ಸೈನುಗಳು ಮತ್ತು ಅವುಗಳ ಜೊತೆಗೆ ನಮ್ಮ ಗಮನ ಸೆಳೆಯುವುದಕ್ಕಾಗಿ ಕಾಲವನ್ನೂ ಉಷ್ಣಾಂಶವನ್ನೂ ತೋರಿಸುವ ಸೈನುಗಳು (ಕಾಲ ತೋರಿಸುವುದು ಗಡಿಯಾರವಲ್ಲ, ಎಷ್ಟು ಘಂಟೆ ಎಷ್ಟು ನಿಮಿಷ ಎನ್ನುವುದನ್ನು ನಿಸ್ಪಷ್ಟವಾಗಿ ಸಂಖ್ಯೆಗಳಲ್ಲೇ ತೋರಿಸುತ್ತಾರೆ : (ಕಾಲ) 11.08, (ಉಷ್ಣಾಂಶ) 78°) ; ಇನ್ನೂ ಮೇಲೆ ಮೋಡಗಳ ಹಿನ್ನೆಲೆಯಿಂದ ಎದ್ದು ಕಾಣುವ ಜಾಹಿರಾತು—ಪ್ರಯಾಣ ಮಾಡುವಾಗ ಅಮೆರಿಕದಲ್ಲಿ ಎಲ್ಲೆಲ್ಲೂ ನಾಲ್ಕಾರು ಫರ್ಲಾಂಗುಗಳ ದೂರದಿಂದಲೂ ಆಕಾಶದಲ್ಲಿ ಮೆಕ್‌ಡಾನಲ್ಡ್ ರೆಸ್ಟೊರಾಂಟುಗಳ ಬೃಹತ್ಪ್ರಮಾಣದ M ಅಕ್ಷರ ಕಾಣುತ್ತದೆ. RAMADA INN ನ ಹೆಸರು ಕಾಣುತ್ತದೆ ; ಕೊನೆಗೆ ಸ್ವಲ್ಪ ಕೆಳಮಟ್ಟದಲ್ಲಿ ಹಾರುವ ಸಣ್ಣ ಏರೋಪ್ಲೇನಿಗೆ ಬಾಲಂಗೋಚಿ ಕಟ್ಟಿ ಅದರ ಮೇಲೆ ಸರಕುಗಳ ಹೆಸರು. ಅವರು ಉಪಯೋಗಿಸದ ಸಾಧನವೇ ಇಲ್ಲ. ಅವರ ಪ್ರಚಾರಕಾರ್ಯದಲ್ಲಿ ನಾವೂ ಸಹಕರಿಸಬೇಕಾಗುತ್ತದೆ! ನಾವು ವಿಸ್ಕಾನ್ಸಿನ್ ಡೆಲ್ಸ್‌ನಿಂದ ಹೊರಟಾಗ ಕಾರಿನ ಹಿಂಭಾಗದಲ್ಲಿ ಡಿಕ್ಕಿಯ ಮೇಲೊಂದು 'ಸ್ಟಿಕರ್' ಇತ್ತು : Dont fail to see Tommy Bartlet's Water-

show ! (ಟಾಮಿ ಬಾರ್ಟ್‌ಲೆಟ್‌ನ ನೀರಾಟ ಪ್ರದರ್ಶನವನ್ನು ನೋಡದಿರಬೇಡಿ !) ನಮ್ಮ ಮೆಕ್‌ಮಿಲನ್‌ರ ಕ್ಯಾಂಪ್-ಅ-ವ್ಹೈಲ್‌ನ ಜಾಹಿರಾತು ಲಿಂಕನ್ ಇನ್ನೂ 20-30 ಮೈಲಿ ಇರುವಾಗಲೇ ಆರಂಭವಾಗುತ್ತದೆ, ಅದಿರಲಿ, ಅವರು ಒಂದು ಸಾರಿ ಬಂದಿದ್ದು ಹೊರಟ ಮೇಲೆ ನಮ್ಮ ಮನೆಯ ಗರಾಜಿನ ಗೋಡೆಯ ಮೇಲೆ ಒಂದು ಕಡೆ ನೀಟಾಗಿ ಅಂಟಿಸಿದ ಜಾಹಿರಾತು :

CAMP AWHILE AT CAMP-A-WHILE
RR 2 LINCOLN–ILL.
NICHOLSON ROAD, HALF A MILE NORTH OF U.S. 66
PHONE 217-735-9922

ಕನ್ನಡ ಅನುವಾದ : 'ಕ್ಯಾಂಪ್-ಅ-ವ್ಹೈಲ್'ನಲ್ಲಿ ಸ್ವಲ್ಪ ಹೊತ್ತು ಬಿಡಾರ ಮಾಡಿ, ಹಳ್ಳಿರಸ್ತೆ 2, ಲಿಂಕನ್-ಇಲ್ಲಿನಾಯ್
ಯು. ಎಸ್. 66ನೇ ಹೆದ್ದಾರಿಯ ಉತ್ತರಕ್ಕೆ ½ ಮೈಲಿಯಲ್ಲಿರುವ ನಿಕಲ್ಸನ್ ರಸ್ತೆ
ಫೋನ್ : 217–735–9922

(ಕ್ಯಾಂಪ್ ಅವ್ಹೈಲ್ ಅಂದರೆ ಸ್ವಲ್ಪ ಹೊತ್ತು ಬಿಡಾರಮಾಡಿ ಎಂದೇ ಅರ್ಥ.)

ನಾನು ಅವರನ್ನು ಕೇಳಿದೆ: "ಏನು ನಮ್ಮನ್ನೂ ಎಳೆದುಬಿಟ್ಟಿರಲ್ಲ, ನಿಮ್ಮ ಪ್ರಚಾರಕ್ಕೆ?" ನಾನು ಅವರ ವ್ಯವಹಾರಜ್ಞಾನವನ್ನು (business sense) ಗಮನಿಸಿದೆನಲ್ಲ ಎಂದು ಆತನಿಗೆ ಬಹಳ ಸಂತೋಷ. "ಅದು ಅಮೆರಿಕನ್ನನ ರಕ್ತದಲ್ಲೇ ಸೇರಿದೆ" ಎಂದರು.

ಈ ಪುಸ್ತಕದಲ್ಲೂ ನಾನು ಅವರಿಗೆ ಪ್ರಚಾರ ಕೊಟ್ಟಂತಾಯಿತು : ನಾನು ಅಮೆರಿಕನ್ನನಾಗಿದ್ದರೆ ಅವರಿಗೊಂದು ಬಿಲ್ ಕಳಿಸುತ್ತಿದ್ದೇನೋ !

ಮೆಕ್‌ಮಿಲನ್ ಹೇಳಿದ್ದು ನಿಜ. ಅದು ಅಮೆರಿಕನ್ನನ ರಕ್ತದಲ್ಲೇ ಸೇರಿದೆ. ಅದು ಅವರ ಮಾತಿನಲ್ಲೂ ಸೇರಿದೆ. ಅವರ ನುಡಿಗಟ್ಟಿನಲ್ಲಿ ಕೂಡ ವ್ಯಾಪಾರೀ ಮನೋವೃತ್ತಿ ಕಾಣುತ್ತದೆ. ಅವರು ನಿಮಗೇನಾದರೂ ಸಲಹೆ ಕೊಡಬೇಕಾದರೆ 'I should like to sell you this idea' (ಈ ಅಭಿಪ್ರಾಯವನ್ನು ನಿಮಗೆ ಮಾರಬೇಕೆನ್ನಿಸುತ್ತದೆ) ಎನ್ನುವುದುಂಟು. ಹಾಗೆಯೇ ನಿಮ್ಮ ಸಲಹೆ ಅವರಿಗೆ ಒಪ್ಪಿಗೆಯಾದರೆ 'sold !' (ಮಾರಿದ್ದಾಯಿತು !) ಎಂದೋ ಅಥವಾ 'I'll buy it' (ಅದನ್ನು ನಾನು ಕೊಳ್ಳುತ್ತೇನೆ) ಎಂದೋ ಹೇಳುತ್ತಾರೆ,

ಅಮೆರಿಕದ ವಾತಾವರಣದಲ್ಲಿ ಈ ಪ್ರಚಾರದ ಹುಯಿಲು ಅವಶ್ಯಕವೇನೋ. ಅಲ್ಲಿಯ ಜೀವನಕ್ರಮದಲ್ಲಿ ಸ್ಪರ್ಧೆಗೆ ಬಹು ಮುಖ್ಯವಾದ ಸ್ಥಾನವಿದೆ.

ಇವತ್ತು ಒಬ್ಬ ಒಂದು ಬಗೆಯ ಹಲ್ಲುಪುಡಿಯನ್ನು ತಯಾರಿಸಿದರೆ ನಾಳೆ ಮತ್ತೊಬ್ಬ ಅದಕ್ಕೆ ಮತ್ತೇನೋ ಒಂದು ಸಾಮಾನನ್ನು ಸೇರಿಸಿ (ಅಥವಾ ಸೇರಿಸಿವೆಯೆಂದು ಹೇಳಿ) ಅದನ್ನು "ಅದ್ಭುತವಾದ ದಂತಶುಭ್ರಕ! ಸೋಮೋ ಡೈನ್ ಅನ್ನು ಒಳಗೊಂಡ ದಂತಶುಭ್ರಕ ಇದೊಂದೇ!" ಎಂದು ಪ್ರಚಾರ ಮಾಡುತ್ತಾನೆ. ಸೋಮೋಡೈನ್ ಎಂಬುವೇನು ಎಂದು ಗಿರಾಕಿ ಕೇಳುವುದಿಲ್ಲ! ಸುಮಾರು 1910–15ರಲ್ಲಿ ಭಾರತೀಯರೆಲ್ಲರಿಗೂ 'ಸಾಬೂನು' ಎಂದರೆ ಒಂದೇ ಅರ್ಥ: ಸನ್‌ಲೈಟ್ ಸಾಬೂನು. ಹಾಗಿದ್ದರೂ ಲೀವರ್ ಬ್ರದರ್ಸ್ ಪ್ರಚಾರ ಮಾಡಿಯೇ ಮಾಡುತ್ತಿದ್ದರು. ನನಗೆ ತಿಳಿದಮಟ್ಟಿಗೆ ಭಾರತದಲ್ಲಿರುವುದು ಎರಡೇ ಬಗೆಯ ಕ್ಷಣಸಿದ್ಧ ಕಾಫಿ; ಅಮೆರಿಕದಲ್ಲಿ ಹತ್ತಾರು ಬಗೆಯ (brand ನ) ಕಾಫಿಗಳಿವೆ. ಆದ್ದರಿಂದ ಪ್ರಚಾರ ಅವಶ್ಯಕ. ಬಹು ಸೊಗಸಾಗಿದ್ದ ಜಾಹಿರಾತೊಂದರ ನೆನೆಪಿದೆ: "ಅಮೆರಿಕನ್ನರಿಗೆ ಪ್ರಿಯವಾದ ಪಾನೀಯ—ಕಾಫಿ. ನಮ್ಮ ಮನೆಯವರಿಗಂತೂ ಕಾಫಿಯೆಂದರೆ ಪ್ರಾಣ, ಅದರಲ್ಲಿರುವ ಒಂದೇ ಒಂದು ದುರ್ಗುಣ: ಕಹಿ. ನನ್ನ ಇನ್-ಲಾಗಳು (in-laws, ಅಂದರೆ ಅತ್ತೆ ಮಾವ ಮೊದಲಾದವರು; ಮದುವೆಯಾದ ಮೇಲೆ ಆ ಕಾರಣದಿಂದಾಗಿ ಬಂಧುಗಳಾದವರು) ಮೊನ್ನೆ ಬಂದಾಗ ಹೇಳಿದರು: 'ನೋಡಮ್ಮ ನೀನು ಮಾಡುವ ಕಾಫಿ ಬಲು ಚೆನ್ನಾಗಿ ಇರುತ್ತೆ. ಆದರೆ ಕಹಿ ಸ್ವಲ್ಪ ಹೆಚ್ಚಲ್ಲವೆ?' ನನ್ನ ಮುಖ ಸಪ್ಪಗಾಯಿತು. ಈಗ ಮ್ಯಾಕ್ಸ್‌ಪ್ಯಾಕ್ (ಹೆಸರು ನನಗೆ ಸರಿಯಾಗಿ ನೆನಪಿಲ್ಲ) ಕಾಫಿ ತರಿಸುತ್ತಿದ್ದೇನೆ. ಅದರಲ್ಲಿ ರುಚಿ ಇದೆ, ಕಹಿ ಇಲ್ಲ. ಈಗ ಎಷ್ಟು ಜನ ಇನ್-ಲಾಗಳು ಬಂದರೂ ಭಯವಿಲ್ಲ! ಕಾಫಿ ಈಸ್ ಬೆಅರ್ ಇಫ್ ಇಟ್ ಈಸ್ ನಾಟ್ ಬಿಅರ್!" (ಇಲ್ಲಿನಾಯ್ ಪ್ರಾಂತದ ಸುತ್ತ ಮುತ್ತಿನ ಜನರಿಗೆ ಅದೇಕೋ ಟಕಾರವನ್ನು ಕಂಡರಾಗದು. ಆದುದರಿಂದ ಬೆಟರ್ ಬಿಟರ್ (better, bitter) ಪದಗಳು ಬೆ ಆರ್ ಬಿ ಅರ್ ಆಗುತ್ತವೆ! ಇಂಗ್ಲಿಷ್ ವಾಕ್ಯದ ಅರ್ಥ: ಕಾಫಿ ಕಹಿ ಇಲ್ಲದಿದ್ದರೆ ಬಹಳ ಚೆನ್ನಾಗಿರುತ್ತದೆ.

ಈ ಜಾಹಿರಾತನ್ನು ಟೀವಿಯಲ್ಲಿ ನೋಡುತ್ತಿದ್ದಾಗ ನಾನೇ ಆ ಮಹಿಳೆಯ ಮನೆಯಲ್ಲಿ ಕುಳಿತು ಸಲಿಗೆಯಿಂದ ಮಾತಾಡುತ್ತಿದ್ದೇನೆ ಎನ್ನುವಷ್ಟು ಆತ್ಮೀಯತೆಯ ಅನುಭವವಾಯಿತು.

ಮೇಲೆ ಕಂಡ ಜಾಹಿರಾತುಗಳಲ್ಲಿ ಕೆಲವು ನಮ್ಮನ್ನು ನಗಿಸಬಹುದು. ಇನ್ನು ಕೆಲವು ಜನರಿಗೆ ಮಂಕುಬೂದಿ ಎರಚಬಹುದು; ವೃತ್ತಪತ್ರಿಕೆಗಳಲ್ಲಿ ಪುಟಗಳೆಲ್ಲವನ್ನೂ ಆಕ್ರಮಿಸಿ ಕಾಗದವನ್ನು ಪೋಲು ಮಾಡಬಹುದು—ನಮ್ಮ ಮನೆಗೆ ತರಿಸುತ್ತಿದ್ದ ಪತ್ರಿಕೆಯಲ್ಲಿ ಸಮಾಚಾರ 15–20 ಪುಟವಾದರೆ ಜಾಹಿ

ರಾತು 200 ಪುಟ! ಇವುಗಳ ಹಾವಳಿಗಿಂತ ಹೆಚ್ಚು ಕೆಡಕುಮಾಡುವ ಜಾಹಿರಾತುಗಳಿಗೂ ಅಭಾವವಿಲ್ಲ. ಅವು ಸಮಾಜದ ವಮೌಲ್ಯಗಳನ್ನೇ ತಲೆಕೆಳಗು ಮಾಡುತ್ತವೆ; ಸಮಾಜ ವ್ಯವಸ್ಥೆಯನ್ನು ಕುಟ್ಟಿ ಕೊರೆದಂತೆ ಕೊರೆದು ಅದರ ಸತ್ವವನ್ನು ನಾಶಮಾಡುತ್ತವೆ. ಕೆಳಗಿರುವುದು ಇಂಥ ಒಂದು ಜಾಹಿರಾತಿನ ಭಾವಾನುವಾದ :

"ಪ್ರೇಮಿಗಳಿಗೆ ಮಾರ್ಗದರ್ಶನ! ನಮ್ಮ....ದೇಶದ....ಊರಿಗೆ ಬನ್ನಿ! ಇದು ಪ್ರೇಮಿಗಳಿಗೆ ಸೊಗಸಾದ ಸ್ಥಳ. ಇಲ್ಲಿಯ ಜನ ಪ್ರೇಮದ ಮತ್ತು ಪ್ರೇಮಿಗಳ ವಿಷಯದಲ್ಲಿ ಬಹಳ ಉದಾರಮನಸ್ಕರು, ಹೋಟಲುಗಳಲ್ಲಿ ಮ್ಯಾನೇಜರಿಂದ ಮಾಣಿಗಳವರೆಗೆ ಎಲ್ಲರೂ ಜಾಣಕುರುಡರು, ಜಾಣ ಕಿವುಡರು! ನಿಮಗೆ ಪ್ರೇಮದ ಸಂಗಾತಿ ಇನ್ನೂ ಸಿಕ್ಕಿಲ್ಲ ಎನ್ನುತ್ತೀರಾ? ಹಾಗಾದರೆ ನಮ್ಮ ಊರು ನಿಮಗೆ ಹೇಳಿ ಮಾಡಿಸಿದ ಸ್ಥಳ!"

ಇದು ಯಾವ ಬಗೆಯ ಪ್ರೇಮವನ್ನು ಪ್ರಚೋದಿಸುತ್ತದೆಯೆಂಬುದು ಸ್ಪಷ್ಟವಾಗಿಯೇ ಇದೆ. ಆ 'ಪ್ರೇಮ' ಎಲ್ಲೂ ಹೊಸದಲ್ಲ. ಆದರೆ ಮೇಲಿನ ಜಾಹಿರಾತಿನಲ್ಲಿ ಅದಕ್ಕೆ ದೊರೆತಿರುವ ಎಗ್ಗಿಲ್ಲದ ಮತ್ತು ಮುಚ್ಚುಮರೆಯಿಲ್ಲದ ಪ್ರಚಾರ ಹೊಸದು.

ಕೆಳಗೆ ಉದಾಹರಿಸಿರುವ ಎರಡೂ ಸಿನೆಮಾ ಜಾಹಿರಾತುಗಳು :

"It's crude! It's sexy!" (ಎಲ್ಲ ಒರಟೊರಟು! ಹಸಿಹಸಿ! ಲೈಂಗಿಕ!)

"Kiss and kill! Kiss and kill!" (ಮುತ್ತು ಕೊಡಿ! ಮೃತ್ಯು ಕೊಡಿ! ಮುತ್ತು, ಮೃತ್ಯು!)

ಪ್ರಚೋದನೆಯಿಲ್ಲವೆಯೇ ಅಮೇರಿಕದಲ್ಲಿ ಮುತ್ತುಮೃತ್ಯುಗಳ ಸಾಂಗತ್ಯ ಸಾಕಾದಷ್ಟಿವೆ. ಅದಕ್ಕಾಗಿ ಸಿನಿಮಾ ಚಿತ್ರಗಳ ಶರಣು ಹೋಗಬೇಕಾಗಿಲ್ಲ! ಜನರನ್ನು ಸೇಡಿಸ್ಮ್ (sadism) ನ (ಅಂದರೆ ಕ್ರೌರ್ಯಲೋಲುಪತೆಯ) ದಾಸ್ಯಕ್ಕೆಳೆಯುವುದಕ್ಕಾಗಿಯೇ ಈ ಚಿತ್ರಗಳು ದಂಡಯಾತ್ರೆ ಹೊರಟಂತಿವೆ. ಇವೆರಡು ಜಾಹಿರಾತುಗಳು ಮೇಲಿನದಕ್ಕಿಂತ ಸಮಾಜಕ್ಕೆ ಹೆಚ್ಚು ಹಾನಿ ತರುತ್ತವೆ. ಈ ಬಗೆಯ ಚಿತ್ರಗಳೂ ಪ್ರಚಾರವೂ ಚಿಕ್ಕವಯಸ್ಸಿನವರ ಮೇಲೆ ಎಂಥ ಭಯಂಕರ ಪರಿಣಾಮವನ್ನುಂಟುಮಾಡಬಹುದೆಂಬುದನ್ನು ವಿವರಿಸಬೇಕಾಗಿಲ್ಲ.

ಜಾಹಿರಾತುಗಳಿಂದಲೂ ಇತರ ಬಗೆಯ ಪ್ರಚಾರದಿಂದಲೂ ಮಾರಾಟ ಬಹುಶಃ ಹೆಚ್ಚುತ್ತದೆ. ಆದರೆ ಅಮೆರಿಕನ್ನರು ಕೂಡ—ಅವರು ಎಂಥ ಕುಬೇರ

ರಾಗಲಿ—ಅದೆಷ್ಟು ತಾನೆ ಕೊಂಡಾರು! ಮೇಲೆ ಹೇಳಿದಂತೆ ಅವರ ಮನೆಯಲ್ಲಿ ಎಲ್ಲ ಬಗೆಯ ಭೋಗಸಾಮಗ್ರಿಗಳೂ ಈಗಾಗಲೇ ತುಂಬಿವೆ. ನೀರಿಗೆ ಸಕ್ಕರೆ ಹಾಕಿದರೆ ಕರಗುತ್ತದೆ; ಇನ್ನಷ್ಟು ಹಾಕಿದರೆ ಅದೂ ಕರಗುತ್ತದೆ. ಆದರೆ ನಾಲ್ಕಾರು ಸಾರಿ ಹಾಕಿದ ಮೇಲೆ ಕಟ್ಟರೆಯಾಗಿ ಕರಗುವುದು ನಿಂತುಹೋಗುತ್ತದೆ—ಅದು saturationಗೆ (ಬೆರೆಸುವ ವಸ್ತುವನ್ನು ಕರಗಿಸಲಾರದ ಸಹಿಸಲಾರದ ಸ್ಥಿತಿಗೆ) ಗುರಿಯಾಗುತ್ತದೆ. ಆ ನೀರು ಹೆಚ್ಚು ಸಕ್ಕರೆಯನ್ನು ಹೇಗೆ ಒಪ್ಪುವುದಿಲ್ಲವೋ ಅಮೆರಿಕನ್ನರು ಹೆಚ್ಚು ಸಾಮಾನನ್ನೂ ಹಾಗೆ ಒಪ್ಪಲಾರರು. ಅಮೆರಿಕನ್ ಮಾರ್ಕೆಟ್ 'saturate' ಆಗಿದೆ—ಅದಕ್ಕೆ ಕಟ್ಟರೆಯಾಗಿದೆ. ಅವರು ಇದುವರೆಗೆ ಕಾಣದ ಹೊಸ ಭೋಗಸಾಮಗ್ರಿಯನ್ನು ಸೃಷ್ಟಿಸಬಹುದು, ನಿಜ. ಆದರೆ ಅದಕ್ಕೂ ಮಿತಿಯಿಲ್ಲವೆ? ಹಲ್ಲುಜ್ಜುವುದಕ್ಕೂ ವಿದ್ಯುದ್ಯಂತ್ರವಿರುವ ದೇಶದಲ್ಲಿ ಸೃಷ್ಟಿಸದೆ ಉಳಿದಿರುವುದು ವ್ಯಾಯಾಮ ಮಾತ್ರೆಯೊಂದೇ ಇರಬೇಕು. ಎರಡು ಘಂಟೆ ಟೆನಿಸ್ ಆಡುವ ಬದಲು, ಅಥವಾ ದಂಡೆ ಒತ್ತುವ ಬದಲು ಎರಡು ಮಾತ್ರೆ ನುಂಗಿದರೆ ಅದೇ ಫಲ ಬರುವಂತಾಗಬೇಕು. ಅಮೆರಿಕನ್ನರಿಗೆ ವ್ಯಾಯಾಮ ಮಾತ್ರೆಗಳು ನಿಜವಾಗಿ ಅವಶ್ಯಕವೂ ಹೌದು!

ಇದುವರೆಗೆ ಕಾಣದ ಹೊಸ ಸಾಮಾನುಗಳನ್ನು ಸೃಷ್ಟಿಸುವುದು ಕಷ್ಟ; ಹಳೆಯ ಸಾಮಾನು ಬೇಗ ಹಾಳಾಗಿ ಅಂಥವೇ ಹೊಸ ಸಾಮಾನುಗಳು ಅವಶ್ಯಕವಾಗುವಂತೆ ಮಾಡುವುದು ಸುಲಭ. ಈಗ ಅಮೆರಿಕನ್ನರು ಈ ದಾರಿಯನ್ನು ಅನುಸರಿಸುತ್ತಿದ್ದಾರಂತೆ. ಅಲ್ಲಿ planned obsolescence ಎಂಬ ಗಂಭೀರವಾದ, ಶಾಸ್ತ್ರೀಯವಾಗಿ ಕಾಣುವ ಹೊಸ ಪದಪುಂಜ ಬಳಕೆಗೆ ಬಂದಿದೆ. ಅಬ್ಸಾಲಿಸೆಂಟ್ (obsolescent) ಎಂದರೆ 'ಹಳೆಯದಾದ್ದರಿಂದ, ಅಥವಾ ಅದಕ್ಕಿಂತ ಉತ್ತಮವಾದದ್ದು ದೊರೆಯುವುದರಿಂದ ತ್ಯಾಜ್ಯವಾದದ್ದು.' ಬಂದೂಕ ಬಂದಮೇಲೆ ಬಿಲ್ಲುಬಾಣಗಳು ಅಬ್ಸಾಲಿಸೆಂಟ್ ಆದವು; ಫೌಂಟನ್ ಪೆನ್ ಬಂದಮೇಲೆ ಮಸಿಕುಡಿಕೆಯೂ ಮಸಿಯಲ್ಲಿ ಅದ್ದಿ ಬರೆಯುವ ಲೇಖನಿಯೂ ಅಬ್ಸಾಲಿಸೆಂಟ್ ಆದವು. ಈಚೆಗೆ ಆ ಪದದ ಅರ್ಥವ್ಯಾಪ್ತಿಯನ್ನು ಹೆಚ್ಚಿಸಿಕೊಂಡಂತೆ ತೋರುತ್ತದೆ—'ಬೇಗ ಕೆಟ್ಟುಹೋಗುವುದರಿಂದ ತ್ಯಾಜ್ಯವಾಗುವಂಥಾದ್ದು.' ಈ ಅರ್ಥ ನ್ಯಾಯವಾಗಿ ಆ ಪದಕ್ಕೆ ಸಲ್ಲತಕ್ಕದ್ದಲ್ಲ. ಕೊಳ್ಳುವುದು ನಿಲ್ಲದಿರಬೇಕಾದರೆ ಮೋಟಾರ್‌ಕಾರಿನಲ್ಲಿ, ಫೌಂಟನ್‌ಪೆನ್‌ನಲ್ಲಿ, ಏನೋ ಒಂದು ಉಪಯುಕ್ತವಾದ, ಹೊಸ ಸೌಕರ್ಯ ಒದಗಿಸುವಂಥ ಮಾರ್ಪಾಟುಮಾಡಿ ಹೊಸ ಮಾಡೆಲ್ ಅನ್ನು ಮಾರ್ಕೆಟ್ಟಿಗೆ ತರುವುದು ಒಂದು ವಿಧಾನ, ಬೇಗ ಕೆಟ್ಟು ಹೋಗುವಂಥ ಸಾಮಾನನ್ನೇ ತಯಾರಿಸುವುದು

ಇನ್ನೊಂದು ವಿಧಾನ. ನಾವು ಕೊಳ್ಳುವ ಕಾರು ಎರಡು ವರ್ಷ ಕಳೆಯುವುದ ರೊಳಗೇ ತೊಂದರೆ ಕೊಡಲಾರಂಭಿಸಿದರೆ ಅದನ್ನು ಬಿಟ್ಟು ಹೊಸ ಕಾರನ್ನು ಕೊಳ್ಳುವುದು ಅವಶ್ಯಕವಾಗುತ್ತದೆ. ಕಾರ್ಖಾನೆಗಳು ಬಿಡುವಿಲ್ಲದೆ ಕೆಲಸ ಮಾಡುತ್ತಿರಬಹುದು. ಈಗ ಅಮೆರಿಕನ್ನರಮನಸ್ಸು ಈ ದಿಕ್ಕಿಗೆ ತಿರುಗಿದೆಯಂತೆ. ಇದುವರೆಗೆ ಸಾಮಾನನ್ನು ಉತ್ತಮಗೊಳಿಸಲು ಪ್ರಯೋಗಗಳೂ ಪರಿಶೋಧನೆ ಗಳೂ ನಡೆಯುತ್ತಿದ್ದವು. ಇನ್ನು ಮೇಲೆ ಸಾಮಾನುಗಳು ಬೇಗ ಕೆಡುವಂತೆ ಮಾಡಲು ಪ್ರಯೋಗ ಪರಿಶೋಧನೆಗಳನ್ನು ನಡಸಬೇಕಾಗುತ್ತದೆ !

ಒಂದು ಸಾರಿ ಉಪಯೋಗಿಸಿ ಕೂಡಲೆ ಎಸೆದು ಬಿಡುವಂಥ ಸಾಮಾನು ಗಳ—throw-away ಸಾಮಾನುಗಳ—ಬಳಕೆಯೂ ಅಮೆರಿಕದಲ್ಲಿ ಹೆಚ್ಚು ತ್ತಿದೆ. (ನಮ್ಮಲ್ಲೂ ಅದು ಆರಂಭವಾಗಿದೆ). ಕರವಸ್ತ್ರ ಬಟ್ಟೆಯದಾದರೆ ಅದನ್ನು ಒಗೆದು ಮತ್ತೆ ಉಪಯೋಗಿಸಬಹುದು ; ಕಾಗದದ್ದಾದರೆ ಅದನ್ನು ಉಪಯೋಗಿಸಿದ ಮೇಲೆ ಎಸೆಯಲೇಬೇಕು, ಹೊಸದನ್ನು ಕೊಳ್ಳಲೇಬೇಕು. ಹಾಲಿನ ಪಾತ್ರೆ ಹಿತ್ತಾಳೆಯದೋ ಅಲ್ಯೂಮಿನಿಯಂ ಲೋಹದ್ದೋ ಆದರೆ ಅದನ್ನು ತೊಳೆದು ತೊಳೆದು ವರ್ಷಗಟ್ಟಲೆ ಉಪಯೋಗಿಸಬಹುದು. ವ್ಯಾಪಾರಿ ನಮಗೆ ಹೊಸ ಪಾತ್ರೆಯನ್ನು ಮಾರುವಂತಿಲ್ಲ. ಅದೇ ತೆಳುವಾದ ಕಾಗದದ ಅಥವಾ ಪ್ಲಾಸ್ಟಿಕ್‌ನ ಪಾತ್ರೆಯಾದರೆ ಅದನ್ನು ಉಪಯೋಗಿಸಿ ಎಸೆಯ ಬಹುದು ; ನಾಳೆ ಮತ್ತೊಂದನ್ನು ಕೊಳ್ಳಬಹುದು. ಹೀಗೆ ಅಮೆರಿಕನ್ನರು ಎಸೆಯುವ ಪದಾರ್ಥಗಳು ನಮ್ಮಲ್ಲಿ ಎಷ್ಟೋ ಕಾಲ ಬಳಕೆಗೆ ಬಂದಾವು. ಅಮೆ ರಿಕದಲ್ಲಿ ಅಲ್ಲಲ್ಲೇ ಸಾವಿರಾರು ಕಾರುಗಳು ಮೂಲೆಗುಂಪಾಗಿ ಬಿದ್ದಿರುವುದನ್ನು ಕಾಣಬಹುದು. ಅವರು ಸಾಮಾನ್ಯವಾಗಿ ಎರಡು ವರ್ಷ ಮೂರು ವರ್ಷ ಕ್ಕೊಂದು ಸಾರಿಯಾದರೂ ಕಾರನ್ನು ಬದಲಾಯಿಸುತ್ತಾರೆ. ರಾಮುವಿನ ಮನೆಯಲ್ಲಿ ದಿನಾ ಸೊಗಸಾದ ಹಾಲು ಬಿಳುಪಿನ ಪ್ಲಾಸ್ಟಿಕ್ ಕ್ಯಾನಿನಲ್ಲಿ ಹಾಲು ತರುತ್ತಿದ್ದರು. ನಾನು ಭಾರತಕ್ಕೆ ವಾಪಸು ಬರುವಾಗ ಅಂಥ 2–3 ಕ್ಯಾನುಗಳನ್ನು ತರಬೇಕೆಂದಿದ್ದೆ. ಹೊರಡುವ ಸಮಯದಲ್ಲಿ ಡಯಾನಳನ್ನು ಕೇಳಿದಾಗ ಅವಳು "ಅಯ್ಯೋ ಅವನ್ನು ಯಾರು ಇಟ್ಟುಕೊಳ್ಳುತ್ತಾರೆ! ಅವತ್ತವತ್ತೇ ಎಸೆದುಬಿಡುತ್ತೇವೆ" ಎಂದಳು. ಹೀಗೆಯೇ ಕಾಗದದ ಟವಲು, ಕರವಸ್ತ್ರ, ಗ್ಲಾಸು, ತಟ್ಟೆ, ಇತ್ಯಾದಿ—ಎಲ್ಲ ಎಸೆಯುವ ಸಾಮಾನು!

ನೈಲ್ಸ್‌ನಲ್ಲಿ ಎಲ್ಲ ಮನೆಗಳ ಮಗ್ಗುಲಲ್ಲೂ ಸುಮಾರು 1½ ಅಡಿ ವ್ಯಾಸವೂ 2½ ಅಡಿ ಎತ್ತರವೂ ಉಳ್ಳ ಪ್ಲಾಸ್ಟಿಕ್ ಚೀಲಗಳನ್ನಿಟ್ಟಿರುತ್ತಾರೆ. ಅದು ಎಸೆಯುವ ಸಾಮಾನುಗಳಿಂದ ದಿನಕ್ಕೊಂದು ಸಾರಿ ತುಂಬುತ್ತದೆ—

ವ್ಯಾನಿನಲ್ಲೊಬ್ಬ ಬಂದು ಅದನ್ನೆಲ್ಲ ತುಂಬಿಕೊಂಡು ಹೋಗುತ್ತಾನೆ. ಸಾಮಾನ್ಯವಾಗಿ ನಾವು ಬಳಸುವ ವಸ್ತುಗಳು ಹಳೆಯವಾದಾಗ ತುಕ್ಕು ಹಿಡಿದೋ ಅಥವಾ ಕೊಳೆತೋ ಹೋಗಿ (decompose ಆಗಿ) ಅದರಲ್ಲಿದ್ದ ಅಂಶಗಳೆಲ್ಲ—ಕಬ್ಬಿಣ ಗಂಧಕ ಇತ್ಯಾದಿಗಳೆಲ್ಲ—ಮತ್ತೆ ಪ್ರಕೃತಿಯ ಉಗ್ರಾಣಕ್ಕೆ ಸೇರುತ್ತವೆ. ಕೆರೆಯ ನೀರನ್ನು ಕೆರೆಗೇ ಚೆಲ್ಲಿದಂತಾಗುತ್ತದೆ. ಪ್ಲಾಸ್ಟಿಕ್ ಸಾಮಾನಿನ ಮಾತು ಬೇರೆ. ಅದು ಒಡೆಯಬಹುದೇ ಹೊರತು ಅದರಲ್ಲಿರುವ ಅಂಶಗಳು ಬೇರೆಬೇರೆಯಾಗಿ ಮತ್ತೆ ಪ್ರಕೃತಿಗೆ ಸೇರುವುದಿಲ್ಲ. ಹಳೆಯದೂ ಅನುಪಯುಕ್ತವೂ ಆದಮೇಲೆ ಇಂಥ ವಸ್ತುಗಳನ್ನೇನು ಮಾಡಬೇಕು ? ನ್ಯೂಯಾರ್ಕಿನ ಬಳಿ ಅವುಗಳನ್ನು ಸಮುದ್ರಕ್ಕೆ ಎಸೆದು ಎಸೆದು ಆ ವಸ್ತುಗಳ ರಾಶಿ ಅಲೆಗಳ ಹೊಡೆತದಿಂದಾಗಿ ತೀರದ ಹತ್ತಿರಕ್ಕೆ ಬರುತ್ತಿದೆಯಂತೆ, ಸಮುದ್ರದಲ್ಲಿ ಸಾಮಾನ್ಯವಾಗಿ ಆಗುತ್ತಿದ್ದ ಪ್ರಾಕೃತಿಕ ವ್ಯಾಪಾರವನ್ನು ತಡೆಗಟ್ಟಿ ಅಸಹ್ಯವಾದ ವಾಸನೆಯನ್ನು ಬೀರುತ್ತಿದೆಯಂತೆ. ನ್ಯೂಯಾರ್ಕಿನಿಂದ ಲಕ್ಷಗಟ್ಟಲೆ ಜನರು ಹೊರಟುಹೋಗುತ್ತಿದ್ದಾರೆಂದು ಕೆಲವು ತಿಂಗಳ ಕೆಳಗೆ ಓದಿದ ನೆನಪಿದೆ. ಆದಕ್ಕೆ ಇತರ ಕಾರಣಗಳ ಜೊತೆಗೆ ಮೇಲೆ ಹೇಳಿದ್ದೂ ಒಂದು ಕಾರಣವಿರಬಹುದೇನೊ. ಈ 'ಗಾರ್ಬೇಜು' (ಬೇಕಿಲ್ಲವೆಂದು ಎಸೆಯುವ ಪದಾರ್ಥ) ಕಡಮೆಯಾಗಬೇಕು ; ಪುನರಾವರ್ತನೆ (re-cycle) ಮಾಡಬಹುದಾದ ಪದಾರ್ಥಗಳನ್ನೇ ಬಳಸಬೇಕು ಎಂದು ಪರಿಸರ ಶಾಸ್ತ್ರಜ್ಞರು ಒತ್ತಿ ಹೇಳುತ್ತಿದ್ದಾರಾದರೂ ಅವರ ಸಲಹೆಗಳನ್ನು ಕಾರ್ಯಕ್ಕಿಳಿಸುವ ಕೆಲಸ ಅಷ್ಟೇನೂ ಮುಂದುವರಿದಿಲ್ಲ.

ಅಂತೂ ಅಮೆರಿಕನ್ನರು ಇತರ ದೇಶಗಳ ಜನರಿಗಿಂತಲೂ ತಮ್ಮ ಅವಶ್ಯಕತೆಗಳನ್ನು ಹೆಚ್ಚಿಸಿಕೊಂಡಿದ್ದಾರೆ, ಪ್ರಕೃತಿಯ ಭಂಡಾರವನ್ನು ಬರಿದು ಮಾಡುತ್ತಿದ್ದಾರೆ, ಎಂಬುದರಲ್ಲಿ ಸಂಶಯವಿಲ್ಲ. ಹಿಂದುಳಿದಿದ್ದ ದೇಶಗಳೂ ಈಗ ಅವರೊಡನೆ ಸ್ಪರ್ಧಿಸಲಾರಂಭಿಸಿವೆ. ಅವರ ಹೊರದೇಶದ ವ್ಯಾಪಾರ ಕಡಮೆಯಾಗುತ್ತದೆ. ಅದನ್ನು ವಿಸ್ತರಿಸಬೇಕಾದರೆ ಆರ್ಥಿಕ ಅಥವಾ ಮದ್ದುಗುಂಡುಗಳ ಯುದ್ಧವನ್ನು ಹೂಡಬೇಕಾಗಬಹುದು. ಮಧ್ಯಮ ವರ್ಗದ ಅಮೆರಿಕನ್ನರು ಈಗಾಗಲೇ ಭೋಗವಸ್ತುಗಳನ್ನು ತುಂಬಿಕೊಂಡಿರುವುದರಿಂದ ಆ ಮಾರ್ಕೆಟ್ಟು ವಿಸ್ತಾರವಾಗಲಾರದು. ಅಂದ ಮೇಲೆ ಒಳದೇಶದ ವ್ಯಾಪಾರ ಹೇಗೆ ಹೆಚ್ಚಬೇಕು ? 'The other half' ಅಂದರೆ ಬಡತನದಲ್ಲಿರುವ ಜನ, ಭೋಗವಸ್ತುಗಳನ್ನು ಕೊಳ್ಳುವಷ್ಟು ತ್ರಾಣಿಗಳಾಗಬೇಕು. ಅವರನ್ನು ಆ ಸ್ಥಿತಿಗೆ ತರುವುದು ಸುಲಭವಲ್ಲ. ಅಲ್ಲದೆ ಅವರ ಬಡತನದ ಆಧಾರದ ಮೇಲೆ ಇತರರ ಐಶ್ವರ್ಯ

ಇದುವರೆಗೆ ಬೆಳೆದಿತ್ತು ಎನ್ನುವುದೂ ಸ್ವಲ್ಪಮಟ್ಟಿಗೆ ನಿಜ.

ಮೇಲಿನ ಎರಡು ಮೂರು ಪ್ಯಾರಾಗಳು ನಾನು ಅಂದು ಯಾನ್ಸೆನ್‌ರೊಡನೆ ಮಾತಾಡುತ್ತಿದ್ದಾಗ ಮಂಡಿಸಿದ ವಾದದ ಸಾರಾಂಶ. ಅದಕ್ಕೆ ಅವರಿಂದ ಬಂದ ಉತ್ತರ ನನಗೆ ಅಷ್ಟೇನೂ ಸಮರ್ಪಕವೆಂದು ತೋರಲಿಲ್ಲ. ಒಟ್ಟಿನಲ್ಲಿ ಅವರ ವಾದ ಇದು: ನಾವು professional poverticians—ಬಡತನವನ್ನು ಹೊಗಳುವುದೇ ವೃತ್ತಿಯಾಗುಳ್ಳವರು—ಆಗಬಾರದು. (ಈ ಮಾತನ್ನು ಚರ್ಚಿಲ್ಲೊ ಅಮೆರಿಯೋ ಗಾಂಧಿಯವರನ್ನು ಬಯ್ಯಲು ಬಳಸಿದ್ದರೆಂದು ನೆನಪು). ಕಚ್ಚಾಮಾಲು ಮುಗಿದುಹೋಗುತ್ತದೆಂಬ ಭಯಕ್ಕೆ ಕಾರಣವಿಲ್ಲ; ವಿಜ್ಞಾನ ನಮ್ಮ ನೆರವಿಗೆ ಬರುತ್ತದೆ. ಅಮೆರಿಕ ತನ್ನ ಒಳ ದೇಶದ ವ್ಯಾಪಾರವನ್ನು ಇನ್ನೂ ಬೇಕಾದಷ್ಟು ಹೆಚ್ಚಿಸಿಕೊಳ್ಳುವುದು ಸಾಧ್ಯ. ಅದು ವಿದೇಶೀ ವ್ಯಾಪಾರವನ್ನು ಅಷ್ಟಾಗಿ ಅವಲಂಬಿಸಿಲ್ಲ. (ಇತರ ದೇಶಗಳಿಗೆ ಹೋಲಿಸಿದರೆ ಈ ಮಾತು ಸ್ವಲ್ಪ ನಿಜವಿರಬಹುದೇನೊ. ಆದರೂ ಅಮೆರಿಕದ ಯುದ್ಧೋಪಕರಣದ ವ್ಯಾಪಾರ, ಇತರ ದೇಶಗಳಲ್ಲಿ ಕೋಕಕೋಲ, ಔಷಧಿಗಳು ಇತ್ಯಾದಿಗಳನ್ನು ತಯಾರಿಸಿದ್ದರಿಂದ ಬರುವ ಲಾಭ, ಅಷ್ಟೇನೂ ಸಣ್ಣ ಪ್ರಮಾಣದ್ದಲ್ಲ ಎನ್ನಿಸುತ್ತದೆ.)

ನಾನು ಅರ್ಥಶಾಸ್ತ್ರಜ್ಞನಲ್ಲ. ಅರ್ಧಶತಮಾನಕ್ಕಿಂತ ಹೆಚ್ಚು ಕಾಲದ ಹಿಂದೆ ನಾನು ಕಾಲೇಜಿನಲ್ಲಿ ಓದಿದ ಅರ್ಥಶಾಸ್ತ್ರಕ್ಕೆ ಇಂದು ಕುರುಡುಕಾಸಿನ ಬೆಲೆಯೂ ಇರಲಾರದು. ಆದರೆ ಸಾಮಾನ್ಯ ಲೌಕಿಕನಾದವನೂ ಒಂದೊಂದು ವೇಳೆ ಚಪಲ ತೀರಿಸಿಕೊಳ್ಳುವುದಕ್ಕಾಗಿ ಇಂಥ ಗಹನವಾದ ವಿಷಯಗಳನ್ನು ಕುರಿತು ತನಗೆ ತೋರಿದ್ದನ್ನು ಹೇಳುವ ಸಾಹಸ ಮಾಡಬಹುದೇನೊ.

## ನಯಾಗರ, ಕೆನಡ, ಸಹಸ್ರದ್ವೀಪ ಇತ್ಯಾದಿ

ಇಲ್ಲಿಗೆ ಬಂದು ಮೂರು ತಿಂಗಳಾಗುತ್ತ ಬಂತು. ನನ್ನ ಟಿಕೆಟ್ಟಿನ ಅವಧಿ 120 ದಿನಗಳು. ಭಾರತಕ್ಕೆ ಹಿಂದಿರುಗುವ ಮುನ್ನ ನ್ಯೂಯಾರ್ಕ್‌ನಲ್ಲಿರುವ ಬಂಧುಮಿತ್ರರೊಡನೆ—ಗಿರಿಜ ಮತ್ತು ಗೋಪಾಲಸ್ವಾಮಿ, ಡಾ. ಎಚ್. ಕೆ. ಮತ್ತು ಶ್ರೀಮತಿ ಶ್ರೀದೇವಿ (ಅವರೂ ಡಾಕ್ಟರು) ಚಂದ್ರಶೇಖರ್, ವಿ. ಎಸ್. ತಾತ ಮೊದಲಾದವರೊಡನೆ—ನಾಲ್ಕಾರು ದಿನ ಕಳೆಯಬೇಕು. ಇದನ್ನು ಗಮನಿಸಿ ಹೊರಡುವ ತಾರೀಖನ್ನು ನಿಶ್ಚಯಿಸಿಕೊಂಡು ಪ್ಲೇನಿನಲ್ಲಿ ಸೀಟನ್ನು ಕಾದಿರಿಸಿಕೊಳ್ಳಬೇಕು, ಎಂದುಕೊಳ್ಳುತ್ತಿದ್ದಾಗ ರಾಮು "ನೀನು ಇಷ್ಟು ದೂರ ಬಂದೂ

ಇಷ್ಟು ದಿನ ಇದ್ದೂ ನಿಜವಾಗಿ ಅಮೆರಿಕದಲ್ಲಿ ಏನನ್ನೂ ನೋಡಿದಂತಾಗಲಿಲ್ಲ. ನ್ಯೂಯಾರ್ಕಿಗೆ ಪ್ಲೇನಿನಲ್ಲಿ ಹೋಗುವ ಬದಲು ಸ್ವಲ್ಪ ಮುಂಚೆ ಹೊರಟು ಎಲ್ಲರೂ ಕಾರಿನಲ್ಲೇ ಪ್ರಯಾಣಮಾಡೋಣ. ನನಗೂ ಆಸ್ಪತ್ರೆಯಲ್ಲಿ ದುಡಿದು ದುಡಿದು ಬೇಸರವಾಗಿದೆ. ಹದಿನೈದು ದಿನ ಬಿಡುವು ತೆಗೆದುಕೊಳ್ಳುತ್ತೇನೆ. ಕೆನಡಾಕ್ಕೆ ಹೋಗಿ ನಯಾಗರ, ಸಹಸ್ರದ್ವೀಪ (Thousand Islands), ಮಾಂಟ್ರಿಯಲ್, ಕ್ವಿಬೆಕ್, ಎಲ್ಲಾ ನೋಡಿಕೊಂಡು ಮೆಯ್ನ್ (Maine) ಮಾರ್ಗವಾಗಿ ನ್ಯೂಯಾರ್ಕಿಗೆ ಹೋಗೋಣ. ನಿನ್ನನ್ನು ನ್ಯೂಯಾರ್ಕಿನಲ್ಲಿ ಬಿಟ್ಟು ನಾವು ನೈಲ್ಸ್‌ಗೆ ಹಿಂದಿರುಗುತ್ತೇವೆ" ಎಂದು ಹೇಳಿದ.

ನಾನು ಏನೂ ನೋಡಿದಂತಾಗಲಿಲ್ಲ ಎಂಬ ಭಾವನೆ ನನಗೆ ಇದುವರೆಗೆ ಬಂದೇ ಇರಲಿಲ್ಲ. ಇಲ್ಲಿ ಜೀವನ ತೀವ್ರವೇಗದಿಂದ ಸಾಗುತ್ತದೆ. ಸಿಕ್ಕಿದ ಜನರೊಡನೆ ಮಾತುಕಥೆ, ಮನೆಯಲ್ಲಿ ಸುನೀಲನ ಆಟ, ಮೆಕ್‌ಮಿಲನ್ ದಂಪತಿಗಳನ್ನು ನಾಲ್ಕೈದು ಸಾರಿ ಭೇಟಿಮಾಡಿ ಅವರೊಡನೆ ಸುತ್ತಾಡಿದ್ದು— ಇವೆಲ್ಲದರಿಂದಾಗಿ ಮೂರು ತಿಂಗಳು ಮೂರು ದಿನದಂತೆ ಕಳೆದುಹೋಗಿತ್ತು. ಆದರೂ, ಒಂದೆರಡು ಪ್ರೇಕ್ಷಣೀಯ ಸ್ಥಳಗಳು ವಿನಾ ಅಮೇರಿಕವನ್ನು ಹೆಚ್ಚಾಗಿ ನೋಡಲಾಗಲಿಲ್ಲವೆಂಬ ಮಾತು ನಿಜ. ಈ ಕಾಲದ ಪ್ರಯಾಣವೇ ಹೀಗೆ. ಹಿಂದೆ ನನ್ನ ಮಿತ್ರರಾದ ಶ್ರೀ ನಿಟ್ಟೂರು ಶ್ರೀನಿವಾಸರಾಯರ ಮತ್ತು ಭೋಲಾದತ್ತ ಪಂತರ ಜೊತೆಯಲ್ಲಿ ಬದರೀನಾಥಕ್ಕೆ ಹೋಗಿದ್ದಾಗ ನಾವು ಮೂವರೂ "ಹೀಗೆ ಜೀಪ್‌ನಲ್ಲೋ ಕಾರಿನಲ್ಲೋ ಸುಂಟರಗಾಳಿಗೆ ಸಿಕ್ಕಿದ ತರಗೆಲೆಯಂತೆ ತೂರಿಕೊಂಡು ಬಂದರೆ ಹಿಮಾಲಯದ ಭವ್ಯತೆಯ ಅನುಭವ ಹೇಗಾದೀತು! ಯಾತ್ರೆ ಹೊರಟರೆ ಹಿಂದಿನ ಕಾಲದ ಪದ್ಧತಿಯಂತೆ ನಡೆದೇ ಹೋಗಬೇಕು" ಎಂದುಕೊಂಡದ್ದು ನೆನಪಿದೆ. ಈಗ ಪ್ರಪಂಚದ ಬೆಡಗನ್ನು ನಡೆದು ನೋಡುವುದಂತಿರಲಿ, ಕಾರಿನಲ್ಲೋ ರೈಲಿನಲ್ಲೋ ಹೋಗುವುದೂ ಕಡಮೆಯಾಗಿ ಪ್ಲೇನಿನ ಪ್ರಯಾಣದ ಕಾಲ ಬಂದಿದೆ.

There was a ship that went to Spain;
And when it got there it came back again.

(ಸ್ಪೇನಿಗೆ ಹೋಗುವೆನೆನ್ನುತ ಹೊರಟಿತು
ಹಿಂದೆ ಒಂದು ಹಡಗು.
ಅಲ್ಲಿಗೆ ತಲಪಿತು, ಕೂಡಲೆ ಮರಳಿತು
ಹೊರಟಲ್ಲಿಗೆ ಹಡಗು.)

ಈಗಿನ ಪ್ರವಾಸ ಬಹುಮಟ್ಟಿಗೆ ಈ ಬಗೆಯದಾಗಿದೆ. ಅಮೆರಿಕದ ಹವಾನಿ

ನಿಯಂತ್ರಣವುಳ್ಳ ಕಾರುಗಳಲ್ಲಿ ಪ್ರಯಾಣಮಾಡಿದರೆ ಹೊರಗಿನ ಗಾಳಿ ಕೂಡ ನಮ್ಮ ಮುಖದ ಮೇಲೆ ಆಡಲಾರದು, ನಿಜ. ಆದರೆ ಸುತ್ತ ಮುತ್ತ ಏನಿದೆ ಎಂದು ನೋಡಿಯಾದರೂ ನೋಡಬಹುದು, ಪ್ಲೇನಿನಲ್ಲಿ ಹೋದರೆ ಆ ಭಾಗ್ಯವೂ ಇಲ್ಲ!

ರಾಮು ಪ್ಲೇನ್ ಪ್ರಯಾಣ ಬೇಡ ಅಂದಾಗ ನನಗೆ ಬಹಳ ಆನಂದವಾಯಿತು. ನೈಲ್ಸ್‌ನಲ್ಲಿ ರಾಮುವಿನೊಡನೆ ಮಾತಾಡುವುದೆಂದರೆ ಸಂಜೆ ಸ್ವಲ್ಪ ಹೊತ್ತು ಮಾತ್ರ—ಅದೂ ಆಸ್ಪತ್ರೆಯಿಂದ ತುರ್ತಿನ ಕರೆ ಬರದಿದ್ದರೆ! ಕಾರಿನಲ್ಲಿ ಹೊರಟರೆ 10–15 ದಿನ ಯಾವ ಕೆಲಸದ ಆತುರವೂ ಇಲ್ಲದೆ ಎಲ್ಲರೂ ಒಟ್ಟಿಗೆ ಹರಟೆ ಹೊಡೆಯಬಹುದು. ಮನೆಯ ವಾತಾವರಣವೇ ನಮ್ಮೊಡನೆ ಪ್ರಯಾಣಮಾಡಿ ಬರುತ್ತದೆ. ಈ ಏರ್ಪಾಡನ್ನು ಕೇಳಿದಾಗ ಸುನೀಲನ ಸಂತೋಷ ಹೇಳತೀರದು. ಪ್ರಯಾಣಕಾಲದಲ್ಲಿ ಅವನಿಗೆ ಸ್ವಾತಂತ್ರ್ಯ ಹೆಚ್ಚು; ಅಲ್ಲದೆ ಚಾಕೊಲೆಟ್ ಐಸ್‌ಕ್ರೀಮುಗಳ ವಿಷಯದಲ್ಲಿ ತಂದೆ ತಾಯಿ ಹೆಚ್ಚು ಔದಾರ್ಯ ತೋರಿಸುತ್ತಾರೆ!

ನನ್ನ ಟಿಕೆಟ್ಟಿನ ಜೀವ 120 ದಿನಗಳಾದರೂ ನನಗೆ ವೀಸಾ ಕೊಟ್ಟಿದ್ದದ್ದು 90 ದಿನಕ್ಕೆ ಮಾತ್ರ. ಆದ್ದರಿಂದ ಮೊದಲು ಹೋಗಿ ಅದರ ಅವಧಿಯನ್ನು ಹೆಚ್ಚಿಸಿಕೊಳ್ಳಬೇಕು. ಅದು ಫೋನ್‌ಮಾಡಿ ನಿರ್ವಹಿಸಬಹುದಾದ ಕೆಲಸವಲ್ಲ. ರಾಮುವಿಗೆ ಪುರಸತ್ತಿಲ್ಲದ್ದರಿಂದ ನಾನೂ ಡಯಾನಳೂ ಹೊರಟೆವು. ಕಛೇರಿಯಲ್ಲಿ ಕೌಂಟರಿನ (counter) ಮುಂದೆ ಹೋಗಿ ನಿಂತೊಡನೆ ಅಲ್ಲಿದ್ದ ಮಹಿಳೆ ನಗುಮುಖದಿಂದ "ನನ್ನಿಂದ ಏನಾಗಬೇಕು?" ಎಂದು ವಿಚಾರಿಸಿದಳು.

"ನನ್ನ ವಿಸಾವನ್ನು ಎರಡು ತಿಂಗಳ ಮಟ್ಟಿಗೆ ಮುಂದುವರಿಸಿಕೊಡುತ್ತೀರ?"—ವಾಸ್ತವವಾಗಿ ನನಗೆ ಬೇಕಾಗಿದ್ದದ್ದು ಒಂದೇ ತಿಂಗಳು. ಹೇಗಿದ್ದರೂ ಇಷ್ಟು ದೂರ ಬಂದಿದ್ದೇವೆ, ಒಂದು ತಿಂಗಳು ಹೆಚ್ಚಾಗಿಯೇ ಕೇಳೋಣ ಎಂದುಕೊಂಡೆ.

ಆಕೆ ಪಾಸ್‌ಪೋರ್ಟನ್ನು ಪರಿಶೀಲಿಸಿ ಹೇಳಿದಳು: "ನೀವು ಟೂರಿಸ್ಟ್ ಟಿಕೆಟ್ ತೆಗೆದುಕೊಂಡು ಬಂದಿದ್ದರೆ ನಿಮಗೆ ಎರಡು ತಿಂಗಳ ಅವಧಿಯಿಂದ ಪ್ರಯೋಜನವಿಲ್ಲ. ಒಂದು ತಿಂಗಳಿಗಿಂತ ಹೆಚ್ಚು ಕೊಡುವುದು ನನ್ನ ಅಧಿಕಾರಕ್ಕೆ ಮೀರಿದ್ದು. ಆದ್ದರಿಂದ ತಡವಾಗುತ್ತದೆ. ಒಂದು ತಿಂಗಳು ಮಾತ್ರವಾದರೆ ಇಗೋ ಈಗಲೇ ಒಂದು ಮುದ್ರೆ ಒತ್ತಿಕೊಟ್ಟು ಬಿಡುತ್ತೇನೆ. ನಿಮಗೆ ಹೇಗೆ ಅನುಕೂಲವೋ ಹಾಗೆ ಮಾಡಿ."

"ನೀವು ಸಮಸ್ಯೆಯನ್ನು ನನ್ನ ಅನುಕೂಲದ ದೃಷ್ಟಿಯಿಂದಲೇ ನೋಡಿ

ಸಲಹೆ ಕೊಟ್ಟಿದ್ದೀರಿ. ನಿಮ್ಮ ಸೌಜನ್ಯಕ್ಕಾಗಿ ಬಹಳ ವಂದನೆಗಳು."

"ನಿಮಗೆ ಅನುಕೂಲವಾದರೆ ಸಂತೋಷ. ಇನ್ನೇನಾದರೂ ಆಗಬೇಕೆ?"

"ನಾನು ಕೆನಡಾಕ್ಕೆ ಹೋಗಿ ಅನಂತರ ಮತ್ತೆ ನಿಮ್ಮ ದೇಶಕ್ಕೆ ಬಂದು ನ್ಯೂಯಾರ್ಕಿನಲ್ಲಿ ಪ್ಲೇನ್ ಹತ್ತಬೇಕೆಂದಿದ್ದೇನೆ. ಗಡಿ ದಾಟಿದಾಗ ಈ ವೀಸಾ ರದ್ದಾಗುತ್ತದಲ್ಲವೆ? ಮತ್ತೆ ಗಡಿ ದಾಟಿ ಈ ದೇಶಕ್ಕೆ ಬರಬೇಕಾದರೆ ಹೊಸ ವೀಸಾ ಪಡೆಯುವುದಕ್ಕೆ ಕಷ್ಟವಾಗುತ್ತದೆಯೆ? ಇಲ್ಲಿಂದಲೇ ಅದಕ್ಕೆ ಏರ್ಪಾಡು ಮಾಡಿಕೊಂಡು ಹೋಗುವುದು ಸಾಧ್ಯವೆ?"

"ಅಮೆರಿಕದ ಪೌರರಿಗೆ ಕಷ್ಟವಲ್ಲ. ಬೇರೆ ದೇಶದವರ ವಿಷಯದಲ್ಲಿ ಈಗಿನ ನಿಯಮ ಹೇಗಿದೆಯೊ—ಅದರ ವಿವರ ನನಗೆ ತಿಳಿಯದು. ಅಗೋ ಆ ಕೌಂಟರಿನಲ್ಲಿ ಹೋಗಿ ಕೇಳಿದರೆ ತಿಳಿಯುತ್ತದೆ."

"ವಂದನೆಗಳು."

ಆ ಕೌಂಟರಿನಲ್ಲಿ ಮತ್ತೊಬ್ಬ ಮಹಿಳೆಯಿದ್ದಳು, ನಾನು ಅಲ್ಲಿಗೆ ಹೋಗಿ ನಿಂತಾಗ ಆಕೆ ಮಾತೇನನ್ನೂ ಆಡಲಿಲ್ಲ. ಪ್ರಶ್ನಾರ್ಥಕವಾಗಿ ಆಕೆಯ ಹುಬ್ಬು ಮೇಲಕ್ಕೆದ್ದಿತು; ನನ್ನ ಮೇಲೆ ಆಕೆ ಬೀರಿದ ದೃಷ್ಟಿ ಹೀಗೆ ಹೇಳಿತು "ನಾನು ಖಂಡಿತವಾದಿ. ಏಕ್‌ಮಾರ್ ದೋ ತುಕಡ! ನನ್ನಲ್ಲಿ ತಗರುಬುಗರು ನಡೆಯು ವುದಿಲ್ಲ. ನನ್ನ ಕಾಲಕ್ಕೆ ಬೆಲೆಯಿದೆ. ಹೇಳಬೇಕಾದ್ದನ್ನು ಹೇಳಿ ತೊಲಗು!"

ಆಕೆ ಆಡದಿದ್ದ ಈ ಮಾತಿಗೆ ಉತ್ತರವಾಗಿ ನಾನು ಕೇಳಿದೆ:

"ನಾನು ಬಂದದ್ದು........"

"ನಿಮ್ಮ ಪಾಸ್‌ಪೋರ್ಟ್!"

ನಾನು ನೀಡಿದ ಪಾಸ್‌ಪೋರ್ಟನ್ನು ತೆಗೆದುಕೊಂಡು ಒಂದು ಪೇಜಿನ ಮೇಲೆ ಬೀಸುದೃಷ್ಟಿ ಬೀಸಿ,

"ನಿಮ್ಮ ವಿಸಾದ ಅವಧಿ ಎಂದೋ ಮುಗಿದುಹೋಗಿದೆ!"

"ಇಲ್ಲವಲ್ಲ, ನೀವು...."

"ಈ ತಾರೀಖು ಸುಳ್ಳೆ?"

"ಬಹುಶಃ ನೀವು ಹೋದ ವರ್ಷದ ವೀಸಾ ನೋಡುತ್ತಿದ್ದೀರಿ. (ಆ ವೀಸಾವನ್ನು ನಾನು ಉಪಯೋಗಿಸಿರಲಿಲ್ಲ. ಅದರ ಮೇಲೆ ಅದು ರದ್ದಾಯಿ ತೆಂದು ಸ್ಪಷ್ಟವಾಗಿಯೇ ಕಾಣಿಸಿತ್ತು.) ಈ ವರ್ಷದ ವೀಸಾದ ಅವಧಿಯನ್ನು ಈಗ ತಾನೆ ಮುಂದುವರಿಸಿದ್ದೇನೆ."

ಆಕೆ ಪಾಸ್‌ಪೋರ್ಟನ್ನು ತಿರುವಿ ಹಾಕುತ್ತಿದ್ದದ್ದರಿಂದ ನಾನು ಮೇಲಿನ ವಾಕ್ಯವನ್ನು ಪೂರೈಸುವುದು ಸಾಧ್ಯವಾಯಿತು. ಅವಳೊಡನೆ ನಾನು

ಆಡಿದ ಮಾತಿನಲ್ಲಿ ಮುಗಿಸಲಾದದ್ದು ಅದೊಂದೇ ವಾಕ್ಯ.

ಪಾಸ್‌ಪೋರ್ಟ್ ಪರಿಶೀಲನೆ ಮುಗಿದ ಮೇಲೆ ಆಕೆ ಕೇಳಿದಳು (ನನ್ನಿಂದ ಏನಾಗಬೇಕು ಎಂದಲ್ಲ) :

"ಹಾಗಾದರೆ ಇಲ್ಲಿಗೇಕೆ ಬಂದಿರಿ ?"

"ನಾನು ಕೆನಡಾಕ್ಕೆ ಹೋಗಬೇಕಾಗಿದೆ. ಗಡಿ ದಾ...."

"ಇದು ಕೆನಡಾದ ಕಾನ್ಸುಲೆಟ್ (consulate) ಅಲ್ಲ."

"ಗೊತ್ತು. ಗಡಿದಾಟುವಾಗ ಈ...."

"ಕೆನೇಡಿಯನ್ ವೀಸಾ ಬೇಕಾಗುತ್ತೆ."

"ಗೊತ್ತು, ನನ್ನ ಮಾತು ಸ್ವಲ್ಪ ಕೇಳಿ."

"ಈ ಬಳಸು ಮಾತೇಕೆ !"

"ನಾನು ಬಳಸು...."

ಈ ಸಾರಿ ನನ್ನ ಮಾತಿಗೆ ತಡೆಹಾಕಿದವಳು ಡಯಾನ. ಅವಳು ಇಂಗ್ಲೆಂಡಿನವಳಷ್ಟೆ; ಹಿಂದೊಂದು ಸಾರಿ ಈ ಮಹಾರಾಯಿತಿಯೊಡನೆ ವ್ಯವಹರಿಸಿದ್ದಳಂತೆ. ಅದರ ನೆನಪು ಇನ್ನೂ ಕುದಿಯುತ್ತಿತ್ತು. ರೋಷದಿಂದ ಕಿಡಿ ಕಿಡಿಯಾಗಿ ನನಗೆ ಹೇಳಿದಳು : "ಈಕೆಗೆ ನಾಲಗೆಯಿದೆಯೇ ಹೊರತು ಕಿವಿಯಿಲ್ಲ. ಬನ್ನಿ ಹೋಗೋಣ; ಇವಳ ಹಂಗೇನು !"

ಆ ಮಹಿಳೆ ದುರುಗುಟ್ಟಿಕೊಂಡು ನೋಡುತ್ತ ನೀಡಿದ ಪಾಸ್‌ಪೋರ್ಟನ್ನು ತೆಗೆದುಕೊಂಡು ಅಲ್ಲಿಂದ ಹೊರಟೆವು.

* * *

ನೈಲ್ಸ್‌ನಿಂದ ಹೊರಟ ದಿನವೇ ಡೆಟ್ರಾಯ್ಟ್ ನಗರವನ್ನು ತಲಪಿದೆವು. ಡೆಟ್ರಾಯ್ಟ್ ಬಹಳ ದೊಡ್ಡ ಪಟ್ಟಣ; ಭಾರಿ ಕೈಗಾರಿಕೆಗಳಿಗೂ ಭಾರಿ ಕೊಲೆಗಾರಿಕೆಗಳಿಗೂ ಪ್ರಸಿದ್ಧಿ ಪಡೆದದ್ದು. ನೋಡಬೇಕಾದ ಸ್ಥಳ. ಆದರೆ ರಮ್ಯ ಮನೋವೃತ್ತಿಗೆ ಒಲಿಬಿದ್ದ ನನ್ನ ಮನಸ್ಸಿಗೆ ದಂತ, ನವಿಲು, ಕೋಗಿಲೆ, ಶ್ರೀಗಂಧ, ಮುಂತಾದ ಸರಕುಗಳು ಪ್ರಿಯವೇ ಹೊರತು ಕಲ್ಲಿದ್ದಲು, ಕಬ್ಬಿಣದ ಸರಳು, ಉಕ್ಕಿನ ಪ್ಲೇಟು ಇತ್ಯಾದಿಗಳು ಪ್ರಿಯವಲ್ಲ. ಆದ್ದರಿಂದ ಕೈಗಾರಿಕೆಯ ಕಡೆಗೆ ಮನಸ್ಸು ಒಲೆಯಲೊಲ್ಲದು. ಕೊಲೆಗಾರಿಕೆಗೆ ಗುರಿಯಾಗುವುದೂ ಏಕೊ ಹಿಡಿಸಲೊಲ್ಲದು! 'ನಂಬದಿರು ಈ ದೇಹ ನಿತ್ಯವಲ್ಲ' ಎಂಬ ದಾಸರ ಬೋಧನೆಯನ್ನು ಕೇಳಿದ ಮೇಲೂ ದೇಹಾಭಿಮಾನ ಝಂಡಾ ಹಾಕಿಕೊಂಡು ಕೂತೇ ಇದೆ. ಅಲ್ಲದೆ ಕೊಲೆಗಾರರಿಗೆ ಡೆಟ್ರಾಯ್ಟ್‌ನಲ್ಲಿ ಲಕ್ಷಾಂತರ ಜನರಿರುವಾಗ ನನ್ನೊಬ್ಬನ ಹಂಗೇನು ! ಹೀಗೆಂದುಕೊಂಡು ಡೆಟ್ರಾಯ್ಟ್‌ಗೆ ನಮ್ಮ

ದರ್ಶನವನ್ನು ಅನುಗ್ರಹಿಸಲಿಲ್ಲ. ನನಗೆ ಪ್ರಿಯವಲ್ಲದ ಪೂರ್ವೋಕ್ತ ಕಬ್ಬಿಣದ ಸರಳು, ಉಕ್ಕಿನ ಪ್ಲೇಟು ಇತ್ಯಾದಿಗಳಿಂದಲೇ ತಯಾರಾದ ಕಾರಿನಲ್ಲಿ ಡೆಟ್ರಾಯ್ಟನ್ನು ದಾಟಿದೆವು. ಮೈ ಚಿಗುಟಿಕೊಂಡು, ನಾವಿನ್ನೂ ಜೀವಂತರಾಗಿದ್ದೇವೆಂದು ದೃಢಪಡಿಸಿಕೊಂಡು, ಕೆನಡಾ ದೇಶದ ಗಡಿ ಕಚೇರಿಗೆ ಹೋದೆವು. ಅಲ್ಲಿಯ ಅಧಿಕಾರಿ ಏನೊಂದು ಪ್ರಶ್ನೆಯನ್ನೂ ಕೇಳದೆ ಪಾಸ್‌ಪೋರ್ಟಿನ ಮೇಲೊಂದು ಮುದ್ರೆ ಒತ್ತಿ ನಮಗೆ ಸುಖಪ್ರಯಾಣವಾಗಲೆಂದು ಹಾರೈಸಿ ಕಳಿಸಿಕೊಟ್ಟ.

ಆ ರಾತ್ರಿ ಸಣ್ಣದೊಂದು ಊರಿನ ಹೋಟಲಿನಲ್ಲಿ ತಂಗಿದ್ದು ಮಾರನೆಯ ದಿನ ನಯಾಗರ ಜಲಪಾತಕ್ಕೆ ಹೋದೆವು. ನಯಾಗರ ನದಿ ಈರಿ (Erie) ಸರೋವರದಿಂದ ಹೊರಟು ಆಂಟೇರಿಯೊ (Ontario) ಸರೋವರವನ್ನು ಸೇರುತ್ತದೆ. ಅದರ ಪ್ರಯಾಣ ಕೇವಲ 35 ಮೈಲಿ. ಈ ದೃಷ್ಟಿಯಿಂದ ಅದು ಸಣ್ಣ ನದಿ. ಜಲಪಾತದ ಎತ್ತರವೂ ಕೊಚ್ಚಿಕೊಳ್ಳುವಂಥದೇನಲ್ಲ—ಅಮೆರಿಕದ ಕಡೆಯ ಜಲಪಾತ 167 ಅಡಿ, ಕೆನಡಾ ಕಡೆಯದು 158 ಅಡಿ. ನಮ್ಮ ಜೋಗ್ ಜಲಪಾತ ಅದಕ್ಕಿಂತ ಸುಮಾರು ಐದುಪಟ್ಟು ಹೆಚ್ಚು ಎತ್ತರ. ಆದರೆ ಸಾಮಾನ್ಯವಾಗಿ ಜೋಗದಲ್ಲಿ ಕಾಣದ ಭವ್ಯತೆಯನ್ನೂ ಬೃಹತ್ತನ್ನೂ ನಯಾಗರದಲ್ಲಿ ಕಂಡಿದ್ದೇನೆ.

ಜೋಗ್ ಜಲಪಾತವನ್ನು ಡಿಸೆಂಬರ್ ತಿಂಗಳಿನಲ್ಲಿ ಹಲವಾರು ಸಾರಿಯೂ ಏಪ್ರಿಲ್‌ನಲ್ಲಿ ಒಂದು ಸಾರಿಯೂ ನೋಡಿದ್ದೇನೆ (ಆಗಸ್ಟ್‌ನಲ್ಲಿ ನೋಡಿದ ಮಾತು ಮುಂದೆ ಬರುತ್ತದೆ.) ಏಪ್ರಿಲ್‌ನಲ್ಲಿ ಕಂಡ ದೃಶ್ಯವನ್ನು ಮರೆಯಬಹುದು. ಡಿಸೆಂಬರಿನಲ್ಲಿ ನಾನು ಮೊದಲ ಸಲ ಅದನ್ನು ನೋಡಿದ್ದು 1925ರ ಸುಮಾರಿನಲ್ಲಿ. ಆಗ ಕಾಡು ಇನ್ನೂ ದಟ್ಟವಾಗಿದ್ದ ಕಾಲ. ರಸ್ತೆಯ ಒಂದು ತಿರುವನ್ನು ದಾಟಿದೊಡನೆ ಕಾಡಿನ ಮರೆಯಲ್ಲಿದ್ದ ನದಿ (ಜಲಪಾತ ಇನ್ನೂ ಕಾಣುತ್ತಿರಲಿಲ್ಲ) ಹಠಾತ್ತಾಗಿ ಕಣ್ಣಿಗೆ ಬಿತ್ತು.

> And on a sudden, lo! The level lake
> And the long glories of the winter moon.
>
> (ಹಠಾತ್ತಾಗಿ ಕಾಣಿಸಿತು, ಆ ಮಟ್ಟಸವಾದ ಸರೋವರ, ಮತ್ತು
> ಅದರ ಮೇಲೆ ನೀಳವಾಗಿ ಹಬ್ಬಿದ ಶಿಶಿರಚಂದ್ರನ ಪ್ರಭೆ)

ನಾನು ಕಂಡದ್ದು ಸರೋವರವಲ್ಲ. ನದಿಯ ಹರವು; ಚಂದ್ರನ ಪ್ರಭೆಯೂ ಅಲ್ಲ, ಸೂರ್ಯನದ್ದು. ಆದರೂ ಟೆನಿಸನ್‌ನ ಆ ಪಂಕ್ತಿಗಳನ್ನು ಹೇಳಿಕೊಂಡ ನೆನಪಿದೆ. ಆಗ ನನ್ನ ಅನುಭವಕ್ಕೆ ಬಂದದ್ದು ಸುಂದರವಾದ ನೋಟ ಮಾತ್ರ

ವಲ್ಲ, 'ದರ್ಶನ'. ಅದರಲ್ಲಿ ದೈವಾಂಶ ಕಂಡು ಅದು ಪವಿತ್ರ ಎನ್ನಿಸಿತು—ವರ್ಡ್ಸ್‌ವರ್ತ್‌ನ ಕವನಗಳಲ್ಲಿ ತೊಯ್ದಿದ್ದ ಮನಸ್ಸಿಗೆ. ಆ ಅನುಭವ ಇನ್ನೂ ಮಸುಕಾಗಿಲ್ಲವಾದರೂ ಆ 'ದರ್ಶನ'ವಾದದ್ದು ಅದೊಂದೇ ಸಾರಿ. ಅಲ್ಲಿಂದೀಚೆಗೆ—ಕಾಡೆಲ್ಲ ತೆಳುವಾಗಿದೆ, ಜನರ ಗೊಂದಲ ಹೆಚ್ಚಿದೆ, ನನ್ನ ಕಣ್ಣಿನ ಮೇಲೆ ಬಳಕೆಯ ಪೊರೆ ಬಂದಿದೆ! ಇವೆಲ್ಲದರಿಂದಾಗಿ ಆ ದೃಶ್ಯವನ್ನು ಕಂಡಾಗ ಹಿಂದಿನ ಉತ್ಸಾಹ 'ಭಕ್ತಿ' ಉಕ್ಕಿ ಬರಲೊಲ್ಲದು. ಆ ಕಣಸಿನ ಕಾಂತಿ ಹೊರಟು ಹೋಯಿತೆಂದು ಒಪ್ಪುತ್ತೇನೆ.

ಶರಾವತಿಯನ್ನು ಜಂಜಾಲಿನಲ್ಲಿ ದಾಟಿದೆನೆಂದು ನೆನಪು. ಜಲಪಾತದ ಬಳಿಗೆ ಬಂದಾಗ ನನ್ನಲ್ಲಿದ್ದ ರಮ್ಯ ಮನೋವೃತ್ತಿ ದೃಶ್ಯದ ಮನೋಹರತೆಯನ್ನು ಹೆಚ್ಚಿಸಿತು. ಆದರೂ ನಾನು ನಿರೀಕ್ಷಿಸಿದ್ದಕ್ಕೂ ವಾಸ್ತವವಾಗಿ ಕಂಡದ್ದಕ್ಕೂ ಅಂತರವಿತ್ತು. ನದಿ ನಾಲ್ಕು ಸಣ್ಣ ಸಣ್ಣ ಭಾಗಗಳಾಗಿ ಒಡೆದು ಧುಮುಕುವುದರಿಂದ ಸೃಷ್ಟಿಯಾದದ್ದು ಚೆಲುವು, ಮನೋಹರತೆ. ಆದರೆ ಪ್ರಕೃತಿಯ ಪ್ರಚಂಡಶಕ್ತಿಯ ಮತ್ತು ಭವ್ಯತೆಯ ಅರಿವಾಗಲಿಲ್ಲ. ಆ ಭವ್ಯತೆ ನಾಲ್ಕು ಸೀಳಾಗಿ ಹಂಚಿಹೋಯಿತು. ರಾಜ, ರೋರರ್, ರಾಕೆಟ್, ಯಾವುದೊಂದಕ್ಕೂ ಪ್ರಮಾಣ ಸಾಲದು. ಪ್ರಪಾತದ ಬಂಡೆಯ ಬಡುವೊಂದರಮೇಲೆ ಬಿದ್ದು ಹರಡಿಕೊಳ್ಳುವ 'ರಾಣಿ'ಯಲ್ಲಿ ಕಾಣುವುದು ಪ್ರಿಯತಮನ ತೊಡೆಯ ಮೇಲೆ ಹರಡಿದ ವಸನದೊಡನೆ ಕುಳಿತ ಯುವತಿಯ ಚಿತ್ರ. ಶಿವನ ಜಟೆಯನ್ನು ಜಗ್ಗಿಸುವ ಗಂಗೆಯ ರಭಸದ ಚಿತ್ರವಲ್ಲ—ಏಕಾಗಬೇಕು! ಅದನ್ನು ನಿರೀಕ್ಷಿಸಿದ್ದು ಸರಿಯಲ್ಲ. (ಕೊಟ್ಟ ಚೆಲುವನ್ನು ಸವಿಯದೆ ಬೇರೊಂದಿಲ್ಲವಲ್ಲ ಎಂದು ತಪಿಸಬಾರದು) ಇದನ್ನು ಇಲ್ಲಿ ಪ್ರಸ್ತಾಪಿಸಿರುವುದರ ಉದ್ದೇಶ: ಅಂದು ನನಗಾದ ಅನುಭವ, ಅದೇ ಜೋಗದಲ್ಲಿ ಆದ ಬೇರೊಂದು ಅನುಭವ, ನಯಾಗರದಲ್ಲಿ ಆದ ಅನುಭವ—ಈ ಮೂರು ಬಗೆಯ ಸೌಂದರ್ಯಗಳ ಸ್ವರೂಪವನ್ನು ನಿರ್ದೇಶಿಸುವುದು.

ಅಂದೇ ನಾನು 'ಈ ಜಲಪಾತವನ್ನು ನೋಡಬೇಕಾದ್ದು ಡಿಸೆಂಬರಿನಲ್ಲಲ್ಲ, ಆಗಸ್ಟ್ ತಿಂಗಳ ಸುಮಾರಿನಲ್ಲಿ; ಶರಾವತಿ ತುಂಬಿ ಹರಿಯುವ ಮಳೆಗಾಲದಲ್ಲಿ' ಎಂದುಕೊಂಡೆ. ನನಗೆ ಮೇಲೆ ಹೇಳಿದ 'ಬೇರೊಂದು ಅನುಭವ' ಆದದ್ದು ಅಂಥ ಕಾಲದಲ್ಲಿ, ಮಳೆಗಾಲದಲ್ಲಿ ಅಲ್ಲಿಗೆ ಹೋಗುವುದು ಹಿಂದೆ ಕಷ್ಟವಾಗಿತ್ತು. ಈಗ ಸುಲಭವಾಗಿರಬಹುದೇನೊ. ನನ್ನ ಸ್ನೇಹಿತರು 'ಈಗೇಕೆ ಹೋಗುತ್ತೀರಿ? ಅಲ್ಲಿ ಏನೂ ಕಾಣುವುದಿಲ್ಲ, ಮಂಜು ಹೊರತು' ಎಂದು ಬುದ್ಧಿ ಹೇಳಿದರು. ಆದರೂ ನನ್ನ ಮಿತ್ರರಾದ ಎಚ್.ಸಿ.ಕೆ. ಭಟ್ಟರನ್ನು ಕಾಡಿ ಪ್ರಯಾಣಕ್ಕೆ

ಏರ್ಪಾಡು ಮಾಡಿಸಿದೆ—ಸುಮಾರು ಆಗಸ್ಟ್ ಮೊದಲನೆಯ ವಾರದಲ್ಲಿ. ಅವತ್ತು ಮಳೆ ಕುಂಭದ್ರೋಣವಾಗಿ ಕರೆಯುತ್ತಿತ್ತು. ಗಾಳಿ ಹುಚ್ಚೆದ್ದು ಘಳಿಗೆಗೊಂದು ಕಡೆಯಿಂದ ಬೀಸುತ್ತಿತ್ತು. ಅದರ ಸಂತತವಾದ ಭೋರ್ಗರೆತ ದೊಡನೆ ಪಾತಾಳದಿಂದ ಒಗೆದು ಬಂದ ಭೋರ್ಗರೆತವೂ ಸೇರಿ ಕಿವಿ ಕಿವುಡಾ ಯಿತು. ಪ್ರಪಾತದ ಬಳಿ ಹೋಗಿ ನಿಂತಾಗ ನಮ್ಮ ತಲೆಯಿಂದ ಸಣ್ಣ ನದಿಗಳು ಇಳಿದದ್ದು ಹಾಗಿರಲಿ, ಮಳೆ ರಾಚಿ ರಾಚಿ ಮುಖಕ್ಕೆ ಅಪ್ಪಳಿಸುತ್ತಿತ್ತು.

ಅಲ್ಲಿ ಏನೂ ಕಾಣುವುದಿಲ್ಲ, ಮಂಜು ಕವಿದಿರುತ್ತೆ, ಎಂದು ಜನ ಹೇಳಿದ್ದು ಸುಳ್ಳಲ್ಲ; ಪೂರ್ತಿ ನಿಜವೂ ಅಲ್ಲ. ಅಂದು ನಾನು ಕಂಡ ದೃಶ್ಯದಲ್ಲಿ ಈ ಉಂಟು-ಇಲ್ಲಗಳ ಕ್ರಮನಿಯಮಗಳಿಲ್ಲದ ಅಕಾಂಡತಾಂಡವವು ಮುಖ್ಯ ವಾದೊಂದು ಅಂಶ. 'ನಾಸದೀಯ ಸೂಕ್ತ'ದ ಕವಿ ಕಂಡದ್ದು ಇಂಥ ದೃಶ್ಯ ವಿರಬೇಕು : ಆಗ ಯಾವುದೂ ಇರಲಿಲ್ಲ, ಯಾವುದೂ ಇಲ್ಲದಿರಲಿಲ್ಲ. ವಾಯು ವಿರಲಿಲ್ಲ (ವಾಯುವಿತ್ತು ಕೂಡ !) ಆಕಾಶವಿರಲಿಲ್ಲ. ಅಲ್ಲಿ ನೀರಿತ್ತೆ ? ಅಳತೆಗೆ ಸಿಕ್ಕದ ಆಳವಿತ್ತೆ? ಇದ್ದದ್ದೆಲ್ಲ chaos, ಗೊಂದಲ ; ರೂಪವಿಲ್ಲ ರೇಷೆಯಿಲ್ಲ. ಯಾವುದೋ ಅಸೀಮಶಕ್ತಿ ಆ ಗೊಂದಲದ ಮೇಲೆ ಆಡಿ ಕವಿದಿದ್ದ ಮಂಜನ್ನು ಆಗಾಗ ಚದರಿಸಿತು. ಹಠಾತ್ತಾಗಿ ಮಂಜನ್ನೂ ಮಳೆಯನ್ನೂ ಸೀಳಿಕೊಂಡು ಬಿಸಿಲು ಬಂತು; ಮಂಜಿನ ಮಾಸಲು ಬಿಳುಪು ಒಡೆದು ಚಂಚಲ ವಾಗಿಯಾದರೂ ಏಳು ಬಣ್ಣಗಳು ಕಾಣಿಸಿಕೊಂಡವು. ಸೃಷ್ಟಿಗೆ ಪ್ರೇರಕಶಕ್ತಿ ಯಾದ ಕಾಮ ಬಿಲ್ಲು ಹಿಡಿದು ಬಂದನೇನೊ. ಗೊಂದಲದ ಒಡಲಿನಿಂದ ಹೊರಟ ಜಲರಾಶಿ ವಿಶ್ವವನ್ನೇ ನಡುಗಿಸುವಂತೆ ಧುಮುಕುವುದು ಕಂಡಿತು. ರೂಪವಿಲ್ಲದಿದ್ದದ್ದು ರೂಪ ತಳೆಯಲಾರಂಭಿಸಿತು. ಈ ದೃಶ್ಯ ಕಂಡಿತು, ಕಾಣ ದಾಯಿತು, ಮತ್ತೆ ಕಂಡಿತು. ಒಂದೊಂದು ಕ್ಷಣ ಸೋತು ಹಿಮ್ಮೆಟ್ಟಿದಂತಿ ದ್ದರೂ ಮತ್ತೆ ಮುನ್ನುಗ್ಗಿ ಸೃಷ್ಟಿಶಕ್ತಿ ಜಯದೆಡೆಗೆ ಸಾಗಿದಂತಿತ್ತು. ಇದು ಚೆಲುವು ಮಾತ್ರವಲ್ಲ; ಇದರ ರಸ ಶೃಂಗಾರವಲ್ಲ, ಅದ್ಭುತ; ಇದು ಲಾಸ್ಯವಲ್ಲ, ತಾಂಡವ; ಭಯಂಕರ, ದಿವ್ಯ ಸುಂದರ, ರುದ್ರರಮ್ಯ!

ನಾವು ನಯಾಗರವನ್ನು ನೋಡಿದ ದಿನ ಅಲ್ಲೂ ಮಳೆಯಿತ್ತು, ಸ್ವಲ್ಪ ಮಂಜೂ ಇತ್ತು. ಆದರೆ ಪ್ರಪಾತವೂ ನೀರ್ಬೀಳೂ ಸ್ಪಷ್ಟವಾಗಿ, ಅದ್ಭುತವಾಗಿ ಅದಮ್ಯಶಕ್ತಿಯುಳ್ಳದ್ದಾಗಿ ಕಾಣುತ್ತಿತ್ತು. ಈ ನದಿಯ ಪಾತ್ರವಿಸ್ತಾರವೂ ಇಲ್ಲಿ ಹರಿಯುವ ನೀರಿನ ಪ್ರಮಾಣವೂ ಹೆಚ್ಚಾದ್ದರಿಂದ ಡಿಸೆಂಬರಿನ ಜೋಗ ದಲ್ಲಿ ಕಾಣದ ಬೃಹತ್ತೂ ಭವ್ಯತೆಯೂ ಇಲ್ಲಿ ಕಾಣುತ್ತವೆ. ನಾವು ಆಗಸ್ಟ ತಿಂಗಳ ಜೋಗದಲ್ಲಿ ಕಂಡದ್ದು ಪ್ರಳಯದಿಂದ ಪ್ರಪಂಚ ಅರಳುತ್ತಿರುವ

ಕಾಲದ ಭಯಾನಕ ಆಂದೋಲನ. ಇಲ್ಲಿ ಕಂಡದ್ದು ಆ ಆಂದೋಲನದ ಪರಿಣಾಮ.

ಆದರೆ ಇಲ್ಲಿಯ ಜನಸಂದಣಿ, ಸಹಸ್ರಗಟ್ಟಲೆ ಮೋಟಾರುಗಳ ಓಡಾಟ, ಅಂಗಡಿಗಳು, ರೆಸ್ಟೊರಾಂಟುಗಳು, ಸ್ಕೈಡೆಕ್ಕುಗಳು*—ಇವೆಲ್ಲ ಸೃಷ್ಟಿಕಾಲದ ವಾತಾವರಣದಲ್ಲಿ ನಾವು ಲೀನರಾಗಲು ಅವಕಾಶಕೊಡಲೊಲ್ಲವು. ಆ ವಾತಾವರಣದ ಬಣ್ಣನೆಯೆಲ್ಲ ನಮ್ಮ ಮನಸ್ಸಿನ ಕಲ್ಪನೆಯಷ್ಟೆ! ಕೋಲ್‌ರಿಜ್ ಹೇಳಿದಂತೆ, ಪ್ರಕೃತಿಯಿಂದ ನಾವು ಕೊಟ್ಟದ್ದನ್ನೇ ಮರಳಿ ಪಡೆಯುತ್ತೇವೆ. 'We receive but what we give.' ಇಲ್ಲಿ ಬಾಹ್ಯವ್ಯಾಪಾರದ ಒತ್ತಡದಿಂದಾಗಿ ಮನೋವ್ಯಾಪಾರ ಹಿಂದೆ ಬೀಳುತ್ತದೆ. ಇಂಥ ಪ್ರೇಕ್ಷಣೀಯ ಸ್ಥಳಗಳಲ್ಲಿ ಇದೊಂದು ದೊಡ್ಡ ವಿರೋಧಾಭಾಸ: ಅವು ಎಲ್ಲರೂ ನೋಡಬೇಕಾದ ಸ್ಥಳಗಳು; ಎಲ್ಲರೂ ನೋಡಹೋದರೆ ಅವುಗಳ ಪ್ರಭಾವ ಕಡಮೆಯಾಗುತ್ತದೆ! ಹಿಂದೆಂದೋ 'ಪಂಚ್' (Punch)ನಲ್ಲಿ ಬಂದ ಕಾರ್ಟೂನಿನ ನೆನಪಾಗುತ್ತಿದೆ (ಅದನ್ನು ನಾನೇ ನೋಡಿದೆನೋ ಅಥವಾ ಯಾರಾದರೂ ಅದರ ವಿಷಯ ಹೇಳಿದರೊ?) ಬೇಸಗೆಯ ಒಂದು ದಿನ ಲಂಡನ್ನಿನ ಜನ ವಿವಿಕ್ತತೆಯನ್ನೂ ಶಾಂತಿಯನ್ನೂ ಅರಿಸಿಕೊಂಡು ಬ್ರೈಟನ್‌ಗೆ ನುಗ್ಗಿದರು. ಇತ್ತ ಬ್ರೈಟನ್ನವನೊಬ್ಬ ಲಂಡನ್ನಿಗೆ ಬಂದು ನಿರ್ಜನವಾದ ಬೀದಿಗಳಲ್ಲಿ ಹಾಯಾಗಿ ಓಡಾಡುತ್ತಿದ್ದ. ಇದೇನು ಇಲ್ಲಿಗೆ ಬಂದೆ ಎಂದು ಕೇಳಿದ್ದಕ್ಕೆ 'ಶಾಂತಿಯನ್ನು ಅರಸುತ್ತ ಬಂದೆ' ಎಂದು ಉತ್ತರ ಕೊಟ್ಟ!

ಟರಾಂಟೊ, ಮಾಂಟ್ರಿಯಲ್ (Toronto, Montreal) ಮುಂತಾದ ನಗರಗಳ ವಿಷಯ ಏನೂ ಹೇಳಬೇಕೆನ್ನಿಸುವುದಿಲ್ಲ. ದೊಡ್ಡನಗರಗಳಿಗೆ ತಮ್ಮದೇ ಆದ ವ್ಯಕ್ತಿತ್ವವಿದೆಯೆಂದು ಜನ ಹೇಳುತ್ತಾರೆ. ಹಳೆಯ ಮೈಸೂರಿಗೆ ಅಂಥ ವ್ಯಕ್ತಿತ್ವವಿತ್ತು. ಈಗಲೂ ಸ್ವಲ್ಪ ಇದೆ. ಹಳೆಯ ದೆಹಲಿಗೂ ಇತ್ತು. ಈಗ ಒಹುಮಟ್ಟಿಗೆ ಇಲ್ಲ. ಆಧುನಿಕ ಬೃಹನ್ನಗರಗಳಿಗೆ ಅದೇನು ವ್ಯಕ್ತಿತ್ವವಿದೆಯೋ

---

*ಸ್ಕೈಡೆಕ್ (Sky-deck) ಗಳನ್ನು ಸ್ಕೈಲಾನ್ (Skylon) ಎಂದೂ ಕರೆಯುತ್ತಾರೆ. ನಾವು ನೀರು ಶೇಖರಿಸಲು ಕಟ್ಟುವ ಎತ್ತರದ ಟ್ಯಾಂಕುಗಳಂತೆ ಇರುತ್ತವೆ. ನಾನು ನೋಡಿದ ಸ್ಕೈಲಾನ್‌ನ ಎತ್ತರ 550 ಅಡಿಯಂತೆ. ಅದರ ಶಿಖರದಲ್ಲಿ ರೆಸ್ಟೊರಾಂಟುಗಳೂ ಅಂಗಡಿಗಳೂ ಇರುತ್ತವೆ. ಲಿಫ್ಟ್‌ನಲ್ಲಿ (ಅದು ಹೊರಗಿನಿಂದ ದೈತ್ಯಪ್ರಮಾಣದ ಹುಳುವಿನಂತೆ ಕಾಣುತ್ತದೆ) ಮೇಲಕ್ಕೆ ಹೋಗಬಹುದು. ಇನ್ನೊಂದು ಸ್ಕೈಲಾನ್‌ನಲ್ಲಿ ಇಡೀ ರೆಸ್ಟೊರಾಂಟೇ ಕೆಳಗಿನಿಂದ ಮೇಲಕ್ಕೆ ಹೋಗುತ್ತದಂತೆ.

ನಾನು ಕಾಣೆ. ಅವು ಫ್ರಾಂಕನ್‌ಸ್ಟೈನ್ ಸೃಷ್ಟಿಸಿದಂಥ ಭೂತಗಳು. ಅವು ಗಳಿಗೆ ವ್ಯಕ್ತಿತ್ವವಿದ್ದರೆ ಅದು ಆಕರ್ಷಕವಾದದ್ದೇನೂ ಅಲ್ಲ—ತಲೆ ಹುಳಿತ ಜನರ ನಿಲುವಿಲ್ಲದ ಪರಿಭ್ರಮಣದಿಂದಲೂ ಹೃದಯ ಶೂನ್ಯತೆಯಿಂದಲೂ ಬರುವ ವ್ಯಕ್ತಿತ್ವ! ಜನಸಂದಣಿ, ಗಲಭೆ, ವಾಹನಗಳ ಓಡಾಟ, ಕಣ್ಣುಕುಕ್ಕಿ ಚೀರುವ ನಿಯಾನ್‌ಸೈನ್ ಜಾಹೀರಾತುಗಳು, ಇವುಗಳು ಒಂದರಲ್ಲಿ ಹೆಚ್ಚು ಮತ್ತೊಂದರಲ್ಲಿ ಕಡಮೆ. ಇದನ್ನು ಬಿಟ್ಟರೆ ಎಲ್ಲ ಆಧುನಿಕ ನಗರಗಳೂ ಒಂದೇ. ಕಾಂಚನಮೃಗದ ಬೆನ್ನಟ್ಟಿ ಹೋಗುವವರ ಸ್ವರ್ಗ.

ಅಥವಾ ಅವುಗಳಲ್ಲಿ ನಾನು ಕಾಣದ ವೈಶಿಷ್ಟ್ಯ ಇದೆಯೊ? ಎಂದೋ ಒಂದು ದಿನ ನಾಲ್ಕು ಬೀದಿಗಳಲ್ಲಿ ತಿರುಗಿ ಮುಂದಿನ ಊರಿಗೆ ಹೋಗುವ ಜನಕ್ಕೆ ಈ ನಗರಗಳು ತಮ್ಮ ವ್ಯಕ್ತಿತ್ವವನ್ನು ಬಿಟ್ಟುಕೊಟ್ಟಾವೆ! ದೊಡ್ಡ ನಗರಗಳಿಗೆ ವಿರುದ್ಧವಾದ ಪೂರ್ವಗ್ರಹ ನನ್ನನ್ನು ಬಲವಾಗಿ ಮೆಟ್ಟಿದೆಯೆಂದು ಒಪ್ಪಬೇಕು. ನನ್ನ ದೃಷ್ಟಿಯಲ್ಲಿ ಕೈಗಾರಿಕಾಕ್ರಾಂತಿಯ ಮತ್ತು ಯಂತ್ರ ಯುಗದ ಫಲವಾಗಿ ಬೆಳೆದ ಈ ನಗರಗಳು....ಒಂದು ಕಡೆ ನಿರ್ದಯವಾದ ಧನಾಕಾಂಕ್ಷೆ ಪ್ರತಿಷ್ಠಾಕಾಂಕ್ಷೆ ಅಧಿಕಾರದಾಹಗಳನ್ನೂ ಮತ್ತೊಂದು ಕಡೆ ಅಸೂಯೆ ದ್ವೇಷಗಳನ್ನೂ ಕೆರಳಿಸಿ ಕ್ರೂರಪಾತಕಗಳಿಗೆ ಜನರನ್ನು ಪ್ರೇರಿಸುವ ಪೆಡಂಭೂತಗಳು; ಸಂಪತ್ತನ್ನೂ ಸಂಸ್ಕೃತಿಯನ್ನೂ ಉಳಿದೆಲ್ಲ ಕಡೆಯಿಂದಲೂ ಸೆಳೆದು ತಮ್ಮಲ್ಲೇ ಕೇಂದ್ರೀಕರಿಸಿಕೊಂಡು ಬೆಳೆದು ಮಾನವಸಮಾಜಕ್ಕೆ ಮೃತ್ಯುವಾಗುವ ಕ್ಯಾನ್ಸರುಗಳು. ಅಮೆರಿಕದ ದೊಡ್ಡ ನಗರಗಳಿಂದ ಲಕ್ಷಗಟ್ಟಲೆ ಜನರು ಸಣ್ಣ ಸ್ಥಳಗಳಿಗೆ ಹೊರಟು ಹೋಗುತ್ತಿದ್ದಾರೆಂದು ಕೆಲವು ತಿಂಗಳ ಕೆಳಗೆ ಯಾವುದೋ ವೃತ್ತಪತ್ರಿಕೆಯಲ್ಲಿ ಓದಿದೆ. ಭಾರತದಲ್ಲಿ ಬೇಕುಬೇಕಾಗಿ ನಗರಗಳನ್ನು ದೊಡ್ಡದು ಮಾಡಲು ಯೋಜನೆಗಳನ್ನು ತಯಾರಿಸುವುದನ್ನು ನೋಡಿದರೆ 'ಇದೇನು ಹುಚ್ಚು' ಎನ್ನಿಸುತ್ತದೆ. ದೆಹಲಿ ಬೊಂಬಾಯಿ ಕಲ್ಕತ್ತ ಗಳು ಈಗಾಗಲೇ ಪಶ್ಚಿಮದ ಬೃಹನ್ನಗರಗಳ ಕಲ್ಯಾಣಗುಣಗಳನ್ನು ತಮ್ಮಲ್ಲೂ ಬೆಳೆಸಿಕೊಂಡಿವೆ. ನಮ್ಮ ಬೆಂಗಳೂರು ಅದೇ ದಾರಿ ಹಿಡಿಯಿತಲ್ಲ ಎಂದು ವ್ಯಸನವಾಗುತ್ತದೆ. ಮೈಸೂರಿನ ಬಳಿ 150 ಕೈಗಾರಿಕೆಗಳನ್ನು ಹುಟ್ಟಿಹಾಕ ಬೇಕೆಂದು ಯೋಜನೆ ಹಾಕುತ್ತಿದ್ದಾರಂತೆ. ಹೊಳೆನರಸೀಪುರದಲ್ಲೋ ಅಕ್ಕಿಹೆಬ್ಬಾಳಿನಲ್ಲೋ ಹಾಕಿ ಆ ಊರುಗಳನ್ನು ಅಭಿವೃದ್ಧಿಗೆ ತರಬಾರದೇಕೆ? ಮಾನವೀಯತೆಯನ್ನು ಇನ್ನೂ ಕಳೆದುಕೊಳ್ಳದಿರುವ ನನ್ನ ಸುಂದರ ಮೈಸೂರಿಗೆ ಈ 'ಪ್ರಗತಿ'ಯ ಪ್ಲೇಗು ತಟ್ಟದಿರಲಿ.

ದೊಡ್ಡ ನಗರಗಳ ಮೇಲೆ ನನಗಿರುವ ದ್ವೇಷವನ್ನು ಕಕ್ಕಿ ಹೊರಹಾಕಿದ

ಮೇಲೆ ಮನಸ್ಸು ಸ್ವಲ್ಪ ಹಗುರವಾಗಿದೆ!

ಟರಾಂಟೋವಿನಲ್ಲೂ ಮಾಂಟ್ರಿಯಲ್‌ನಲ್ಲೂ 3-4 ಘಂಟೆ ಸುತ್ತಿದ ಶಾಸ್ತ್ರ ಮಾಡಿದೆವು—ಆ ನಗರಗಳನ್ನು ನೋಡಿದ್ದೇವೆಂದು ಹೇಳುವಂತಿರಬೇಕಷ್ಟೆ! ಅಲ್ಲಿಂದ ಸಹಸ್ರದ್ವೀಪ ಪ್ರಾಂತವನ್ನು ನೋಡಲು ಹೋದೆವು. ಹೆಸರು ಸಹಸ್ರದ್ವೀಪವಾದರೂ ವಾಸ್ತವವಾಗಿ ಅಲ್ಲಿ 1800 ದ್ವೀಪಗಳಿವೆಯಂತೆ. ಅವೆಲ್ಲ ಇರುವುದು ಸೇಂಟ್‌ಲಾರೆನ್ಸ್ ನದಿಯ ವಿಸ್ತರವಾದ ಪಾತ್ರದಲ್ಲಿ. ಕೆಲವು ಕೇವಲ 300 400 ಚದರಗಜ ಇರುವ ದ್ವೀಪಗಳು; ಇನ್ನು ಕೆಲವು ಹಲವಾರು ಚದರಮೈಲಿಯಷ್ಟು ವಿಸ್ತಾರವುಳ್ಳವು. ಎಷ್ಟೋ ಸಣ್ಣ ದ್ವೀಪಗಳನ್ನು ಧನಿಕರು ಕೊಂಡು ವಿಹಾರಗೃಹಗಳನ್ನು ಕಟ್ಟಿಕೊಂಡಿದ್ದಾರೆ. ಸಾಧಾರಣವಾದ ಪಟದ ದೋಣಿಗಳು, ವೇಗನೌಕೆಗಳು, ನೀರಿನ ಮೇಲೂ ಅಂತರಿಕ್ಷದಲ್ಲೂ ಸಂಚರಿಸಬಲ್ಲ ಹೈಡ್ರೊಪ್ಲೇನುಗಳು—ಎಲ್ಲಿ ಓಡಾಡುತ್ತಿರುತ್ತವೆ. ಆಗಾಗ ಆಕಾಶದಲ್ಲಿ ಹೆಲಿಕಾಪ್ಟರೂ ಕಾಣುವುದುಂಟು. ದ್ವೀಪಗಳ ನಡುವೆ ಸುತ್ತಿ ಸುತ್ತಿ ತನ್ನನ್ನೇ ತಾನು ಹುಡುಕಿಕೊಂಡು ಬಿಸಿಲಿನಲ್ಲಿ ಹೊಳೆಹೊಳೆದು ಇಲ್ಲಿ ಕಾಲುವೆಯಂತೆ ಇಕ್ಕಟ್ಟಾಗಿ ಅಲ್ಲಿ ಸರೋವರದಂತೆ ವಿಸ್ತಾರವಾಗಿ ಹರಿಯುವ ನದಿ: ಬಣ್ಣ ಬಣ್ಣದ ಬಟ್ಟೆಗಳನ್ನು ಧರಿಸಿ (ಕೆಲವು ವೇಳೆ ಧರಿಸದೆ!) ಬಣ್ಣ ಬಣ್ಣದ ದೋಣಿಗಳಲ್ಲಿ ತಿರುಗುವ ಜನ; ಅಲ್ಲೊಂದು ಸುಂದರವಾದ ಉಪವನದಲ್ಲಿ ಪಾದ್ರಿಯ ಬೋಧನೆಯನ್ನು ಕೇಳುತ್ತಿರುವ ಭಕ್ತವೃಂದ; ಮತ್ತೊಂದು ಕಡೆ ಹಳೆಯ ಕಾಲದ ಕೋಟೆಮನೆಯಂತಿರುವ ಕಟ್ಟಡ; ಕೆನಡಾಕ್ಕೂ ಸಂಯುಕ್ತಸಂಸ್ಥಾನಗಳಿಗೂ ಸಂಪರ್ಕ ಕಲ್ಪಿಸುವ ದೈತ್ಯಪ್ರಮಾಣದ ಸೇತುವೆ; ಎರಡು ದ್ವೀಪಗಳನ್ನು ಸೇರಿಸುವ 20-30 ಅಡಿಗಳ ಸಣ್ಣ ಸೇತುವೆ. (ಇಂಥದೊಂದು ಪ್ರಪಂಚದ ಅಂತರ ರಾಷ್ಟ್ರೀಯ ಸೇತುವೆಗಳಲ್ಲಿ ಅತಿ ಸಣ್ಣದಂತೆ)—ಈ ಪ್ರಾಂತದ ಸೊಬಗು ವೈವಿಧ್ಯಮಯ. ಪ್ರವಾಸಿಗಳ ಅನುಕೂಲಕ್ಕಾಗಿ ಇಟ್ಟಿರುವ ಸಣ್ಣ ಹಡಗಿನಲ್ಲಿ ನಾವು 3-4 ಘಂಟೆ ಆ ಸ್ಥಳವನ್ನೆಲ್ಲ ಸುತ್ತುಗಟ್ಟಿದೆವು. ನನಗೆ ಅದು ಬಹಳ ಹಿತವಾದ ಅನುಭವ, ಅನೇಕ ವೇಳೆ ಅದನ್ನು ಮನಸ್ಸಿನಲ್ಲಿ ಪುನಃ ಸೃಷ್ಟಿಮಾಡಿಕೊಂಡು ಆನಂದಪಟ್ಟಿದ್ದೇನೆ.

ಕ್ವಿಬೆಕ್‌ನಲ್ಲಿ ಸಂಯುಕ್ತ ಸಂಸ್ಥಾನಗಳ ಕಾನ್ಸುಲೇಟ್‌ಗೆ (Consulate) ಹೋಗಿ ನನ್ನ ವೀಸಾವನ್ನು ಮತ್ತೆ ಊರ್ಜಿತಮಾಡಿಸಿಕೊಳ್ಳಬೇಕಾಗಿತ್ತು. ನನ್ನನ್ನು ಆ ಕಚೇರಿಯಲ್ಲಿ ಬಿಟ್ಟು ರಾಮು-ಡಯಾನರು ಊರು ಸುತ್ತುವುದಕ್ಕೆ ಹೊರಟರು. ಕಾನ್ಸುಲೇಟ್‌ನೊಳಕ್ಕೆ ಹೋದೊಡನೆ ಒಬ್ಬ ನಗುಮುಖದ ಮಹಿಳೆ ಎಕ್ಸ್‌ಪ್ರೆಸ್ ಟ್ರೈಲಿನ ವೇಗದಿಂದ ಏನೋ ಎರಡು ಮಾತಾಡಿದಳು. ಆ

ಪ್ರಾಂತದಲ್ಲಿ ಫ್ರೆಂಚನ್ನು ಹೆಚ್ಚು ಬಳಸುತ್ತಾರೆಂದು ಗೊತ್ತಿದ್ದರಿಂದ ಅವಳು ಆ ಭಾಷೆಯಲ್ಲೇ ಮಾತಾಡಿರಬೇಕೆಂದು ಊಹಿಸಿದೆ. ನಾನು ಅರ್ಧಶತಮಾನದ ಹಿಂದೆ ಕಲಿತಿದ್ದ ಅಲ್ಪಸ್ವಲ್ಪ ಫ್ರೆಂಚು ಕೂಡ ಬಳಕೆಯಿಲ್ಲದೆ ಎಂದೋ ತುಕ್ಕುಹಿಡಿದುಹೋಗಿತ್ತು. ಅಲ್ಲದೆ ಇಲ್ಲಿಯ ಜನರ ಆ್ಯಕ್ಸೆಂಟ್‌ನ ಮತ್ತು ಉಚ್ಚಾರಣೆಯ ವೈಶಿಷ್ಟ್ಯದಿಂದಾಗಿ ಅವರ ಇಂಗ್ಲಿಷೇ ಎಷ್ಟೋ ವೇಳೆ ಗೊತ್ತಾಗುವುದಿಲ್ಲ; ಇನ್ನು ಫ್ರೆಂಚಿನ ಮಾತೇನು! ನನ್ನ ಮುಖ ನೋಡಿ ಸಂದೇಹದಿಂದ ಆಕೆ “Parlez vous Francaise?” (ನೀವು ಫ್ರೆಂಚ್ ಮಾತಾಡಬಲ್ಲಿರಾ?) ಎಂದು ಕೇಳಿದಳು. ನಿಧಾನವಾಗಿ ಮಾತಾಡಿದ್ದರಿಂದ ಅದಷ್ಟು ಅರ್ಥವಾಯಿತು. “Non, madame: mais je parle Anglais” (ಇಲ್ಲ ತಾಯಿ, ಆದರೆ ಇಂಗ್ಲಿಷ್ ಮಾತಾಡಬಲ್ಲೆ.) ಎಂದು ಉತ್ತರಕೊಟ್ಟೆ. ಆಕೆ ಇಂಗ್ಲೀಷಿನಲ್ಲೇ ಮಾತನ್ನು ಮುಂದುವರಿಸಿದಳು:

“ನೀವು ಫ್ರೆಂಚ್‌ನಲ್ಲೇ ಉತ್ತರಕೊಟ್ಟಿರಲ್ಲ?”

“ಬರುವ ಒಂದೆರಡು ಮಾತನ್ನು ನಿಮ್ಮೆದುರಿಗೆ ಮೆರಸೋಣ ಎಂಬ ಜಂಬ ಅಷ್ಟೆ! (ಇದನ್ನು ಇಲ್ಲಿ ಕಾಣಿಸಿರುವುದೂ ಜಂಬವೇ!), ಅದರಲ್ಲಿ ವ್ಯಾಕರಣದೋಷವೇನೂ ಇರಲಿಲ್ಲ, ತಾನೆ!”

ಆಕೆ ನಕ್ಕು ನನ್ನ ಪಾಸ್‌ಪೋರ್ಟನ್ನು ಪರೀಕ್ಷಿಸಿ ಒಂದು ಫಾರಂ ಕೊಟ್ಟಳು.

“ಇದನ್ನು ಭರ್ತಿಮಾಡಿಕೊಡಿ. ಜೊತೆಗೆ ನಿಮ್ಮದೊಂದು ಫೋಟೋ ಕೊಡಬೇಕು.”

“ನನ್ನಲ್ಲಿ ಈಗ ಫೋಟೋ ಇಲ್ಲವಲ್ಲ? ನಾನು ಇವತ್ತು ಸಂಜೆಯೇ ಗಡಿದಾಟಿ ಸಂಯುಕ್ತ ಸಂಸ್ಥಾನಗಳಿಗೆ ಹೋಗಬೇಕು. ಫೋಟೋ ತೆಗೆಸಿಕೊಳ್ಳುವಷ್ಟು ಪುರಸತ್ತಿಲ್ಲ”

“ಇಲ್ಲದಿದ್ದರೆ ಕೆಟ್ಟಿತು, ಬಿಡಿ. (If you can't you can't) ಏನಾದರೂ ಮಾಡೋಣ. ನೀವು ಹತ್ತು ನಿಮಿಷ ಕಾಯಬೇಕಾಗುತ್ತೆ. ಇಲ್ಲೇ ಕೂತುಕೊಳ್ಳಬಹುದು, ಅಥವಾ ಒಂದು ಸುತ್ತು ಹಾಕಿಕೊಂಡು ಬರಬಹುದು.”

ಫಾರಂ ಭರ್ತಿಮಾಡಿಕೊಟ್ಟೆ; ಮಳೆಬರುತ್ತಿದ್ದದ್ದರಿಂದ ಅಲ್ಲೇ ಕುಳಿತೆ. ನಾಲ್ಕೈದು ನಿಮಿಷಗಳೊಳಗಾಗಿ ಕಾನ್ಸಲ್‌ರೇ ತಮ್ಮ ಕೊಠಡಿಯ ಬಾಗಿಲು ತೆಗೆದು ‘ಒಳಗೆ ಬನ್ನಿ’ ಎಂದರು. ಅವರ ಕೊಠಡಿ ಅಚ್ಚುಕಟ್ಟಾಗಿದ್ದರೂ ಅದರಲ್ಲಿ ಡೌಲೇನೂ ಕಾಣಲಿಲ್ಲ. ಆತನ ಮುಖದಲ್ಲೂ ಮಾತಿನಲ್ಲೂ ಪ್ರಸನ್ನತೆಯಿತ್ತು.

"ನಿಮ್ಮನ್ನು ಸ್ವಲ್ಪ ಹೊತ್ತು ಕಾಯಿಸಿದೆ, ಕ್ಷಮಿಸಿ. (ನನ್ನ ಅರ್ಜಿಯನ್ನು ನೋಡುತ್ತ) ನೀವು ಭಾರತೀಯರು (So, you are from India)."

"ಹೌದು."

"ನೀವು ಇಂಗ್ಲಿಷ್‌ನಲ್ಲಿ ಡಿಗ್ರಿ ಪಡೆದದ್ದು (ನಾನು 'ಉದ್ಯೋಗ'ದ ಕಾಲಮ್‌ನಲ್ಲಿ ನಿವೃತ್ತ ಇಂಗ್ಲಿಷ್ ಪ್ರೊಫೆಸರ್ ಎಂದು ಬರೆದಿದ್ದೆ) ಅಮೆರಿಕದಲ್ಲೋ ಇಂಗ್ಲೆಂಡಿನಲ್ಲೊ ?"

"ಹೊರದೇಶದಲ್ಲಲ್ಲ, ನಮ್ಮ ಮೈಸೂರು ವಿಶ್ವವಿದ್ಯಾಲಯದಲ್ಲೇ."

"ನಮ್ಮ ದೇಶ ನಿಮಗೆ ಹೇಗನ್ನಿಸುತ್ತೆ ? ಎಲ್ಲೆಲ್ಲಿ ಸುತ್ತಿದಿರಿ ?"

ನಾನು ನಾಲ್ಕು ಮಾತಿನಲ್ಲಿ ಉತ್ತರಕೊಟ್ಟೆ.

(ಹಸನ್ಮುಖದಿಂದ) "ನಮ್ಮನ್ನು (ಅಂದರೆ ಅಮೆರಿಕನ್ನರನ್ನು) ಹೊಗಳಬೇಕು ಅನ್ನಿಸುತ್ತೋ ಬಯ್ಯಬೇಕು ಅನ್ನಿಸುತ್ತೊ ? ಹೇಳಿ, ನೋಡೋಣ!"

"ನಿಮ್ಮ ಸೌಜನ್ಯಕ್ಕೆ ಪ್ರತಿಕ್ರಿಯೆ ಹೊಗಳಿಕೆಯೊಂದೇ!"

ಆತ ನಕ್ಕ. "ನನ್ನೊಬ್ಬನ ಸೌಜನ್ಯ ಮಾತ್ರ ಲೆಕ್ಕಕ್ಕೆ ಬಂದಹಾಗಾಯಿತು. ಒಟ್ಟು ಅಮೆರಿಕದ ಮೇಲೆ ನಿಮಗೇನೋ ನಚ್ಚಿರುವಂತೆ ಕಾಣುತ್ತೆ."

"ಛೇ ಛೇ, ಹಾಗಲ್ಲ. ಸೌಜನ್ಯದ ವಿಷಯದಲ್ಲೂ ನೀವು ಅಮೆರಿಕದ ಪ್ರತಿನಿಧಿ ಎಂದು ನನ್ನ ಭಾವನೆ."

ನಾನು ಮಾತು ಮುಗಿಸುವುದರೊಳಗೆ ಆತನ ಸಹೋದ್ಯೋಗಿ ನನ್ನ ಪಾಸ್‌ಪೋರ್ಟನ್ನು ತಂದುಕೊಟ್ಟಳು. ಅವರು ಮುದ್ರೆ ಒತ್ತಿದೆಯೆಂದು ದೃಢ ಮಾಡಿಕೊಂಡು ಅದನ್ನು ನನಗೆ ಕೊಟ್ಟರು. ಆತನಿಗೂ ಆತನ ಸಹೋದ್ಯೋಗಿಗೂ ವಂದನೆ ಸಲ್ಲಿಸಿ ಅವರ ಸಜ್ಜನಿಕೆಯನ್ನು ನೆನೆದು ಆನಂದಪಡುತ್ತ ಅಲ್ಲಿಂದ ಹೊರಟೆ.

ಕ್ವಿಬೆಕ್‌ನಿಂದ ಅಂದೇ ಹೊರಟು ಗಡಿ ದಾಟಿ ಮೆಯ್ನ್ ರಾಜ್ಯದ ಸಣ್ಣದೊಂದು ಊರಿನಲ್ಲಿ ತಂಗಿದೆವು. ಮಾರನೆಯ ದಿನ ಅರ್ಕೇಡಿಯ ನ್ಯಾಷನಲ್ ಪಾರ್ಕಿಗೆ ಮೀಸಲು. ಸರೋವರ ಕಾಡು ಬೆಟ್ಟಗುಡ್ಡಗಳ ಸೊಬಗಿನ ಜೊತೆಗೆ ಇಲ್ಲಿ ಸಮುದ್ರದ ಗಾಂಭೀರ್ಯವೂ ಸೇರುತ್ತದೆ. ಈ ಪಾರ್ಕ್ ಇರುವುದು ಒಂದು ದ್ವೀಪದಲ್ಲಿ. ಇಲ್ಲಿಯ ಬೆಟ್ಟಗಳಲ್ಲಿ ಎಲ್ಲಕ್ಕಿಂತ ಎತ್ತರವಾದ ಮೌಂಟ್ ಕ್ಯಾಡಿಲಾಕ್ ಮೇಲೆ ನಿಂತು ನೋಡಿದರೆ ಪಾರ್ಕಿನ ಸೌಂದರ್ಯದ ವೈವಿಧ್ಯವನ್ನು ಮನಗಾಣಬಹುದು, ಇಲ್ಲಿರುವ ತೊಂದರೆಯೊಂದೇ : ಪ್ರವಾಸಿಗಳ ನೂಕುನುಗ್ಗಲು. ಎಲ್ಲಿ ನೋಡಿದರೂ ಬೆಟ್ಟಹತ್ತುವ ಈಜುವ ಓಡುವ ಕುಣಿಯುವ ಜನರ ಗುಂಪು.

ಕೆನಡಾದ ದಕ್ಷಿಣ ಭಾಗದಲ್ಲೂ ಮೆಯ್ನ್ ರಾಜ್ಯದಲ್ಲೂ ಪ್ರಯಾಣ ಮಾಡುತ್ತಿದ್ದಾಗ 'ಇಲ್ಲೇ ಮನೆಕಟ್ಟಿಕೊಂಡು ನೆಲಸುವುದಾದರೆ ಎಷ್ಟು ಸುಖ' ಎನ್ನಿಸಿತು. ಇಲ್ಲಿ ಜಮೀನನ್ನು ಕೊಳ್ಳುವುದು ಕಷ್ಟವೂ ಅಲ್ಲ (ಈ ಮಾತು ಬಹುಶಃ ನ್ಯಾಷನಲ್ ಪಾರ್ಕಿನ ಹತ್ತಿರದಲ್ಲಿರುವ ಸ್ಥಳಗಳಿಗೆ ಅನ್ವಯಿಸು ವುದಿಲ್ಲ.) ಗಡಿ ದಾಟುವುದಕ್ಕೆ ಸ್ವಲ್ಪ ಮುಂಚೆ ಕುತೂಹಲದಿಂದ ಅಲ್ಲಿ ಜಮೀ ನಿನ ಬೆಲೆ ಎಷ್ಟೆಂದು ವಿಚಾರಿಸಿದೆ—ಎಕರೆಗೆ 4–5 ಡಾಲರು! ಆದರೆ ಇಲ್ಲಿ ವರ್ಷದ ಬಹು ಭಾಗ ಅಸಾಧ್ಯವಾದ ಚಳಿ; ಪೈನ್ ಕಾಡು ಹೊರತು ಇನ್ನೇನು ಬೆಳೆಯುವುದೂ ಕಷ್ಟವಂತೆ, ನಾವು ಹೋದಾಗಲೇನೊ ಜನರ ಓಡಾಟ ಹೆಚ್ಚಾಗಿಯೇ ಇತ್ತು. ಸರೋವರಗಳ ದಡದಲ್ಲೂ ಕಾಡಿನ ಸೆರಗಿನಲ್ಲೂ ಅಲ್ಲೊಂದು ಡೇರ, ಇಲ್ಲೊಂದು ಪೈನ್ ದಿಮ್ಮಿಗಳಿಂದ ಕಟ್ಟಿದ ಮನೆ, ನಮ್ಮ ಮೆಕ್‌ಮಿಲನ್‌ರ 'ಕ್ಯಾಂಪ್‌ವೈಲ್' (Camp-a-while) ನಂಥ ಪಾರ್ಕು ಗಳಲ್ಲಿ ನಾಲ್ಕಾರು ಕಾರುಗಳು, ಟ್ರೈಯ್ಲರ್‌ಗಳು, ನೀರಿನಲ್ಲಿ ದೋಣಿಗಳು, ಅನೇಕರಿಗೆ ಆ ಟ್ರೈಯ್ಲರುಗಳೇ ಮನೆ.

ಈ ಜನರಿರುವ ವಾತಾವರಣಕ್ಕೆ ಮನೆಗಿಂತ ಟ್ರೈಯ್ಲರೇ ಚೆನ್ನಾಗಿ ಹೊಂದುತ್ತದೆ. ಮನೆ ಎನ್ನುವುದು ಸ್ಥಾಣು. ಅಮೆರಿಕನ್ನರಾದರೋ ಸದಾ ಚಲಿಸುತ್ತಿರುವ ಜನ. ಅಮೆರಿಕನ್ ಜೀವನದ ಸಂಕೇತವಾಗಿ ಒಂದೇ ಒಂದು ವಸ್ತುವಿನ ಹೆಸರು ಹೇಳು ಎಂದರೆ ಹಿಂದೆ ಮುಂದೆ ನೋಡದೆ 'ಕಾರ್' ಎಂದು ಉತ್ತರ ಕೊಡಬಹುದು. ಅಲೆಮಾರಿಗಳಾಗಿದ್ದ ಕೆಂಪು ಇಂಡಿಯನ್ ಜನರನ್ನು ಕೊಂದು ಅಥವಾ ಓಡಿಸಿ ಅವರ ಸ್ಥಾನದಲ್ಲಿ ನೆಲಸಿದ ಈ ನಾಗರಿಕ ಜನ ಮತ್ತೊಂದು ಬಗೆಯ ಅಲೆಮಾರಿಗಳಾಗಿದ್ದಾರೆ. ಧನಿಕರಾದ ಜನ ಬೇಸಗೆಯಲ್ಲಿ ಮೆಯ್ನ್‌ನಂಥ ಉತ್ತರದ ರಾಜ್ಯ, ಚಳಿಗಾಲದಲ್ಲಿ ಫ್ಲಾರಿಡ ಅಥವಾ ಅರಿಜೋನ —ಹೀಗೆ ಹವದ ಜೆನ್ನಟ್ಟಿ ತಿರುಗುತ್ತಿರುತ್ತಾರೆ. ಮೆಕ್‌ಮಿಲನ್ ದಂಪತಿಗಳೇ ಇದಕ್ಕೆ ಉದಾಹರಣೆ. ಇದು ಸ್ವಾಭಾವಿಕವೇನೊ. ಒಂದೇ ಕಡೆ ಕುಳಿತು ತಪಸ್ಸು ಮಾಡುವುದಕ್ಕೆ ಇವರೇನು ಋಷಿಗಳು ಕೆಟ್ಟುಹೋದರೆ!

ಇಲ್ಲಿ ಸರಳ ಜೀವಿಗಳಿಲ್ಲವೆಂದಲ್ಲ. ನಾನು ಬೆಂಗಳೂರಿನಲ್ಲಿ ಕಂಡಿದ್ದ ಪ್ರೊ. ಸ್ಕಾಟ್ ನಿಯರಿಂಗ್ ಇಲ್ಲೇ—ಮೆಯ್ನ್ ರಾಜ್ಯದಲ್ಲೇ—ಹಾರ್ಬರ್ ಸ್ಪೈಡ್ ಎಂಬ ಊರಿನ ಹತ್ತಿರ ಜಮೀನು ಮಾಡಿಕೊಂಡು ರೈತಜೀವನ ನಡಸು ತ್ತಿದ್ದಾರೆ. ನಮ್ಮ ಪುರಾತನ ಕಾಲದ ಆಶ್ರಮವಾಸಿಗಳಂತೆ ಅವರೂ ಚಿಂತನ ಶೀಲರು, ಅನ್ವೇಷಕರು; ಈಗ ಪ್ರವಚನದಲ್ಲಿ ತೊಡಗಿಲ್ಲದಿದ್ದರೂ (ಅವರಿಗೆ 96 ವಯಸ್ಸು) ಬರವಣಿಗೆಯ ಮೂಲಕ ತಮ್ಮ ಆದರ್ಶವನ್ನೂ ಜೀವನಾನುಭವ

ವನ್ನೂ ಪ್ರಸಾರಮಾಡುತ್ತಿದ್ದಾರೆ. The Conscience of a Radical, Freedom: Promise and Menace ಮುಂತಾದ ಅನೇಕ ಪುಸ್ತಕಗಳನ್ನು ಬರೆದಿರುವುದು ಮಾತ್ರವಲ್ಲದೆ ತಮ್ಮ ಆದರ್ಶಕ್ಕನುಸಾರವಾಗಿ ತಮ್ಮ ಬದುಕನ್ನೂ ರೂಪಿಸಿಕೊಂಡಿದ್ದಾರೆ. ಅವರಿರುವ ಮನೆ ಅವರೇ ಸ್ವಂತ ದುಡಿಮೆಯಿಂದ—ದುಡ್ಡಿನಿಂದಲ್ಲ, ದುಡಿಮೆಯಿಂದ—ಕಟ್ಟಿದ್ದು. ತಮಗೆ ಬೇಕಾದ ಧಾನ್ಯ, ತರಕಾರಿ, ಹಣ್ಣು ಎಲ್ಲವನ್ನೂ ತಾವೇ ಬೆಳೆದುಕೊಳ್ಳುತ್ತಾರೆ. ನನ್ನ ಮಿತ್ರರಾದ ಭೋಲಾದತ್ತ ಪಂತರಿಗೂ ಅವರಿಗೂ ಬಹಳ ಸ್ನೇಹ. ಅಮೆರಿಕಕ್ಕೆ ಹೋಗುವ ಯೋಚನೆ ಮಾಡಿದಾಗ ನಿಯರಿಂಗರನ್ನು ನೋಡಬೇಕೆಂದುಕೊಂಡೆನಾದರೂ ಅವರ ವಿಳಾಸವನ್ನು ಗುರುತು ಹಾಕಿಕೊಳ್ಳಲಿಲ್ಲ.

ಸರಳಜೀವನ ನಡಸಿದ ಅಮೆರಿಕನ್ನರ ಮಾತು ಬಂದಾಗ ಥೋರೋ (Thoreau) ವನ್ನು ನೆನೆಯದಿರುವುದು ಅಸಾಧ್ಯ. ಆತ ಮೆಯ್ನ್ ರಾಜ್ಯದಲ್ಲಿ ಬೇಕಾದಷ್ಟು ಓಡಾಡಿದವನು; ಮಹಾತ್ಮಾಗಾಂಧಿಯವರ ಮೆಚ್ಚಿಕೆಗೆ ಪಾತ್ರನಾದವನು; ಪ್ರಕೃತಿಪ್ರಿಯ; ಪ್ರಸಿದ್ಧವಾದ 'ವಾಲ್ಡನ್' (Walden) ಎಂಬ ಪುಸ್ತಕವನ್ನು ಬರೆದವನು. ಆತ ಹುಟ್ಟಿದ್ದು ಬೆಳೆದದ್ದು ತನ್ನ ಜೀವಮಾನವನ್ನೆಲ್ಲ ಕಳೆದದ್ದು ಅಮೆರಿಕದಲ್ಲಿ. ಅಮೆರಿಕದವರಿಗೆ ಅವನ ವಿಷಯದಲ್ಲಿ ಹೆಮ್ಮೆ. ಆದರೂ ಅಮೆರಿಕದಲ್ಲಿ ಪ್ರೇರಕಶಕ್ತಿಯಾಗಿರುವುದು ಅವನ ಆದರ್ಶವಲ್ಲ ಎನ್ನಿಸುತ್ತದೆ.

* * *

ನಾವು ನ್ಯೂಯಾರ್ಕನ್ನು ತಲಪುವ ಮುನ್ನ ನೋಡಬೇಕೆಂದುಕೊಂಡಿದ್ದ ಸ್ಥಳಗಳಲ್ಲಿ ಒಂದೇ ಒಂದು ಉಳಿದುಕೊಂಡಿತ್ತು; ಮೌಂಟ್ ವಾಷಿಂಗ್ಟನ್. ಅದು ಶ್ವೇತ ಪರ್ವತ ಶ್ರೇಣಿಯ ಮಧ್ಯದಲ್ಲಿದೆ; ಆ ಶ್ರೇಣಿಯಲ್ಲಿ ಮಾತ್ರವಲ್ಲ, ಪೂರ್ವ-ಉತ್ತರ ಅಮೆರಿಕದಲ್ಲಿ ಅದೇ ಅತ್ಯುನ್ನತ ಶಿಖರ; ಅದರ ಎತ್ತರ 6288 ಅಡಿ. ಕೆಂಪು ಇಂಡಿಯನ್ನರ ನಂಬಿಕೆಯಂತೆ ಅದು ದೇವರ ವಾಸಸ್ಥಾನ—ಪುರಾತನ ಗ್ರೀಕರಿಗೆ ಒಲಿಂಪಸ್ ಇದ್ದಂತೆ; ನಮಗೆ ಕೈಲಾಸ ಇರುವಂತೆ. ಈಗ ಮೇಲಕ್ಕೆ ಹೋಗುವುದಕ್ಕೆ ಒಂದು ಕಾಗ್ ರೈಲು ಮಾರ್ಗ ಇದೆ; ಕಾರುಗಳು ಹೋಗಲು ರಸ್ತೆಯೂ ಇದೆ. ಬೆಟ್ಟದ ಮೇಲೆ ಅಂಗಡಿಗಳು, ರೆಸ್ಟೋರಾಂಟು, ಒಂದು ಹವಾಸಂಶೋಧನಾ ಕ್ಷೇತ್ರ—ಎಲ್ಲಾ ಇವೆ. ಮೌಂಟ್ ವಾಷಿಂಗ್ಟನ್‌ನ ಹವ ಯಾವ ಘಳಿಗೆಯಲ್ಲಿ ಹೇಗಿರುತ್ತದೆಂದು ಹೇಳುವುದೇ ಕಷ್ಟ. ಅಲ್ಲಿ ಅನೇಕ ವೇಳೆ ಹಠಾತ್ತಾಗಿ ಬೀಸುವ ಬಿರುಗಾಳಿ—ಒಂದು ಸಾರಿ ಅದರ ವೇಗ 231 ಮೈಲಿಯನ್ನು ಮುಟ್ಟಿ ಪ್ರಪಂಚಕ್ಕೇ ಹಿರಿಯ

ಾಖಲೆ ಸ್ಥಾಪಿಸಿತಂತೆ—ಕೆಲವು ಪ್ರವಾಸಿಗರನ್ನು ಬಲಿ ತೆಗೆದುಕೊಂಡಿದೆ. ಲ್ಲಿಗೆ ಎಷ್ಟೋ ಕಾರುಗಳು ಹೋಗುತ್ತವೆಯಾದರೂ ಹೋಗುವುದು ಒಂದು ಾಹಸದ ಕೆಲಸವೆಂದೇ ಜನ ಭಾವಿಸಿದ್ದಾರೆ. ಹತ್ತಿ ಬಂದ ಕಾರಿಗೆ ಅಂಟಿಸಿ ೊಳ್ಳಲು 'This car has climbed Mount Washington' (ಈ ಾರು ವಾಷಿಂಗ್ಟನ್ ಶಿಖರಕ್ಕೆ ಹತ್ತಿದೆ.) ಎಂದು ಪ್ರಶಸ್ತಿ ಪತ್ರವನ್ನು ಕೊಡು ತ್ತಾರೆ.

ನಾವು ಬೆಟ್ಟವನ್ನು ಹತ್ತಲು ಅಪ್ಪಣೆ ಚೀಟಿ ಪಡೆದಾಗಲೇ ಈ ಪ್ರಶಸ್ತಿ ತ್ರವನ್ನು ಕೊಟ್ಟುಬಿಟ್ಟರು; 'ದೃಷ್ಟಿ 50 ಗಜದಷ್ಟು ದೂರ ಹಾಯುತ್ತದೆ'— ೃಷ್ಟಿಯ ಮಿತಿ: 50 ಗಜ—ಎಂದು ಆಗತಾನೆ ಶಿಖರದ ಮೇಲಿನಿಂದ ಬಂದ ್ರೋನ್ ವರ್ತಮಾನವನ್ನೂ ತಿಳಿಸಿದರು.

50 ಗಜದಷ್ಟು ದೂರ ದೃಷ್ಟಿ ಹಾಯುವುದಾದರೆ ಏನೂ ಭಯವಿಲ್ಲ ಂದುಕೊಂಡು ನಾವು ಹೊರಟೆವು. ಆಗ ಸುಮಾರು ಬೆಳಗ್ಗೆ ಹತ್ತು ಘಂಟೆ ಯಾಗಿದ್ದರೂ ಬೆಟ್ಟದ ಬುಡದಲ್ಲಿ ಕೂಡ ಮಂಜು ಚದರಿರಲಿಲ್ಲ. "ರಸ್ತೆ ಡಿದು; ರೇಡಿಯೇಟರ್‌ನಲ್ಲಿ ನೀರಿದೆಯೇ ಎಂದು ಪದೇ ಪದೇ ನೋಡುತ್ತಿರ ೇಕು. ದಾರಿಯಲ್ಲಿ ಅಲ್ಲಲ್ಲೇ ನೀರು ತುಂಬಲು ಅನುಕೂಲಮಾಡಿದ್ದೇವೆ" ಂದು ಎಚ್ಚರಿಕೆ ಕೊಡುವ ಬೋರ್ಡುಗಳನ್ನು ಹಾಕಿದ್ದಾರೆ. ಎಚ್ಚರಿಕೆ ಅವಶ್ಯಕವೆಂಬುದು ನಮಗೆ ಬೇಗಲೇ ತಾರ್ಕಣೆಗೆ ಬಂತು. ಅರ್ಧ ಮೈಲಿ ೋಗುವುದರೊಳಗೆ ರೇಡಿಯೇಟರಿನಲ್ಲಿ ನೀರು ಕುದಿದು ಹೊಗೆಯಾಡ ಾರಂಭಿಸಿತು. ಮೇಲಕ್ಕೆ ಹೋದಂತೆಲ್ಲ ಮಂಜು ದಟ್ಟವಾಗುತ್ತ ಬಂತು. ಾಮು ಜೀವವನ್ನು ಎಡಗೈಯಲ್ಲಿ ಹಿಡಿದುಕೊಂಡೇ ಕಾರನ್ನು ನಡಸುತ್ತಿದ್ದ. ಅವನಿಗೆ ಬೆಟ್ಟವನ್ನು ಹತ್ತಿಯೇ ಬಿಡಬೇಕೆಂದು ಉತ್ಕಟವಾದ ಆಸೆ. ನನಗೆ ೀವಸಹಿತ ವಾಪಸಾದರೆ ಸಾಕು ಎಂಬ ಯೋಚನೆ. ನಾನೇನೋ ವಯಸ್ಸಾ ವನು. ಊರು ಹೋಗು ಅನ್ನುತ್ತಿದೆ, ಕಾಡು ಬಾ ಅನ್ನುತ್ತಿದೆ. ಆದರೆ ವರೆಲ್ಲರ ಜೀವನವೂ ಮುಂದಿದೆ!........ಮಂಜು ಮತ್ತಷ್ಟು ದಟ್ಟವಾಯಿತು. ೃಷ್ಟಿಮಿತಿ 20 ಅಡಿ ಕೂಡ ಇದ್ದಿರಲಾರದು.

"ಸುತ್ತ ಮೇಘಗಳ ಆಂದೋಲನ. ಬೆಟ್ಟದ ತಪ್ಪಲಿನಲ್ಲಿದ್ದ ಕಾಡು ತೆಳು ಾಗುತ್ತ ಬಂದು ಸ್ವಲ್ಪ ಹತ್ತಿದ ಮೇಲೆ ಬೆಳವಣಿಗೆಯಿಲ್ಲದ ಕುಬ್ಜ ಪೈನ್‌ಗಳು ಲ್ಲೊಂದು ಇಲ್ಲೊಂದು ಮಾತ್ರ ಕಾಣುವಂತಾಯಿತು. ಅಲ್ಲಲ್ಲೇ ಅಸ್ತವ್ಯಸ್ತ ಾಗಿ ಬಿದ್ದಿದ್ದ ಬಂಡೆಗಳ ರಾಶಿ ಯಾರೋ ದೈತ್ಯರು ತಮ್ಮ ರಾಜನ ಸಮಾ ಯ ಮೇಲೆ ಒಟ್ಟಲೆಂದು ತಂದು ಜೋಡಿಸಿದಂತಿತ್ತು....ಸ್ವಲ್ಪ ಮೇಲೆ ಹತ್ತಿ

ದಾಗ ಹಸುರಿನ ಹೆಸರೇ ಇಲ್ಲ. ಬಿಸಿಲು ಮಳೆ ಗಾಳಿಗಳ ಹೊಡೆತಕ್ಕೆ ಸಿಕ್ಕಿ ಸರ್ವದಾ ತೊಳಲುವ ಈ ಉನ್ನತ ಪ್ರದೇಶದಲ್ಲಿ ಯಾವ ಬೆಳೆಯೂ ಬದ ಕದು, ಮಾನವ ಅಷ್ಟು ಎತ್ತರಕ್ಕೆ ಏರಬಯಸಿದರೆ ಪ್ರಕೃತಿದೇವಿ ಅವನ ಜೊತೆಗೆ ಬರಲೊಲ್ಲಳು. ಆಕೆ ಕೆಳಗಿನ ಕಾಡಿನ ಸೆರಗಿನಲ್ಲೇ ನಿಂತು 'ನನ್ನ ಹಸುರು ಹೆಜ್ಜೆಯನ್ನೇ ಕಾಣದ ಆ ಸ್ಥಳಕ್ಕೆ ಹೋಗುತ್ತಿನೆಯಲ್ಲ, ಈ ಹಸು ಮಕ್ಕಳು !' ಎಂದು ಚಿಂತೆಯ ದೃಷ್ಟಿಯನ್ನು ಬೀರುತ್ತಿದ್ದಳು.

"ಮತ್ತಷ್ಟು ಏರಿದ ಮೇಲೆ ಕೆಳಗೆ ಕಂಡ ದೃಶ್ಯ ಭಯಾನಕವಾದದ್ದು. ಪರ್ವತರಾಜ ತನ್ನ ಸಾಮಂತ ಮೇಘಗಳನ್ನು ಮಂತ್ರಾಲೋಚನೆಗಾಗಿ ಕರೆ ಸಿದ್ದನೋ ಎನ್ನಿಸುವಂತೆ ನಾಲ್ಕು ದಿಕ್ಕುಗಳಿಂದಲೂ ಮೋಡಗಳು ಬಂದು ಸೇರಿ ಬೆಟ್ಟವನ್ನೂ ಕೆಳಗಿನ ಕಾಡನ್ನೂ ಮುಚ್ಚಿದವು. ಆಕಾಶದಮೇಲೆ ನಡೆದು ಹೋಗಬಹುದು ಎನ್ನುವಷ್ಟು ಸಾಂದ್ರವಾಗಿತ್ತು, ಮೋಡಗಳ ಸೇರುವೆ ಅವುಗಳನ್ನು ಭೇದಿಸಿ ಮತ್ತೆ ಭೂಮಿತಾಯಿಯ ಮಡಿಲನ್ನು ಸೇರುವುದು ಅಸಾಧ್ಯ ಎನ್ನಿಸಿತು."

ಮೇಲಿನ ಎರಡು ಪ್ಯಾರಾಗಳಲ್ಲಿರುವ ಬಣ್ಣನೆ ನಥಾನಿಯಲ್ ಹಾಥಾರ್ನ್ (Nathaniel Hawthorne) ಬರೆದ, ಮತ್ತು ನಾನು 'ಸ್ಫಟಿಕ ಗಿರಿಯ ರತ್ನ' ಎಂಬ ಶೀರ್ಷಿಕೆ ಕೊಟ್ಟು ಕನ್ನಡಿಸಿರುವ The Carbuncle ಎಂಬ ಕಥೆ ಯಲ್ಲಿ ಬರುತ್ತದೆ. ಬೆಟ್ಟವನ್ನು ಹತ್ತುತ್ತಿದ್ದಾಗ ನನಗೆ ಹಾಥಾರ್ನ್ ಬರೆದಿರು ವುದು ಮೌಂಟ್ ವಾಷಿಂಗ್ಟನ್‌ಗೆ ಅಕ್ಷರಶಃ ಅನ್ವಯಿಸುತ್ತದೆ ಎನ್ನಿಸಿತು. (ನಾನು ಆ ಕಥೆಯನ್ನು ಮತ್ತೆ ಓದಿದ್ದೇನೆ. ಕಥೆಯಲ್ಲಿನ ಬೆಟ್ಟವೂ ಶ್ವೇತ ಪರ್ವತ ಶ್ರೇಣಿಗೇ ಸೇರಿದ್ದು. ಈ ಪ್ರಾಂತವನ್ನು 'ಹಾಥಾರ್ನ್ ಪ್ರಾಂತ' (Hawthorne Country) ಎಂದು ಕರೆಯಬಹುದು. ಅವನು ಬಣ್ಣಿಸಿರು ವುದು ನಾವು ನೋಡಿದ ಪರ್ವತವನ್ನೇ ಎಂದು ನನ್ನ ದೃಢವಾದ ನಂಬಿಕೆ).

ಕಾರು ಬಸವನ ಹುಳುವಿನಂತೆ ನಿಧಾನವಾಗಿ ಸಾಗುತ್ತಿತ್ತು. ದೃಷ್ಟಿಮಿತಿ 15 ಅಡಿಗೆ ಇಳಿದಿದ್ದಿರಬೇಕು. ರಸ್ತೆ ನೇರವಾಗಿದೆಯೆ ಅಥವಾ ತಿರುವೇನಾದರೂ ಇದೆಯೆ ಎಂಬುದನ್ನು ಮಗ್ಗುಲಲ್ಲಿ ನೆಟ್ಟಿರುವ ಕಂಬಗಳಿಂದ ಊಹಿಸಬೇಕು. 'ಇನ್ನು ಮುಂದುವರಿಯುವುದು ಬೇಡ' ಎಂದು ನಾನು ರಾಮುವನ್ನು ಬಲವಂತ ವಾಗಿ ತಡೆದೆ. ಶಿಖರದ ತುದಿ ಅರ್ಧ ಮೈಲಿಗಿಂತ ಕಡಿಮೆಯಿರುವಾಗ ವಾಪ ಸಾಗಬೇಕಲ್ಲ, ಹತ್ತಲಾಗಲಿಲ್ಲವಲ್ಲ ಎಂದು ರಾಮುವಿಗೆ ವ್ಯಸನ. ನನ್ನ ಒತ್ತಾಯ ವಿಲ್ಲದಿದ್ದರೆ ಅವನು ಮುಂದುವರಿಯುತ್ತಿದ್ದನೇನೊ !

ಕಾರನ್ನು ತಿರುಗಿಸಿಕೊಳ್ಳಲು 8-10 ನಿಮಿಷ ಹಿಡಿಯಿತು—ಒಂದಂಗುಲ

ಹೆಚ್ಚಾಗಿ ಹಿಂದಕ್ಕೆ ಹೋದರೆ ಪ್ರಪಾತಕ್ಕೆ ಬಿದ್ದೇವು ಎಂಬ ಭಯ. ತಿರುಗಿ ಸಿದ ಮೇಲೆ ನಿಧಾನವಾಗಿ ಇಳಿದು ಎರಡು ಫರ್ಲಾಂಗು ಹೋಗುವುದರೊಳಗೆ ನಮ್ಮ ಬಲಭಾಗದ ರಸ್ತೆಯಂಚಿನಲ್ಲಿದ್ದ ಮರಳಿನಲ್ಲಿ ಮುಂದಿನ ಚಕ್ರ ಹೂತು ಕೊಂಡಿತು—ಒಂದು ಅಡಿ ಹೆಚ್ಚಾಗಿ ಬಲಕ್ಕೆ ಹೋಗಿದ್ದರೆ ಪ್ರಪಾತ! ಮುಂದೆ ಹೋಗಲೂ ಆಗಲಿಲ್ಲ, ಎಡಕ್ಕೆ ತಿರುಗಿಸಿಕೊಳ್ಳಲೂ ಆಗಲಿಲ್ಲ. ಮರಳಿನಲ್ಲಿ ಚಕ್ರ ತಿರುಗುತ್ತಿತ್ತೇ ಹೊರತು ಕಾರು ಚಲಿಸಲಿಲ್ಲ. ಮರಳಿದ್ದ ಜಾಗದಲ್ಲಿ ಕಲ್ಲು ತುಂಬೋಣವೆಂದರೆ ಹತ್ತಿರದಲ್ಲೆಲ್ಲೂ ಕಲ್ಲು ಸಿಕ್ಕಲಿಲ್ಲ. ಏನು ಮಾಡಬೇಕೋ ತೋರದೆ ಕಾಲು ಘಂಟೆ ನಿಂತಿದ್ದೆವು. ಅಷ್ಟು ಹೊತ್ತಿಗೆ ಒಂದರ ಹಿಂದೊಂದು ಎರಡು ಕಾರುಗಳು ಮುಂದೆ ಹೋಗೋಣವೊ ಬೇಡವೊ ಎಂದು ಹಿಂಜರಿ ಯುತ್ತ ಹಿಂಜರಿಯುತ್ತ ಬಂದವು. ಅದರಲ್ಲಿದ್ದ ಜನ ನಮ್ಮ ಪಾಡು ನೋಡಿ ಇಳಿದು ನಮ್ಮ ಕಾರಿನ ಮುಂಭಾಗವನ್ನು ಅನಾಮತ್ತು ಎತ್ತಿ ಗಟ್ಟಿ ನೆಲದ ಮೇಲಿಟ್ಟರು. ಅವರು ನಮಗಿಂತ ಧೈರ್ಯಸ್ಥರು— ತಡವರಿಸಿಕೊಂಡಾದರೂ ತಮ್ಮ ಪ್ರಯಾಣವನ್ನು ಮುಂದುವರಿಸಿದರು.

ಅವತ್ತು ನ್ಯೂಹ್ಯಾಂಪ್‌ಷೈರಿನಲ್ಲಿರುವ ಜೆಫ್ಲಿ ಹೆವನ್‌ನಲ್ಲಿ ತಂಗಬೇಕೆಂದು ನಿಶ್ಚಯಿಸಿದ್ದೆವು. ಅಲ್ಲಿಗೆ ಹೋಗುವ ದಾರಿಯಲ್ಲಿ ಒಂದು ಪ್ರಸಿದ್ಧವಾದ ದೃಶ್ಯ ವಿದೆ. ಬೆಟ್ಟದ ತುದಿಯಲ್ಲಿ ಒಂದು ಬಂಡೆ ಮನುಷ್ಯನ ಮುಖದ ರೂಪವನ್ನು ತಾಳಿದೆ. ಹಣೆ, ಬಾಯಿ ಕಂಠಮಣಿ (Adam's apple) ಎಲ್ಲ ಸ್ಪಷ್ಟವಾಗಿ ಕಾಣುತ್ತವೆ. ಅದನ್ನು The Old Man of the Mountain (ಪರ್ವತ ವೃದ್ಧ) ಎಂದು ಕರೆಯುತ್ತಾರೆ. ಮೇಲೆ ಹೇಳಿದಂತೆ ಇದು ಹಾಥಾರ್ನ್ ಪ್ರಾಂತ. ಹಾಥಾರ್ನ್ ಈ 'ಪರ್ವತವೃದ್ಧ'ನನ್ನು ನೋಡಿದ್ದರಿಂದ ಸ್ಫೂರ್ತಿ ಪಡೆದು 'The Great Stone Face' ಎಂಬ ಶೀರ್ಷಿಕೆಯುಳ್ಳ ಕಥೆಯನ್ನು ಬರೆದಿದ್ದಾನೆ. ಈಗ ಆ ಸ್ಥಳಕ್ಕೆ ಪ್ರವಾಸಿಗಳನ್ನು ಆಕರ್ಷಿಸಲು ಇದೊಂದು ಸಾಧನವಾಗಿದೆ.

ಜೆಫ್ಲಿ ಹೆವನ್‌ನಲ್ಲಿ ನಾವು ಇಳಿದಿದ್ದ ಮೋಟಲು ಬಹಳ ಬೇಸರ ತಂದಿತು. ರಸ್ತೆಯ ವಾಹನಗಳ ಸದ್ದಿಲ್ಲದೆ ನಲ್ಲಿ ನೀರಿನ ಸದ್ದು ಮೊದಲುಗೊಂಡು ಯಾವ ಕೊಠಡಿಯಲ್ಲಿ ಏನು ಸದ್ದಾದರೂ ಅದರ ಶ್ರವಣಾನಂದ ಉಳಿದೆಲ್ಲ ಕೊಠಡಿಯ ವರಿಗೂ ಲಭಿಸುವಂತೆ ಏರ್ಪಾಡುಮಾಡಿದ್ದರು. ಮಾಲೀಕನಿಗೆ cleanliness is next to godliness ಎಂಬ ಪಾಠವನ್ನು ಯಾರೂ ಕಲಿಸಿರಲಿಲ್ಲ, ಅಥವಾ ಕಲಿಸಿದ್ದರೆ ಅವನು ಮರೆತಿದ್ದ. ಈ ಗುಣದ ವಿಷಯದಲ್ಲಿ ಮೋಟಲಿಗೂ ಅದರ ಹತ್ತಿರ ಇದ್ದ ರೆಸ್ಟೊರಾಂಟಿಗೂ ಸಾಮರಸ್ಯವಿತ್ತು. ಅಲ್ಲಿ ಸ್ಯಾಂಡ್‌ವಿಚ್

ಹೊರತು ಮತ್ತೇನೂ ದೊರೆಯಲಿಲ್ಲ—ಹಣ್ಣಿಲ್ಲ, ಸೂಪ್ ಇಲ್ಲ, ಚಾಕೊಲೆಟ್ ಇಲ್ಲ, ಫ್ರೆಂಚ್ ಫ್ರೈ ಇಲ್ಲ, ಪೀಟ್ಜ ಇಲ್ಲ; ಕೋಕ ಕೋಲ ಹೊರತು ಮತ್ತಾವ ಮೃದು ಪಾನೀಯವೂ (soft drink) ಇಲ್ಲ. ರಾತ್ರಿ ನಮಗೆಲ್ಲ ರಿಗೂ ಎಡಮಗ್ಗಲು. ಅದರಿಂದಾಗಿ ಬೆಳಗ್ಗೆ ಹೊತ್ತಿಗೆಮುಂಚೆ ಏಳುವುದು ಸುಲಭವಾಯಿತು. ಅಲ್ಲಿಂದ ಹೊರಟವರು ಮತ್ತೆಲ್ಲೂ ನಿಲ್ಲದೆ ಸಂಜೆಯ ಹೊತ್ತಿಗೆ ನ್ಯೂಯಾರ್ಕನ್ನು ತಲುಪಿದೆವು. ಮೊದಲೇ ಫೋನ್ ಮಾಡಿದ್ದರಿಂದ ಗಿರಿಜ ಅಡಿಗೆಮಾಡಿ ಕಾಯುತ್ತಿದ್ದಳು. ಗ್ರಿಲ್ಡ್ ಚೀಸ್ ಸ್ಯಾಂಡ್‌ವಿಚ್ ಫ್ರೆಂಚ್‌ಫ್ರೈ, ಪೀಟ್ಜಗಳನ್ನು ತಿಂದು ತಿಂದು ಬೇಸರಗೊಂಡಿದ್ದ ನಮಗೆ ಅಂದಿನ ಅನ್ನ ಸಾರು ಪಲ್ಯ ಹಪ್ಪಳ ಸಂಡಿಗೆಗಳು ಕೊಟ್ಟ ಆನಂದ ಅಷ್ಟಿಷ್ಟಲ್ಲ. ಊಟ ಮಾಡುತ್ತಿರುವಾಗಲೇ ಅಂದುಕೊಂಡೆ, ನನ್ನಂತೆ ಪ್ರವಾಸಿಗಳಾಗಿ ಅಮೆರಿಕಕ್ಕೆ ಬರುವ ಶಾಕಾಹಾರಿಗಳಿಗೆ ಪ್ರಯೋಜನವಾಗುವಂತೆ ನನ್ನ ಅನುಭವವನ್ನು ಅವರಿಗೆ ತಿಳಿಸಬೇಕು ಎಂದು. ಆಹಾರದ ವಿಷಯದಲ್ಲಿ ಕಲಿಯಬೇಕಾದ್ದನ್ನೆಲ್ಲ ಕಲಿತಿದ್ದೇನೆ ಎನ್ನಿಸುತ್ತದೆ. ಇಲ್ಲದಿದ್ದರೂ ಇನ್ನೇನೂ ಕಲಿಯುವಂತಿಲ್ಲ—ಇದೇ ನನ್ನ ಪ್ರವಾಸದ ಕೊನೆಯಘಟ್ಟ—1973ರ ಮಟ್ಟಿಗಾದರೂ. ಆದ್ದರಿಂದ ಕಲಿತಷ್ಟನ್ನಾದರೂ ಒಪ್ಪಿಸಿಬಿಡಬೇಕು!

## ಶಾಕಾಹಾರಿಗಳಿಗೆ ಸಂದೇಶ

ನನಗೆ ನಾಲಗೆಯ ಚಪಲ ಹೆಚ್ಚೆಂದು ನಾಚಿಕೆಯಿಲ್ಲದೆ ಒಪ್ಪಿಕೊಳ್ಳುತ್ತೇನೆ. ಇತರ ವಿಷಯಗಳಲ್ಲಿ ಮುಂಜಾಗ್ರತೆಯಿಂದಿರುವುದುಂಟೋ ಇಲ್ಲವೋ, ತಿಂಡಿ ತೀರ್ಥಗಳ ವಿಷಯದಲ್ಲಿ ನನ್ನ ಮನಸ್ಸೂ ಜ್ಞಾಪಕಶಕ್ತಿಯೂ ಚುರುಕಾಗಿ ಕೆಲಸಮಾಡುತ್ತವೆ. ಷಿಕಾಗೋವಿಗೆ ಹೊರಡುವ ಮುನ್ನ ಚಿತ್ರಾನ್ನ ಕಲಸಲು ಬೇಕಾದ ಗೊಜ್ಜು, ಹುಣಸೇಹಣ್ಣಿನ ತೊಕ್ಕು, ಹಪ್ಪಳಸಂಡಿಗೆ, ಪಲ್ಯದ ಪುಡಿ ಇತ್ಯಾದಿಗಳನ್ನೆಲ್ಲ ತಯಾರುಮಾಡಿಸಿಕೊಂಡಿದ್ದೆ. ನನ್ನ ಸೂಟ್‌ಕೇಸಿನಲ್ಲಿ ಅರ್ಧಭಾಗ ಇವುಗಳಿಗೇ ಮೀಸಲು. ನಿಜವಾಗಿ ನಾನು ಇಷ್ಟೆಲ್ಲ ಪೂರ್ವಸಿದ್ಧತೆ ಮಾಡಿಕೊಳ್ಳಬೇಕಾಗಿರಲಿಲ್ಲ. ರಾಮು ಈ ವಿಷಯಗಳಲ್ಲೆಲ್ಲ ಮನೆತನದ ಸತ್ಸಂಪ್ರದಾಯಗಳನ್ನು ಉಳಿಸಿಕೊಂಡಿದ್ದಾನೆ. ಅವನ ಮನೆಯಲ್ಲಿರುವವರೆಗೆ ಸಾರು ಹುಳಿ ಪಲ್ಯ ಮುಂತಾದ್ದಕ್ಕೆಲ್ಲ ಇಲ್ಲೂ ಅಭಾವವಿಲ್ಲ. ಆದರೆ ಮಾಂಸಾ ಹಾರಿಗಳ ದೇಶದಲ್ಲಿ ಪ್ರಯಾಣ ಹೊರಟಾಗ ಅಂಥ ಸೌಖ್ಯವನ್ನು ನಿರೀಕ್ಷಿಸ ಲಾಗುವುದಿಲ್ಲ.

ನನ್ನ ಸ್ನೇಹಿತರೊಬ್ಬರು "ನೀವು ಏನೂ ಯೋಚನೆ ಮಾಡಬೇಡಿ. ಈಗ ಇಂಗ್ಲಿಷ್ ಭಾಷೆ ವಿಶ್ವವ್ಯಾಪಿಯಾಗಿರುವಂತೆ ಬ್ರೆಡ್ ಕೂಡ ವಿಶ್ವ ವ್ಯಾಪಿಯಾಗಿದೆ. ಏನು ಸಿಕ್ಕದಿದ್ದರೂ ಅದು ಸಿಕ್ಕಿಯೇ ಸಿಕ್ಕುತ್ತದೆ" ಎಂದು ಧೈರ್ಯ ಕೊಟ್ಟಿದ್ದರು. ಅವರು ಬ್ರೆಡ್‌ಭಕ್ತರು. ಅವರ ಮನೆಯಲ್ಲಿ ಮಸಾಲೆ ದೋಸೆ, ಅದಕ್ಕಿಂತ ಹೆಚ್ಚಾಗಿ—ಸಾವಿರಪಾಲು ಹೆಚ್ಚಾಗಿ—ನಾಲಗೆಗೆ ಇಂಬುಕೊಡುವ ನಮ್ಮ ಸಾಧ್ವಿಗೃಹಿಣಿಯರ ನಿರ್ಮಿತಿ ಮೆಂತ್ಯದ ದೋಸೆ, ಪೂರಿಪಲ್ಯ, ಇತ್ಯಾದಿಗಳನ್ನು ಮಾಡಿಸಿ ತಿನ್ನಲು ಅವಕಾಶವಿದ್ದರೂ ಈ ನಿರ್ಭಾಗ್ಯ ಬೆಳಗಿನ ಉಪಾಹಾರಕ್ಕೆ ಬ್ರೆಡ್ ತರಿಸುತ್ತಾರೆ! ಅದಕ್ಕಿಂತ ಉತ್ತಮವಾದದ್ದೇನನ್ನೂ ಕಾಣದ ಮ್ಲೇಚ್ಛಬಡಪಾಯಿಗಳಲ್ಲಿ ಈ ಬ್ರೆಡ್ ವ್ಯಾಮೋಹ ಸ್ವಾಭಾವಿಕ. ಆದರೆ ನಾವು ಅವರನ್ನು ಅನುಕರಿಸಹೋದರೆ ದೋಸೆ ಉಪ್ಪಿಟ್ಟು ಪೊಂಗಲುಗಳನ್ನು ಮಾಡುವ ಕಲೆಯೇ ನಾಶವಾದೀತು. ಈ ಬ್ರೆಡ್‌ಗೆ ಕೊಟ್ಟಿರುವ ಪ್ರಾಶಸ್ತ್ಯ ವಿಪರೀತವಾಯಿತೆಂಬ ಭಾವನೆ ಭಗವಾನ್ ಯೇಸುಕ್ರಿಸ್ತನಿಗೆ ಕೂಡ ಬಂದಿರಬೇಕು. ಆದ್ದರಿಂದಲೇ ಆತ ಹೇಳಿದ: Man does not live by bread alone (ಮಾನವ ಬದುಕು ವುದು ಬ್ರೆಡ್ ಒಂದರಿಂದಲೇ ಅಲ್ಲ) ಎಂದು. ಅರ್ಥಪೂರ್ಣವಾದ ಎಚ್ಚರಿಕೆಯ ಮಾತು! ಮಾನವ ಬ್ರೆಡ್ ಒಂದರಿಂದ ಬದುಕಲಾರ, ಅದರ ಜೊತೆಗೆ ಸ್ಯಾಂಡ್‌ವಿಚ್ ಮಾಡಲು ಬೇಕಾದ ಟೊಮೇಟೊ ಸೌತೆಕಾಯಿಗಳೂ ಬೇಕು. ಅವುಗಳಿದ್ದರೂ ಸಾಲದು. ಇದನ್ನು ಮನಗಂಡು ಅಮೆರಿಕನ್ನರು—ಹೆಚ್ಚುಕಡಮೆ ಅವರೆಲ್ಲ ಕ್ರೈಸ್ತರಷ್ಟೆ—ತಮ್ಮ ದಿವ್ಯ ಗುರುವಿನ ಮಾತಿಗೆ ಬೆಲೆ ಕೊಟ್ಟು ಬ್ರೆಡ್ಡಿಗೆ ವಿಧವಿಧವಾದ ಸಂಸ್ಕಾರ ಮಾಡುತ್ತಾರೆ. ಹೀಗೆ ಸಂಸ್ಕೃತವಾದ ಬ್ರೆಡ್ಡಿನ ಅವತಾರಗಳಲ್ಲಿ ಮೊದಲನೆಯದು—ರುಚಿಯಲ್ಲಲ್ಲ, ಬಳಕೆಯಲ್ಲಿ—ಟೋಸ್ಟ್. ಎಲ್ಲರಿಗೂ ಪರಿಚಿತವಾದ ಇದರ ವಿಷಯದಲ್ಲಿ ನಾನೇನೂ ಹೇಳುವುದಿಲ್ಲ. ತಿನ್ನುವವರು ತಿಂದುಕೊಳ್ಳಲಿ. ಅವರವರ ಕರ್ಮಕ್ಕೆ ತಕ್ಕಂತೆ ಅವರವರ ಅಭಿರುಚಿ. ನಾನೇನೋ ಟೋಸ್ಟಿಗೆ ಬದಲಾಗಿ ಅಮೆರಿಕದ ಎಲ್ಲ ರೆಸ್ಟೊರಾಂಟುಗಳಲ್ಲೂ ದೊರೆಯುವ ಗ್ರಿಲ್ಡ್ ಚೀಸ್ ಸ್ಯಾಂಡ್‌ವಿಚ್ (grilled cheese sandwich) ತರಿಸುತ್ತಿದ್ದೆ. ಈರುಳ್ಳಿ ಟೊಮೇಟೊ ಚೀಸ್, ಇವುಗಳನ್ನು ಸೇರಿಸಿ ತಯಾರಿಸಿದ ಈ ಭಕ್ಷ್ಯ ಬ್ರೆಡ್ಡಿನ ಕುಂದುಕೊರತೆಗಳನ್ನು ಬಹುಮಟ್ಟಿಗೆ ಸರಿಪಡಿಸುತ್ತದೆ.

ಆದರೂ ಅದು ಬ್ರೆಡ್ಡೇ ತಾನೆ! ಆದ್ದರಿಂದ ಬೇಸರ ತಂದೇ ತರುತ್ತದೆ. ಆಗ ಅದಕ್ಕಿಂತ ಒಂದು ಮೆಟ್ಟಲು, ಒಂದೇ ಮೆಟ್ಟಲು, ಮೇಲಿರುವ

ಆಲೂಗೆಡ್ಡೆಯ ಶರಣು ಹೋಗಬಹುದು. ಇದೂ ಅಮೆರಿಕದಲ್ಲಿ ನಾಲ್ಕಾರು ರೂಪಗಳನ್ನು ತಳೆಯುತ್ತದೆ. ಮೊದಲನೆಯದು ಸುಮ್ಮನೆ ಬೇಯಿಸಿದ ಆಲೂಗೆಡ್ಡೆ. ಇದು ಅಪ್ಪ ಅಮ್ಮ ಯಾರೂ ಇಲ್ಲದ ತಬ್ಬಲಿ ತಿನಿಸು. ಹಿಂದಿನ ಕಾಲದಲ್ಲಿ ಹಸಿಯ ಮಾಂಸವನ್ನು ತಿನ್ನುವ ರಾಕ್ಷಸರನ್ನು ಕ್ರವ್ಯಾದರೆಂದು ಕರೆಯುತ್ತಿದ್ದರು, ಬರೀ ಆಲೂಗೆಡ್ಡೆಯನ್ನು (ಅದು ಬೇಯಿಸಿದ್ದಾದರೂ) ತಿನ್ನುವ ಜನ ನನಗೆ ಈ ಕ್ರವ್ಯಾದ ಪಿಶಾಚಿಗಳ ನೆನಪು ತರುತ್ತಾರೆ. ಅದೇ ಆಲೂಗೆಡ್ಡೆಯನ್ನು ಪೆನ್ಸಿಲ್ ಗಾತ್ರಕ್ಕೆ ಉದ್ದುದ್ದವಾಗಿ ಸೀಳಿ ಎಣ್ಣೆಯಲ್ಲಿ ಸ್ವಲ್ಪ ಕರಿದಂತೆ ಮಾಡಿದರೆ ಅದು 'ಫ್ರೆಂಚ್‌ಫ್ರೈ' ಎನ್ನಿಸಿಕೊಳ್ಳುತ್ತದೆ. ಅದನ್ನು ಹೊಗಳಿ ಕವನ ಕಟ್ಟಿ ಹಾಡಬೇಕೆಂದೇನೂ ಅನ್ನಿಸುವುದಿಲ್ಲ. ಆದರೂ ಅದು ತಿನ್ನಬಹುದಾದದ್ದು; ನನ್ನ ಮಿತ್ರರೊಬ್ಬರು ಹೇಳುತ್ತಿದ್ದಂತೆ 'ತಿನ್ನೆಬಲ್.' ಮೇಲೆ ಗರಿಯಾಗಿ ಒಳಗೆ ಮೃದುವಾಗಿರುವ ಈ ಭಕ್ಷ್ಯ ಇಬ್ಬಗೆಯ ಸುಖ ಕೊಡುತ್ತದೆ—ಜೊತೆಗೆ ಉಪ್ಪು ಮೆಣಸು ಸೇರಿದರೆ.

ಅಮೆರಿಕನ್ನರಲ್ಲಿ ನಾನು ಇದೊಂದನ್ನು ಮೆಚ್ಚುತ್ತೇನೆ: ಅವರಲ್ಲಿ 'ಸ್ಯಾಲಡ್' (salad) ಇಲ್ಲದೆ ಊಟವಿಲ್ಲ. ಸಾಮಾನ್ಯವಾಗಿ ಅಲ್ಲಿಯ ರೆಸ್ಟೋರಾಂಟುಗಳಲ್ಲೆಲ್ಲ 'ಸ್ಯಾಲಡ್ ಬಾರ್' ಇರುತ್ತದೆ. ಅದನ್ನು ಬಾರ್ ಎಂದು ಕರೆಯುವುದು ನಮಗೆ ಹಿತವಲ್ಲದಿರಬಹುದು. ಆದರೆ ಮದ್ಯಪಾಯಿಗಳ ಹೃದಯದಲ್ಲಿ ಆ ಪದ ಪಂಚಮದ ತಂತಿಯನ್ನು ಮೀಟುತ್ತದೆ. ಲೆಟಿಸ್ (lettuce), ಕೋಸುಗಡ್ಡೆಯ ಎಲೆ, ಹೆಚ್ಚಿದ ಸೌತೆಕಾಯಿ, ಕ್ಯಾರೆಟ್, ಮೊದಲಾದುವನ್ನು ಸಿದ್ಧಪಡಿಸಿ ಇಟ್ಟಿರುತ್ತಾರೆ. ಅದರ ಜೊತೆಗೆ ಅಮೆರಿಕದ ಅನಾಥರಕ್ಷಕ—ಉಪ್ಪು ಬೆರೆದ ಪುಡಿಮೆಣಸು—ಇದ್ದೇ ಇರುತ್ತದೆ. ಅದು ಬೇಡದವರು ನಂಜಿಕೊಳ್ಳಲು 'ಫ್ರೆಂಚ್ ಡ್ರೆಸಿಂಗ್' (french dressing) ಉಪಯೋಗಿಸಬಹುದು. ನಾನೇನೋ ಆ 'ಡ್ರೆಸಿಂಗ್' ಎಂಬ ಪದ ಸಾರ್ಥಕ ವಾಗುವಂತೆ ಸ್ಯಾಲಡ್‌ಗೆ ಪೂರ್ತಿ ಅದರ ಕವಚ ತೊಡಿಸಿಯೇ ಬಳಸುತ್ತಿದ್ದೆ. ಅದಕ್ಕೆ ಏನೇನು ಹಾಕಿರುತ್ತಾರೋ ತಿಳಿಯದು. ಸ್ವಲ್ಪ—ನಾಲಗೆಯನ್ನು ಕೆಣಕುವಷ್ಟು, ರೇಗಿಸುವಷ್ಟಲ್ಲ—ನಿಂಬೆಹುಳಿ ಬಿದ್ದಿರುತ್ತದೆ. ಉಪ್ಪಂತೂ ಸರಿಯೇ ಸರಿ. ಖಾರದ ಮೈತ್ರಿಯಿಲ್ಲದಿದ್ದರೂ ಅದೊಂದು ದೋಷ ಎನ್ನಿಸು ವುದಿಲ್ಲ. ವಿನಿಗರ್ ಹಾಕಿರುತ್ತಾರೇನೋ ಎಂಬ ಭಯ ಬಾಧಿಸುತ್ತದೆ. ನನಗೆ ವಿನಿಗರ್ ಏಕೋ ಮಾಂಸದ ನೆನಪು ತರುತ್ತದೆ—ಬಹುಶಃ ಅದನ್ನು ಹೆಚ್ಚು ಬಳಿಸುವವರು ಮಾಂಸಾಹಾರಿಗಳಾದ್ದರಿಂದ, ಈಚಲಮರದ ಕೆಳಗೆ ಇಟ್ಟ ಮಜ್ಜಿಗೆಯ ಸಮಾಚಾರ! ಒಟ್ಟಿನಲ್ಲಿ ಈ ಡ್ರೆಸಿಂಗು ನಮ್ಮ ನಿಂಬೆಹುಳಿ

ಗೊಜ್ಜಿಗೆ ಹತ್ತಿರದ ದಾಯಾದಿ. ಅದಕ್ಕೆ ಒಗ್ಗರಣೆಯಿಲ್ಲ. ಪಾಪ, ಈ ಪಶ್ಚಿಮದ ಜನರಿಗೆ ಒಗ್ಗರಣೆಯ ಮಹಿಮೆ ತಿಳಿಯದು, ಮೊದಮೊದಲು ಇದು ನನ್ನನ್ನು ತಾಳ್ಮೆಗೆಡಿಸುತ್ತಿತ್ತು. ಈಗ ಸಹನೆ ತಂದುಕೊಂಡು ಅಂತರಿಕ್ಷದ ಕಡೆಗೆ ಕಣ್ಣು ತಿರುಗಿಸಿ Father forgive them. They know not what they do (ತಂದೆ, ಅವರನ್ನು ಕ್ಷಮಿಸು. ತಾವು ಮಾಡುತ್ತಿರುವುದೇನೆಂಬುದನ್ನು ಅವರು ಅರಿಯರು) ಎಂದು ಬೇಡುತ್ತೇನೆ.

ಚೀಣ, ಸ್ವೀಡನ್, ಇಟಲಿ, ಮೆಕ್ಸಿಕೊ, ಮೊದಲಾದ ದೇಶಗಳವರು ಇಲ್ಲಿ ಬಂದು ರೆಸ್ಟೋರಾಂಟುಗಳನ್ನು ಸ್ಥಾಪಿಸಿ ಹಣ ಮಾಡುತ್ತಿದ್ದಾರೆ. ಭಾರತೀಯರ ಹೋಟೆಲುಗಳೂ ಒಂದೆರಡು ಕಡೆ ಕಾಣುತ್ತವೆ. ಆದರೆ ದಕ್ಷಿಣ ಇಂಡಿಯಾದವರನ್ನು ಏಕೋ ಇಲ್ಲಿಯ ರೆಸ್ಟೋರಾಂಟ್ ಉದ್ಯಮ ಆಕರ್ಷಿಸಿಲ್ಲ. ಮೊದಲ ಬಾರಿ ಎವರೆಸ್ಟ್ ಹತ್ತಿದವರೂ ಉತ್ತರಧ್ರುವದ ಮೇಲೆ ಕಾಲಿಟ್ಟವರೂ ಅಲ್ಲಿ ಅಯ್ಯರ ಹೋಟೆಲನ್ನು ಕಂಡರು ಎಂದು ಕಥೆ ಹೇಳುತ್ತಿದ್ದುದು ಉಂಟು. ಇಂಥ ಸಾಹಸಿ ಜನ ಅಮೆರಿಕಕ್ಕೆ ಹೋಗಿ ವಡೈ ದೋಸೈ, ಮೂಣಿಡಲಿ ನಲ್ಲೆಣ್ಣೆ ಮೊಳಹಾಯಿ ಪುಡಿಗಳನ್ನು ಮಾರಿ ಕೋಟೀಶ್ವರರಾಗಲಿಲ್ಲವೇಕೆ?.ನಮ್ಮ ಉಡುಪಿಯವರ ಉತ್ಸಾಹವೂ ಉಡುಗಿ ಹೋಯಿತೆ!

ನಾನು ಎಷ್ಟಾಗಲಿ ಮೂರನೇ ಪ್ರಪಂಚಕ್ಕೆ (third world)—ಇನ್ನೂ ಅಭಿವೃದ್ಧಿಯಾಗಬೇಕಾದ ದೇಶಕ್ಕೆ ಸೇರಿದವನಲ್ಲವೆ? ಆದ್ದರಿಂದ ನನ್ನ ಮನಸ್ಸು 'ಮೆಕ್ಸಿಕನ್ ವಿಲೇಜ್' (Mexcican Village) ಎಂಬ ಹೆಸರಿನ ಹೋಟಲಿನ ಕಡೆಗೆ ಒಲೆಯಿತು. ಅಲ್ಲಿಯ ವಾತಾವರಣ ಅಭಿವೃದ್ಧಿಯಾಗಬೇಕಾದ ದೇಶದ್ದೇ, ಸಂದೇಹವಿಲ್ಲ. ನಾವು ಕುಳಿತುಕೊಂಡ ಮೇಲೆ ಒಬ್ಬ ಬಂದು ನಮ್ಮ ಮಗ್ಗುಲ ಮೇಜನ್ನು ಒರಸಿದ—ಅಲ್ಲಿ ಒರಸಬೇಕಾದದ್ದು ಬಹಳ ಇತ್ತು; ಅನಂತರ ಅದೇ ಬಟ್ಟೆಯನ್ನುಪಯೋಗಿಸಿ ನಮ್ಮ ಮೇಜನ್ನೂ ಒರಸಿದ. ತಟ್ಟೆಗಳನ್ನು ತಂದಿಟ್ಟ ಮನುಷ್ಯ ಚಮಚವನ್ನು ನೆಲಕ್ಕೆ ಬೀಳಿಸಿ ಅದನ್ನು ಹಾಗೆಯೇ ತೆಗೆದು ಮೇಜಿನ ಮೇಲಿಟ್ಟ. ಮೆನುಕಾರ್ಡಿನಲ್ಲಿ ಮಾಂಸದ ಪದಾರ್ಥಗಳನ್ನು ಬಿಟ್ಟರೆ ಉಳಿದದ್ದು ತೋಸ್ತಾದ (toastada) ಮತ್ತು ಎಂಚಿಲಾದ (enchilada)· ತೋಸ್ತಾದ ಗರಗಸದಿಂದ ಉದುರುವ ಮರದ ಪುಡಿಯಿಂದ ಮಾಡಿದ್ದಿರಬೇಕು—ಅಥವಾ ಹಾಗೆನ್ನುವುದು ಅನ್ಯಾಯವೇನೊ—ಚುಜ್ಜಲು ಪುಡಿಯಿದ್ದರೂ ಇರಬಹುದು. ಅಂಥ ಪುಡಿಯಿಂದ ಹಪ್ಪಳ ಮಾಡಿ ಕರಿದರೆ, ಅದೇ ತೋಸ್ತಾದ. ಅದರ ಜೊತೆಗೇ ಎಂಚಿಲಾದವೂ ಬಂತು. ಅದು ಮೊದಲ ನೋಟಕ್ಕೆ ನಮ್ಮ ಬಿಸಿಬೇಳೆ ಭಾತಿನಂತೆ ಇತ್ತು.

ಆದರೆ ಮಧ್ಯೆ ಮಧ್ಯೆ ಟೊಮೇಟೋವಿನ ಅಚ್ಚಗೆಂಪು, ಜೊತೆಗೆ ಬಹುಶಃ ಬೀಟ್‌ರೂಟಿನ ಕೆಂಪು! ವೆಯ್ಟರು ಅದನ್ನು ತೋರಿಸಿ

ಖಂಡವಿದೆಕೊ ಮಾಂಸವಿದೆಕೊ
ಗುಂಡಿಗೆಯ ಬಿಸಿರಕ್ತವಿದೆಕೊ

ಎಂದು ಹಾಡಲಾರಂಭಿಸಿದ್ದರೆ ನನಗೆ ಆಶ್ಚರ್ಯವಾಗುತ್ತಿರಲಿಲ್ಲ. ಆ ರೆಸ್ಟೋರಾಂಟಿಗೆ ತೆತ್ತ ಹಣ ಅಲ್ಲಿಯ ಊಟಕ್ಕಲ್ಲ, ಅಲ್ಲಿಂದ ಹೊರಟಾಗ ಆದ ಆನಂದಕ್ಕೆ!

ಇಟಾಲಿಯನ್ ರೆಸ್ಟೋರಾಂಟುಗಳಲ್ಲಿ ಸಿಕ್ಕುವ ಮೆಕರೋನಿ (macaroni)ಯನ್ನೂ ಸ್ಪಘೆಟಿ (spaghetti)ಯನ್ನೂ ಭಾರತೀಯರನೇಕರು ಹೊಗಳುತ್ತಾರೆ. ಆ ಹೊಗಳಿಕೆ ಅವರ ಸದಭಿರುಚಿಗೆ ಸಾಕ್ಷಿಯಲ್ಲದಿದ್ದರೂ ಅವರ ಔದಾರ್ಯಕ್ಕೆ ಸಾಕ್ಷಿ ಎಂದು ಕೊಳ್ಳೋಣ. ಅಮೆರಿಕದಲ್ಲಿ ಚಿಕ್ಕ ಮಕ್ಕಳಿಗೆ ಹೇಳಿಕೊಡುವ ಹಾಡೊಂದು ನೆನಪಿಗೆ ಬರುತ್ತದೆ:

Yankee Doodle went to town
Riding on a pony.
He stuck a feather in his cap
And called it macaroni.
(ಯಾಂಕೀ ಡೂಡಲ್ ನಗರಕೆ ಹೊರಟ,
ಪೋನಿಯ ಮೇಲೇರಿ.
ಟೋಪಿಗೆ ಸೆಕ್ಕಿದ ಗರಿಯನು ತೋರಿ
'—ಮ್ಯಾಕರೋನಿ !' ಎಂದ.)

ಹಕ್ಕಿಯ ಗರಿಗೂ ಮ್ಯಾಕರೋನಿಗೂ ಸಾಮ್ಯವನ್ನು ಸೂಚಿಸಿರುವುದರಿಂದಲೇ ಗೊತ್ತಾಗುತ್ತದೆ, ಅವರ ದೃಷ್ಟಿಯಲ್ಲಿ ಮ್ಯಾಕರೋನಿಯ ಬೆಲೆ ಎಷ್ಟೆಂಬುದು! ನಾನು ಮ್ಯಾಕರೋನಿ ಸ್ಪಘೆಟಿಗಳೆರಡನ್ನೂ ತಿಂದಿದ್ದೇನೆ—'ನಾ ಮಾಡಿದ ಕರ್ಮ ಬಲವಂತವಾದರೆ' ಯಾವ ದೇವರು ತಾನೆ ಏನು ಮಾಡಿಯಾನು! ಅವೆರಡರಲ್ಲೂ ನನಗೆ ಕಂಡ ಏಕಮಾತ್ರ ಗುಣವೆಂದರೆ ಅವುಗಳ ಅಚ್ಚಬಿಳುಪು. ಆದರೆ ಬಣ್ಣಕ್ಕೆ ರುಚಿಯಿಲ್ಲವಷ್ಟೆ. ನಾವು ತಂಪು ಪಾನೀಯವನ್ನು ಕುಡಿಯಲು ಉಪಯೋಗಿಸುವ ಸ್ಟ್ರಾ (straw) ಇದ್ದಂತಿರುತ್ತದೆ. ಮ್ಯಾಕರೋನಿ. ಅಥವಾ ಬಿಳಿಯ ರಬ್ಬರ್ ಕೊಳವೆಯಂತೆ ಎಂದರೂ ಎನ್ನಬಹುದು.

ಆಹಾರ ಪದಾರ್ಥಗಳನ್ನು ಕುರಿತು ಶಾಸ್ತ್ರೀಯ ಸಂಶೋಧನೆ ನಡಸಿ ಅವುಗಳಿಗೆ ಅನ್ವಯಿಸುವಂಥ ವಿಕಾಸವಾದವೊಂದನ್ನು ಮುಂಡಿಸುವ ಕೆಲಸ

ಇನ್ನೂ ನಡೆದಿಲ್ಲ. ನಾನು ಈ ಮ್ಯಾಕರೋನಿಸ್ಪಘೆಟಿಗಳನ್ನು ಕುರಿತು ಯೋಚಿಸಿ ಅವುಗಳ ವಿಕಾಸದಲ್ಲಿ ಮೂರು ಹಂತಗಳನ್ನು ಗುರುತಿಸಿದ್ದೇನೆ. ಮೆಡಿಟರೇನಿಯನ್ ನಾಗರಿಕತೆ ಬೆಳೆದು ರೋಮ್‌ನಲ್ಲಿ ನೆಲಸಿದಾಗ, ಇಟಲಿಯ ಮಾನವ ಅನಾಗರಿಕತೆಯಿಂದ ನಾಗರಿಕತೆಯ ಕಡೆಗೆ ಮೊದಲ ಹೆಜ್ಜೆಯನ್ನಿಟ್ಟಾಗ, ಈ ಮ್ಯಾಕರೋನಿಯನ್ನು ನಿರ್ಮಿಸಿದ. ಆಮೇಲೆ—ಅವನಲ್ಲಿ ಬುದ್ಧಿ ಬೆಳೆದ ಮೇಲೆ—ಅದರಲ್ಲಿ ಹುರುಳಿಲ್ಲ (ವಾಸ್ತವವಾಗಿ ಅದು ಟೊಳ್ಳು ಪದಾರ್ಥ) ಎಂದು ಮನಗಂಡು ಒಂದು ಮೆಟ್ಟಿಲು ಮೇಲಕ್ಕೇರಿ ಸ್ಪಘೆಟಿಯನ್ನು ನಿರ್ಮಿಸಿದ. ಸ್ಪಘೆಟಿ ಅಂತಿಮ ಗುರಿಯಲ್ಲ, ಗುರಿಯನ್ನು ಸಾಧಿಸ ಹೊರಟಾಗ ದಾರಿಯಲ್ಲೊಂದು ಮಜಲು, ಇಟಾಲಿಯನ್ನರು ಆ ಮಜಲಿನಲ್ಲೇ ನಿಂತರು. ಅವರ ಪ್ರತಿಭೆ ಅಲ್ಲಿಂದ ಮೇಲಕ್ಕೆ ಏರಲಾರದೆಹೋಯಿತು. ಈ ಸಂದರ್ಭದಲ್ಲಿ ಅಂತಿಮ ಗುರಿಯೆಂದರೆ ಕರಿದ ಶ್ಯಾವಿಗೆ ಪಾಯಸ. ಭಾರತೀಯರು ಮೊದಲ ಎರಡು ಹಂತಗಳನ್ನೂ ಲೆಕ್ಕಿಸದೆ ಒಂದೇ ನೆಗೆತ ನೆಗೆದು ಇದನ್ನು ಸಾಧಿಸಿಬಿಟ್ಟರು. ಪಾಶ್ಚಾತ್ಯರು ಸ್ಪಘೆಟಿಯ ಮಟ್ಟದಲ್ಲೇ ನಿಂತರು. ಉಪನಿಷತ್ತಿನ ಭಾಷೆಯನ್ನು ಬಳಸಬಹುದಾದರೆ, ಸ್ಪಘೆಟಿ ಪೂರ್ವರೂಪ, ಶ್ಯಾವಿಗೆ ಪಾಯಸ ಉತ್ತರರೂಪ, ಭಾರತದ ಪ್ರತಿಭೆ ಸಂಧಾನ. ಪೂರ್ಣವಿಕಾಸದ ಫಲವಾದ ಇಂದಿನ ಮಾನವ ತನ್ನ ಶಿಖರದ ಔನ್ನತ್ಯದಿಂದ ಬಗ್ಗಿ ನೋಡಿದರೆ ಚಿಂಪಾಂಜಿಯೂ ನಿಯಾಂದರ್ಥಲ್ ಮಾನವನೂ ಹೇಗೆ ಕಾಣಬಹುದೋ ಊಹಿಸಿಕೊಳ್ಳಿ. ಭಾರತೀಯರಿಗೆ ಮ್ಯಾಕರೋನಿಯೂ ಸ್ಪಘೆಟಿಯೂ ಕಾಣುವುದು ಹಾಗೆಯೇ!

ಇಟಾಲಿಯನ್ನರಿಗೆ ಹೊಗಳಿಕೆ ಸಲ್ಲಬೇಕಾದ್ದು ಮ್ಯಾಕರೋನಿ ಸ್ಪಘೆಟಿಗಳಿಗಾಗಿಯಲ್ಲ, ಪೀಟ್ಸ (pizza)ಕ್ಕಾಗಿ, ಇಲ್ಲಿ ಇಟಾಲಿಯನ್ನರು ಗೆದ್ದಿದ್ದಾರೆ, ಎಂದು ಅನೇಕರ ಅಭಿಪ್ರಾಯ, ನನ್ನದಲ್ಲ. ಮೇಲುನೋಟಕ್ಕೆ ಅದು ನಮ್ಮ ರೊಟ್ಟಿಯ ಹಾಗೆ ಕಾಣುತ್ತದೆ. ಆದರೆ ಈರುಳ್ಳಿ, ಟೊಮೇಟೊ, ದಪ್ಪಮೆಣಸಿನಕಾಯಿ ಮುಂತಾದ ತರಕಾರಿಗಳ ಸಂಪರ್ಗದಿಂದ ಅದಕ್ಕೊಂದು ವೈಶಿಷ್ಟ್ಯ ಬರುತ್ತದೆ. ಮೇಲೆ ಚೀಸ್ ಸವರಿರುತ್ತಾರಾದ್ದರಿಂದ ಅದು ನಾಲಗೆಗೆ ಮತ್ತಷ್ಟು ಹಿತವಂತೆ. ಪೀಟ್ಸ ಅಮೆರಿಕನ್ನರ ಮನಸ್ಸನ್ನು ಸೆಳೆದಿದೆಯಾದ್ದರಿಂದ ಎಲ್ಲ ಊರುಗಳಲ್ಲೂ 'ಪೀಟ್ಸಹಟ್'ಗಳು ಹುಟ್ಟಿಕೊಂಡಿವೆ. ಇದನ್ನು ನಾವು ತಪ್ಪಿಸುವಂತಿಲ್ಲ.

ದಕ್ಷಿಣ ಇಂಡಿಯದ ಸಾರಿನ ಕೀರ್ತಿಯನ್ನು ಕೇಳಿ ಅದಕ್ಕೆ ಸವಾಲಾಗಿ ಅಮೆರಿಕನ್ನರು (ಪಾಶ್ಚಾತ್ಯರೆಲ್ಲ ಎಂದೇ ಹೇಳಬಹುದು) ಮಷ್‌ರೂಮ್ ಸೂಪ್ (mushroom soup)ಅನ್ನು ತಯಾರಿಸಿದ್ದಾರೆ. ಮಷ್‌ರೂಮ್

ಸೂಪಿಗೆ ಮಷ್‌ರೂಮ್ ಹಾಕದಿದ್ದರೆ ಬಹಳ ಚೆನ್ನಾಗಿರುತ್ತದೆ—ನಮ್ಮ ಮೆಣಸಿನ ಸಾರಿನಂತೆ. ಆದರೆ ಪೇಟೆಂಟ್ ಚರ್ಮದ ಅಥವಾ ಸೈಕಲ್‌ಟೈರಿನ ಚೂರುಗಳಂತೆ ಮಷ್‌ರೂಮು ಅದರಲ್ಲಿ ತೇಲುತ್ತಿದ್ದರೆ ಅಸಹ್ಯವಾಗುತ್ತದೆ. ಮಷ್‌ರೂಮ್ ಎಂದರೆ ಶಿಲೀಂಧ್ರ. ಅದಕ್ಕೆ ಕನ್ನಡಿಗರು ಕೊಟ್ಟಿರುವ ಹೆಸರು 'ನಾಯಿಕೊಡೆ'. ಎಷ್ಟಾದರೂ ನಮ್ಮ ಔಚಿತ್ಯಜ್ಞಾನ ಹೆಚ್ಚು. ಲಕ್ಷಣವಾಗಿ ಕನ್ನಡದಲ್ಲಿ 'ನಾಯಿಕೊಡೆಯ ಸಾರು' ಎಂದರೆ ಅದರ ಯೋಗ್ಯತೆ ಬಯಲಾಗುತ್ತದೆ.

ಇಲ್ಲಿ ಯಾವ ರೆಸ್ಟೋರಾಂಟಿಗೆ ಹೋದರೂ ಪ್ಯಾನ್‌ಕೇಕ್ ಸಿಕ್ಕುತ್ತದೆ. ಆದರೆ ಅದು ನಮ್ಮ ದೋಸೆಯ ಮೇಲೆ ಸೀಯುವುದಕ್ಕೂ ಯೋಗ್ಯವಲ್ಲ. ಅದು ಏನೋ ಒಂದು ತರಹ ಸಿಹಿಸಿಹಿಯಾಗಿರುತ್ತದೆ. ಆ ಸಿಹಿ ನಾಲಗೆಗೆ ಹಿತವಾದದ್ದಲ್ಲ—ದೃಷ್ಟ ಪುಷ್ಟವಲ್ಲದ ಸಿಹಿ. ಅದರ ಜೊತೆಗೆ ಮೇಪಲ್ ಸಿರಪ್ (maple syrup) ಹಾಕಿಕೊಂಡು ತಿನ್ನುತ್ತಾರೆ. ನಾನು ಒಂದೆರಡು ಸಾರಿ ಅದನ್ನು ತಿಂದಿದ್ದೇನೆ.—ಅಷ್ಟೇ ಸಾಕು, ಇನ್ನೆಷ್ಟು ಸಾರಿ ತಿನ್ನುವುದು! ಆ ಮಾತಿಗೆ ಸ್ವೀಡಿಷ್ ಪ್ಯಾನ್‌ಕೇಕ್ ಮಾತ್ರ ವಿನಾಯಿತಿ. ಅದು ನಮ್ಮ ದೋಸೆಯ ರೂಪವನ್ನು ಮಾತ್ರವಲ್ಲದೆ ಗುಣವನ್ನೂ ಅನುಕರಿಸಿದೆ. ಅದರ ರೆಸಿಪಿ (recipe)ಯನ್ನು ಸ್ವೀಡನ್ ನಮ್ಮಿಂದ ಕಲಿತಿತೋ ಅಥವಾ ತಾನೇ ಸ್ವತಂತ್ರವಾಗಿ ಕಲ್ಪಿಸಿಕೊಂಡಿತೋ ಹೇಳಲಾರೆ. ಕೀರ್ತಿಯನ್ನು ಅವರಿಗೇ ಬಿಟ್ಟುಕೊಡೋಣ—ಪರಸ್ಪರ ಸಂಪರ್ಕವಿಲ್ಲದ ಇಬ್ಬರಿಗೆ ಏಕಕಾಲದಲ್ಲಿ ಒಂದೇ ಕಲ್ಪನೆ ಹೊಳೆದಿರುವುದುಂಟು. ಏಳನೆಯ ದಶಕದಲ್ಲಿ ನಾನು ಮೂರು ನಾಲ್ಕು ತಿಂಗಳಕಾಲ ಫಿಲಿಪೀನ್ಸ್‌ನಲ್ಲಿದ್ದೆ. ನಮ್ಮ ರಾಜುವಿನ ಸಹೋದ್ಯೋಗಿಗಳಾಗಿದ್ದ ಪ್ರೋತಾಸಿಯೊ ನಮ್ಮನ್ನು ಒಂದು ದಿನ ಟೀಗೆ ಕರೆದರು. ಅವತ್ತು ನಮಗೆ ಕೊಟ್ಟ ತಿನಿಸುಗಳಲ್ಲಿ ಎರಡು ನನಗೆ ಪೂರ್ವ ಪರಿಚಿತವಾದುವು: ಕಾಯಿ ಹುರಿಟ್ಟು ಮತ್ತು ಹಾಲುಬಾಯಿ. ಇವೆರಡೂ ಭಾರತದಿಂದ ಮನಿಲಾನಗರಕ್ಕೆ ಬಂದು ಅಲ್ಲಿಂದ 350 ಮೈಲಿ ದೂರದಲ್ಲಿರುವ ಈ ಊರಿಗೆ ಹೇಗೆ ಪ್ರಯಾಣ ಮಾಡಿದವು ಎಂದು ನನಗೆ ಆಶ್ಚರ್ಯವಾಯಿತು. "ಇದರ ರೆಸಿಪಿ ಎಲ್ಲಿ ಸಿಕ್ಕಿತು?" ಎಂದು ಮಿಸಿಸ್ ಪ್ರೋತಾಸಿಯೊ ಅವರನ್ನು ಕೇಳಿದಾಗ ಆಕೆ "ಇದಕ್ಕೆ ರೆಸಿಪಿ ಯೇಕೆ! ನಮ್ಮ ತಾತ ಮುತ್ತಾತನ ಕಾಲದಿಂದ ಬಂದದ್ದು, ಇದು" ಎಂದರು. ಇಂಥ ಕುಶಲಕಲೆಗಳಲ್ಲಿ ನಮ್ಮದೇ ಹೆಚ್ಚುಗಾರಿಕೆ ಎಂದುಕೊಂಡಿದ್ದ ನನಗೆ ಬುದ್ಧಿ ಬಂತು, ಎಂದರೋ ಮಹಾನುಭಾವುಲು!

ಸ್ವೀಡನ್ನಿನವರು ಹೀಗೆಯೇ ದೋಸೆಯ ಕಲೆಯನ್ನು ಸ್ವತಂತ್ರವಾಗಿ

ಬೆಳಸಿಕೊಂಡಿರಬಹುದು. ಅಂತೂ, ಈಗ ಹಸಿದ ಭಾರತೀಯನಿಗೆ ದೋಸೆ ಅಥವಾ ಅದರ ಸಮೀಪ ಬಂಧು ಅಲ್ಲಿ ಸಿಕ್ಕುತ್ತದೆಯೆಂಬುದು ಮುಖ್ಯ ವಿಷಯ. ಷಿಕಾಗೋವಿನ ಸುತ್ತಮುತ್ತ 'ಅಂತರರಾಷ್ಟ್ರೀಯ ಪ್ಯಾನ್‌ಕೇಕ್ ಮಂದಿರ' ಗಳಿವೆ. ಆದರೆ ಅವುಗಳ ಅಂತರರಾಷ್ಟ್ರೀಯತೆ ಭಾರತವನ್ನು ಒಳಗೊಂಡಂತಿಲ್ಲ. ಅಲ್ಲಿ ಸಿಕ್ಕುವ ಸ್ವೀಡಿಷ್ ಪ್ಯಾನ್‌ಕೇಕ್ ಕೋಟಾ ಮಾಲು! ಸಾಚಾಮಾಲು ಬೇಕಾದರೆ ನೀವು ಮಿಷಿಗನ್ ರಾಜ್ಯದಲ್ಲಿರುವ ಲಡಿಂಗ್ಟನ್‌ಗೆ ಹೋಗಬೇಕು. ಹೋಗುವುದೇನೂ ಕಷ್ಟವಲ್ಲ. ಷಿಕಾಗೋವಿನಿಂದ ಮಸ್ಕೀಗನ್‌ಗೆ 40 ನಿಮಿಷ ಗಳ ವಿಮಾನ ಪ್ರಯಾಣ ; ರಿಟರ್ನ್ ಟಿಕೆಟ್ಟಿಗೆ 42 ಡಾಲರ್. ಹೇಗಿದ್ದರೂ ನಿಮ್ಮ ಬೀಗರು ಲಡಿಂಗ್ಟನ್‌ನಲ್ಲಿ ಬಿಡಾರ ಮಾಡಿಯೇ ಇರುತ್ತಾರೆ. ಅವರಿ ಗೊಂದು ಕಾಗದ ಬರೆಯಿರಿ : ನಿಮ್ಮನ್ನು ಮಸ್ಕೀಗನ್ ವಾಯು ಬಂದರಿನಲ್ಲಿ ಎದುರುಗೊಂಡು ಕರೆದುಕೊಂಡು ಹೋಗುತ್ತಾರೆ. ಅಲ್ಲಿ ಹೋಗಿ—'ಸ್ವೀಡಿಷ್ ಕಾಫಿ ಹೌಸ್'ನ ರಾಜರ್ಸ್ ಮಹಾಶಯನ ಶರಣುಹೋದರೆ ಸೊಗಸಾದ ಸ್ವೀಡಿಷ್ ಪ್ಯಾನ್‌ಕೇಕ್ ಕೊಡುತ್ತಾನೆ. ನಾನು ಅವನ ಪಾಕ ಕಲೆಯನ್ನು ಹೊಗಳಿ ಅವನಿಗೆ ಕಾಗದ ಬರೆದಿದ್ದೇನೆ. ನನ್ನ ಹೆಸರು ಕೇಳಿದರೆ ನಿಮ್ಮನ್ನು ಒಂದು ಕೈಯಿಂದ ಬಾಚಿ ತಬ್ಬಿಕೊಂಡು ಇನ್ನೊಂದು ಕೈಯನ್ನು ನಿಮ್ಮ ಜೇಬಿಗೆ ಇಳಿಯಬಿಡುತ್ತಾನೆ.

ಸ್ವೀಡಿಷ್ ದೋಸೆ ಎಷ್ಟೇ ರುಚಿಯಾಗಿದ್ದರೂ ಅದನ್ನು ಮಿತವಾಗಿಯೇ ಸೇವಿಸಿ ಡೆಸರ್ಟ್ (dessert) ಗಾಗಿ ಹೊಟ್ಟೆಯಲ್ಲಿ ಸ್ಥಳವನ್ನುಳಿಸಿಕೊಳ್ಳು ವುದು ಬುದ್ಧಿವಂತಿಕೆಯ ಲಕ್ಷಣ. ನನ್ನ ಸ್ನೇಹಿತರೊಬ್ಬರು 'ವೇಕೆಂಟ್ ಸ್ಪೇಸ್' (vacant space) ಎಂಬ ಹೆಸರಿನ ಥಿಯರಿಯನ್ನು ಪ್ರತಿಪಾದಿಸುತ್ತಿದ್ದರು. ಅದರ ಪ್ರಕಾರ, ನಾವು ಎಷ್ಟೇ ಹಚ್ಚಾಗಿ ತಿಂದಿರಲಿ, ಹೊಸದೊಂದು ಪದಾರ್ಥ ಬಂದರೆ ಕೂಡಲೆ ಹೊಟ್ಟೆಯಲ್ಲಿ ಅದಕ್ಕೆ ಅವಶ್ಯಕವಾದಷ್ಟು ಸ್ಥಳ ನಿರ್ಮಾಣ ವಾಗುತ್ತದೆ. ಇದು ಇಂದ್ರನ ಪುಷ್ಪಕ ವಿಮಾನದಲ್ಲಿದ್ದ ಗುಣ. ಅದರಲ್ಲಿ ಸಾವಿರ ಜನ ಕೂಡುವಷ್ಟು ಸ್ಥಳವಿದೆ ಎಂದುಕೊಳ್ಳಿ, ಸಾವಿರದ ಮೇಲೊಬ್ಬ ಬಂದರೆ ಕೂಡಲೇ ವಿಮಾನ ಹಿಗ್ಗಿ ಅವನಿಗೆ ಜಾಗ ಮಾಡಿಕೊಡುತ್ತದೆ. ಮತ್ತೊಬ್ಬ ಮಗದೊಬ್ಬ ಬಂದರೆ ಅವರಿಗೂ ಹಾಗೆಯೇ. ನಮ್ಮ ಹೊಟ್ಟೆಯೂ ಹೀಗೆ ಮಾಡುತ್ತದೆಂಬ ಥಿಯರಿಯನ್ನು ನೆಚ್ಚಲಾಗದು. ನಮಗೆ ಬೇಕಾದ ತಿಂಡಿಗೆ ಸ್ವಲ್ಪ ಸ್ಥಳವನ್ನು ಮೀಸಲಾಗಿಟ್ಟಿರುವುದೊಳ್ಳೆಯದು.

ಡೆಸರ್ಟ್‌ನಲ್ಲಿ ಹತ್ತಾರು ವಿಧಗಳಿವೆ. ಕೇಕ್, ಐಸ್‌ಕ್ರೀಮ್, ಫ್ರೂಟ್ ಸ್ಯಾಲಡ್, ಇವೆಲ್ಲ ಭಾರತಕ್ಕೆ ಹೊಸದಲ್ಲ. ಅಮೆರಿಕನ್ನರು ಐಸ್‌ಕ್ರೀಮನ್ನು

ಆಧಾರವಾಗಿಟ್ಟುಕೊಂಡು ವಿಶೇಷ ಭಕ್ಷ್ಯವೊಂದನ್ನು ತಯಾರಿಸುತ್ತಾರೆ. ಒಂದು ಪದರ ಐಸ್‌ಕ್ರೀಮ್ ಅದರ ಮೇಲೆ ಹಣ್ಣಿನ ಹೋಳುಗಳು, ಅದರ ಮೇಲೆ ಮತ್ತೊಂದು ಪದರ ಐಸ್‌ಕ್ರೀಮ್ ಅದರ ಮೇಲೆ ತೆಳುವಾದ ಚಾಕೊಲೆಟ್ಟಿನ ಹರವು, ಅದರ ಮೇಲೆ ಐಸ್‌ಕ್ರೀಮ್ ಜೆರಿತ ಬಾದಾಮಿ ಮುಂತಾದುವುಗಳ ಚೂರು. ಇದರ ಹೆಸರು ಐಸ್‌ಕ್ರೀಮ್ ಸಂಡಿ (ice cream sundae). ಇದು ಅಮೆರಿಕಕ್ಕೆ ಕೀರ್ತಿಯನ್ನೂ ಹೃದಯರೋಗವನ್ನೂ ತರುವ ಭಕ್ಷ್ಯ. 'One order of sundae' (ಒಂದು ಕಪ್ ಸಂಡಿ) ಎಂದು ಹೇಳಿದರೆ ಬಕಾಸುರನಿಗೂ ತೃಪ್ತಿಯಾಗುವ ಪ್ರಮಾಣದಲ್ಲಿ ಅದನ್ನು ತಂದಿಡು ತ್ತಾರೆ. ಅಮೆರಿಕದಲ್ಲಿ ಸ್ಥೂಲಕಾಯರೂ (ಸ್ಥೂಲ ಎಂಬ ಪದಕ್ಕೆ ಮಿತಿ ಇಟ್ಟುಕೊಳ್ಳಬೇಕಾದ್ದಿಲ್ಲ) ಹೃದಯಾಘಾತದಿಂದ ಸಾಯುವವರೂ ಹೆಚ್ಚು. ಅದಕ್ಕೆ ಮುಖ್ಯ ಕಾರಣ ಐಸ್‌ಕ್ರೀಮ್ ಸಂಡಿ. ನಾನು ನನ್ನ ಮುಂದಿಟ್ಟದ್ದ ರಲ್ಲಿ ಕಾಲುಭಾಗವನ್ನೂ ತಿನ್ನಲಾರದೆಹೋದೆ. ಇಲ್ಲಿಯ ಜನರಿಗೆ ಸಿಹಿ ಎಂದರೆ ಪ್ರಾಣ. ನನ್ನಂಥ ಸಂಯಮಿಯೂ ಕೂಡ ಇಲ್ಲಿದ್ದ ನಾಲ್ಕು ತಿಂಗಳಿನಲ್ಲಿ ಹಿಂದಿನ ನಾಲ್ಕು ವರ್ಷಗಳಿಗಿಂತ ಹೆಚ್ಚು ಸಿಹಿ ತಿಂದಿದ್ದೇನೆ!

ಡೆಸರ್ಟನ್ನು ಕುರಿತು ಒಂದು ವಿಷಯವನ್ನು ಕೊನೆಗೆ ಹೇಳಬೇಕೆಂದು ಉಳಿಸಿಕೊಂಡಿದ್ದೇನೆ. ಅದು ಮನಸ್ಸಿನಲ್ಲಿ ನಿಲ್ಲಬೇಕಾದ ವಿಷಯ. ಮಿಚಿಗನ್ ರಾಜ್ಯದಲ್ಲಿ ಅನೇಕ ಕಡೆ ಚೆರಿ, ರಾಸ್ಪ್‌ಬೆರಿ, ಸ್ಟ್ರಾಬೆರಿ, ಸೇಬು ಮುಂತಾದ ಹಣ್ಣುಗಳನ್ನು ಹೇರಳವಾಗಿ ಬೆಳೆಯುತ್ತಾರೆ. ಬ್ಯೂಲಾ (Beulah) ಎಂಬ ಊರಿನಲ್ಲಿ ಪ್ರಪಂಚದ ಉಳಿದೆಲ್ಲ ಕಡೆಗಳಿಗಿಂತ ಚೆರಿ ಬೆಳೆ ಗುಣಪ್ರಮಾಣ ಗಳೆರಡರ ದೃಷ್ಟಿಯಿಂದಲೂ ಹೆಚ್ಚು. ಅಲ್ಲಿ ಒಬ್ಬ 'ಚೆರಿ ಹಟ್' ಒಂದನ್ನು ಕಟ್ಟಿದ. ಈಗ ಅದು ಚೆರಿ ಹಣ್ಣು ಚೆರಿ ಜಾಮ್, ಚೆರಿ ಪೈ (Cherry pie) ಗಳಿಗೆ ಪ್ರಸಿದ್ಧವಾದ ಅಂಗಡಿಯಾಗಿದೆ. ಅಲ್ಲಿಯ ಚೆರಿ ಪೈಯನ್ನು ತಿನ್ನಲೆಂದೇ ಮಿಸಿಸ್ ಮೆಕ್‌ಮಿಲನ್ ನನ್ನನ್ನು ನೂರು ಮೈಲಿ ಪ್ರಯಾಣ ಮಾಡಿಸಿದರು. ಅವರಿಗೆ ಆರೋಗ್ಯ ಸರಿಯಿಲ್ಲದೆ ಕಾರ್ ನಡೆಸುವುದು ಕಷ್ಟವಾಗಿದ್ದರೂ ಕೂಡ. ಇದನ್ನು ಹಿಂದೆಯೇ ಪ್ರಸ್ತಾಪಿಸಿದ್ದೇನೆ. ಪೈಯನ್ನು ತಿಂದ ಮೇಲೆ ಅವರ ಉತ್ಸಾಹ ಅರ್ಥವಾಯಿತು ವೆನಿಲ ಪರಿಮಳದಿಂದ ಕೂಡಿ ಸ್ವಲ್ಪ ಮರಳು ಮರಳಾಗಿ ನಾಲಿಗೆಯ ಮೇಲೆ ಹೊರಳಿಸಿ ಹೊರಳಿಸಿ ಸವಿಯಬಹುದಾದ ಐಸ್ ಕ್ರೀಮ್, ಅದರ ಜೊತೆಗೆ ಹದವಾಗಿ ಬೆರೆದ ಚಾಕೊಲೆಟ್ಟಿನ ಕಂಪು, ಗರಿಗರಿ ಯಾಗಿ ಸಿಕ್ಕುವ ಬಾದಾಮಿ, ಹಲ್ಲೂರಿದರೆ ರಸವುಕ್ಕುವ ಚೆರಿ—ನೆನೆದರೆ ಮತ್ತೆ ಅಮೆರಿಕಕ್ಕೆ ಓಡಿಹೋಗೋಣವೆ ಎನ್ನಿಸುತ್ತದೆ. ಅಂದು ಸಂಜೆ ನಾವು

ಬ್ಯೂಲಾದಿಂದ ಮರಳಿ ಬಂದ ಮೇಲೆ ಮಿಸಿಸ್ ಮೆಕ್‌ಮಿಲನ್‌ರ ಸ್ನೇಹಿತೆ ಮಿಸಿಸ್ ಟ್ರೈಟೆಸ್, 'ನಾನು ಇಂದು ಚೆರಿ ಪೈ ಮಾಡಿದ್ದೇನೆ. ಇದೇ ನನ್ನ ಪ್ರಥಮ ಪ್ರಯತ್ನ. ನೀವು ಇಂಡಿಯಾದಿಂದ ಬಂದಿದ್ದೀರಿ. ನಿಮ್ಮಂಥ ಗಿನಿ ಪಿಗ್ ಸಿಕ್ಕುವುದು ಕಷ್ಟ. ಬನ್ನಿ' ಎಂದು ಆಹ್ವಾನಿಸಿದರು. (ಗಿನಿ ಪಿಗ್ ಎಂಬ ಪದ ನಾನು ಸೇರಿಸಿದ್ದು !) 'ನಿಮ್ಮ ಪರತ್ತಿನ ಮೇಲೆ ಗಿನಿಪಿಗ್ ಆಗುವುದೇನೂ ಅಹಿತವಲ್ಲ' ಎಂದು ಉತ್ತರಿಸಿ ಮತ್ತೊಂದು ಒಬ್ಬೆ ಪೈಯನ್ನು ಇಳಿಸಿದೆ. ಚೆರಿ ಪೈ ತಿಂದ ಮೇಲೆ ಮತ್ತೇನನ್ನೂ ತಿನ್ನಬಾರದು. ಸಂಗೀತಕ್ಕೆ ಮಧ್ಯಮಾವತಿಯು ಮಂಗಳವಿದ್ದಂತೆ ಊಟಕ್ಕೆ ಚೆರಿ ಪೈ.

## ಹೋಗಿ ಬರಲೆ?

ನ್ಯೂಯಾರ್ಕಿನಲ್ಲಿ ಒಂದು ವಾರ ಇರಬೇಕೆಂದು ಏರ್ಪಾಟಾಗಿತ್ತು. ಗೋಪಾಲ ಸ್ವಾಮಿ "ಹಿಂದಿನ ಸಲ ಬಂದಾಗ ನೀವು ಎಂಪೈರ್ ಸ್ಟೇಟ್ ಕಟ್ಟಡವನ್ನೂ ಸ್ವಾತಂತ್ರ್ಯ ದೇವಿಯ ಪ್ರತಿಮೆಯನ್ನೂ ನೋಡಲಿಲ್ಲ. ಈ ಸಾರಿ ನೋಡಲೇ ಬೇಕು. ಇವತ್ತು ಹೋಗೋಣ. ಒಂದಲ್ಲ ಎರಡು ಸಲ ನ್ಯೂಯಾರ್ಕಿಗೆ ಬಂದರೂ ಅವನ್ನು ನೋಡಲಿಲ್ಲ ಅಂದರೆ ಯಾರಾದರೂ ನಕ್ಕಾರು" ಎಂದರು. "ನೋಡಲಿಲ್ಲ ಅಂತ ಯಾರಿಗೂ ಹೇಳುವುದಿಲ್ಲ. ನಗುವುದಕ್ಕೆ ಅವಕಾಶ ಕೊಡುವುದಿಲ್ಲ" ಎಂದು ಮಾತು ಕೊಟ್ಟಮೇಲೆ (ಆ ಮಾತನ್ನು ನಾನು ಉಳಿಸಿಕೊಂಡಿಲ್ಲ!) ತಮ್ಮ ಸೂಚನೆಯ ಕೈ ಬಿಟ್ಟರು. ಆ ಸೂಚನೆ ಕೇವಲ ಮರ್ಯಾದೆಗಾಗಿ ಕೊಟ್ಟದ್ದು—ಪ್ರೇಕ್ಷಣೀಯ ಸ್ಥಳಗಳನ್ನು ತೋರಿಸುವುದು ಅತಿಥಿಸತ್ಕಾರದಲ್ಲಿ ಮುಖ್ಯವಾದ ಅಂಶವಷ್ಟೆ !

ನಿಜವಾಗಿ ನಮಗೆ ಯಾರಿಗೂ ಊರು ಸುತ್ತುವುದು ಬೇಕಿರಲಿಲ್ಲ. ಮತ್ತೆ ನಾವೆಲ್ಲ ಒಟ್ಟಿಗೆ ಸೇರುವುದು ಯಾವಾಗಲೊ! ಇರುವ ಐದಾರು ದಿನ ಗಳನ್ನು ನ್ಯೂಯಾರ್ಕಿನ ದೃಶ್ಯಗಳಿಗೆ ಹಂಚಿಕೊಡಲು ಯಾರಿಗೂ ಇಷ್ಟವಿಲ್ಲ. ನಮಗೆ ಬೇಕಾಗಿದ್ದದ್ದು ಮಾತು, ರಾತ್ರಿ 11–12 ಘಂಟೆಯಾದರೂ ಮುಗಿ ಯದ ಮಾತು. ಬೆಳಗ್ಗೆ 5 ಘಂಟೆಗೇ ಗೋಪಾಲಸ್ವಾಮಿ "ಎಚ್ಚರವಾಗಿದೆಯೊ? ಕಾಫಿಗೆ ಸಿದ್ಧವಾಗಿದ್ದೀರೊ?" ಎಂದು ಕೇಳುವರು. ಕಾಫಿ ಕುಡಿದೆವೋ ಇಲ್ಲವೊ, ಅದರ ಅರಿವೂ ಇಲ್ಲ. ಮತ್ತೆ ನಮ್ಮೆಲ್ಲರ ಸಂಸಾರದ ಕಥೆ. ಮನ ಕರಗಿಸಿದ ಪ್ರಸಂಗಗಳು, ಹರ್ಷ ಉಕ್ಕಿಸಿದ ಪ್ರಸಂಗಗಳು, ತನ್ನ ಮಕ್ಕಳು ಎಷ್ಟು ಗೋಳು ಹುಯ್ದುಕೊಳ್ಳುತ್ತಾರೆ ಎಂದು ಗಿರಿಜ ಜನ್ಮ ರೋಸಿಹೋದ

ವಳಂತೆ—ಆದರೆ ವಾಸ್ತವವಾಗಿ ಹೆಮ್ಮೆಯಿಂದ—ಹೇಳಿಕೊಳ್ಳುವುದು ; "ಚಿಕ್ಕವಳಾಗಿದ್ದಾಗ ನೀನೇನು ಕಡಿಮೆ ಚೇಷ್ಟೆ ಮಾಡಿದೆ ಅಂದುಕೊಂಡಿದ್ದೀಯ" ಎಂದು ನಾನು ನಗುವುದು.

"ನಾವೆಲ್ಲಾ ಗೋವಾಕ್ಕೆ ಹೋಗಿದ್ದೆವಲ್ಲ, ಆಗ...."

"ನನ್ನ ಮದುವೆಯಲ್ಲಿ...."

"ಅಯ್ಯೋ ನಿನ್ನ ಮದುವೆಯ ಹೊತ್ತಿಗೆ ಕಾಲ ಎಷ್ಟೋ ಬದಲಾಯಿಸಿತ್ತು. ಜಯಮ್ಮ ನಮ್ಮ ಮನೆಗೆ ಬಂದಾಗ...."

ಇತ್ಯಾದಿ ಇತ್ಯಾದಿ—ಮೊದಲಿಲ್ಲ ಕೊನೆಯಿಲ್ಲ.

ಮಾರನೆಯ ದಿನ ಶೇಖರಿ (ಡಾಕ್ಟರ್ ಎಚ್.ಕೆ. ಚಂದ್ರಶೇಖರ) ಮತ್ತು ಅವರ ಪತ್ನಿ ಡಾಕ್ಟರ್ ಶ್ರೀದೇವಿ ನಮ್ಮನ್ನೆಲ್ಲ ಊಟಕ್ಕೆ ಕರೆದರು. ಅವರ ಮನೆಯಲ್ಲೂ ಹಳೆಯ ನೆನಪುಗಳ ಪುನರಾವರ್ತನ. ಆ ದಿನ ಅನಿರೀಕ್ಷಿತವಾಗಿ ಆರ್.ಕೆ. ನಾರಾಯಣ್ ಅಲ್ಲಿಗೆ ಬಂದಿದ್ದರು. ಸಂಗೀತ ಸಾಹಿತ್ಯಗಳಲ್ಲಿ ಶೇಖರಿಗೂ ಶ್ರೀದೇವಿಯವರಿಗೂ ಬಹಳ ಆಸಕ್ತಿ. ನ್ಯೂಯಾರ್ಕಿನಲ್ಲೂ ಸುತ್ತಮುತ್ತಿನ ಪ್ರದೇಶದಲ್ಲೂ ಇರುವ ಕನ್ನಡಿಗರನ್ನೆಲ್ಲ ಆಗಾಗ ಸೇರಿಸಿ ಗೋಷ್ಠಿ ನಡೆಸುವುದು, ಅಭಿಪ್ರಾಯ ವಿನಿಮಯ ಮಾಡಿಕೊಳ್ಳುವುದು, ಭಾರತದಿಂದ ಬಂದ ಅಭ್ಯಾಗತರನ್ನು ಆದರಿಸುವುದು—ಇತ್ಯಾದಿ ಕೆಲಸಗಳಲ್ಲಿ ಈ ದಂಪತಿಗಳು ನೇತೃತ್ವ ವಹಿಸುತ್ತಾರೆ. ಶೇಖರಿ ನ್ಯೂಯಾರ್ಕಿನ ಕನ್ನಡಕೂಟಕ್ಕೆ ಅಧ್ಯಕ್ಷ, ಮತ್ತು ಆ ಕೂಟದಿಂದ ಹೊರಡುವ 'ಸುದ್ದಿಸಾರಂಗಿ' ಎಂಬ ಕೈಬರಹದ ಸಮಾಚಾರಪತ್ರಕ್ಕೆ ಸಂಪಾದಕ. ಶ್ರೀದೇವಿಯವರು ಸಂಗೀತವನ್ನು ಶಾಸ್ತ್ರೀಯವಾಗಿ ಅಭ್ಯಾಸ ಮಾಡಿದವರು. ಅವರ ಕಂಠವೂ ಮಧುರವಾದದ್ದು. ಅವರ ನಮ್ರತೆ ಅಡ್ಡಬರದಂತೆ ನಾವು ಅವರನ್ನು ಕಾಡಿ ಬೇಡಿ ಅವರ ಹಾಡಿಕೆಯನ್ನು ಕೇಳಿ ಆನಂದಿಸಿದೆವು.

ಮಾರನೆಯ ದಿನ ಶ್ರೀ ವಿ.ಎಸ್. ತಾತಾ ಅವರ ಮನೆಯಲ್ಲಿ ಊಟ. ಎರಡು ವರ್ಷದ ಹಿಂದೆ ಅವರು ನನಗೆ ಭೇಟಿ ಕೊಟ್ಟಿದ್ದರು. ಅಂದೇ ನನಗೆ ಅವರ ಪರಿಚಯವಾದದ್ದು. ಆದರೆ ಅವರ ಸಜ್ಜನಿಕೆಯಿಂದಾಗಿ ನಾವು ಬಹುಬೇಗ ಹಳೆಯ ಸ್ನೇಹಿತರಂತೆ ವರ್ತಿಸುವುದು ಸಾಧ್ಯವಾಯಿತು. ಅವರು ಸಾಹಸಿಗಳು. ಮೂರು ದಶಕಗಳ ಹಿಂದೆಯೇ ಅಮೆರಿಕಕ್ಕೆ ಹೋಗಿ ಪತ್ರಿಕೋದ್ಯಮದಲ್ಲಿ ತೊಡಗಿ ಅನುಕೂಲಸ್ಥಿತಿಗೆ ಬಂದವರು. ಅವರ ಮಕ್ಕಳಿಲ್ಲ ಅಲ್ಲೂ ಫ್ರಾನ್ಸಿನಲ್ಲೂ ವಿಶೇಷ ಶಿಕ್ಷಣ ಪಡೆದು ಅಮೆರಿಕದಲ್ಲೇ ನೆಲಸುವವರಾಗಿದ್ದಾರೆ. ತಾತಾ ಅವರಿಗೆ ಮಾತ್ರ ಮೈಸೂರಿನ ಹಂಬಲು. ಮೈಸೂರಿನ ಮೂಲೆ ಮೂಲೆ

ಯನ್ನೂ ಸ್ಮರಿಸಿಕೊಳ್ಳುತ್ತಾರೆ. ಉಪವನ, ಹುಲ್ಲುಗಾವಲು, ಕೆರೆಗಳು, ಸೌಧಗಳು, ಚಾಮುಂಡಿಬೆಟ್ಟ, ಇವೆಲ್ಲದರ ಸೊಬಗನ್ನು ಹೆಂಗರುಳಿನ ಪ್ರೀತಿಯಿಂದ ನೆನೆಯುತ್ತಾರೆ. ಗೋಲ್ಡ್‌ಸ್ಮಿತ್‌ನ

Wherever I roam, whatever realms to see
My heart untravelled turns to thee

(ನಾನು ಯಾವ ದೇಶವನ್ನೇ ನೋಡಹೋದರೂ, ಎಲ್ಲೆಲ್ಲಿ ಅಲೆದರೂ, ನನ್ನ ಹೃದಯ ಮಾತ್ರ ಎಲ್ಲಿಗೂ ಹೋಗದೆ ನಿನ್ನ ಕಡೆಗೆ ತಿರುಗುತ್ತದೆ.)
ಎಂಬ ಪಂಕ್ತಿಗಳನ್ನು ತಮಗೆ ತಾವೇ ಹೇಳಿಕೊಂಡಿದ್ದಲ್ಲದೆ 'Thee' ಎಂದರೆ ಕರ್ಣಾಟಕ ಮಾತ್ರವಲ್ಲ, ಕರ್ಣಾಟಕ ಸೊಬಗೆಲ್ಲದರ ಕಿರುಪುತ್ಥಳಿ ಮೈಸೂರು ನಗರ ಎಂದು ವ್ಯಾಖ್ಯಾನ ಮಾಡಿದರು. "ನಿಮ್ಮ ಮಗ ಅಮೆರಿಕದಲ್ಲೇ ಇದ್ದುಬಿಡು ಎಂದು ನಿಮ್ಮನ್ನು ಬೇಡಿದರೆ ಇರುತ್ತೀರ?" ಎಂದು ಅವರು ಕೇಳಿದ್ದಕ್ಕೆ ನಾನು "ಸಾಧ್ಯವಲ್ಲ. ದೇಶಾಭಿಮಾನಕ್ಕೆ ಕಳೆದ ಶತಮಾನದಲ್ಲಿ ಕೊಡುತ್ತಿದ್ದಷ್ಟು ಪ್ರಾಮುಖ್ಯವನ್ನು ನಾನು ಇಂದು ಕೊಡಲಾರೆ. ಆದರೂ ಅದಕ್ಕೆ ಸ್ಥಾನವುಂಟು. ಮೈಸೂರಿನ ಮಣ್ಣನ್ನು ಮೈಸೂರಿಗೇ ಕೊಡುತ್ತೇನೆ" ಎಂದು ಉತ್ತರಕೊಟ್ಟೆ. ಅವರಿಗೂ ಅದೇ ಇಚ್ಛೆ.

ನಮ್ಮಲ್ಲಿ 'ದಿಲ್ಲಿ ನೋಡಿ, ಬೊಂಬಾಯಿ ನೋಡಿ' ಎಂದು ಬಸ್ ಪ್ರಯಾಣವನ್ನು ಏರ್ಪಡಿಸುವಂತೆ ನ್ಯೂಯಾರ್ಕ್‌ನಲ್ಲೂ ಏರ್ಪಡಿಸುತ್ತಾರೆ. ರಾಮು ನೈಲ್ಸ್‌ಗೆ ವಾಪಸಾಗುವುದಕ್ಕೆ ಎರಡು ದಿನ ಮುಂಚೆ ನಾವು ರೆಸ್ಟೋರಾಂಟಿನಲ್ಲಿ ಕಾಫಿ ಕುಡಿಯುತ್ತಿದ್ದಾಗ ಆ ಸ್ಥಳದಿಂದಲೇ ಅಂಥ ಬಸ್ಸು ಹೊರಡುವುದೆಂದು ತಿಳಿಯಿತು. ನಮ್ಮೆಲ್ಲರಿಗೂ ಏನೋ ಬುದ್ಧಿಮಾಂದ್ಯ ಬಂದಿದ್ದಿರಬೇಕು—ರಾಮು ಡಯಾನ ನಾನು, ಎಲ್ಲರಿಗೂ ನಗರ ದರ್ಶನಕ್ಕೆ ಹೋಗಬೇಕೆನಿಸಿತು. ಒಬ್ಬೊಬ್ಬರಿಗೂ ನಾಲ್ಕು ನಾಲ್ಕು ಡಾಲರ್ ತೆತ್ತೆವೆಂದು ನೆನಪು. ನಮ್ಮಂತೆ ಇತರರೂ ಹಣ ಕಳೆದುಕೊಳ್ಳದಿರಲೆಂದು ನಮ್ಮ ಅನುಭವವನ್ನು ಇಲ್ಲಿ ಕಾಣಿಸಿದ್ದೇನೆ. ವಾಸ್ತವವಾಗಿ ನಮಗೆ ದೊರಕಿದ್ದು ನಗರ ದರ್ಶನವಲ್ಲ, ಕೆಲವು ಬೀದಿಗಳಲ್ಲಿ ಬಸ್ ಸವಾರಿ ಮಾತ್ರ. ಸ್ವಾತಂತ್ರ್ಯ ದೇವಿಯ ಪ್ರತಿಮೆ ಯಾವ ದಿಕ್ಕಿನಲ್ಲಿದೆ ಎಂಬುದನ್ನು ಬಸ್ ಚಾಲಕ ನಿರ್ವಂಚನೆಯಾಗಿ ತಿಳಿಸಿದ. "ಅಗೋ ಅಲ್ಲಿ ಧ್ವಜಗಳು ಹಾರಾಡುತ್ತಿವೆಯಲ್ಲ, ಅದೇ ಸಂಯುಕ್ತ ರಾಷ್ಟ್ರಗಳ ಕಟ್ಟಡ; ಅದೇ ರೇಡಿಯೋ ಸಿಟಿ; ಉಳಿದೆಲ್ಲ ಕಟ್ಟಡಗಳಿಗಿಂತ ಎತ್ತರವಾಗಿ ಕಾಣುತ್ತಲ್ಲ, ಅದೇ ಎಂಪೈರ್ ಸ್ಟೇಟ್ ಗೋಪುರ; ಇದೇ ಸುಪ್ರಸಿದ್ಧ ಇಷ್ಟನೇ (ಈ ಸಂಖ್ಯೆ ನೆನಪಿಲ್ಲ) ಬೀದಿ" ಎಂದೆಲ್ಲ ಹೇಳಿದನೆಂದೂ

ಒಪ್ಪಬೇಕು. ಆದರೆ ಎಲ್ಲೂ ಬಸ್ಸಿನಿಂದ ಕೆಳಗಿಳಿಯಲು ಅವಕಾಶ ಕೊಡಲಿಲ್ಲ. ಕೊನೆಗೆ ನಮ್ಮನ್ನು ಚೈನಾ ಟೌನ್‌ಗೆ ಕರೆದುಕೊಂಡು ಹೋದ. ಅಲ್ಲಿ ರಸ್ತೆಯ ಪಕ್ಕದ ಪಾದಚಾರಿ ರಸ್ತೆಯಲ್ಲಿ ಕುಡಿದೋ ಹಿರೋಯಿನ್ ಕೊಕೇನ್ ಮುಂತಾದ ಮಾದಕಗಳನ್ನು ಸೇವಿಸಿಯೋ ಅಸ್ತವ್ಯಸ್ತರಾಗಿ ಕೆಲವು ಜನ ಬಿದ್ದಿದ್ದರು. ಬಸ್ ಚಾಲಕ ನಮ್ಮನ್ನು ಇಳಿಸಿ ಹತ್ತಿರದಲ್ಲೇ ಇದ್ದ ಕ್ಯೂರಿಯೊ* (curio) ಅಂಗಡಿಗೆ ಕರೆದುಕೊಂಡು ಹೋದ. ನಾವು ಬಸ್ಸಿನಿಂದಿಳಿದು ಕಟ್ಟಡವನ್ನು ಪ್ರವೇಶಿಸಿದ್ದು ಅದೊಂದೇ ಕಡೆ. ಇಂಥ ಅಂಗಡಿಗಳಲ್ಲಿ ಹುಂಬ ಪ್ರವಾಸಿಗಳು ಒಂದಕ್ಕೆ ಹತ್ತರಷ್ಟು ಬೆಲೆ ಕೊಟ್ಟು ಕ್ಯೂರಿಯೋಗಳನ್ನು— ಅವು ಪುರಾತನ ಕಾಲದಲ್ಲಿ ನಿರ್ಮಿತವಾದವೆಂದೂ ದೂರದೇಶದ ನಾಗರಿಕತೆಯ ಪ್ರತೀಕಗಳೆಂದೂ ಭ್ರಮಿಸಿ ಕೊಳ್ಳುತ್ತಾರೆ. ಈ ಪುರಾತನ ಕಾಲದ ಮತ್ತು ದೂರದೇಶದ ವಸ್ತುಗಳನ್ನು ತಯಾರು ಮಾಡುವ ಕಾರ್ಖಾನೆಗಳು 20 ನೆಯ ಶತಮಾನದ ಅಮೆರಿಕದಲ್ಲೇ ಇವೆಯೆಂದು ಜನ ಹೇಳುವುದೂ ಉಂಟು. ಅದು ಹೇಗಾದರೂ ಇರಲಿ, ಅಲ್ಲಿ ಮಾರಾಟವಾದ ವಸ್ತುಗಳ ಬೆಲೆಯಲ್ಲಿ ಶೇಕಡಾ ಎಷ್ಟೋ ಭಾಗ ರುಸುಮು (commission) ಬಸ್ ಚಾಲಕನಿಗೆ ದೊರೆಯುತ್ತದಂತೆ. ಅವನು ಮತ್ತೆ ಯಾವ ಕಟ್ಟಡವನ್ನೂ ತೋರಿಸದೆ ನಮ್ಮನ್ನು ಅಲ್ಲಿಗೆ ಮಾತ್ರ ಕರೆದುಕೊಂಡು ಹೋದದ್ದಕ್ಕೆ ಅದೇ ಕಾರಣವಿರಬೇಕು.

ಅಂಗಡಿಯನ್ನು ನೋಡಿದ ಮೇಲೆ ನಾನು 'ಮೆನ್ಸ್ ರೂಮ್' (ಗಂಡಸರ ಶೌಚಗೃಹ)ಗೆ ಹೋಗಿ ಹೊರಗೆ ಬಂದೆ. ಅಲ್ಲಿದ್ದ ಗುಂಪಿನಲ್ಲಿ ರಾಮುವಾಗಲಿ ಡಯಾನಳಾಗಲಿ ಕಾಣಲಿಲ್ಲ. ಅಲ್ಲಿಂದ ಹೊರಟಿರಬಹುದೆಂದುಕೊಂಡು ಮಹಡಿಯಿಂದಿಳಿದು ಹೊರ ಬಾಗಿಲಿನಲ್ಲಿ 5–10 ನಿಮಿಷ ನಿಂತೆ—ಅವರು ಬರಲಿಲ್ಲ. ಅಷ್ಟು ಹೊತ್ತಿಗೆ ಅಂಗಡಿಯಿದ್ದ ಸಣ್ಣ ರಸ್ತೆಯ ಕೊನೆಯಲ್ಲಿ ಬಸ್ಸು—ಅದು ನಾವು ಬಂದ ಬಸ್ಸಿನಂತೆಯೇ ಇತ್ತು—ಕಾಣಿಸಿತು. ರಾಮು ಅಲ್ಲಿಗೆ ಹೋಗಿರಬೇಕು ಎಂದುಕೊಂಡು ಅಲ್ಲಿಗೆ ಹೋಗಿ ಬಸ್ ಹತ್ತಿದೆ, ಅದರಲ್ಲಿ ರಾಮು ಡಯಾನ ಇರಲಿಲ್ಲ. ಹೊರಡುವುದರಲ್ಲಿದ್ದ ಬಸ್ಸಿನಿಂದ ಆತುರಾತುರವಾಗಿ ಇಳಿದು ಮತ್ತೆ ಚೈನಾ ಅಂಗಡಿಗೇ ಹೊರಟೆ—ಅಂಗಡಿ ಅದೃಶ್ಯವಾಗಿತ್ತು. ಯಾವುದೋ ಬೇರೆ ರಸ್ತೆಗೆ ಬಂದೆ ಎಂದುಕೊಂಡು ಮತ್ತೊಂದು ಕಡೆಗೆ ತಿರುಗಿದೆ........5 ನಿಮಿಷಗಳೊಳಗೆ ನಾನು ಯಾವ ದಿಕ್ಕಿನಿಂದ ಬಂದೆ,

---

* ಯಾವುದಾದರೊಂದು ಕಾಲಕ್ಕೋ ಪ್ರಾಂತಕ್ಕೋ ವಿಶಿಷ್ಟವಾದ, ಅಲ್ಲಿಯ ನಾಗರಿಕತೆಯ ಕುರುಹಾದ, ಕಲಾವಸ್ತು.

ಇದ್ದದ್ದೆಲ್ಲಿ, ಹೋಗಬೇಕಾದದ್ದು ಎಲ್ಲಿಗೆ—ಒಂದೂ ತೋರದೆ ದಿಗ್ಭ್ರಮೆ ಹಿಡಿದು ಅಲೆಯುವಂತಾಯಿತು. ಬೀದಿಗಳೆಲ್ಲ ಹೆಚ್ಚು ಕಡಮೆ ಒಂದೇ ರೀತಿ ಇದ್ದಂತೆ ತೋರಿತು.

ಮನಸ್ಸಿನಲ್ಲಿ ಗಾಬರಿಯೆದ್ದಿತು. ನಾನಿದ್ದದ್ದು ಚೈನಾ ಟೌನಿನಲ್ಲಿ. ಅಲ್ಲಿರುವ ಜನ ಅಫೀಮು ಹಿರೋಯಿನ್ ಕೊಕೇನ್ ಮುಂತಾದುವುಗಳ ಚಟಕ್ಕೆ ಸಿಕ್ಕಿದವರು, ನಿಶ್ಚಿಂತೆಯಾಗಿ ಕೊಲೆ ನಡೆಸುವವರು ಎಂದು ಕೇಳಿದ್ದೆ. ನನ್ನ ಜೇಬಿನಲ್ಲಿ ಒಂದೇ ಒಂದು ಸೆಂಟೂ ಇರಲಿಲ್ಲ. ಆದ್ದರಿಂದ ಬಸ್ಸಿನಲ್ಲಾಗಲಿ ಟ್ಯಾಕ್ಸಿಯಲ್ಲಾಗಲಿ ಮನೆಗೆ ಹೋಗುವಂತಿಲ್ಲ. ಆ ಲಕ್ಷೋಪಲಕ್ಷ ಜನರುಳ್ಳ ಬೃಹನ್ನಗರದಲ್ಲಿ ಪರದೇಶದಿಂದ ಬಂದು ನೆಲೆ ವಿಳಾಸಗಳೊಂದೂ ಇಲ್ಲದ ಯಃಕಶ್ಚಿತನೊಬ್ಬನನ್ನು ರಾಮು ಹೇಗೆ ತಾನೆ ಪತ್ತೆ ಮಾಡಿಯಾನು! ಹಿಂದೊಮ್ಮೆ ಸಾಮುದ್ರಿಕ ಶಾಸ್ತ್ರಜ್ಞರೊಬ್ಬರು ಅಪ್ರಾರ್ಥಿತವಾಗಿ ನನ್ನ ಕೈ ನೋಡಿ "ನೀನು ನಿನ್ನವರೊಬ್ಬರೂ ಹತ್ತಿರದಲ್ಲಿರದ ಕಡೆ ಸಾಯುತ್ತೀಯೆ" ಎಂದು ಭವಿಷ್ಯ ಹೇಳಿದ್ದರು. 'ಇದೇ ಅವರು ಹೇಳಿದ್ದು' ಎನ್ನುವಂತಾಯಿತು.

ಸ್ವಲ್ಪ ಯೋಚನೆ ಮಾಡಿ ಒಂದು ನಿಶ್ಚಯಕ್ಕೆ ಬಂದೆ. ನನ್ನ ಕೈ ಗಡಿಯಾರವನ್ನು ಒತ್ತೆಯಿಟ್ಟರೆ ಯಾರಾದರೂ ಒಂದು ಡಾಲರ್ ಕೊಡಲಾರರೆ ? ಅಷ್ಟನ್ನು ಸಂಪಾದಿಸಿ ಫೋನ್....ಯಾರಿಗೆ ಫೋನ್ ಮಾಡುವುದು ? ಗೋಪಾಲಸ್ವಾಮಿಯ ಅಥವಾ ಶೇಖರಿಯ ಫೋನ್ ನಂಬರು ಪತ್ತೆ ಮಾಡಿ ಫೋನ್ ಮಾಡುವುದು; ಅನಂತರ ಒಂದು ಪೋಲೀಸ್ ಸ್ಟೇಷನ್ನಿಗೆ ಹೋಗಿ ಅಲ್ಲಿ ಕೂತುಬಿಡುವುದು. ಹೀಗೆ ಯೋಚಿಸುತ್ತ ಹೋಗುತ್ತಿದ್ದಾಗ ಎದುರಿಗೆ ರಾಮು ಬಂದ! ಅವನೂ ಡಯಾನಳೂ ಆ ಅಂಗಡಿಯ ಬೇರೊಂದು ಕೊಠಡಿಯಲ್ಲಿದ್ದರಂತೆ. ನನ್ನನ್ನು ಅಲ್ಲೆಲ್ಲಾ ಹುಡುಕಿ, ಬಾಗಿಲ ಬಳಿಯಲ್ಲೂ ಕಾಣದೆ, ನಾಲ್ಕಾರು ಬೀದಿ ಸುತ್ತಿ, ಕೊನೆಗೆ ಪೋಲೀಸ್ ಸ್ಟೇಷನ್ನಿಗೆ 'missing' ವರ್ತಮಾನ ಕೊಡಬೇಕೆಂದು ಒಂದು ಬಸ್‌ನಲ್ಲಿ ಹೋಗುತ್ತಿದ್ದರು. ದೂರದಿಂದ ನನ್ನನ್ನು ಕಂಡು ಇಳಿದು ಓಡಿ ಬಂದರು.

"ನಾವು ಅಂಗಡಿಯಲ್ಲೇ ಇದ್ದೆವು. ಅಲ್ಲೇ ಕಾಯದೆ ನೀವೇಕೆ ಹೊರಟು ಬಿಟ್ಟಿರಿ ? ನಿಮ್ಮನ್ನು ಬಿಟ್ಟು, ನಾವೆಲ್ಲಾದರೂ ಹೊರಟು ಹೋಗುವುದುಂಟೆ! ಹಾಗೇಕೆ ಭಾವಿಸಿದಿರಿ ?" ಎಂದು ಕೇಳಿದರು. ನ್ಯಾಯವಾದ ಪ್ರಶ್ನೆ. ಅದಕ್ಕೆ ನನ್ನಲ್ಲಿ ಏನೂ ಉತ್ತರವಿರಲಿಲ್ಲ. ರಾಮು ಎಲ್ಲಿಗೆ ಹೋಗಿದ್ದರೂ ನನಗಾಗಿ ಅಂಗಡಿಗೆ ಬಂದೇ ಬರುತ್ತಾನೆ, ನಾನು ಅಂಗಡಿಯಲ್ಲೇ ತೆಪ್ಪನೆ ನಿಲ್ಲಬೇಕು ಎಂದು ನನಗೇಕೆ ತೋರಲಿಲ್ಲ ? ಏನೋ ನನಗೂ ಸರಿ ತೋರದ ಅವನಿಗೂ

ಸರಿತೋರದ ಉತ್ತರಕೊಟ್ಟೆ. ಅಂಗಡಿಯಲ್ಲಿ ಕ್ಯೂರಿಯೊ ಕೊಳ್ಳುವ ಮೂರ್ಖರ ವಿಷಯ ಯೋಚಿಸಿ ನಾನೂ ಶತಮೂರ್ಖನಾಗಿ ಹೊರಬಿದ್ದಿರಬೇಕು. ಭ್ರಮರ ಕೀಟ ನ್ಯಾಯ !

ಇದಾದ ಮಾರನೆಯ ದಿನ ಎಲ್ಲೂ ಹೋಗದೆ ಮನೆಯಲ್ಲೇ ಇರ ಬೇಕೆಂದು ನಿಶ್ಚಯಿಸಿದೆವು. ಅವತ್ತೆಲ್ಲ ಬಹಳ ಗಂಭೀರವಾದ ವಿಷಯಗಳ ಚರ್ಚೆ. ಹರಟೆ ಲಘುವಾದ ಸಂದರ್ಭದಲ್ಲಿ ಆರಂಭವಾಗಿ ಆಮೇಲೆ ಗಂಭೀರ ಸ್ವರೂಪ ವನ್ನು ತಾಳಿತು. ಆರಂಭಿಸಿದವಳು ಗಿರಿಜ, ಅವಳು ಆದರ್ಶ ಗೃಹಿಣಿ! ಮನೆಯ ಒಪ್ಪ ಓರಣಗಳಲ್ಲಾಗಲಿ ಮಕ್ಕಳನ್ನು ಪ್ರೀತಿಸುವುದರಲ್ಲಾಗಲಿ, ಅತಿಥಿ ಸತ್ಕಾರ ದಲ್ಲಾಗಲಿ ಯಾರಿಗೂ ಹಿಂದಲ್ಲ. ಅಮೆರಿಕಕ್ಕೆ ಹೋಗಿ ಹಲವಾರು ವರ್ಷ ಗಳಾಗಿದ್ದರೂ ನಮ್ಮ ಹಬ್ಬಹರಿದಿನಗಳನ್ನು ನೆನಪಿನಲ್ಲಿಟ್ಟುಕೊಂಡು ಆಚರಿಸು ತ್ತಾಳೆ. ಅಮೆರಿಕನ್ ಮಹಿಳೆಯರ—ಮತ್ತು ಮಹನೀಯರ ತಲೆಯನ್ನು ಸದಾ ಕೊರೆಯುತ್ತಿರುವ ವ್ಯಕ್ತಿ ಸ್ವಾತಂತ್ರ್ಯದ ಹುಳು ಅವಳ ತಲೆಯನ್ನು ಕೊರೆದಿಲ್ಲ. ಆದರೆ ಸ್ತ್ರೀಪುರುಷರೆಲ್ಲರಲ್ಲೂ ಇರುವ ಒಂದು ಗುಣ ಅವಳಲ್ಲೂ ಇದೆ; ತನ್ನ ವರ್ಗದವರ (ಈ ಸಂದರ್ಭದಲ್ಲಿ ಸ್ತ್ರೀಯರ) ಹಕ್ಕುಗಳ ಮಾತು ಬಂದಾಗ ಹುರುಪಿನಿಂದ ಅರ್ಧ ಹಾಸ್ಯಕ್ಕಾಗಿ ಅರ್ಧ ಗಂಭೀರವಾಗಿ ವಾದಕ್ಕೆ ಧುಮುಕುತ್ತಾಳೆ. ಅವತ್ತು ನಾನು ಹೇಳಿದ ಯಾವುದೋ ಮಾತಿಗೆ ಒಪ್ಪಿಗೆ ಕೊಟ್ಟು ಒಂದು ಕ್ಷಣ ಕಳೆದ ಮೇಲೆ "ಏನೋ ಪಾಪ, ಸೋದರಮಾವ ಅಂತ ನಿಮ್ಮ ವಾದಕ್ಕೆ ಒಪ್ಪಿಗೆ ಕೊಟ್ಟೆ" ಎಂದಳು. ಗೋಪಾಲಸ್ವಾಮಿ "ನೋಡಿದಿರ ಇವಳ ಸ್ವಭಾವವನ್ನ ? ನೀವು ಹೇಳಿದ್ದು ಒಪ್ಪಿಗೆಯಾಗದಿದ್ದರೂ ಒಪ್ಪು ತ್ತಾಳಂತೆ. ನಾನು ಹೇಳಿದ್ದನ್ನ ಮಾತ್ರ ಒಪ್ಪಿಗೆಯಾದರೂ ವಿರೋಧಿಸುತ್ತಾಳೆ. ಎಷ್ಟಾದರೂ ಈ ಹೆಂಗಸರಿಗೆ ತಮ್ಮ ತಾಯಿಯ ಕಡೆ ಸಂಬಂಧವೇ ದೊಡ್ಡದು!" ಎಂದರು.

ಅವರ ಬಾಯಿಂದ 'ಈ ಹೆಂಗಸರಿಗೆ' ಎಂಬ ಮಾತು ಹೊರಟದ್ದೇ ತಡ ಗಿರಿಜ ನಗುತ್ತ ಮತ್ತಷ್ಟು ಉತ್ಸಾಹದಿಂದ ಚರ್ಚೆಗೆ ಇಳಿದಳು :

"ಗಂಡಸರಿಗೂ ತಮ್ಮ ತಾಯಿಯ ಕಡೆ ಸಂಬಂಧವೇ ದೊಡ್ಡದಾಗಲಿ. ನಾನೇನು ಬೇಡ ಅಂತೀನಿಯೆ ?"

ಅವಳ ಗಂಡನಿಗೆ ತಾಯಿಯ ಕಡೆ ಸಂಬಂಧ ದೊಡ್ಡದಾದರೆ ಅದ ರಿಂದಲೂ ಗಿರಿಜಳಿಗೇ ಲಾಭ. ಅವಳು ಗೋಪಾಲಸ್ವಾಮಿಗೆ ಅವರ ತಾಯಿಯ ಕಡೆಯ ಬಂಧುವೂ ಹೌದು. ಅವರ ತಾಯಿಯೂ ಗಿರಿಜಳ ತಂದೆಯೂ ಅಣ್ಣ ತಂಗಿಯರು.

ಗಿರಿಜ ಮುಂದುವರಿದು ಹೇಳಿದಳು: "ಅಂತೂ ನೋಡಿ, ಇದು ಗಂಡಸರ ಹುಟ್ಟುಗುಣ—ಹೆಂಗಸರನ್ನು ಮೂದಲಿಸುವುದು. ನಾನು ಸ್ತ್ರೀಮುಕ್ತಿ (Women's Lib) ಗುಂಪಿಗೆ ಸೇರಿದವಳಲ್ಲ. ಆದರೂ ಅಂಥದೊಂದು ಚಳುವಳಿ ಆರಂಭವಾದದ್ದು ಒಳ್ಳೆಯದು ಎನ್ನಿಸುತ್ತೆ."

ಅವಳು ಹೇಳಿದ್ದು ನಿಜ—ಅವಳು ಸ್ತ್ರೀಮುಕ್ತಿ ಗುಂಪಿನವಳಲ್ಲ. ಗಿರಿಜ ಗೋಪಾಲಸ್ವಾಮಿಯರ ಸಂಸಾರಕ್ಕೆ ಆಧಾರವಾಗಿರುವುದು ವ್ಯಕ್ತಿಸ್ವಾತಂತ್ರ್ಯವಲ್ಲ, ಪರಸ್ಪರ ಪ್ರೇಮ; ಒಬ್ಬರನ್ನೊಬ್ಬರು ಅನುಸರಿಸಿಕೊಂಡು ಹೋಗುವ, ಮಧುರಹಾಸ್ಯದಿಂದ ಕೂಡಿದ ಮನೋವೃತ್ತಿ. ಸ್ತ್ರೀಲಿಬ್ (ಆ ಚಳುವಳಿಯವರನ್ನು ರೇಗಿಸುವುದಕ್ಕೆ ಈ ಅರಿಸಮಾಸದ ಪದವೇ ಸರಿ!) ಚಳುವಳಿ ಬೇಕು ಎಂದದ್ದೂ ಸ್ವಲ್ಪ ಮಟ್ಟಿಗೆ ನಿಜ ಎನ್ನಬಹುದೇನೊ. ಅಂತೂ ಅವಳ ಹಾಸ್ಯಕ್ಕೆ ಆಡಿದ ಮಾತಿನಿಂದಾಗಿ ಆ ಚಳುವಳಿಯ ಪರಿಶೀಲನೆ ಬಂತು. ನಾನು ಮೊದಮೊದಲು ಸ್ತ್ರೀಯರ ಪರವಾಗಿ (ಸ್ತ್ರೀಲಿಬ್ಬರ ಪರವಾಗಿ ಮಾತಾಡಿದರೆ ಸ್ತ್ರೀಯರ ಪರವಾಗಿ ಮಾತಾಡಿದಂತಾಗುತ್ತದೆಯೆ? ಅರ್ಥಾತ್, ಸ್ತ್ರೀಲಿಬ್ಬರು ಸ್ತ್ರೀಯರೆ?) ಮಾತಾಡಿದೆನಾದರೂ ಸ್ವಲ್ಪ ಹೊತ್ತಾದ ಮೇಲೆ ಹಾಸ್ಯ ಮನೋವೃತ್ತಿಯನ್ನು ಅದುಮಲಾರದೆ ಅವರಿಗೆ ವಿರೋಧವಾಗಿಯೇ ನಿಂತೆ. ಹೆದರದೆ ಧೈರ್ಯವಾಗಿ ಮಾತಾಡಬಹುದಾದ ಸನ್ನಿವೇಶ—ಅಲ್ಲಿದ್ದ ಇಬ್ಬರು ಮಹಿಳೆಯರಲ್ಲಿ ಒಬ್ಬಳು ನನ್ನ ಸ್ವಂತ ಸೊಸೆ, ಇನ್ನೊಬ್ಬಳು ಸೋದರಸೊಸೆ. ಇಬ್ಬರಿಗೂ ನನ್ನಲ್ಲಿ "ಏನೋ ಪಾಪ, ಓಬಿರಾಯನ ಕಾಲದ ಮುದುಕ, ಅರಳುಮರಳು, ತೋರಿದ್ದು ಅಂದುಕೊಳ್ಳಲಿ" ಎನ್ನುವಂಥ ಕನಿಕರವುಂಟು. ಅಲ್ಲದೆ ನಾನು ಎದುರಿಗಿದ್ದ ಮಹಿಳೆಯರನ್ನು ಹೊಗಳಿ ಸ್ತ್ರೀಲಿಬ್ಬರನ್ನು ತೆಗಳಿದೆ—ಬ್ರಿಟಿಷರು ನಮಗೆ ಕಲಿಸಿದ್ದ ಭೇದೋಪಾಯ (divide and rule) ವನ್ನು ಅನುಸರಿಸಿ!

ನನಗೆ ನಿಜವಾಗಿ ಯಾವ ವಿಷಯದಲ್ಲೂ ವೀರಾಭಿಮಾನ ಸೇರದು. ವೀರಾಭಿಮಾನ ಅಂಧಾಭಿಮಾನವಾಗಿಯೇ ಪರಿಣಮಿಸುತ್ತದೆ. ಹೀಗಾಗಿಯೇ ಇರಬೇಕು—ಮುಕ್ತ ಮಹಿಳೆಯರಿಗೆ history ಎಂಬ ಪದ ಆಗದಂತೆ. HIS ಎಂಬ ಮೂರಕ್ಷರಗಳು male chauvinist pig (ತನ್ನ ವರ್ಗದವರ ವಿಷಯದಲ್ಲಿ ವೀರಾಭಿಮಾನವುಳ್ಳ ಗಂಡು ಹಂದಿ) ಅನ್ನು ಸೂಚಿಸುತ್ತವೆಯಷ್ಟೆ. ಆದ್ದರಿಂದ ಅವರು history ಯನ್ನು hertory ಮಾಡಿಯಾರು. Chairman ಎಂಬ ಪದ ಆಕ್ಷೇಪಣೀಯ, ಅದು chair-woman ಆಗಬೇಕು ಅಥವಾ chair-person ಆಗಬೇಕು. ಈ ಪದ ಈಗಾಗಲೆ ಚಲಾವಣೆಗೆ ಬಂದು ಹೋಗಿದೆ. Man-eater ಎಂಬ ಪದ woman-eater ಆಗಬೇಕಾಗು

ತ್ತದೇನೊ! ನನ್ನ ನೆನಪಿನಲ್ಲಿ ಕೂಡಿಟ್ಟಿದ್ದ ಇಂಥ ಚಟಾಕಿಗಳು ಕೆಲವನ್ನು ಹಾರಿಸಿದೆ.

ಅವತ್ತು ಗಂಡಸರ ಪರವಾಗಿ ಮಾತಾಡುವಾಗ ನನಗೆ ಸ್ತ್ರೀಪಂಚಮದಳಕ್ಕೆ (fifth-column) ಸೇರಿದ ವಿದ್ರೋಹಿ ಮಹಿಳೆಯೊಬ್ಬಳ ನೆರವೇ ಸಿಕ್ಕಿತ್ತು. ಆಕೆಯ ಹೆಸರನ್ನು ಹೇಳಬಹುದೊ ಬಾರದೊ—ಅಮೆರಿಕದಲ್ಲಿ ಮಾತೆತ್ತಿದರೆ ಲಕ್ಷ ಡಾಲರಿಗೆ ದಾವಾ ಹಾಕುತ್ತಾರೆಂದು ಪ್ರತೀತಿ! ಅವಳ ಅಭಿಪ್ರಾಯ ವೃತ್ತಪತ್ರಿಕೆಯೊಂದರಲ್ಲಿ ಪ್ರಕಟವಾಗಿತ್ತು. ಅದರ ಸಾರಾಂಶ: "ಈ ಸ್ತ್ರೀಲಿಬ್ಬರೆಲ್ಲ ಕಹಿ ಮನೋವೃತ್ತಿಯವರು—a bunch of britter women. ಅವರು ಕೇವಲ ತಮ್ಮ ವೈಯಕ್ತಿಕ ಜೀವನಕ್ಕೆ ಸಂಬಂಧಪಟ್ಟ ಸಮಸ್ಯೆಗಳ ಪರಿಹಾರಕ್ಕಾಗಿ ರಾಷ್ಟ್ರದ ಸಂವಿಧಾನವನ್ನೇ ಒದಲಾಯಿಸುವ ಪ್ರಯತ್ನ ಮಾಡುತ್ತಾರೆ. ಅವರಿಗೆ ಗಂಡಸರೆಂದರೆ ದ್ವೇಷ, ಮಕ್ಕಳೆಂದರೆ ಪೀಡೆ, ಈಗ ಸಂಯುಕ್ತ ಸಂಸ್ಥಾನಗಳ ಕಾಂಗ್ರೆಸ್‌ನಲ್ಲಿರುವ ಹೆಂಗಸರ ಸಂಖ್ಯೆಯೆಷ್ಟು? 10-12 ಜನ ಮಾತ್ರ! ಅದಕ್ಕೆ ಕಾರಣ ಗಂಡಸರ ಅಥವಾ ಸಂವಿಧಾನದ ಪಕ್ಷಪಾತವಲ್ಲ. ಕಾಂಗ್ರೆಸ್ಸಿಗೆ ಹೋಗಲು ಅಗತ್ಯವಾದ ತ್ಯಾಗವನ್ನು ಮಾಡಲು ನಾವು (ಅಂದರೆ ಹೆಂಗಸರು) ಸಿದ್ಧರಾಗಿಲ್ಲ! ಏಕಾಗಬೇಕು? ಅಮೆರಿಕದಲ್ಲಿ ಗಂಡಸು ವಯಸ್ಸಾದೊಡನೆ ಕೊಳ್ಳುವುದು ಏನು ಅನ್ನುತ್ತೀರಿ? ತನ್ನ ವಧುವಿಗಾಗಿ ವಜ್ರದ ಉಂಗುರ! ಅಮೆರಿಕದ ಗಂಡಂದಿರು ತಮ್ಮ ಹೆಂಡತಿಯರಿಗೆ ಒಂದು ತುಪ್ಪಳದ ಅಂಗಿಯನ್ನು (ಮಿಂಕ್ ಎಂಬ ಪ್ರಾಣಿಯ ತುಪ್ಪಳದ ಅಂಗಿಗೆ ಸಾವಿರಾರು ಡಾಲರ್ ಬೆಲೆಯಾಗಬಹುದು!) ಕೊಂಡು ಕೊಡುವುದಕ್ಕೂ ಅವರನ್ನು ಫ್ಯಾಷನ್ ಪ್ರಪಂಚದಲ್ಲಿ ಮೆರಸುವುದಕ್ಕೂ ದುಡಿದು ತಮ್ಮ ದೇಹವನ್ನೇ ತೇಯುತ್ತಾರೆ. ತಾವು ಸತ್ತರೂ ಅವಳು ನೆಮ್ಮದಿಯಾಗಿರಲೆಂದು ಅವಳಿಗಾಗಿ ಜೀವವಿಮೆ ಮಾಡಿ ಕಂತುಕಟ್ಟುತ್ತಾರೆ. ಇದನ್ನೆಲ್ಲ ನಾನೇಕೆ ಬಿಟ್ಟುಕೊಡಲಿ! ನಿಜವಾಗಿ ನೋಡಿದರೆ ಯಾವ ಹೆಂಗಸೂ ಇದನ್ನು ಬಿಟ್ಟುಕೊಡಲು ತಯಾರಿಲ್ಲ."

ಈ ವಾದದ ಪರಿಣಾಮವಾಗಿ ನಿಬ್ರಾಸ್ಕದ (Nebraska) ಶಾಸಕರು ತಾವೇ ಹಿಂದಿನ ವರ್ಷ ಅನುಮೋದಿಸಿದ್ದ 'ಸಮಾನ ಹಕ್ಕಿನ ತಿದ್ದುಪಡಿಯನ್ನು (Equal rights amendment) ರದ್ದು ಮಾಡಬೇಕೆಂದು ವೋಟು ಮಾಡಿದರಂತೆ !

ನಾನು ಆ ವಾದದ ಸಾರಾಂಶವನ್ನು ಕೊಟ್ಟಮೇಲೆ ಗಿರಿಜ ಮೆಲುನಗೆಯ ವ್ಯಾಖ್ಯಾನ ಮಾಡಿದಳು: "ಅದೇನೊ ನಿಜ ಅನ್ನಿ. ಕುಣಿಸಿದ ಹಾಗೆ ಕುಣಿಯು

ತ್ತ್ತವೆ, ಮುಂಕಣ್ಣಯ್ಯಗಳು!"

ನಾನು "next subject on the agenda!" (ಅಜೆಂಡಾದಲ್ಲಿ—ಕಾರ್ಯಸೂಚಿಯಲ್ಲಿ—ಮುಂದಿರುವ ವಿಷಯವನ್ನು ತೆಗೆದುಕೊಳ್ಳೋಣ) ಎಂದೆ.

ಈಗಲೇನೊ ಅಮೆರಿಕದಲ್ಲಿ, ಬಹುಶಃ ಯೂರೋಪಿನಲ್ಲಿ ಕೂಡ, ಹೆಂಗಸರಿಗೆ ಇತ್ತ ಕಡೆ ಸಮಾನತೆ ಸ್ವಾತಂತ್ರ್ಯಗಳು, ಅತ್ತ ಕಡೆ ಷಿವಲ್ರಿ, (chivalry—ಪ್ರಕೃತ ಸಂದರ್ಭದಲ್ಲಿ ಈ ಪದದ ಅರ್ಥ—ಸ್ತ್ರೀಯರ ವಿಷಯದಲ್ಲಿ ವಿಶೇಷ ಗೌರವ ಇಟ್ಟುಕೊಂಡು ಅವರ ಸೇವೆಗೆ ಬದ್ಧಕಂಕಣರಾಗಿರುವುದು) ಎರಡೂ ದೊರೆಯುತ್ತವೆ. ನ್ಯಾಯವಾಗಿ ನೋಡಿದರೆ ಇವೆರಡೂ ಪರಸ್ಪರ ವಿರುದ್ಧ. ಗಂಡಸರೂ ಹೆಂಗಸರೂ ('ಗಂಡಸರೂ' ಎಂಬ ಪದವನ್ನೇ ಮೊದಲು ಹಾಕಿತಲ್ಲ, ಈ ಗಂಡಸಿನ ದುರ್ಬುದ್ಧಿ!) ಸಮಾನರೆಂದ ಮೇಲೆ ಹೆಂಗಸಿಗೆ ಹೆಚ್ಚಿನ ಗೌರವವನ್ನಾಗಲಿ ಔದಾರ್ಯವನ್ನಾಗಲಿ ಏಕೆ ಸಲ್ಲಿಸಬೇಕು? ಅವಳ ಸಹಾಯಕ್ಕೆ ಏಕೆ ಧಾವಿಸಿ ಬರಬೇಕು? ಹೆಂಗಸು ಅಬಲೆ, ಅವಳಿಗೆ ಸಹಾಯಮಾಡುವುದು ಶಕ್ತನಾದ ಗಂಡಸಿನ ಕರ್ತವ್ಯ, ಎಂಬ ಭಾವನೆ ತೊಡೆದು ಹೋಗಬೇಕಲ್ಲವೆ? ಅಮೆರಿಕದಲ್ಲೂ ಯೂರೋಪಿನಲ್ಲೂ ಹೆಂಗಸರ ಆಲೋಚನೆ ಈ ದಾರಿಯಲ್ಲೇ ಸಾಗಿದೆಯೆಂದು ಹೇಳುತ್ತಾರೆ. ಬಸ್ಸಿನಲ್ಲಿ ಹೋಗುವಾಗ, ಕುಳಿತಿರುವ ಗಂಡಸು ನಿಂತಿರುವ ಹೆಂಗಸಿಗೆ ತನ್ನ ಸೀಟನ್ನು ಬಿಟ್ಟುಕೊಡುವುದು ಸಭ್ಯ ನಡತೆಯಲ್ಲ, ಹೆಂಗಸು ಅದನ್ನು ತನಗೆ ಮಾಡಿದ ಅವಮಾನ ಎಂದೇ ಪರಿಗಣಿಸುತ್ತಾಳೆ—ಎಂದು ಕೆಲವರು ಹೇಳಿದ್ದನ್ನು ಕೇಳಿದ್ದೇನೆ. ನಾನು ಅಮೆರಿಕದಲ್ಲಿ ಬಸ್ ಪ್ರಯಾಣ ಮಾಡಿದ್ದು ಎರಡೇ ಎರಡು ಸಾರಿ. ಆಗ ಯಾರೂ ನಿಂತಿರಬೇಕಾದ ಸಂದರ್ಭವೇ ಬರಲಿಲ್ಲ. ಆದ್ದರಿಂದ ಮೇಲಿನ ವಾದದ ಪರವಾಗಿ ನಾನು ಸಾಕ್ಷ್ಯ ಹೇಳಲಾರೆ.

ಆದರೆ ನ್ಯೂಯಾರ್ಕಿನ ವಾಯುಬಂದರಿನಲ್ಲಿ ನನಗಾದ ಅನುಭವ ಒಂದನ್ನು ಇಲ್ಲಿ ಕಾಣಿಸಬಹುದು. ನಾನು ಭಾರತಕ್ಕೆ ಹಿಂದಿರುಗಲು ಹೊರಟ ದಿನ. 'ಸೆಕ್ಯೂರಿಟಿ ಚೆಕ್' (ಪ್ರಯಾಣಿಕರು ಅಪಾಯಕರವಾದ ಪಿಸ್ತೂಲು, ಬಾಂಬು ಮುಂತಾದ್ದನ್ನು ಬಚ್ಚಿಟ್ಟುಕೊಂಡಿದ್ದಾರೆಯೆ ಎಂದು ನಡೆಸುವ ಪರೀಕ್ಷೆ) ಸ್ಥಳದಲ್ಲೋ ಅಥವಾ ಆ ಪರೀಕ್ಷೆ ಮುಗಿದು ಪ್ಲೇನಿಗೆ ಹೊರಡುವಾಗಲೋ—ಸರಿಯಾಗಿ ನೆನಪಿಲ್ಲ—ಒಂದೇ ವಿಕೆಟ್ಟಿನ ಕಡೆಗೆ ಎರಡು ಸಾಲಿನಲ್ಲಿ ಜನ ಕ್ಯೂ ಮಾಡಿಕೊಂಡು ಬರುತ್ತಿದ್ದರು. ಇದು ಅಲ್ಲಿ ನಡೆಯುವುದೇ ಇಲ್ಲ; ಅಂದೇಕೆ ಹಾಗಾಯಿತೋ ಕಾಣೆ. ಎರಡು ಸಾಲಿನ ಜನರೂ ಯಾವ

ಘರ್ಷಣೆಯೂ ಇಲ್ಲದೆ ಸಾವರಿಸಿಕೊಂಡು ಮರ್ಯಾದೆಯಿಂದ (ನೀವಾದ ಮೇಲೆ) 'after you' ಎಂದು ತಾವಾಗಿಯೇ ಇತರರಿಗೆ ಮುಂದೆಹೋಗಲು ಅವಕಾಶ ಮಾಡಿಕೊಡುತ್ತಿದ್ದರು.

ಇದ್ದಕ್ಕಿದ್ದ ಹಾಗೆಯೇ ನನ್ನ ಮಗ್ಗುಲ ಸಾಲಿನಲ್ಲಿ—ನನ್ನ ಸಮಃಕ್ಕಲ್ಲ, ಸ್ವಲ್ಪ ಹಿಂದೆ—ಬರುತ್ತಿದ್ದ ಮಹಿಳೆಯೊಬ್ಬಳು 'after you' (ನೀವಾದ ಮೇಲೆ) ಎಂದಳು. ಆ ಮಾತಿಗೆ ಕಾರಣವಿರಲಿಲ್ಲ, ನಾನು ಸ್ವಲ್ಪ ಮುಂದೆಯೇ ಇದ್ದೆ; ಆತುರಪಡುತ್ತಿರಲಿಲ್ಲ; ಆಕೆಯೊಡನೆ ಸ್ಪರ್ಧಿಸುತ್ತಿದ್ದೆನೆಂಬ ಭಾವನೆಗೆ ಅವಕಾಶವಿರಲಿಲ್ಲ. ತಿರುಗಿ ನೋಡಿದರೆ ಆಕೆಯ ಕಣ್ಣಿಂದ ಹೊರಟ ನೋಟ ಅಲಗಿನಂತಿತ್ತು. ಆಕೆಯ ಹಿಂದಿದ್ದ ಇನ್ನಿಬ್ಬರು ಮಹಿಳೆಯರು ಮುಸಿನಗೆ ನಗುತ್ತಿದ್ದರು. ಆ ನಗೆ ಆಕೆಯನ್ನು ಕುರಿತದ್ದೋ ನನ್ನನ್ನು ಕುರಿತದ್ದೋ ಹೇಳಲಾರೆ. ನಾನು ವಿಸ್ಮಯ ಮತ್ತು ತಿರಸ್ಕಾರ ಬೆರೆತ(ಇವೆರಡನ್ನೂ ಬೆರೆಸುವುದು ಹೇಗೆಂಬುದನ್ನು ನೀವೇ ಕಂಡು ಹಿಡಿದುಕೊಳ್ಳಿ) ನಗುವನ್ನು ಬರಮಾಡಿಕೊಂಡು ಮೌನವಾಗಿ 'ಮುಂದೆಹೋಗಿ' ಎನ್ನುವಂತೆ ಕೈಸನ್ನೆ ಮಾಡಿದೆ. ಆಕೆಯೇನೂ ನನ್ನ ತ್ಯಾಗವನ್ನು 'ಬೇಡ' ಎನ್ನಲಿಲ್ಲ! 'ಈ male chauvinist pigಗಳಿಗೆ ಹೀಗೇ ಮಾಡಬೇಕು' ಎಂದುಕೊಂಡಿರಬಹುದು.

ಮೇಲುನೋಟಕ್ಕೆ ಇಲ್ಲಿ ಹೆಂಗಸರಿಗೆ ಇನ್ನೂ ಷಿವಲ್ರಿಕಾಲದ ಮರ್ಯಾದೆ ಸಲ್ಲುತ್ತಿರುವಂತೆ ತೋರುತ್ತದೆ. ಆದರೂ ಇಲ್ಲಿಯ ಜನ ಹೆಂಗಸರ ವಿಷಯದಲ್ಲಿ ಅಷ್ಟೇನೂ ಉಚ್ಚ ಭಾವನೆಯನ್ನಿಟ್ಟುಕೊಂಡಂತೆ ಕಾಣಲಿಲ್ಲ. ಉಚ್ಚಭಾವನೆಯೋ ನೀಚಭಾವನೆಯೋ ಅದನ್ನು ಹೇಗೆ ಬೇಕಾದರೂ ಕರೆಯಿರಿ—ಇಲ್ಲಿಯ ಸ್ತ್ರೀ ಪುರುಷರು ಪರಸ್ಪರ ಇಟ್ಟುಕೊಂಡಿರುವ ಭಾವನೆ ಇಬ್ಬರಲ್ಲೂ ಒಂದೇ ರೀತಿಯದು ಎನ್ನಿಸುತ್ತದೆ. ಅದು ಬೇಟೆಯ ಮನೋಧರ್ಮ. ಬೇಟದ ಮನೋಧರ್ಮ ಬಹುಮಟ್ಟಿಗೆ ಬೇಟೆಯದಾಗಿ ಪರಿಣಮಿಸಿದೆ. ಸ್ವಲ್ಪ ಮಟ್ಟಿಗೆ ಇದು ಎಲ್ಲ ದೇಶಗಳಲ್ಲೂ ಕಾಣಬರುವ ಮನೋಧರ್ಮ. ಆದರೆ ಭಾರತಕ್ಕಿಂತ ಇಲ್ಲಿ ಬಲು ಹೆಚ್ಚು ಎಂದು ನನಗೆ ತೋರಿದ್ದುಂಟು. ಈ ಮಾತನ್ನು ಬಹಳ ಹಿಂಜರಿಕೆಯಿಂದ ಬರೆಯುತ್ತಿದ್ದೇನೆ. ಯಾವ ದೇಶದ ವಿಷಯದಲ್ಲೇ ಆಗಲಿ, ಅಲ್ಲಿಯ ಜನರೆಲ್ಲರಿಗೂ ಅನ್ವಯಿಸುವ ಸಾಮಾನ್ಯೀಕೃತ ಮಾತನ್ನಾಡುವುದು (ಅಮೆರಿಕನ್ನರೆಲ್ಲ ಹೀಗೆ, ಇಂಗ್ಲಿಷರೆಲ್ಲ ಹಾಗೆ, ಎಂದು ನಿರ್ಣಯಿಸುವುದು) ನ್ಯಾಯವಲ್ಲ. ಯಾವನೊಬ್ಬನಿಗೂ—ಅದರಲ್ಲೂ ವಿದೇಶೀಯನಾದವನಿಗೆ—ಇಂಥ ವಿಷಯದಲ್ಲಿ ಖಚಿತವಾಗಿ ಮಾತಾಡುವಷ್ಟು ತಿಳಿವಳಿಕೆ ಇರುವುದಿಲ್ಲ. ನಾನು ಅಮೆರಿಕದ ವಿಷಯದಲ್ಲಿ ಹೇಳುವುದಕ್ಕೆಲ್ಲ

ಆಧಾರ ನನ್ನ ಅನುಭವ, ಪತ್ರಿಕೆಗಳಲ್ಲೂ ಪುಸ್ತಕಗಳಲ್ಲೂ ಓದಿದ್ದು, ಅಮೆರಿಕನ್ನರ ಮಾತಿನಿಂದ ತಿಳಿದುಬಂದದ್ದು. ಇವೆಲ್ಲದರ ಚಿಂತನೆಯಿಂದ ಮನಸ್ಸಿನಲ್ಲಿ ನಿಂತ ಭಾವನೆಗಳನ್ನು ಇಲ್ಲಿ ಕಾಣಿಸಿದ್ದೇನೆ. ಆದರೆ ನನ್ನ ಕೇವಲ 3–4 ತಿಂಗಳ ಅನುಭವಕ್ಕೆ ಹೆಚ್ಚು ವ್ಯಾಪ್ತಿಯಾಗಲಿ ಆಳವಾಗಲಿ ಇರುವುದು ಸಾಧ್ಯವಲ್ಲ. ಪುಸ್ತಕ ಪತ್ರಿಕೆಗಳ ಮತ್ತು ಅಂಕಿ ಅಂಶಗಳ ಸಾಕ್ಷ್ಯವನ್ನೂ ಪೂರ್ತಿ ನಂಬುವಂತಿಲ್ಲ. **Lies, damned lies and statistics** (ಸುಳ್ಳು, ಸುಡುಗಾಡು ಸುಳ್ಳು, ಅಂಕಿ ಅಂಶಗಳು) ಎಂಬ ಕುಹಕ ನೆನಪಿಗೆ ಬರುತ್ತಿದೆ. ಇನ್ನು ಇತರರಿಂದ ಕೇಳಿದ್ದಕ್ಕೆ ಇರುವ ಆಧಾರವೂ ಅವರ ಅಲ್ಪಾನುಭವವೇ ಇರಬಹುದು! ಇದನ್ನೆಲ್ಲ ನೆನೆದು ಓದುಗರು ನನ್ನ ಅಭಿಪ್ರಾಯಗಳಿಗೆ ರವೆಯಷ್ಟೋ ಸೇರಿನಷ್ಟೋ ಉಪ್ಪು ಬೆರೆಸಿಕೊಳ್ಳಬಹುದು !*

ಆ ದಿನ ಚರ್ಚಿಸಿದ ಇತರ ವಿಷಯಗಳಲ್ಲಿ ಕೆಲವು ಆಧಾರ ತತ್ವಗಳನ್ನು (basic principles) ಕುರಿತವು; ಇನ್ನು ಕೆಲವು ಬೇರೆ ಸಂದರ್ಭದಲ್ಲಿ ಬರಬೇಕಾಗುತ್ತದೆ. ಆದ್ದರಿಂದ ಅವಕ್ಕೆ ಇಲ್ಲಿ ಸ್ಥಾನ ಕೊಟ್ಟಿಲ್ಲ.

ಮಾರನೆಯ ದಿನ ಬೆಳಗ್ಗೆ ರಾಮು ನೈಲ್ಸ್‌ಗೆ ಹೊರಟ. ಅದೇ ಸಂಜೆ ನಾನು ಭಾರತಕ್ಕೆ ಹೊರಟೆ. ಪ್ರಯಾಣ ಹಿತವಾಗಿಯೇ ಇತ್ತು. ನನ್ನ ಪುಣ್ಯಕ್ಕೆ ಬೊಂಬಾಯಿಯಲ್ಲಿ ಸುಂಕದ ಕಟ್ಟೆಯ ಅಧಿಕಾರಿ ಹೆಚ್ಚು ತನಿಖೆ ಮಾಡದೆ ಹೋಗಗೊಟ್ಟ. ಆದ್ದರಿಂದ ಕೂಡಲೆ ಬೆಂಗಳೂರಿನ ಪ್ಲೇನ್ ಹತ್ತುವುದೂ ಅಲ್ಲಿಂದ ಮೈಸೂರಿನ ರೈಲು ಹಿಡಿಯುವುದೂ ಸಾಧ್ಯವಾಯಿತು. ಮೈಸೂರಿನಿಂದ ಫಾರಂಗೆ ಕರೆದೊಯ್ಯಲು ನಮ್ಮ ಜೋಡೆತ್ತಿನ ಗಾಡಿ ಕಾದಿತ್ತು.

ಮನೆಗೆ ಇನ್ನೂ ಸ್ವಲ್ಪ ದೂರವಿದ್ದಾಗಲೇ ಕಮಲ, ಕೈಲಾಸ ಇಬ್ಬರೂ 'ತಾತ' ಎಂದು ಕೂಗು ಹಾಕುತ್ತಾ ಓಡಿ ಬಂದರು. ಕಿರಿಯ ಆಶಾ ಬಾಗಿಲಿನ ಬಳಿ ಜಗಲಿಯ ಮೇಲೆ ನಿಂತಿದ್ದಳು. ನಾನು ಹತ್ತಿರ ಬಂದೊಡನೆ ಅನಾಮತ್ತು ಜಗಲಿಯಿಂದ ನನ್ನ ಕಡೆಗೆ ನೆಗೆದಳು. ನನ್ನ ತೋಳುಗಳು ಸಿದ್ಧವಾಗಿದ್ದವು !

---

* ಇಂಗ್ಲಿಷಿನಲ್ಲಿ 'ಈ ಅಭಿಪ್ರಾಯವನ್ನು (ಅಥವಾ ಇನ್ನೊಬ್ಬರು ಹೇಳಿದ್ದನ್ನು) ಪೂರ್ತಿ ಒಪ್ಪಬಾರದು' ಎನ್ನಬೇಕಾದರೆ Take it with a grain of salt (ಅದನ್ನು ರವೆಯಷ್ಟು ಉಪ್ಪು ಬೆರೆಸಿ ತೆಗೆದುಕೊ) ಎಂಬ ನುಡಿಗಟ್ಟನ್ನು ಬಳಸುವುದುಂಟು ಕನ್ನಡದಲ್ಲೂ ಬಳಕೆಗೆ ಬಂದರೆ ಬರಲಿ ಎಂದುಕೊಂಡು ಅದನ್ನು ಉಪಯೋಗಿಸಿದ್ದೇನೆ.

# ಎರಡನೆಯ ಭೇಟಿ–1976ರಲ್ಲಿ
## ಜೇನ್ಸ್‌ವಿಲ್‌ಗೆ ಹೋಗುವ ಮುನ್ನ

ಮೇ ತಿಂಗಳ ಮೊದಲ ವಾರದಲ್ಲೇ ರಾಮುವಿನಿಂದ ಮತ್ತೆ ಕರೆ ಬಂತು, ಅಮೆರಿಕಕ್ಕೆ ಬರಬೇಕೆಂದು. ಅವನು ಈಗ ನೈಲ್ಸ್ ಉಪನಗರವನ್ನು ಬಿಟ್ಟು ವಿಸ್ಕಾನ್ಸಿನ್ (Wisconsin) ರಾಜ್ಯದ ಜೇನ್ಸ್‌ವಿಲ್ (Janesville)ನಲ್ಲಿದ್ದಾನೆ. ಷಿಕಾಗೋವಿನ ಸುತ್ತ ಮುತ್ತ ಹೆಚ್ಚು ಕಡಮೆ ಪ್ರತಿದಿನವೂ ನಡೆಯುತ್ತಿದ್ದ ದರೋಡೆ, ಅತ್ಯಾಚಾರ, ಕೊಲೆ ಇತ್ಯಾದಿಗಳಿಂದಾಗಿ ಅವನಿಗೆ ಅಲ್ಲಿಂದ ಕಾಲುಕಿತ್ತರೆ ಸಾಕು ಎನ್ನಿಸಿತ್ತು. ಸ್ವಲ್ಪ ವರಮಾನ ಕಡಮೆಯಾದರೂ ಸರಿಯೆ, ಬಿಟ್ಟು ಹೊರಟು ಹೋಗುತ್ತೇನೆ, ಎನ್ನುತ್ತಿದ್ದ. ಜೇನ್ಸ್‌ವಿಲ್‌ನಿಂದ ಆಕರ್ಷಕವಾದ ಆಹ್ವಾನವೇ ಬಂದಾಗ ಸಂತೋಷದಿಂದ ಒಪ್ಪಿದ. ಅಲ್ಲಿಗೆ ಹೋಗುವುದಕ್ಕಿಂತ ಮುಂಚೆ ಭಾರತಕ್ಕೆ ಬಂದದ್ದೂ ಆಗಿತ್ತು. ಅವನ ಕಾಗದ ನೋಡಿದಾಗ 'ಇದೇನು, ನಾನು ಮೊನ್ನೆ ತಾನೆ ಅಮೆರಿಕದಿಂದ ವಾಪಸು ಬಂದೆ; ಅವನು ಮೊನ್ನೆ ತಾನೆ ಇಲ್ಲಿಗೆ ಬಂದಿದ್ದ. ಈಗ ಮತ್ತೇಕೆ ಹೋಗಲಿ!' ಎಂದುಕೊಂಡೆ. ವಾಸ್ತವವಾಗಿ ನಾನು ಅಲ್ಲಿಂದ ಭಾರತಕ್ಕೆ ಬಂದು ಮೂರು ವರ್ಷವಾಗಿತ್ತು. ನನಗೆ ಇದೊಂದು ಭ್ರಮೆ—ನನ್ನ ಜೀವನದ ಎಲ್ಲ ಘಟನೆಗಳೂ ನಿನ್ನೆ ಮೊನ್ನೆ ನಡೆದವೆಂಬ ಭ್ರಮೆ; ನಾನು ವಿದ್ಯಾರ್ಥಿಯಾಗಿ ಮಾಧ್ಯಮಿಕ ಶಾಲೆಗೆ ಸೇರಿದ್ದು ಮೊದಲುಗೊಂಡು ಕೆಲಸದಿಂದ ನಿವೃತ್ತನಾಗಿ ಇತ್ತೀಚೆಗೆ ನಡೆಸುತ್ತಿರುವ ಅಲೆಮಾರಿ ಜೀವನದ ವರೆಗಿನ ಎಲ್ಲ ಘಟನೆಗಳೂ ನಡೆದದ್ದು 'ಮೊನ್ನೆ ತಾನೆ'.

ವಯಸ್ಸಾದವರಿಗೆಲ್ಲ ಹೀಗೇ ಅನ್ನಿಸುತ್ತದೆಯೋ ಏನೋ. ನನ್ನ ಪಾಲಿಗಂತೂ ಕಾಲದೇಶಗಳೆರಡೂ ಒಂದೇ ಬಗೆಯ ಆಯಾಮಗಳಾದಂತಿವೆ. ನನ್ನ ಜೀವಮಾನದಲ್ಲಿ ಭೂಮಿ ಸೂರ್ಯನ ಸುತ್ತ ಹತ್ತಹತ್ತಿರ ಎಂಟು ದಶಕಗಳಷ್ಟು ಸಾರಿ ತಿರುಗಿದೆ. ಆದರೆ ನನಗೆ ಅದರ ಅರಿವೇ ಇಲ್ಲ. ದೇಶದಂತೆಯೇ ಕಾಲವೂ ಸ್ಥಾಣು—ಅಥವಾ ಅದರ ಚಲನೆಗೆ ಸುಮಾರು ಒಂದು ವರ್ಷದ 'ವಿಸ್ತಾರ'ವಿದೆ ಎನ್ನಬಹುದೇನೊ. ಕಾಲಕ್ಕೆ ಸಂಬಂಧಪಟ್ಟ ಈ ಬಗೆಯ ಕಲ್ಪನೆಗಳೆಲ್ಲ ವಿಚಾರಶಕ್ತಿಯ ಹಿಡಿತದಿಂದ ಬಿಡಿಸಿಕೊಳ್ಳಲಾರದ ಮನಸ್ಸಿಗೆ ವಿಚಿತ್ರ, ಅಸಂಬದ್ಧ ಎನಿಸುತ್ತವೆ. ಆದರೂ ಅವು ಬರುತ್ತಲೇ ಇರುತ್ತವೆ. ಎಚ್. ಜಿ. ವೆಲ್ಸ್ (H. G. Wells) ಬರೆದ 'ಕಾಲಯಂತ್ರ'ದ (The

Time Machine) ಕಥೆ ನೆನಪಿಗೆ ಬರುತ್ತಿದೆ. ಆ ಯಂತ್ರದ ಮೇಲೆ ಕುಳಿತು ಒಂದು ಗುಂಡಿಯನ್ನೊತ್ತಿದರೆ ಸಾಕು, ಕಾಲದಲ್ಲಿ ಹಿಂದು ಹಿಂದಾಗಿ ಅಥವಾ ಮುಂದು ಮುಂದಾಗಿ ಪ್ರಯಾಣ ಮಾಡಬಹುದು. ಪ್ರಯಾಣ ಮಾಡುವವನು ನಾನು; ಕಾಲ ಬಹುಮಟ್ಟಿಗೆ ನಿಂತಲ್ಲಿ ನಿಂತಿದೆ! ಭೂತವರ್ತಮಾನ ಭವಿಷ್ಯತ್ಕಾಲಗಳೆಲ್ಲಕ್ಕೂ ಏಕಕಾಲದಲ್ಲಿ ಅಸ್ತಿತ್ವವುಂಟು—ಎಲ್ಲೋ ಕೆಲವು ದಿನಗಳ ವ್ಯತ್ಯಾಸವಿರಬಹುದು, ಅಷ್ಟೆ. ಹಿಮಯುಗವನ್ನು ದಾಟಿ; ಡೈನೊಸಾರ್ ಪೆಡಂಭೂತಗಳು ಭೂಮಿಯನ್ನಾಳುತ್ತಿದ್ದ ಕಾಲವನ್ನು ದಾಟಿ; ನಕ್ಷತ್ರಗಳಿಂದ ಗ್ರಹಗಳು ಸಿಡಿದು (?) ನೀಹಾರಿಕಗಳಿಂದ ನಕ್ಷತ್ರಗಳು ರೂಪುಗೊಂಡ ಕಾಲದವರೆಗೂ ಪ್ರಯಾಣ ಮಾಡಬಹುದು—ಆ ವಾತಾವರಣದಲ್ಲಿ ಬದುಕಿರಬಹುದಾದರೆ. ಮತ್ತೊಂದು ಗುಂಡಿಯನ್ನೊತ್ತಿದರೆ ಭವಿಷ್ಯದ ಹಾದಿಹಿಡಿದು ಕಲಿಪುರುಷ ಭೂಮಿಯನ್ನು ನಾಶಮಾಡುವುದನ್ನೂ ಸೂರ್ಯ ತೇಜೋಹೀನನಾಗುವುದನ್ನೂ ನೋಡಬಹುದು. ಭೀಮ ದುರ್ಯೋಧನನ ತೊಡೆಯನ್ನು ಮುರಿದದ್ದು, ಮೊನ್ನೆ ರಾಜಬೀದಿಯಲ್ಲಿ ಬೇವಾರಸಿಯೊಬ್ಬ ಕಾರಿಗೆ ಸಿಕ್ಕಿ ತೊಡೆ ಮುರಿದುಕೊಂಡದ್ದು—ಎಲ್ಲ ಸಮಕಾಲೀನ ಘಟನೆಗಳು!

ರಾಮು 1974ರ ಡಿಸೆಂಬರಿನಲ್ಲಿ ಭಾರತಕ್ಕೆ ಬಂದು ದಿಲ್ಲಿಯಲ್ಲಿ ನಮ್ಮೊಡನೆ ಒಂದು ತಿಂಗಳಿದ್ದ. ಈಗಾಗಲೇ ನಾನು ಅಲ್ಲಿಗೆ ಹೋಗುವುದೇಕೆ? ಕಳೆದ ಸಾರಿ ಹೋದಾಗ ದೇಶ ನೋಡುವ ಬಯಕೆ ಉಗುರು ಬೆಚ್ಚಗೆ ಮಾತ್ರ ಇತ್ತಾದರೂ ಹೊರಟ ಮೇಲೆ ಉತ್ಸಾಹದ ಕಾವು ಏರಿತು. ಈಗಲೂ ಹಾಗೇ ಆಗಬಹುದೇನೊ. ರಾಮು ಕೊಟ್ಟಿರುವ ಕಾರಣ ತಳ್ಳಿಹಾಕುವಂಥದಲ್ಲ. ಡಯಾನ ಇಲ್ಲಿಗೆ ಬಂದಿದ್ದಾಗ ತಾಯಿಯಾಗಲಿದ್ದಳು. ಈಗ ಅರುಣ ಹುಟ್ಟಿ ಒಂದೂವರೆ ವರ್ಷವಾಗಿದೆ. ಅವನನ್ನು ನೋಡಬೇಡವೆ? ಅವನು ಯದ್ವಾತದ್ವಾ ಬೆಳೆಯುತ್ತಿದ್ದಾನಂತೆ; ಶೈಶವ ಮಿಂಚಿನಂತೆ ಮಾಯವಾಗುತ್ತದೆ.—ಕಾಲ ಚಲಿಸುತ್ತದೆ, ಚಲಿಸುವುದಿಲ್ಲ! ತದೇಜತಿ, ತನ್ನೈಜತಿ!

ಅರುಣನನ್ನು ಮಗುವಾಗಿರುವಾಗಲೇ ನೋಡಬೇಕು. ಅಲ್ಲದೆ ಅಮೆರಿಕದ ಅದ್ಭುತ ಪ್ರಕೃತಿಸೌಂದರ್ಯದ ಆಕರ್ಷಣೆಯೂ ಇದೆ. ದೇವರು ಭೂದೇವಿಗೆ ಮಾಡುವ ಸಾವಿರ ಅಲಂಕಾರಗಳನ್ನು ನೋಡುವ ತವಕ ಕಡಮೆಯಾಗಿದೆಯೆಂದರೂ ಆ ಸೌಂದರ್ಯದ ಎದುರು ನಿಂತಾಗ ಈಗಲೂ ರೋಮಾಂಚನವಾಗುತ್ತದೆ. ಈ ಮಕ್ಕಳ ಮೋಹಕತೆಯ ವಿಷಯದಲ್ಲಂತೂ ಬೇಸರವೆಂಬುದಿಲ್ಲ. ರವಿ, ಸಂಧ್ಯಾ, ಕಮಲ, ಕೈಲಾಸ, ಆಶಾ, ಸುನೀಲ—ಮೊಮ್ಮಕ್ಕಳೆಲ್ಲ ಪುನರಪಿ ಪುನರಪಿ ಬರುವ ವಸಂತದಂತೆ, ಅರುಣೋದಯದಂತೆ....ಅರುಣನನ್ನು

ನೋಡಬೇಕು!

ನನ್ನ ಪಾಸ್‌ಪೋರ್ಟು ಚಾಲತಿಯಲ್ಲೇ ಇತ್ತು. ವೀಸಾ ಪಡೆಯುವ್ದೊಂದೇ ಬಾಕಿ. ಅದಕ್ಕೆ ಅರ್ಜಿ ಹಾಕಿ ಅರ್ಜಿಯೊಡನೆ ಪಾಸ್‌ಪೋರ್ಟನ್ನೂ ದಿಲ್ಲಿಯ ಅಮೆರಿಕನ್ ಕಾನ್ಸುಲೇಟಿಗೆ (American Consulate) ಕಳಿಸಿಕೊಟ್ಟೆ. ಅದೇ ಸಂಜೆ ಅದು ವಾಪಸು ಬಂತು. ಕಾನ್ಸಲ್‌ರು ವೀಸಾ ಮುದ್ರೆಯನ್ನೊತ್ತಿ ಆ ಪುಟಕ್ಕೆ ನಾಲ್ಕು ಪಂಕ್ತಿಯ ಚೀಟಿಯೊಂದನ್ನು ಅಂಟಿಸಿದ್ದರು. ಅದರ ಒಕ್ಕಣೆ:

I find this a coincidence. I am from Janesville myself; and on one occasion I have met your son. Please convey my regards to him. ('ಇದೊಂದು ಕಾಕತಾಳೀಯ ಘಟನೆ. ನಾನೂ ಜೇನ್ಸ್‌ವಿಲ್‌ನವನೇ. ಒಂದು ಸಾರಿ ನಿಮ್ಮ ಮಗನ ಭೇಟಿಯೂ ಆಗಿದೆ. ಅವರಿಗೆ ನನ್ನ ಶುಭಾಶಯಗಳನ್ನು ತಿಳಿಸಿ.)

ಅವರ ಸೌಜನ್ಯ ನನಗೆ ಬಹಳ ಸಂತೋಷ ಕೊಟ್ಟಿತು. ವೀಸಾಕ್ಕಾಗಿ ಬಂದ ನೂರಾರು ಅರ್ಜಿಗಳಲ್ಲಿ ನನ್ನದೂ ಒಂದು. ಮುದ್ರೆಯನ್ನೊತ್ತಿ ಪಾಸ್‌ಪೋರ್ಟನ್ನು ವಾಪಸು ಕಳಿಸಿದರೆ ಅವರ ಕೆಲಸ ಮುಗಿಯಿತು. ಅವರ–ನನ್ನ ನಡುವೆ ಇದ್ದದ್ದು ಕೇವಲ ಕಾನೂನಿಗೆ ಸಂಬಂಧಪಟ್ಟ ಯಾಂತ್ರಿಕವಾದ ವ್ಯವಹಾರ. ಅದಕ್ಕೆ ಅವರು ಸೌಹಾರ್ದದ ಮೆರಗು ಕೊಟ್ಟಿದ್ದರು. 'ಕಚೇರಿಯ ಒಣವ್ಯವಹಾರಕ್ಕೆ ನಿಮ್ಮ ಸಣ್ಣ ಚೀಟಿಯಿಂದಾಗಿ ಮಾನವೀಯತೆಯ ಪರಿಮಳ ಬಂದಿದೆ. ವಂದನೆಗಳು'. ಎಂದು ಕಾಗದ ಬರೆದು ಹಾಕಿದೆ.

ನನ್ನ ಸೋದರಸೊಸೆ ಗಿರಿಜ ಮತ್ತು ಅವಳ ಗಂಡ, ಮಕ್ಕಳು, ಒಂದು ತಿಂಗಳ ಕೆಳಗೆ ಮೈಸೂರಿಗೆ ಬಂದಿದ್ದರು. ಈಗ ಅವರು ನ್ಯೂಯಾರ್ಕನ್ನು ಬಿಟ್ಟು ಒಹೈಯೊ ರಾಜ್ಯದ ಡೇಟನ್ (Dayton-Ohio) ನಗರದಲ್ಲಿ ನೆಲಸಿದ್ದಾರೆ. ಅವರು ಹೊರಟ ದಿನವೇ ನನ್ನ ಪ್ರಯಾಣ ಕೂಡ. ಅವರು ಬೊಂಬಾಯಿಯಲ್ಲಿ ಪ್ಲೇನ್ ಹತ್ತಿದರು, ನಾನು ದಿಲ್ಲಿಯಲ್ಲಿ ಅವರ ಜೊತೆಗೆ ಸೇರಿಕೊಂಡೆ. ಅವರೊಡನೆ ಡೇಟನ್‌ಗೆ ಹೋಗಿ ಅಲ್ಲಿ ಒಂದು ವಾರ ಇದ್ದು ಅನಂತರ ಜೇನ್ಸ್‌ವಿಲ್‌ಗೆ ಹೋಗುವಂತೆ ಏರ್ಪಾಡು.

ನಾವು ಹೊರಟದ್ದು ಜೂನ್ 11ನೇ ತಾರೀಖು. ಇದನ್ನು ಮರೆತಿಲ್ಲವಲ್ಲ ಎಂದು ಪದೇ ಪದೇ ಬೆನ್ನು ತಟ್ಟಿಕೊಳ್ಳುತ್ತಿದ್ದೇನೆ. ಪಾಸ್‌ಪೋರ್ಟ್‌ನಲ್ಲಿನ ತಾರೀಖು ಮುದ್ರೆ ನನ್ನ ನೆನಪಿನ ಸಹಾಯಕ್ಕೆ ಬರುತ್ತವಾದರೂ ಆ ಸಹಾಯವನ್ನು ನಾನು ಬಯಸಿಲ್ಲ! ಅದೇ ಜಂಬೊಜೆಟ್ ವಿಮಾನ. ಈ ಸಾರಿ

ಪ್ರಯಾಣ ಸ್ವಲ್ಪವೂ ಬೇಸರವಾಗಲಿಲ್ಲ. ನನಗೂ ಗಿರಿಜಳ ಸಂಸಾರಕ್ಕೂ ಒಟ್ಟು ಐದು ಸೀಟುಗಳಿದ್ದದ್ದರಿಂದ ಕೂತು ನಿಂತು ಕಾಲು ಚಾಚಿ ಮೈಯಿನ ಬಿಗುಪನ್ನು ಕಳೆಯುವುದು ಸಾಧ್ಯವಾಯಿತು. ಕಳೆದ ಸಾರಿ ನಾನು ಲಂಡನ್ನಿನ ಹೀತ್‌ರೊ (Heathrow) ವಾಯುಬಂದರಿನಲ್ಲಿ ಪ್ಲೇನಿನಿಂದ ಕೆಳಕ್ಕಿಳಿಯಲೇ ಇಲ್ಲ—ಅಲ್ಲಿ ಎರಡು ಘಂಟೆ ವಿರಾಮವಿತ್ತಾದರೂ. ಷೇಕ್ಸ್‌ಪಿಯರ್ ಮಿಲ್ಟನ್ ವರ್ಡ್ಸ್‌ವರ್ತರ ದೇಶಕ್ಕೆ ಬಂದೂ ಅಲ್ಲಿಯ ಪವಿತ್ರಭೂಮಿಯ ಸ್ಪರ್ಶಸುಖವನ್ನಾದರೂ ಪಡೆಯಬೇಡವೆ, ಈ ನಿರ್ಭಾಗ್ಯ ದಾಮೋದರ! ಹೀಗೆಂದು ನನ್ನನ್ನು ನಾನೇ ಹಳಿದುಕೊಂಡದ್ದರಿಂದ ಪಾಪ ಪರಿಹಾರವಾಗಿರಬೇಕು. ಈ ಸಲ ಗೋಪಾಲಸ್ವಾಮಿ-ಗಿರಿಜರ ಸಂಸಾರವೆಲ್ಲ ಹೊರಟಿದ್ದರಿಂದ ನಾನೂ ಪ್ಲೇನಿನಿಂದ ಇಳಿದು ವಾಯುಬಂದರಿನಲ್ಲಿ ಓಡಾಡಿ ಸ್ಯಾಂಡ್‌ವಿಚ್ ಫ್ರೆಂಚ್ ಫ್ರೈಗಳನ್ನು ತಿಂದು ಬಂದೆ.

ರಾಜಕೀಯ ಮತ್ತು ವ್ಯಾವಹಾರಿಕ ದೃಷ್ಟಿ ಮುಂದಾಗಿರುವಾಗ ಮತ್ತು ಈ ಪಶ್ಚಿಮ ದೇಶಗಳವರು ಪ್ರಪಂಚದ ಉಳಿದ ಭಾಗಗಳಿಗೆ ಹಿಂದೆ ಮಾಡಿದ್ದನ್ನೂ ಈಗಲೂ ಮಾಡುತ್ತಿರುವುದನ್ನೂ ನೆನೆದಾಗ, ಮನಸ್ಸು ಅವರ ವಿಷಯದಲ್ಲಿ ಕಠಿನವಾಗುತ್ತದೆ. ಆದರೆ....ಅವರಂತೆ ನಾವು ವಿನಾಶಕಾರಕ ಶಕ್ತಿಗಳನ್ನು ವಶಪಡಿಸಿಕೊಂಡಿದ್ದರೆ, ಅವನ್ನು ಹೇಗೆ ಬಳಸುತ್ತಿದ್ದೆವೊ! ಈಗ ನಮ್ಮ ದೇಶ ಅವರನ್ನು ಭರದಿಂದ ಅನುಕರಿಸುತ್ತಿರುವುದನ್ನು ನೋಡಿದರೆ, ನಾವೇನೂ ಕಡಿಮೆಯಲ್ಲ, ನಮ್ಮಲ್ಲಿ **the spirit indeed is willing but the flesh is weak*** ಎನ್ನಿಸುತ್ತದೆ! ಇದು ಹೇಗಾದರೂ ಇರಲಿ, ನಾನು ಈ ಜನರ ಸಾಹಿತ್ಯಕ್ಕೆ ಮನಸೋತವನು. ಕೆಲವು ವರ್ಷಗಳಿಂದೀಚೆಗೆ ನನ್ನ ಮನಸ್ಸು ಕನ್ನಡ ಸಂಸ್ಕೃತಗಳ ಕಡೆಗೆ ತಿರುಗಿದೆಯಾದರೂ ಇಂಗ್ಲಿಷ್ ಸಾಹಿತ್ಯದ ವಿಷಯದಲ್ಲಿ, ಮತ್ತು ಆ ಭಾಷೆಯ ವಿಷಯದಲ್ಲಿ ಮೆಚ್ಚಿಕೆಯೇನೂ ಕಡಿಮೆಯಾಗಿಲ್ಲ. ಆ ಸಾಹಿತ್ಯದಿಂದ ಭಾರತೀಯ ಸಾಹಿತ್ಯಕ್ಕೆ ಉಪಕಾರವಾಗಿದೆ, ಪುಷ್ಟಿ ಬಂದಿದೆ, ಎಂಬುದನ್ನೂ ಮರೆಯಲಾರೆ. ಇಂಗ್ಲೆಂಡಿನ ನೆಲದ ಮೇಲೆ ಕಾಲಿಟ್ಟಾಗ ಈ ಭಾವನೆಗಳೆಲ್ಲ ಮನಸ್ಸಿಗೆ ಬಂದವು. ಇಂಗ್ಲಿಷ್ ಕವಿಗಳ ಪಂಕ್ತಿಗಳು—ಒಂದಕ್ಕೊಂದು ಸಂಬಂಧವಿಲ್ಲದ ಬಿಡಿ ಪಂಕ್ತಿಗಳು,

---

* ಇದು ಯೇಸು ಬಹಳ ಗಂಭೀರವಾದ ಸಂದರ್ಭದಲ್ಲಿ ಹೇಳಿದ ಮಾತು. 'ಮನಸ್ಸೇನೊ ಸಿದ್ಧವಾಗಿದೆ, ದೇಹ ಮಾತ್ರ ದುರ್ಬಲ'—ಇಲ್ಲಿ ಇದನ್ನು ಕುಹಕ ಅರ್ಥದಲ್ಲಿ ಬಳಸಿದೆ.

ಪದಪುಂಜಗಳು—ನೆನಪಿಗೆ ಬರತೊಡಗಿದವು....ಒಂದು ಸಾರಿ ಇಂಗ್ಲೆಂಡಿನಲ್ಲಿ ಇಳಿಯಬೇಕು, ಸರೋವರ ಪ್ರಾಂತವನ್ನೂ (the Lake District) ವಾರಿಕ್‌ಷೈರನ್ನೂ ನೋಡಬೇಕು!

* * *

ನಾವು ನ್ಯೂಯಾರ್ಕನ್ನು ತಲುಪಿದ್ದು 4¼ ಘಂಟೆಗೆ, ಒಂದು ಘಂಟೆ ತಡವಾಗಿ. ಬಂದರಿನ ಕಟ್ಟಡದಲ್ಲೇ ಸುಮಾರು ಅರ್ಧ ಮೈಲಿ ನಡೆದು ಸುಂಕದ ಕಟ್ಟೆಯ ಬಳಿ ನಿಂತೆವು. ಅಲ್ಲಿ ಐದೋ ಆರೋ ಕೌಂಟರುಗಳಿದ್ದವು. ಹೆಚ್ಚು ಜನ ಇದ್ದುದನ್ನು ನೋಡಿ ಬಂದರಿನ ಅಧಿಕಾರಿಗಳು ಇನ್ನೂ ಮೂರು ಕೌಂಟರುಗಳನ್ನು ತೆರೆದರು. ಒಬ್ಬಾತ ಬಂದು ಪ್ರತಿ ಕ್ಯೂನಲ್ಲೂ ಇದ್ದ ಕೊನೆಯ ನಾಲ್ಕೈದು ಜನರಿಗೆ "ಅಗೋ, ಆ ಕೌಂಟರಿಗೆ ಹೋಗಿ. ನಿಮ್ಮ ಕೆಲಸ ಬೇಗ ಆಗುತ್ತೆ. ಸಂತೋಷದಿಂದಿರಿ!" (Have a nice time!) ಎಂದು ಹೇಳಿದ. ನನ್ನ ಕೌಂಟರಿನಲ್ಲಿದ್ದ ಅಧಿಕಾರಿ ಸಾಮಾನುಗಳ ಮೇಲೆ ಕಣ್ಣು ಹಾಯಿಸಿ, ಸೂಟ್‌ಕೇಸನ್ನೂ ತೆಗೆದು ನೋಡಿ, ಕೇಳಿದ:

"ನೀವು ಇಲ್ಲಿ ಎಷ್ಟು ದಿನ ಇರಬೇಕೆಂದಿದ್ದೀರಿ?" ನಾನು ಅಮೆರಿಕದಲ್ಲಿರಬಹುದಾದ ಅವಧಿಯನ್ನು ನಿರ್ಣಯಿಸಿ 'ಪರ್ಮಿಟ್' ಕೊಡುವ ಕೆಲಸ ಅವನದ್ದು. ಹಿಂದೆ ಆ ಕೆಲಸವನ್ನು ಭಾರತದಲ್ಲಿರುವ ಕಾನ್ಸಲ್‌ರೇ ನಿರ್ವಹಿಸುತ್ತಿದ್ದರು.

"ನನ್ನ ಟಿಕೆಟ್ಟಿನ ಅವಧಿ 120 ದಿನ. ಅಷ್ಟು ದಿನವೂ ಇರಬೇಕೆಂದಿದ್ದೇನೆ."

"ಒಳ್ಳೇದು." ಅಕ್ಟೋಬರ್ 31 ರವರೆಗೆ ಇರಬಹುದೆಂದು ಒಂದು ಫಾರಂನಲ್ಲಿ ಬರೆದು ಅದನ್ನು ಪಾಸ್‌ಪೋರ್ಟಿಗೆ ಲಗತ್ತಿಸಿ 'Have a nice time' (ಕಾಲ ಸುಖವಾಗಿ ಕಳೆಯಲಿ) ಎನ್ನುತ್ತ ಅದನ್ನು ಕೈಗೆ ಕೊಟ್ಟ. ಪಾಪ, ಆತನಿಗೆ ಅಧಿಕಾರ ಚಲಾಯಿಸಲು ಬರದು! "ನಿಮಗಿಲ್ಲಿ ಏನು ಕೆಲಸ? 1973ರಲ್ಲಿ ಬಂದಿದ್ದಿರಲ್ಲ, ಮತ್ತೇಕೆ ಬಂದಿರಿ? ಈಗ ಒಂದು ತಿಂಗಳ ಅವಧಿ ತೆಗೆದುಕೊಳ್ಳಿ; ಸಾಲದಿದ್ದರೆ ಮತ್ತೆ ಬನ್ನಿ"—ಹೀಗೆ ನೂರೆಂಟು ಪ್ರಶ್ನೆ ಕೇಳಿ ನನಗೆ ಕಕಮಕ ಹಿಡಿಸಿ, ತನ್ನ ಬಳಿಗೆ ಬಂದು ಓಲೈಸುವಂತೆ ಮಾಡಿ, ನನ್ನ ಪರದಾಟವನ್ನು ನೋಡಿ ಹಿಗ್ಗಬಹುದಾಗಿತ್ತು—ಆ ಅವಕಾಶವನ್ನು ಕಳೆದುಕೊಂಡ!

ನಮ್ಮ ಪ್ಲೇನು ನ್ಯೂಯಾರ್ಕಿಗೆ ತಡವಾಗಿ ಬಂದದ್ದರಿಂದ ನಾವು ಡೇಟನ್‌ಗೆ ಹೊರಡುವುದೂ ತಡವಾಯಿತು. ಅಲ್ಲಿಗೆ ತಲಪುವ ವೇಳೆಗೆ ರಾತ್ರಿ 10 ಘಂಟೆ. ಗೋಪಾಲಸ್ವಾಮಿಯ ಸ್ನೇಹಿತರೊಬ್ಬರು ವಾಯುಬಂದರಿನಿಂದ

ನಮ್ಮನ್ನು ತಮ್ಮ ಮನೆಗೆ ಕರೆದುಕೊಂಡು ಹೋದರು. ಅಲ್ಲೇ ಊಟ ಮುಗಿಸಿ ಕೊಂಡು ಅರ್ಧರಾತ್ರಿಯ ವೇಳೆಗೆ ಮನೆ ಸೇರಿದೆವು.

ಡೇಟನ್ ಬಹಳ ಸುಂದರವಾದ ಪರಿಸರದಲ್ಲಿದೆ. ಏರೋಪ್ಲೇನಿನ ಇತಿಹಾಸದಲ್ಲಿ ಮೊದಲ ಸಾಹಸಿಗಳೆಂದು ಪ್ರಸಿದ್ಧರಾದ ವಿಲ್ಬರ್ ಮತ್ತು ಆರ್ವಿಲ್ ರೈಟ್ (Wilbur and Orville Wright) ಸಹೋದರರಿದ್ದ ಊರಾದ್ದರಿಂದ ಅದಕ್ಕೆ ಐತಿಹಾಸಿಕ ಪ್ರಾಮುಖ್ಯವೂ ಉಂಟು. ಗೋಪಾಲ ಸ್ವಾಮಿಯ ವಠಾರಮನೆ (flat) ಒಂದು ಸಣ್ಣ ಗುಡ್ಡದ ಮೇಲಿದೆ. ಸುತ್ತ ಬೇಕಾದ ಹಾಗೆ ಮರಗಳು, ಹೂವಿನ ಪಾತಿಗಳು; ಒಂದು ಕಡೆ ನಸು ನೀಲಿಯ ಹೊಳಪಿನ ದೊಡ್ಡ ಈಜುಗೊಳ. ಅದರ ಸುತ್ತ ನೆಟ್ಟಿರುವ ಬಣ್ಣಬಣ್ಣದ ಛತ್ರಿ ಗಳ ಕೆಳಗೆ ಕುಳಿತು ಪಾನೀಯಗಳನ್ನು ಸೇವಿಸುತ್ತಿರುವ ಅರೆನಗ್ನ ಜನ. ಈ ಕೊನೆಯ ದೃಶ್ಯ ಇಲ್ಲಿ ಸರ್ವ ಸಾಮಾನ್ಯ. ಗುಡ್ಡದ ಕೆಳಗೆ ಹೆದ್ದಾರಿಯೊಂದು ಹೋಗುತ್ತದೆ. ಅದರಲ್ಲಿ 24 ಘಂಟೆಯೂ ಕಾರು, ಟ್ರಕ್ಕು, ಬಸ್ಸು, ಒಂದು ನಿಮಿಷದ ಬಿಡುವೂ ಇಲ್ಲದೆ ಸಂತತವಾಗಿ ಮಿಂಚಿ ಮಾಯವಾಗುತ್ತವೆ. ದೂರ ದಿಂದ ಕೇಳಿಬರುವ ಸಮುದ್ರದ ಮೊರೆತದಂತೆ, ಈ ವಾಹನಗಳ ಮೊರೆತ. ಮನೆಯ ಕಿಟಕಿಗಳಿಗೆಲ್ಲ ಗಾಜಿನ ಬಾಗಿಲುಗಳಿದ್ದದ್ದರಿಂದ ಕಿವಿಗೆ ವಿಶ್ರಾಂತಿ ಕೊಡುವುದು ಸಾಧ್ಯವಾಯಿತು.

ಅಲ್ಲಿದ್ದ ಏಳು ದಿನಗಳೂ ಬಹುಮಟ್ಟಿಗೆ ಸಂಗೀತಕ್ಕೆ ಮೀಸಲಾದವು. ಗೋಪಾಲಸ್ವಾಮಿಯೂ ಅವರ ಭಾರತೀಯ (ಕನ್ನಡಿಗ) ಮಿತ್ರರಾದ ಶ್ರೀ ಸೂರ್ಯಪ್ರಸಾದ್ ಮತ್ತು ಶಂಕರಶಾಸ್ತ್ರಿಗಳೂ ಸಂಗೀತಪ್ರಿಯರು; ಅತ್ಯುತ್ತಮವಾದ ಗಾನಮುದ್ರಿಕೆಗಳ ಭಂಡಾರವನ್ನಿಟ್ಟುಕೊಂಡಿದ್ದಾರೆ. ಬಿಡು ವಾದಾಗ ಯಾರಾದರೂ ಒಬ್ಬರ ಮನೆಯಲ್ಲಿ ಎಲ್ಲರೂ ಸೇರುವುದು, ಎಲ್ಲರ ಮನೆಯ ರಿಕಾರ್ಡುಗಳನ್ನೂ ತರುವುದು; ಊಟ ತಿಂಡಿ, ಸಂಗೀತ, ಹಾಸ್ಯ, ಹರಟೆ—ಏಳು ದಿನ ಕಳೆದದ್ದು ಗೊತ್ತೇ ಆಗಲಿಲ್ಲ.

## ಫ್ಲಾಸ್‌ಮೂರ್

ಜೇನ್ಸ್‌ವಿಲ್‌ಗೆ ಹೋಗುವುದಕ್ಕಿಂತ ಮುಂಚೆ ರಾಮುವನ್ನು ಷಿಕಾಗೋವಿ ನಲ್ಲಿ—ಅಂದರೆ ಓ ಹೇರ್ ವಾಯುಬಂದರಿನಲ್ಲಿ—ಸಂಧಿಸಿ ಅಲ್ಲಿಗೆ ಸುಮಾರು 40 ಮೈಲಿ ದೂರದಲ್ಲಿರುವ ಫ್ಲಾಸ್‌ಮೂರ್ (Flossmoor)ಗೆ ಹೋಗ ಬೇಕೆಂದು ನಾನು ಭಾರತದಿಂದ ಹೊರಡುವ ಮುನ್ನವೇ ನಿಶ್ಚಯವಾಗಿತ್ತು. ಅಲ್ಲಿಗೆ ಬಂದೇ ಮುಂದಕ್ಕೆ ಹೊರಡಬೇಕೆಂದು ನನ್ನ ತಮ್ಮನ ಮಗಳು ವಸಂತು

ಮತ್ತು ಅವಳ ಗಂಡ ಡಾ|| ಕೊ. ಸು. ಸೀತಾರಾಂ ಇಬ್ಬರೂ ಅಗ್ರಹದ ಆಹ್ವಾನ ಕೊಟ್ಟಿದ್ದರು. ಸೀತಾರಾಂ ಅವರು 'ಇನ್ನೊಂದು ಮುಖ', 'ಹೊಸ ಮೇನೇಜರು' ಮುಂತಾದ ಸಣ್ಣಕಥೆ ಕಾದಂಬರಿಗಳ ಕರ್ತರಾಗಿ ಕನ್ನಡಿಗರಿಗೆ ಪರಿಚಿತರಾಗಿದ್ದಾರೆ. ನಾನು 1973ರಲ್ಲಿ ಹೋದಾಗ ಅವರು ಹವಾಯಿಯಲ್ಲಿದ್ದರು. ಸೀತಾರಾಂ 'ಕಮ್ಯೂನಿಕೇಷನ್' ವಿಷಯದಲ್ಲಿ ಪ್ರೌಢಪ್ರಬಂಧ ಬರೆದು ಡಾಕ್ಟರ್ ಪ್ರಶಸ್ತಿ ಗಳಿಸಿ ಅಲ್ಲಿ ಪ್ರಾಧ್ಯಾಪಕರಾಗಿದ್ದರು. ಅನಂತರ ಅದೇ ವಿಷಯವನ್ನು ಕುರಿತು ಉತ್ತಮವಾದ ಗ್ರಂಥವನ್ನು ಬರೆದು ಒಳ್ಳೆಯ ಹೆಸರು ಮಾಡಿದರು. ಅವರು ಫ್ಲಾಸ್‌ಮೂರಿಗೆ ಬಂದದ್ದು ಎರಡು ವರ್ಷಗಳ ಕೆಳಗೆ. ನಾನು ಅಲ್ಲಿಗೆ ಹೋಗುವ ವೇಳೆಗೆ ಅವರಿಗೆ ಯೂಟಾರಾಜ್ಯದ ಲೋಗನ್ (Logan-Utah) ವಿಶ್ವವಿದ್ಯಾಲಯದಿಂದ ಆಹ್ವಾನ ಬಂದಿತ್ತು; ಅದನ್ನು ಒಪ್ಪಿಕೊಂಡು ಸೆಪ್ಟೆಂಬರ್ ತಿಂಗಳಿನಲ್ಲಿ ಅಲ್ಲಿಗೆ ಹೋಗಲು ನಿರ್ಧರಿಸಿದ್ದರು.

ರಾಮು ಓ ಹೇರ್‌ನಲ್ಲಿ ಕಾದಿದ್ದ. ಮಧ್ಯಾಹ್ನ ಒಂದು ಘಂಟೆಯ ಹೊತ್ತಿಗೆ ಫ್ಲಾಸ್‌ಮೂರನ್ನು ತಲಪಿದೆವು. ನಾನು ವಸಂತು ಸೀತಾರಾಮರನ್ನು ನೋಡಿ ಹಲವಾರು ವರ್ಷಗಳು ಕಳೆದಿದ್ದವು. ಸೀತಾರಾಂಗೆ ಯೌವನ ಕಳೆದಿರಲಿಲ್ಲವಾದರೂ ಕ್ಷಿತಿಜದಲ್ಲಿ ಮಧ್ಯವಯಸ್ಸು ಮಿನುಗಲಾರಂಭಿಸಿದ್ದ ಕಾಲ. ನಾಲ್ಕ್ಕಾರು ವರ್ಷದ ಅಧ್ಯಯನ ಪ್ರವಚನಗಳು, ಪ್ರಕಟವಾಗಿ ತಜ್ಞರ ಮೆಚ್ಚಿಗೆ ಗಳಿಸಿದ ಬರವಣಿಗೆ, ಬೇರೆ ಬೇರೆ ದೇಶಗಳಲ್ಲಿ ಬಗೆ ಬಗೆಯ ಜನರೊಡನೆ ವ್ಯವಹರಿಸಿ ಪಡೆದ ಅನುಭವ—ಇವೆಲ್ಲದರಿಂದ ಬರುವ ಪರಿಣತಿ ಅವರ ಮುಖದಲ್ಲಿ ಕಾಣುತ್ತಿತ್ತು. ವಸಂತುವಂತೂ ನನ್ನ ಕಣ್ಣಿಗೆ ಸನತ್ಕುಮಾರಿ! ಅವರ ಮಗಳು ಕವಿತಾ—ಇನ್ನೂ ನಿನ್ನೆ ಮೊನ್ನೆ ಭಾರತದಲ್ಲಿ ತಾಯಿಯ ಸೆರಗು ಹಿಡಿದೆಳೆದು ಕಾಡುತ್ತಿದ್ದ ಮಗುವೆ, ಮೆಲುನಗೆಯನ್ನರಳಿಸುತ್ತ ನಿಂತು ನಮ್ಮನ್ನು ಸ್ವಾಗತಿಸುತ್ತಿರುವ ಈ ಯುವತಿ! ಈ ಮಕ್ಕಳ ಬೆಳವಣಿಗೆ ಎಂದಿಗೂ ಹರಿಯದ ಆಶ್ಚರ್ಯ. ಅವರನ್ನೆಲ್ಲ ನೋಡಿ ನನಗಾದ ಆನಂದ ಹೇಳತೀರದು. ವಸಂತುವಿಗೂ ತನ್ನ ದೊಡ್ಡಪ್ಪನೂ ತಮ್ಮನೂ ಬಂದರೆಂಬ ಸಡಗರ. ರುಚಿರುಚಿಯಾದ ಅಚ್ಚ ಹೊಯ್ಸಳ ಕರ್ಣಾಟಕ ಅಡಿಗೆ ಮಾಡಿದ್ದಳು. ಊಟ ಮುಗಿಸುವ ವೇಳೆಗೆ 9 ಘಂಟೆಯಾಯಿತು. ಸೀತಾರಾಂ ವಿಶಾಲವೂ ಸುಸಜ್ಜಿತವೂ ಆದ ಮನೆಯನ್ನು ಕೊಂಡಿದ್ದರು. ಆದರೆ ನಮಗೆ ಅವರ ಸುಸಜ್ಜಿತ ಗಿಸಜ್ಜಿತ ಏನೂ ಬೇಕಿರಲಿಲ್ಲ. ಸೋಫಾಗಳಿಗೂ ಮೆತ್ತೆ ಕುರ್ಚಿಗಳಿಗೂ ಬಹಿಷ್ಕಾರ ಹಾಕಿ, ಟೀವಿಗೆ (T. V.) ಬೆನ್ನುತಿರುಗಿಸಿ ರತ್ನಗಂಬಳಿಯ ಮೇಲೆ ಬಿದ್ದುಕೊಂಡು ಮಾತಿನ ಹೊನಲು ಹರಿಸಿದೆವು.

ಬೆಳಗ್ಗೆ—ಅವತ್ತು ಭಾನುವಾರವಾದ್ದರಿಂದ ಸೀತಾರಾಂಗೆ ಬಿಡುವಿತ್ತು—ಅಲ್ಲೇ ಹತ್ತಿರದಲ್ಲಿ (ಅಮೆರಿಕದಲ್ಲಿ 'ಹತ್ತಿರ' ಎಂಬ ಪದಕ್ಕಿರುವ ಅರ್ಥವನ್ನು ಹಿಂದೆ ವಿವರಿಸಿದ್ದೇನೆ) ಇರುವ ಕ್ಯಾಂಕಕೀ (Kankakee) ಸ್ಟೇಟ್ ಪಾರ್ಕಿಗೆ ಹೋಗೋಣವೆ ಎಂದು ಸೀತಾರಾಂ ಕೇಳಿದಾಗ ಎಲ್ಲರೂ ಕೈಯೆತ್ತಿದರು. ಅಮೆರಿಕಕ್ಕೆ ಹೋದವರನ್ನೆಲ್ಲ ತಿರುಗು ದೆವ್ವ ಮೆಟ್ಟಿಕೊಳ್ಳುತ್ತದೆ! ಪಾರ್ಕೇನೋ ರಮ್ಯವಾಗಿತ್ತು. ವಸಂತು ಬುಟ್ಟಿಗಳಲ್ಲಿ ತುಂಬಿ ತಂದಿದ್ದ ತಿನಿಸು ಇನ್ನೂ ರಮ್ಯವಾಗಿತ್ತು, ಸಂಜೆಯವರೆಗೂ ಅಲೆದಾಡಿ ಬಂದೆವು. ಮಾರನೆಯ ದಿನ "ದೊಡ್ಡಣ್ಣನ್ನ ತಗೊಂಡು ಬಂದು ನಿನ್ನ ಮನೆಯ ಬಾಗಿಲಿನಲ್ಲೇ ಡಿಲಿವರಿ, (ಬಟವಾಡೆ) ಕೊಡುತ್ತೇವೆ" ಎಂದು ವಸಂತುವಿನಿಂದ ಭರವಸೆ ಪಡೆದು ರಾಮು ಜೇನ್ಸ್‌ವಿಲ್‌ಗೆ ಹೊರಟ. ಇವರಿಗೆಲ್ಲ ಈ ದೊಡ್ಡಣ್ಣ ಮನುಷ್ಯನಲ್ಲ, ಬಟವಾಡೆ ಮಾಡುವ ವಸ್ತುವಾಗಿಬಿಟ್ಟಿದ್ದಾನೆ!

ಫ್ಲಾಸ್‌ಮೂರ್‌ನಲ್ಲಿ ನೋಡಬೇಕಾದದ್ದು ಹೆಚ್ಚೇನೂ ಇಲ್ಲ. ಅಲ್ಲಿರುವ ಕನ್ನಡಿಗರಿಗೆ ಭೇಟಿಕೊಟ್ಟು ಅವರ ಪರಿಚಯಲಾಭ ಪಡೆದದ್ದಾಯಿತು, ಅವರ ಆತಿಥ್ಯವನ್ನು ಸವಿದಾಯಿತು. ಒಂದು ಸಾರಿ ಷಿಕಾಗೋವಿಗೆ ರೈಲಿನಲ್ಲಿ ಹೋಗಿ ಬಂದಾಯಿತು. ಈ ರೈಲಿನ ವಿಷಯ ಒಂದೆರಡು ಮಾತು ಹೇಳಬೇಕು. ಅಮೆರಿಕದಲ್ಲಿ ನಾನು ರೈಲು ಪ್ರಯಾಣ ಮಾಡಿದ್ದು ಅನೇ ಮೊದಲು. ಅದು ಸಬರ್ಬನ್ ರೈಲು—ಅದರ ಸೇವೆ ಷಿಕಾಗೋವಿನ ಹೊರವಲಯದಲ್ಲಿರುವ ಉಪ ನಗರಗಳಿಗೆ ಮೀಸಲಾದದ್ದು. ನಾವು ಸ್ಟೇಷನ್ನಿಗೆ 10 ಗಜ ದೂರದಲ್ಲಿದ್ದಾಗ ರೈಲು ಹೊರಟುಹೋಯಿತು. ಆದರೆ ಇಲ್ಲಿ ರೈಲು ತಪ್ಪಿತಲ್ಲ ಎಂದು ಆತಂಕ ಪಡಬೇಕಾಗಿಲ್ಲ. 10–15 ನಿಮಿಷಗಳಿಗೊಂದು ರೈಲು ಬರುತ್ತಲೇ ಇರುತ್ತದೆ. ಸ್ಟೇಷನ್ನಿನ ಒಳಕ್ಕೆ ಹೋದಾಗ ನನಗೆ ಆಶ್ಚರ್ಯವಾಯಿತು. ಟಿಕೆಟ್ ಕೊಡುವ ಕಿಟಕಿ ಎಲ್ಲೂ ಕಾಣಿಸಲಿಲ್ಲ. ಸ್ಟೇಷನ್ ಮಾಸ್ಟರು, ರಿಜಿಸ್ಟರ್ ಇಟ್ಟುಕೊಂಡು ಕೂತಿರುವ ಗುಮಾಸ್ತ, ಕೂಲಿಯವರು, ಕೆಂಪು ಹಸಿರು ಬಾವುಟಗಳನ್ನು ಹಿಡಿದುಕೊಂಡು ಓಡಾಡುವ ಜನ—ಯಾರೂ ಇಲ್ಲ. ನಮ್ಮ ಹಾಗೇ ಪ್ರಯಾಣಿಕರಾದವರು ಮೂರು ಜನ ಹೊರತು ನರಪಿಳ್ಳೆಯಿಲ್ಲ. ಮೊದಲು ಕಣ್ಣಿಗೆ ಬಿದ್ದದ್ದು ಗೋಡೆಗೆ ಹಾಕಿದ್ದ ದೊಡ್ಡದೊಂದು ಹಲಗೆ (ಪೇನಲ್); ಅದರ ಮೇಲೆ ಊರುಗಳ ಹೆಸರುಗಳು, ಕೆಲವು ಗುಂಡಿಗಳು, ದೀಪಗಳು ಇತ್ಯಾದಿ. ಪ್ಲಾಟ್‌ಫಾರಮ್ಮಿಗೆ ಹೋಗಬೇಕಾದರೆ ಒಂದು ವಿಕೆಟ್ಟಿನ ಮೂಲಕ.

ನಾನು ಆಶ್ಚರ್ಯವನ್ನು ವ್ಯಕ್ತಪಡಿಸುವುದರೊಳಗೇ ಸೀತಾರಾಂ ಆ ಪೇನಲ್ ಮೇಲಿನ ಗುಂಡಿಯೊಂದನ್ನು ಒತ್ತಿದರು. ಒಂದು ದೀಪ ಹತ್ತಿ

ಕೊಂಡಿತು ; ಕೆಲವು ಸಂಖ್ಯೆಗಳು ಕಾಣಿಸಿಕೊಂಡವು—1.40 ಎಂದೋ ಏನೊ, ಅದು ನಾವು ಟಿಕೆಟ್ಟಿಗಾಗಿ ಕೊಡಬೇಕಾದ ಹಣವನ್ನು ಸೂಚಿಸುವ ಸಂಖ್ಯೆ. ಒಂದು ಕಡೆ ಇದ್ದ ರಂಧ್ರಕ್ಕೆ ಸೀತಾರಾಂ ಎಷ್ಟೋ ಹಣ ಹಾಕಿದರು. ಇನ್ನೊಂದು ಕಡೆಯಿಂದ ಟಿಕೆಟ್ಟೂ ಚಿಲ್ಲರೆಯೂ ಬಂದವು. ಅಲ್ಲಿಂದ ವಿಕೆಟ್ ಬಳಿಗೆ ಹೋದೆವು. ಅದರ ಮಗ್ಗುಲಲ್ಲಿ ಒಂದು ಸಣ್ಣ ರೋಲರ್. ನಮ್ಮ ಟಿಕೆಟನ್ನು ರೋಲರ್ ಕೆಳಗೆ ನುಗ್ಗಿಸಿದರೆ ವಿಕೆಟ್ ಒಂದು ಸುತ್ತು ತಿರುಗಿ ನಮಗೆ ದಾರಿಮಾಡಿಕೊಡುತ್ತದೆ. ಪ್ಲಾಟ್‌ಫಾರಂಗೆ ಹೋಗಿ ರೈಲಿನಲ್ಲಿ ಕೂಡುವುದೊಂದೇ ಬಾಕಿ. ಟಿಕೆಟ್ ಕಲೆಕ್ಟರೊಡನೆ ವ್ಯವಹರಿಸಬೇಕಾದ್ದಿಲ್ಲ. ರೈಲು ಗಾಡಿಯ ನೆಲವೂ ಪ್ಲಾಟ್‌ಫಾರಮ್ಮೂ ಒಂದೇ ಮಟ್ಟದಲ್ಲಿರುವುದರಿಂದ ರೈಲನ್ನು 'ಹತ್ತ'ಬೇಕಾಗಿಲ್ಲ, ಅದರಿಂದ 'ಇಳಿಯ'ಬೇಕಾಗಿಲ್ಲ. ಅಂತೂ ಎಲ್ಲ ಕೆಲಸಕ್ಕೂ ಇಲೆಕ್ಟ್ರಾನಿಕ್ ಯಂತ್ರದ ವ್ಯವಸ್ಥೆ. ಹುಬ್ಬುಗಂಟಿಕ್ಕಿ 'ಏನ್ರಿ ? ಎಲ್ಲಿಗರಿ ? ಚಿಲ್ಲರೇ ಇಲ್ಲ ರೀ' ಎಂದು ಸಿಡುಗುಟ್ಟುವ ಜನ ಇಲ್ಲ. ನನಗೆ ಸಾಮಾನ್ಯವಾಗಿ ಯಂತ್ರಗಳನ್ನು ಕಂಡರೆ ಆಗದು, ಆದರೆ ಇಲ್ಲಿಯ ಸ್ಟೇಷನ್ನುಗಳಲ್ಲಿ ಕೆಲಸ ಎಷ್ಟು ಸುಸೂತ್ರವಾಗಿ ನಡೆಯುತ್ತದೆ ಎಂಬುದನ್ನು ಕಂಡಾಗ ನಮ್ಮಲ್ಲಿ ಇಂಥ ಸೌಕರ್ಯಗಳಿಲ್ಲವಲ್ಲ ಎಂದು ಹೊಟ್ಟೆಕಿಚ್ಚು ಪಡುವಂತಾಯಿತು.

ಆದರೆ....ಇಲ್ಲಿ ಹುಬ್ಬುಗಂಟಿಕ್ಕಿ 'ಏನ್ರಿ, ಚಿಲ್ಲರೆ ಇಲ್ಲ ರೀ' ಎಂದು ಸಿಡುಗುಟ್ಟುವ ಜನರಿಲ್ಲ ನಿಜ ; ಆದರೆ ಮುಗುಳುನಗೆ ನಗುವ ಜನವೂ ಇಲ್ಲ—ಮಾನವರೇ ಇಲ್ಲ ! ಅಲ್ಲದೆ ಭಾರತದಲ್ಲಿ ಇಂಥ ವ್ಯವಸ್ಥೆ ಜಾರಿಗೆ ಬಂದರೆ ಎಷ್ಟು ಜನರ ಅನ್ನವನ್ನು ಕಸಿದು ಕೊಂಡಂತಾಗುತ್ತದೆಯೊ ! ಈಗಲೇ ನಮ್ಮಲ್ಲಿ ನಿರುದ್ಯೋಗಿಗಳಿಗೆ ಅಭಾವವಿಲ್ಲ. ಇಲೆಕ್ಟ್ರಾನಿಕ್ ವ್ಯವಸ್ಥೆಯಿಲ್ಲದಿದ್ದರೆ ಕೆಟ್ಟಿತು—ಅದು ನಮಗೆ ಬೇಕಾಗಿಲ್ಲ. ಆದರೆ ಅಲ್ಲಿಯ ರೈಲಿನ ಅನುಭವದಲ್ಲಿ ನಾವು ಅನುಕರಿಸಬೇಕಾದದ್ದು ಬೇಕಾದಷ್ಟಿದೆ ಎಂಬುದನ್ನೂ ಮನಗಂಡೆ. ಹತ್ತುವಾಗ, ಇಳಿಯುವಾಗ ಯಾರೂ ಇತರರನ್ನು ತಳ್ಳಿಕೊಂಡು ನೊಳಕ್ಕೆ ಯುದ್ಧ ಮಾಡಿಕೊಂಡು ಮುಂದುವರಿಯುವ ಪ್ರಯತ್ನಮಾಡಲಿಲ್ಲ. ರೈಲಿನಲ್ಲಿ ಸಿಗರೆಟ್ ಸೇದಕೂಡದೆಂಬ ಎಚ್ಚರಿಕೆಯ ಮಾತುಗಳನ್ನು ಬರೆದಿದ್ದರೋ ಇಲ್ಲವೊ—ನಾನು ನೋಡಲಿಲ್ಲ. ಆದರೆ ನಮ್ಮ ಗಾಡಿಯಲ್ಲಿ ಕುಳಿತವರೊಬ್ಬರೂ ಸಿಗರೇಟ್ ಹಚ್ಚಲಿಲ್ಲ. (ಅಮೆರಿಕದ ಪ್ಲೇನುಗಳಲ್ಲಿ ಈಗ ಸಿಗರೆಟ್ ಸೇದುವವರಿಗೆ ಬೇರೆ ಸ್ಥಳ ಏರ್ಪಡಿಸಿದ್ದಾರೆ) ಯಾರೂ ಗಟ್ಟಿಯಾಗಿ ತಲೆ ಚಿಟ್ಟು ಹಿಡಿಯುವಂತೆ ಮಾತಾಡಲಿಲ್ಲ; ಎಲ್ಲರ ಕಾಲಿಗೂ ತೊಡರುವಂತೆ ಸಾಮಾನುಗಳನ್ನಿರಿಸ

ಲಿಲ್ಲ; (ಬಹುಮಟ್ಟಿಗೆ ಈ ರೈಲಿನಲ್ಲಿ ಪ್ರಯಾಣ ಮಾಡುವವರೆಲ್ಲ ಬೆಳಗ್ಗೆ ಹೋಗಿ ಸಂಜೆ ವಾಪಸಾಗುವವರು. ಸಾಮಾನು ತರುವ ಅವಶ್ಯಕತೆಯೇ ಇಲ್ಲ—ಇದನ್ನು ನಾವು ಮರೆಯಲಾಗದು) ಕಡಲೆಕಾಯಿ ಸಿಪ್ಪೆ, ಕಾಗದ ಮುಂತಾದ ಹರದವನ್ನು ನೆಲದ ಮೇಲಾಗಲಿ ಕಿಟಕಿಯಿಂದ ಹೊರಕ್ಕಾಗಲಿ ಎಸೆಯಲಿಲ್ಲ.

ಇದಿಷ್ಟರ ಆಧಾರದ ಮೇಲೆ ಅಮೆರಿಕನ್ನರನ್ನು ಇಂದ್ರಚಂದ್ರ ದೇವೇಂದ್ರ ಎಂದು ಹೊಗಳುವುದಾಗಲಿ ನಮ್ಮವರನ್ನು ಹಳಿಯುವುದಾಗಲಿ ಸರಿಯಲ್ಲ. ಭಾರತದಲ್ಲಿ ಜನಸಂಖ್ಯೆ ಹೆಚ್ಚು, ಪ್ರಯಾಣಿಕರ ಸಂಖ್ಯೆ ಹೆಚ್ಚು; ಇತರ ಬಗೆಯ ವಾಹನಗಳು ಕಡಮೆ; ಅಮೆರಿಕದಲ್ಲಿ ಕಾರಿನ ಓಡಾಟವೇ ಹೆಚ್ಚಾದ್ದರಿಂದ ರೈಲಿನಲ್ಲಿ ನೂಕುನುಗ್ಗಲಿಲ್ಲ. ರೈಲು ಬಸ್ಸುಗಳ ಸಂಖ್ಯೆಯೂ ಕಡಮೆ; ನಮ್ಮ ಜನ ಬಡವರು, ಅವರಲ್ಲಿ ಅನೇಕರಿಗೆ ನಗರಸಂಸ್ಕೃತಿ ನಿಲುಕಿಲ್ಲ; ಅವರು ಎಲ್ಲಿಗೆ ಹೊರಟರೂ ತಮ್ಮ ಗಂಟುಮೂಟೆ ಜೊತೆಯಲ್ಲಿ ತರದೆ ವಿಧಿಯಿಲ್ಲ—ಇವೆಲ್ಲ ನಿಜ. ಆದರೂ ನಮ್ಮಲ್ಲಿ ಶಿಸ್ತು ಕಡಮೆ ಎಂದು ಒಪ್ಪಲೇಬೇಕು. ದೊಡ್ಡ ನಗರಗಳಲ್ಲಿರುವ ವಿದ್ಯಾವಂತರಾದ ಜನರಲ್ಲೂ ಅಮೆರಿಕದಲ್ಲಿ ಕಾಣುವ ಶಿಸ್ತು, ಸಂಯಮ, ಇತರರಿಗೆ ನಮ್ಮಿಂದ ತೊಂದರೆಯಾದೀತು ಎಂಬ ಆತಂಕ—ಇವು ಸಾಲದು. ಸಾರಿಗೆ ವ್ಯವಸ್ಥೆಯ ಅಧಿಕಾರಿಗಳು ತಮ್ಮ ನಿಯಮಗಳನ್ನು ಜಾರಿಗೆ ತರಬೇಕೆಂಬ ಪ್ರಯತ್ನ ಮಾಡುವುದೂ ಅಪರೂಪವೇ.

ಒಂದು ವಾರ ಕಳೆದ ಮೇಲೆ ಸೀತಾರಾಂ ಸಂಸಾರಸಮೇತ ನನ್ನೊಡನೆ ಬಂದು ಜೇನ್ಸ್‌ವಿಲ್‌ನಲ್ಲಿ ಎರಡು ದಿನ ಇದ್ದರು. ಆಮೇಲೆ ನಾವೂ ರಾಮುವೂ ಅವರೊಡನೆ ವಿಸ್ಕಾನ್ಸಿನ್ ಡೆಲ್ಸ್‌ಗೆ ಹೋಗಿ ಅಲ್ಲಿ ಅವರನ್ನು ಬೀಳ್ಕೊಟ್ಟು ಜೇನ್ಸ್‌ವಿಲ್‌ಗೆ ಹಿಂದಿರುಗಿದೆವು.

## ಜೇನ್ಸ್‌ವಿಲ್‌ನಲ್ಲಿ ಮೊದಲ ದಿನಗಳು

ಜೇನ್ಸ್‌ವಿಲ್ ಬಹು ಸುಂದರವಾದ ಊರು. ನಮ್ಮ ಮಡಿಕೇರಿ ಮಂಗಳೂರುಗಳಷ್ಟು ಗುಡ್ಡಗಾಡಿನ ಪ್ರದೇಶವಲ್ಲದಿದ್ದರೂ ಏರುತಗ್ಗುಗಳಿದ್ದು ಊರಿಗೆ ವೈವಿಧ್ಯ ಕೊಡುತ್ತವೆ. ಅಮೆರಿಕದಲ್ಲಿ ಎಲ್ಲೆಲ್ಲೂ ಇರುವಂತೆ ಇಲ್ಲೂ ವೃಕ್ಷಸಂಪತ್ತು. ಇಲ್ಲಿ ಸಾಲುಮರಗಳಿಲ್ಲದ ರಸ್ತೆಯೇ ಇಲ್ಲ. ಊರಿನ ಮಧ್ಯೆ ರಾಕ್ ಹೊಳೆ (Rock River) ಹರಿಯುತ್ತದೆ. ಇದು ತಕ್ಕಮಟ್ಟಿಗೆ ದೊಡ್ಡ ನದಿಯೇ. ನೀರಿನ ಬಣ್ಣ ಹೊಗಳಿಸಿಕೊಳ್ಳುವಂಥದೇನಲ್ಲ. ಅದು ಎಲ್ಲೆಲ್ಲಿಂದ ಎಷ್ಟು

ಕಾರ್ಖಾನೆಗಳ ಕೊಳಕನ್ನು ಸಾಗಿಸಬೇಕೊ! ಸಂಜೆಯ ಹೊತ್ತು ನದಿಯಲ್ಲಿ ಸ್ಕೀ ಮಾಡುವ ಜನರನ್ನು ನೋಡಬಹುದು—ಅದೊಂದು ಮನೋಹರವಾದ ದೃಶ್ಯ. ನಾನು ಅಲ್ಲಿದ್ದಾಗ ಈ ಆಟದ ಪ್ರದರ್ಶನವೊಂದು ನಡೆಯಿತು. ಇಲ್ಲಿಯ ಜನಸಂಖ್ಯೆ ಕೇವಲ 45,000. ಆದರೆ ಎರಡು ದೊಡ್ಡ ಕಾರ್ಖಾನೆಗಳಿವೆ. ಒಂದು ಷೆವ್ರೊಲೆ ಮೋಟಾರ್ ಕಂಪೆನಿಯವರದ್ದು. ಇನ್ನೊಂದು ಫೌಂಟನ್ ಪೆನ್ ಕಾರ್ಖಾನೆ—ಜಗತ್ಪ್ರಸಿದ್ಧವಾದ ಪಾರ್ಕರ್ ಫೌಂಟನ್ ಪೆನ್ ತಯಾರಾಗುವುದು ಇಲ್ಲಿಯೇ. ಈ ಕಾರ್ಖಾನೆಯ ಮಾಲೀಕರ ಐಶ್ವರ್ಯಕ್ಕೆ ನಾವೂ (ಅಂದರೆ ಭಾರತೀಯರು) ಬೇಕಾದಷ್ಟು ಕಾಣಿಕೆ ಸಲ್ಲಿಸಿದ್ದೇವೆ—ಈ ಮಾತನ್ನು ನಾನು ಬರೆಯುತ್ತಿರುವುದು ಪಾರ್ಕರ್ ಪೆನ್ನಿನಲ್ಲೇ! ಈ ಊರು ಜನಸಂಖ್ಯೆಯ ದೃಷ್ಟಿಯಿಂದ ಸಣ್ಣದಾದರೂ ವಿಸ್ತಾರವಾದ ಸ್ಥಳವನ್ನು ಆಕ್ರಮಿಸಿದೆ. ದೊಡ್ಡ ಬೀದಿಗಳು; ನದಿಯ ಎರಡು ದಡಗಳ ಉದ್ದಕ್ಕೂ ಸುಂದರವಾದ ಉಪವನ; ವನರಾಜಿಯ ಹೊದಿಕೆ ಹೊದ್ದ ಗುಡ್ಡಗಳು. ಶರತ್ಕಾಲದಲ್ಲಂತೂ ಈ ಉಪವನ ಗಿರಿವನಗಳ ಸೌಂದರ್ಯ ಅವರ್ಣನೀಯ.

ಹೆಚ್ಚು ಕೈಗಾರಿಕೆಗಳಿಲ್ಲದಿರುವುದರಿಂದ ಇಲ್ಲಿಯ ವಾತಾವರಣ ಇನ್ನೂ ಕೆಟ್ಟಿಲ್ಲ. ಕಾರುಗಳ ಓಡಾಟ ಅಮೆರಿಕದ ಎಲ್ಲ ಊರುಗಳಲ್ಲೂ ಇರುವಂತೆ ಇಲ್ಲೂ ಹೆಚ್ಚು, ಆದರೂ ಆಗಾಗ ತಮ್ಮ ಕಾಲುಗಳನ್ನು ಬಳಸುವ ಜನರೂ ಕಣ್ಣಿಗೆ ಬೀಳುತ್ತಾರೆ. ಊರ ಸುತ್ತಮುತ್ತ ಬೇಸಾಯಗಾರರ ಫಾರಂಗಳಿವೆ. ಇಲ್ಲಿ ಗಗನಚುಂಬಿಗಳಿಲ್ಲ. ನ್ಯೂಯಾರ್ಕ್‌ನಲ್ಲೂ ಷಿಕಾಗೋವಿನಲ್ಲೂ ಗಗನ ಚುಂಬಿಗಳಿರುವ ಸ್ಥಳಗಳಿಗೆ ಹೋದಾಗ 'ಇದು ದೇವರು ಸೃಷ್ಟಿಸಿದ ಪ್ರಪಂಚ ಅಲ್ಲ, ಬೇರೊಂದು ನಿರ್ಘೃಣ ಪ್ರಪಂಚ, ನಗರವು ರಾಕ್ಷಸನಾಗುವುದು ಸಾಧ್ಯ' ಎನ್ನಿಸಿತು—ನಮ್ಮ ಪುರಾಣಗಳಲ್ಲಿ ತ್ರಿಪುರ ಎಂಬುದು ಒಬ್ಬ ರಾಕ್ಷಸನ ಹೆಸರಷ್ಟೆ! ಗಗನಚುಂಬಿಗಳನ್ನು ಕತ್ತೆತ್ತಿ ನೋಡುತ್ತ ನಿಂತರೆ ಅವು ನಿಧಾನ ವಾಗಿ, ಆದರೆ ತಡೆಯಲಸಾಧ್ಯ ಎನ್ನುವಂತೆ, ನಿಮ್ಮ ಕಡೆಗೇ ಸಾಗಿ ಬರುತ್ತಿರು ವಂತೆ ಭಾಸವಾಗುತ್ತದೆ. ನಾಲ್ಕು ಕಡೆಯಿಂದಲೂ ಬರುವ ಈ ಸಿಮೆಂಟ್-ಕಾಂಕ್ರೀಟ್ ದೈತ್ಯರ ನಡುವೆ ಸಿಕ್ಕಿಕೊಂಡು ನಾನು ಚೂರ್ಣವಾಗಿ ಹೋಗು ತ್ತೇನೆ ಎನ್ನಿಸುತ್ತದೆ. ಜೇನ್ಸ್‌ವಿಲ್‌ನ ವಾತಾವರಣ ಇಂಥದಲ್ಲ. ಇಲ್ಲಿ ನಮ್ಮ ಸುತ್ತಲಿನ 'ದೇಶ' (space)ಕ್ಕೂ ಮೇಲಿನ ಆಕಾಶಕ್ಕೂ ವೈಶಾಲ್ಯವಿದೆ. ದೇವರು ಕೊಟ್ಟ ಗಾಳಿ ಇಲ್ಲಿ ಸಂಚರಿಸಬಲ್ಲದು!

ನೈಲ್ಸ್‌ನಲ್ಲಿ ಬೆಳಗ್ಗೆ ಹೊತ್ತೇರುವುದಕ್ಕಿಂತ ಮುಂಚೆ ಹೊರಟು ಕಾರು ಟ್ರಕ್ಕು ಜೀಪು ವ್ಯಾನ್‌ಗಳ ಸುಂಟರಗಾಳಿ ಆರಂಭವಾಗುವುದಕ್ಕೆ ಮುನ್ನವೇ

ವ್ಯಾಪಾರಕೇಂದ್ರದ ಸುತ್ತ ತಿರುಗಬೇಕಾಗಿತ್ತು; ನಡೆದಾಡುವುದಕ್ಕೆ ಬೇರೆ ಸ್ಥಳವಿರಲಿಲ್ಲ. ಇಲ್ಲಾದರೆ ದಿನಕ್ಕೊಂದೊಂದು ದಿಕ್ಕಿನಲ್ಲಿ ಹೊರಟು 4–5 ಮೈಲಿ ಸುತ್ತಿಕೊಂಡು ಬರಬಹುದು. ರಸ್ತೆಯ ಎರಡು ಕಡೆಗಳಲ್ಲೂ ಫಾರಮ್ಸ್ (farms) ಗಳಿವೆ. ಕಾರುಗಳ ಓಡಾಟ ಕಡಮೆ—ಹೆದ್ದಾರಿಗಳಲ್ಲಿ ಹೊರತು. ಈ ಫಾರಮ್‌ಗಳ ವಾತಾವರಣ ಶಾಂತವಾದದ್ದು, ಮನಸ್ಸಿಗೆ ಪ್ರಸನ್ನತೆ ತರುವಂಥಾದ್ದು. ಅಲ್ಲಿರುವ ಜನರು ಎಂಥವರೋ, ನಾನು ಕಂಡ ಶಾಂತಿಯನ್ನು ಅವರು ಬಯಸುತ್ತಾರೆಯೋ ಇಲ್ಲವೋ ಕಾಣೆ. ನನ್ನನ್ನು ಕಂಡವರೇನೊ "Hi, nice day, You're out early" (ದಿನ ಗೆಲುವಾಗಿದೆ. ಹೊತ್ತಿಗೆ ಮುಂಚೆ ಹೊರಟಿರಲ್ಲ?) ಎಂದು ನಗುಮುಖದಿಂದ ಮಾತಾಡುತ್ತಾರೆ. ಬಹುಶಃ ಅವರಲ್ಲಿ ಕೆಲವರಾದರೂ ಶಾಂತಿಯನ್ನು ಬಯಸುತ್ತಾರೆ, ಅನುಭವಿಸುತ್ತಾರೆ.

ಅಮೆರಿಕನ್ನರು ಒಂದು ಕಡೆ ಪರಿಸರವನ್ನು ಕೊಳಕು ಮಾಡುತ್ತಾರಾದರೂ ಮರ ಗಿಡಗಳು, ಹೂವುಗಳು, ಗಿರಿ ವನ ನದಿಗಳು, ಹಿಮಾವೃತ ಪರ್ವತಗಳು—ಇವನ್ನು ಮರೆತಿಲ್ಲ. 'ನ್ಯಾಷನಲ್ ಪಾರ್ಕ್' ಮಾಡಿ ಸುಂದರವಾದ ಪ್ರದೇಶಗಳ ಸೌಂದರ್ಯವನ್ನು ರಕ್ಷಿಸಿಕೊಳ್ಳಬೇಕೆಂಬ ಯೋಚನೆ ಮೊಟ್ಟ ಮೊದಲು ಹೊಳೆದದ್ದು ಅಮೆರಿಕನ್ನರಿಗೆ—ಯೆಲ್ಲೊ ಸ್ಟೋನ್ ನ್ಯಾಷನಲ್ ಪಾರ್ಕ್ (Yellow Stone National Park) ಈ ಯೋಚನೆಯ ಪ್ರಥಮ ಫಲ. ಅಂಥ ಸ್ಥಳಗಳಿಗೆ ಬರುವವರಲ್ಲಿ ಎಷ್ಟು ಜನ ನಿಜವಾಗಿ ಸೌಂದರ್ಯೋಪಾಸಕರೋ—ಅದು ಬೇರೆ ಮಾತು. ಬಹು ಜನರ ಪಾಲಿಗೆ ಈ ಪಾರ್ಕ್‌ಗಳು ಬಿಡುವಿಲ್ಲದ ಪರಿವ್ರಾಜಕತ್ವಕ್ಕೆ ನೆಪವಾಗುತ್ತದೆ. ಆದರೂ ನನಗೆ ಅನೇಕ ವೇಳೆ ಅನ್ನಿಸಿದೆ : ಈ ಜನರಲ್ಲಿ ಸೌಂದರ್ಯಾಕಾಂಕ್ಷೆ ಬದುಕಿದೆ, ಶಾಂತಿಪ್ರೇಮವೂ ಬದುಕಿದೆ, ಅವರು ಕೈಗಾರಿಕಾ ಕ್ರಾಂತಿಯ ಫಲವಾಗಿ ಕೆರಳಿದ ಹುಚ್ಚಿನಿಂದ ಬಿಡುಗಡೆ ಪಡೆದು ಮತ್ತೆ ಮಾನವೀಯತೆಗೆ ಜೆಲೆ ಕೊಡುತ್ತಾರೆ, ಎಂದು. ಈ ಯೋಚನೆಯ ಜೊತೆಗೆ ಒಂದು ಶಂಕೆಯೂ ಬರುತ್ತದೆ : 'ಚಾರ್ವಾಕರು' (materialists) ಎಂದು ನಾವು ಅಲ್ಲಗಳೆಯುವ ಈ ಜನ ಮೇಲೆ ಹೇಳಿದ 'ಬ್ರಾಹ್ಮೀಸ್ಥಿತಿ'ಗೆ ಬರುವ ಹೊತ್ತಿಗೆ ನಾವು—ಆಧ್ಯಾತ್ಮಿಕ ಜನಾಂಗ ಎಂದು ಬಡಾಯಿ ಕೊಚ್ಚುವ ನಾವು—ಆಸುರೀಸ್ಥಿತಿಯನ್ನು ತಲಪಿರುತ್ತೇವೆಯೇನೊ. ನಾವು ಆ ಕಡೆಗೆ ವೇಗವಾಗಿಯೇ ಸಾಗುತ್ತಿದ್ದೇವೆ!

ನಾನು ಬೆಳಗಿನ ಸಂಚಾರದ ಅಂಗವಾಗಿ ಮನೆಗೆ ಅರ್ಧಮೈಲಿ ದೂರ

ದಲ್ಲಿರುವ ವಿಶಾಲವಾದ ಉಪವನವನ್ನು ಹಾದು ಹೋಗುವ ಪರಿಪಾಠ ಮಾಡಿಕೊಂಡೆ. ಅದು ರೇಖಾಗಣಿತದಲ್ಲಿ ಬಳಸುವ ಆಕೃತಿಗಳನ್ನನುಸರಿಸಿ, ನಡುವೆ ದಾರಿ, ಎರಡು ಪಕ್ಕದಲ್ಲೂ ಹೂಗಿಡಗಳ ಪಾತಿ, ಇಲ್ಲೊಂದು ವೃತ್ತ, ಅಲ್ಲೊಂದು ಚೌಕ, ಹೀಗೆ ರಚಿಸಿದ—ಕೃಷ್ಣರಾಜಸಾಗರದ ಬೃಂದಾವನದಂಥ—ಉಪವನವಲ್ಲ. ಬೃಂದಾವನದಲ್ಲಿ ಎದ್ದು ಕಾಣುವ ಕಲೆಯಿದೆ. ಇದು ಯಾರೋ ರಚಿಸಿದ ಉಪವನವಲ್ಲ, ವನದ ದಟ್ಟಣೆ ಕಡಮೆಯಾದ್ದರಿಂದ ತಾನಾಗಿಯೇ ಉಪವನವಾಯಿತು ಎನ್ನುವಂತಿದೆ. ಮಾನವನ ಕೈವಾಡ ಇಲ್ಲವೆಂದಲ್ಲ. ಒಂದು ಕಡೆ ನಾಲ್ಕಾರು ಟೆನಿಸ್ ಕೋರ್ಟುಗಳಿವೆ, ಜನರು ಪಾರ್ಕನ್ನು ಕೊಳಕು ಮಾಡದಿರಲೆಂದು ಕಟ್ಟಿದ ಶೌಚಾಗಾರಗಳಿವೆ. ಇವಕ್ಕಿಂತ ಹೆಚ್ಚಾಗಿ ನನ್ನ ಮನಸ್ಸನ್ನು ಸೆಳೆದದ್ದೆಂದರೆ ಮಕ್ಕಳಿಗಾಗಿಯೇ ನಿರ್ಮಿಸಿದ ದೊಡ್ಡದೊಂದು ಕೊಳ. ಎಳೆಬಿಸಿಲಿನಲ್ಲಿ ಹೊಳೆಯುವ ಅದರ ತಿಳಿ ನೀರಿನ ಆಳ ಒಂದು ಅಡಿಗಿಂತ ಹೆಚ್ಚಿಲ್ಲ. ಎರಡು ವರ್ಷದ ಮಕ್ಕಳು ಕೂಡ ಕೊಳಕ್ಕಿಳಿದು ನೀರನ್ನು ಎರಚಾಡಿ ಬಿದ್ದು ಎದ್ದು ಓಡಾಡಿ ಆನಂದ ಪಡುತ್ತವೆ. ಇದರ ಕಲ್ಪನೆ ಯಾರಿಗೆ ಬಂತೋ ಅವನನ್ನು ಹುಡುಕಿಕೊಂಡು ಹೋಗಿ ಅಭಿನಂದಿಸಬೇಕು ಎನ್ನಿಸಿತು.

ಮಿಷಿಗನ್ ಸರೋವರಕ್ಕೂ ಇಲ್ಲಿಗೂ ಸುಮಾರು 50 ಮೈಲಿ ಅಂತರ. ಇನ್ನೂ ಹತ್ತಿರದಲ್ಲಿ ಕೆಟ್ಲ್‌ಮೊರೇನ್ ಎಂಬ ಗುಡ್ಡಗಾಡಿನ ಪ್ರಾಂತ—ಅದೊಂದು ಸ್ಟೇಟ್ ಪಾರ್ಕ್. 10–15 ಮೈಲಿ ದೂರದಲ್ಲೇ ಸುಂದರವಾದ ರೈಸ್ ಸರೋವರ. ಬೆಟ್ಟಗುಡ್ಡಗಳು, ಕಾಡು, ಸರೋವರ, ನದಿ—ಪ್ರಕೃತಿಯ ಈ ರಮ್ಯಾಂಶಗಳ ಜೊತೆಗೆ ಇಲ್ಲಿ ಆಧುನಿಕ ನಾಗರಿಕತೆಯ ಸೌಲಭ್ಯಗಳೂ ಹಿತವಾಗಿ ಬೆರೆದಿವೆ. ಇಲ್ಲೊಂದು ವಿಮಾನ ನಿಲ್ದಾಣವಿದೆ—ಆದರೆ ಜೇನ್ಸ್‌ವಿಲ್‌ಗೆ ದೊರೆಯುವ ವಿಮಾನ ಸೇವೆ ದಿನಕ್ಕೊಂದು ಬಾರಿ ಮಾತ್ರ. (ನೈಲ್ಸ್‌ನಲ್ಲಿ ವಿಮಾನದ ಭೋರ್ಗರೆತ ಸಂತತವಾಗಿ ದಿನವೆಲ್ಲ ರಾತ್ರಿಯೆಲ್ಲ ಕೇಳಿಬರುತ್ತಿತ್ತು—ಅದು ಜಗತ್ತಿನಲ್ಲೇ ಹೆಚ್ಚು ವಿಮಾನಗಳನ್ನು ಸ್ವಾಗತಿಸುವ ಓಹೇರ್ ವಾಯು ಬಂದರಿನ ಹತ್ತಿರ ಇದ್ದದ್ದರಿಂದ!) ಇಲ್ಲಿ ವಿಸ್ಕಾನ್ಸಿನ್ ವಿಶ್ವವಿದ್ಯಾಲಯದ ಕೇಂದ್ರವೂ ಒಂದಿದೆ. ಅಮೆರಿಕದಲ್ಲಿ ನೋಡಿದ ಎಲ್ಲ ನಗರಗಳಿಗಿಂತ ಜೇನ್ಸ್‌ವಿಲ್ ನನಗೆ ಹೆಚ್ಚು ಆಪ್ಯಾಯಮಾನವಾಯಿತು.

ರಾಮು ವಾಸವಾಗಿರುವ ಸಫಕ್ ಡ್ರೈವ್ (Suffolk Drive)ನಲ್ಲಿ ಮನೆದಳಗಳೆಲ್ಲ ವಿಶಾಲವಾಗಿವೆ. ಮನೆ ಮನೆಗಳ ನಡುವೆ ಪೌಳಿಯಿಲ್ಲದ್ದರಿಂದ ವೈಶಾಲ್ಯ ಮತ್ತಷ್ಟು ಹೆಚ್ಚಿದಂತೆ ಕಾಣುತ್ತದೆ. ಒಂದು ಕೊನೆಯಿಂದ

ಮತ್ತೊಂದು ಕೊನೆಯವರೆಗೂ ಮನೆಯ ಹಿಂದೂ ಮುಂದೂ ಅಲ್ಲಲ್ಲಿ ಹೂವಿನ ಪಾತಿಗಳು ಕಾಣುತ್ತವಾದರೂ ಮನಸ್ಸಿನಲ್ಲಿ ಸ್ಫುಟವಾಗಿ ನಿಲ್ಲುವುದು ಹುಲ್ಲುಗಾವಲು. ಅದಕ್ಕೆ ಮಾಡುವ ಉಪಚಾರ ಅಷ್ಟಿಷ್ಟಲ್ಲ. ಕಳೆಕೀಳುವುದು, ಹೋಸ್ ನಾಳಗಳನ್ನಿಟ್ಟುಕೊಂಡು ನೀರನ್ನು ಸಿಂಪಡಿಸುವುದು. ಹುಲ್ಲುಗತ್ತರಿಯನ್ನು ಓಡಾಡಿಸಿ ಗರಿಕೆಯನ್ನು ಮಟ್ಟಸವಾಗಿಡುವುದು—ದಿನಾ ಅದರ ಸೇವೆ ನಡೆಯುತ್ತಲೇ ಇರುತ್ತದೆ. 14–15 ವರ್ಷದ ಮಕ್ಕಳು (ಅವರು ಐಶ್ವರ್ಯವಂತರಾಗಲಿ ಬಡವರಾಗಲಿ) ಈ ಸೇವೆ ಸಲ್ಲಿಸಿ ಸಲಕ್ಕೆರಡು ಡಾಲರು ಸಂಪಾದಿಸುವುದೂ ಉಂಟು. ಈ ಹುಲ್ಲುಗಾವಲು ಕಣ್ಣಿಗೊಂದು ಹಬ್ಬ—ಅದನ್ನು ಅಲ್ಲಗಳೆಯುವಂತಿಲ್ಲ, ಆದರೂ ಅದಕ್ಕೆ ಎಷ್ಟೊಂದು ನೀರನ್ನು ಬಳಸುತ್ತಾರೆಂಬುದನ್ನು ನೆನೆದರೆ 'ಇದಿ ನ್ಯಾಯವೂ' ಎನ್ನುವಂತಾಗುತ್ತದೆ. ನಗರಾಧಿಕಾರಿಗಳು ಎಷ್ಟೋ ಹಣ ವೆಚ್ಚಮಾಡಿ ಕಷ್ಟಪಟ್ಟು ಪರಿಶುದ್ಧವಾದ ಕುಡಿಯುವ ನೀರನ್ನೊದಗಿಸಿದರೆ ಅದನ್ನು ಹೀಗೆ ಬಳಸುವುದು ಅಪರಾಧ—ಎಂದು ಅಲ್ಲಿಯ ಜನರೇ ಹೇಳಿದ್ದನ್ನು ಕೇಳಿದ್ದೇನೆ.

ನಮ್ಮ ಮನೆಯ ಸಾಲಿನ ಹಿಂದೆ ಸುಮಾರು 200 ಅಡಿಯವರೆಗೆ ಇಳಿಜಾರು, ಒಂದು ಸಣ್ಣ ಕಣಿವೆ, ಅಲ್ಲಿಂದಾಚೆಗೆ ಮತ್ತೆ ಏರುನೆಲ, ಹುಲ್ಲುಗಾವಲು, ಮನೆಗಳು. ಚಳಿಗಾಲದಲ್ಲಿ ಇವೆಲ್ಲ ಹಿಮದಿಂದ ಮುಚ್ಚಿಹೋಗುತ್ತವೆ. ಇಳಿಜಾರು ತೀರ ಕಡಿದಾಗಿಲ್ಲವಾದ್ದರಿಂದ ಮಕ್ಕಳು ಕೂಡ ಅಲ್ಲಿ ಸ್ಕೀ ಆಟವಾಡುತ್ತವೆಯಂತೆ. ಹಿಮದ ಹೊದಿಕೆಯನ್ನು ಹೊದ್ದ ಬೆಟ್ಟ, ಮನೆಯ ಛಾವಣಿಗಳು, ಬೀದಿಗಳು, ಹಿಮದ ತೋರಣವಾಗಿ ಪರಿವರ್ತನಗೊಂಡ ವಿದ್ಯುತ್ತಿನ ತಂತಿಗಳು, ಈ ಧವಳ ಸಿರಿಯನ್ನು ಒಂದು ಸಾರಿ—ಒಂದೇ ಒಂದು ಸಾರಿ—ಬದರೀನಾಥದಲ್ಲಿ ನೋಡಿದ್ದೇನೆ. ಆದರೆ ಅಂದು ಪ್ರದರ್ಶನವನ್ನು ನೋಡುವಂತೆ ಅದನ್ನು ನೋಡಿದೆನೇ ಹೊರತು ಅನುಭವಿಸಲಿಲ್ಲ. ಈ ಊರಿನವರಿಗೆ ವರ್ಷದಲ್ಲಿ ಕೆಲವು ತಿಂಗಳ ಕಾಲ ಮನದಣಿಯ ಅನುಭವಿಸಬಹುದಾದ ಸಂಪತ್ತು, ಈ ಹಿಮದ ಸೂರೆ. ಚಳಿಗಾಲದಲ್ಲಿ ಒಂದೆರಡು ತಿಂಗಳು ಇಲ್ಲಿರಬೇಕೆನ್ನಿಸುತ್ತದೆ—ಆದರೆ ಅದೇ ನನ್ನ ಜೀವನದ ಕೊನೆಯ ತಿಂಗಳಾಗಬಹುದೇನೊ! ಈ ವಯಸ್ಸಿನಲ್ಲಿ ಇಲ್ಲಿಯ ಚಳಿಯನ್ನು—ಮೂಳೆಯನ್ನೇ ನಡುಗಿಸುವ, ಶೂನ್ಯಕ್ಕಿಂತ ಎಷ್ಟೋ ಡಿಗ್ರಿ ಕೆಳಗಿರುವ ಚಳಿಯನ್ನು—ತಡೆಯುವ ಶಕ್ತಿ ನನಗಿರಲಾರದು.

* * *

ಡಯಾನ ಬರುವವರೆಗೆ ನಾನೂ ರಾಮುವೂ ಮನೆಯಲ್ಲಿ ಸರ್ವತಂತ್ರ

ಸ್ವತಂತ್ರರು, ಬೇಕಾದ ತಿಂಡಿಯನ್ನು ಮಾಡಿಕೊಂಡು ತಿನ್ನುವುದಕ್ಕಾಗಲಿ, ಯಾರು ಮಾಡಿಕೊಂಡಾರು ಎಂದು ಪರಿತಪಿಸುವುದಕ್ಕಾಗಲಿ. ವಸಂತ ಬಂದಾಗ ಸೊಗಸಾದ ಬಾದಾಮಿ ಹಲ್ವ—ನಿಜವಾದ ಬಾದಾಮಿಯನ್ನೇ ಉಪಯೋಗಿಸಿ ತಯಾರಿಸಿದ್ದು—ಮಾಡಿಕೊಂಡು ತಂದಿಟ್ಟಿದ್ದಳು. ಈಗ ಅಂಥ ಹಲ್ವ ಭಾರತದಲ್ಲಿ ಕನಸಾಗಿಬಿಟ್ಟಿದೆ! ಡೇಟನ್‌ನಿಂದ ಹೊರಟಾಗ ಗಿರಿಜೆ ಮೈಸೂರುಪಾಕು ಕಟ್ಟಿಕೊಟ್ಟಿದ್ದಳು. ಕಷ್ಟ ಕಾಲಕ್ಕೆ ಇರಲೆಂದು ನಾನು ಶ್ಯಾಮಿಗೆ ತಂದಿದ್ದೆ. ಹಪ್ಪಳ ಸಂಡಿಗೆ, ಹುಳಿಯನ್ನದ ಗೊಜ್ಜು, ಚಟ್ನಿಪುಡಿ, ಇತ್ಯಾದಿಗಳೆಲ್ಲ ದಿಲ್ಲಿಯಿಂದ ನನ್ನೊಡನೆ ಪ್ರಯಾಣಮಾಡಿ ಬಂದಿದ್ದವು. ಯಾವ ಅಡಿಗೆಗಾದರೂ ಸಾಮಗ್ರಿ ಸಲಕರಣೆಗಳು ಬೇಕಾದ ಹಾಗಿವೆ. ಮಾಡುವವರು ಮಾತ್ರ.... ನಾವೇ !

ವಯಸ್ಸಿನ ಮಹಿಮೆಯಿಂದಾಗಿ ಮನೆಗೆಲಸ ಮಾಡದಿರುವ ಹಕ್ಕು ನನಗೆ ಸಲ್ಲಬೇಕು. ವಾಸ್ತವವಾಗಿ ಆ ಹಕ್ಕಿಗೆ ಎಷ್ಟೋ ದಶಕಗಳ ಕಾಲದಿಂದ (7, 8 ದಶಕಗಳ ಕಾಲದಿಂದ!) ನಾನು ಅನುಭವದಾರ; ನನ್ನ ಮಟ್ಟಿಗೆ ಅದೇ ಮಾಮೂಲು. ಆದರೆ ನನ್ನದು ಯಾವಾಗಲೂ ಸಹಕರಿಸುವ ಮನೋಧರ್ಮ. ಅಡಿಗೆಯ ಕೆಲಸವನ್ನೆಲ್ಲ ನಾನು ನೋಡಿಕೊಳ್ಳುತ್ತೇನೆಂದು ಭರವಸೆ ಕೊಟ್ಟೆ. ರಾಮುವಿನ ಮುಖದಲ್ಲಿ ಉತ್ಸಾಹದ ಒಪ್ಪಿಗೆಯೇನೂ ಕಾಣಲಿಲ್ಲ. ಅನುತ್ಸಾಹಕ್ಕೆ ಕಾರಣ ತಂದೆಯ ಕೈಯಲ್ಲಿ ಕೆಲಸ ಮಾಡಿಸುವುದುಂಟೆ ಎಂಬ ಹಿಂಜರಿಕೆಯೋ ಅಥವಾ ನನ್ನ ಬಾಣಸಿಗತನದ ವಿಷಯದಲ್ಲಿ ಅಪನಂಬಿಕೆಯೋ —ನಾನು ವಿಚಾರಿಸುವ ಗೊಡವೆಗೆ ಹೋಗಲಿಲ್ಲ. ಸ್ವಲ್ಪ ವಾಗ್ವಾದ ನಡೆದು ಬೆಳಗಿನ ತಿಂಡಿಯನ್ನು ರಾಮು ತಯಾರಿಸತಕ್ಕದ್ದೆಂದೂ ಊಟದ ವ್ಯವಸ್ಥೆಯನ್ನೆಲ್ಲ ನನಗೆ ಬಿಡತಕ್ಕದ್ದೆಂದೂ ನಿಶ್ಚಯವಾಯಿತು. ಊಟ ತಯಾರು ಮಾಡುವ ಹೊತ್ತಿನಲ್ಲಿ ರಾಮು ಕ್ಲಿನಿಕ್ಕಿನಲ್ಲಿರಬೇಕಷ್ಟೆ. ಯೋಜನೆಗನುಸಾರವಾಗಿ ಕಾರ್ಯಕ್ರಮ ನಡೆಯುತ್ತಿತ್ತು. ರಾಮು ಬೆಳಗ್ಗೆ ತಿಂಡಿ ಸಿದ್ಧ ಮಾಡುವುದು, ಅಳತೆಗೆ ಸರಿಯಾಗಿ ಅಕ್ಕಿ ಬೇಳೆ ನೀರುಗಳನ್ನು ಒಲೆಯ ಮೇಲಿಡುವುದು —ಇಷ್ಟಾದರೆ ಅವನ ಕೆಲಸ ಮುಗಿಯಿತು. ಉಳಿದದ್ದೆಲ್ಲಾ ನನ್ನ ಕೆಲಸ. ರಾಮು ಬಂದ ಮೇಲೆ ಹುಳಿ ಉಪ್ಪುಕಾರ ಒಗ್ಗರಣೆ ಮುಂತಾದ ಚಿಲ್ಲರೆ ಕೆಲಸವನ್ನೆಲ್ಲ ಮಾಡಿಕೊಳ್ಳುತ್ತಿದ್ದ. ಹಿಂದೊಂದು ಸಾರಿ 'There is a difference between cooking and cremation' (ಪಚನಕ್ರಿಯೆಗೂ ದಹನಕ್ರಿಯೆಗೂ ವ್ಯತ್ಯಾಸವಿದೆ) ಎಂದು ನಾನೇ ವಿವರಣೆ ಕೊಟ್ಟಿದ್ದೆ. ಅದು ಭಕ್ಷಕನಾಗಿ ಕೊಟ್ಟ ವಿವರಣೆ; ಬಾಣಸಿಗನಾದಾಗಲೂ ಅದು ನೆನಪಿರಬೇಕೆಂಬ

ನಿಯಮವೇನೂ ಇಲ್ಲವಷ್ಟೆ. ಒಂದೆರಡು ಸಾರಿ ಯತ್ನಿಸಿ, ತಪ್ಪು ಮಾಡಿದ್ದರ ಫಲವಾಗಿ ಪಚನ ಎಲ್ಲಿ ಮುಗಿಯುತ್ತದೆ, ದಹನ ಎಲ್ಲಿ ಆರಂಭವಾಗುತ್ತದೆ ಎಂಬುದನ್ನು ಪತ್ತೆ ಮಾಡಿಕೊಂಡೆ.

## ಮೆಕ್‌ಮಿಲನ್ ದಂಪತಿಗಳ ಆಗಮನ

ನಾನು ಜೇನ್ಸ್‌ವಿಲ್‌ಗೆ ಬಂದ ದಿನವೇ ಮೆಕ್‌ಮಿಲನ್‌ರಿಗೆ ಫೋನ್ ಮಾಡಿ ಯೋಗಕ್ಷೇಮ ವಿಚಾರಿಸಿದೆ. ನ್ಯಾನ್ಸಿ ತಾನೇ ರಚಿಸಿದ ಕೆಲವು ವರ್ಣ ಚಿತ್ರಗಳನ್ನು ಅವರಿಗಾಗಿ ಕಳಿಸಿದ್ದಳು. ಮೈಸೂರಿನಲ್ಲಿ ಒಂದು ಸಂಜೆ ನಾವು ಮಕ್ಕಳಿಗೆ ತಿಳಿಯದಂತೆ ಮೈಕ್ರೊಫೋನನ್ನು ಬಚ್ಚಿಟ್ಟು ಅವರ ಹುಡುಗಾಟ, ಜಗಳ, ಹಾಸ್ಯ, ಹಾಡುಗಳು—ಎಲ್ಲವನ್ನೂ ರಿಕಾರ್ಡ್ ಮಾಡಿದ್ದೆವು. ನ್ಯಾನ್ಸಿಯೂ ತನ್ನ ತಂದೆತಾಯಿಯರಿಗೆ ಹೇಳಬೇಕೆನ್ನಿಸಿದ್ದನ್ನೆಲ್ಲ ರಿಕಾರ್ಡು ಮಾಡಿದ್ದಳು. ಚಿತ್ರಗಳನ್ನೂ ಈ ಟೇಪುಗಳನ್ನೂ ಮೆಕ್‌ಮಿಲನ್‌ರಿಗೆ ತಲಪಿಸ ಬೇಕಾಗಿತ್ತು. ಅವರು ತಾವೇ ಜೇನ್ಸ್‌ವಿಲ್‌ಗೆ ಬರುವುದಾಗಿ ತಿಳಿಸಿದ್ದರು. ಅವರ ಭೇಟಿಯನ್ನು ಕುರಿತು ನ್ಯಾನ್ಸಿಗೆ ಬರೆದ ಕಾಗದವನ್ನು ಇಲ್ಲಿ ಪ್ರತಿ ಮಾಡಿದ್ದೇನೆ:

ಪ್ರಿಯ ನ್ಯಾನ್ಸಿ, ರಾಜು, ಕಮಲ, ಕೈಲಾಸ, ಮತ್ತು ಆಶಾ.

ಮೊದಲೇ ಹೇಳಿದ್ದಂತೆ ನಿನ್ನ ತಂದೆ ತಾಯಿಯರು ಇಲ್ಲಿಗೆ ಬಂದರು. ಲಿಂಕನ್‌ನಿಂದ ಹೊರಡುವುದಕ್ಕೆ ಸ್ವಲ್ಪ ಮುಂಚೆ ಮತ್ತೆ ಫೋನ್ ಮಾಡಿ ನಾವು ಬೆಳಗ್ಗೆ ಹತ್ತು ಘಂಟೆಯ ಸುಮಾರಿಗೆ ಬರುತ್ತೇವೆ. ನೀವು ಪ್ಯಾಕ್ ಮಾಡಬೇಕಾದ್ದನ್ನೆಲ್ಲ ಮಾಡಿ ಪ್ರಯಾಣಕ್ಕೆ ಸಿದ್ಧರಾಗಿರತಕ್ಕದ್ದು. ನ್ಯೂಗ್ಲೇರಸ್, ಮಿನರಲ್ ಪಾಯಿಂಟ್, ಕೇವ್ ಆಫ್ ದಿ ಮೌಂಡ್ಸ್, ಹೌಸ್ ಆನ್ ದಿ ರಾಕ್ (New Glarus, Mineral Point, The Cave of the Mounds, The House on the Rock—ಮೊದಲ ಎರಡು: ಸ್ಥಳಗಳ ಹೆಸರುಗಳು; ಮೂರನೆಯದು ಒಂದು ಗುಹೆ; ಕೊನೆಯದು ಬಂಡೆಯೊಂದರ ಮೇಲೆ ಕಟ್ಟಿದ್ದ ಮನೆ)—ಇದಿಷ್ಟನ್ನೂ ನೋಡಿಕೊಂಡು ಬರೋಣ' ಎಂದು ಹೇಳಿದರು. ನಮಗೆ ಇದು ಬಹಳ ಕಷ್ಟದ ಕೆಲಸ ಎನ್ನಿಸಿತು. ನಾನು ರಾಮುವಿಗೆ ಕುಮ್ಮಕ್ಕು ಕೊಟ್ಟು ಅವನಿಂದ ಹೇಳಿಸಿದೆ : 'ನೀವು ಬರುವುದು ಬಹಳ ಸಂತೋಷ. ನಿಮ್ಮನ್ನು ನಿರೀಕ್ಷಿಸು ತ್ತಿರುತ್ತೇವೆ. ಆದರೆ ಆ ಸ್ಥಳಗಳನ್ನೆಲ್ಲ ನೋಡಲು ಹೋಗಲೇ ಬೇಕೆ? ಇಲ್ಲಿ ನೋಡ ಕವಿದಿದೆ. ಸೋನೆ ಮಳೆ ಬರುವ ಸಂಭವವಿದೆಯೆಂದು ಹವಾಪ್ರಸಾರ ದಲ್ಲಿ ಹೇಳಿದರು. ಹವಾನಿಯಂತ್ರಣದ ಸೌಖ್ಯವನ್ನನುಭವಿಸುತ್ತ ಮನೆಯಲ್ಲೇ

ಇದ್ದು ಮಾತು ಕಥೆಯಲ್ಲಿ ಕಾಲ ಕಳೆಯಬಹುದಲ್ಲ ?' ಎಂದು.

ಆದರೆ ನಿನ್ನ ತಂದೆ ತಾಯಿಯರ ಕಾಲಿನಲ್ಲಿ ಹತ್ತಾರು ಚಕ್ರಗಳಿರಬೇಕು. ಅವರ ದೃಷ್ಟಿಯಲ್ಲಿ ಜೀವನ ಎಂದರೆ ಕೊನೆಯ ಪಕ್ಷ ಎಪ್ಪತ್ತು ಮೈಲಿಯ ವೇಗ ದಲ್ಲಿ ಗಾಳಿಯನ್ನು ಸೀಳಿಕೊಂಡು ಭೋರೆಂದು ಓಡುತ್ತಿರುವುದು. ಅವರು ನಮ್ಮ ಮಾತಿಗೆ ಪ್ರತಿ ಹೇಳಲಿಲ್ಲ—ಅದನ್ನು ಗಮನಕ್ಕೇ ತಂದುಕೊಳ್ಳದೆ 'Be ready packed' (ಪ್ಯಾಕ್ ಮಾಡಿಕೊಂಡು ಸಿದ್ಧವಾಗಿರಿ) ಎಂದು ಆಜ್ಞೆ ಹೊರಡಿಸಿದರು. ನಿನ್ನ ತಾಯಿಯ ಮಾತು ಗೊತ್ತಿದೆಯಲ್ಲ ! ಏರ್ ಮಾರ್ಡೋ ತುಕಡ. ನಮ್ಮ ಕೆಲಸ 'not to reason why' (ಏಕೆ ಏನು ಎಂದು ಕೇಳುವುದಲ್ಲ), 'ಅಪ್ಪಣೆ ಜಹಾಪನಾ' ಎನ್ನುವುದಷ್ಟೋ ಅಷ್ಟೆ.

ಅಂದೇನೋ ನಮ್ಮ ಪುಣ್ಯ—ಅವರು ಜೇನ್ಸ್‌ವಿಲ್ ತಲಪುವ ಹೊತ್ತಿಗೆ ಮಧ್ಯಾಹ್ನ ಒಂದು ಘಂಟೆಯಾಗಿತ್ತು. ಆದ್ದರಿಂದ ಅವತ್ತು ಎಲ್ಲಿಗೂ ಪ್ರಯಾಣ ಮಾಡುವಂತಿಲ್ಲ. ಒಂದು ಮೋಟಲಿನಲ್ಲಿ ಇಳಿದುಕೊಂಡು ಆರು ಘಂಟೆಗೆ ನಮ್ಮ ಮನೆಗೆ ಬಂದರು. ಸಂಜೆಯೆಲ್ಲ ಮಾತು ಕಥೆ. ನೀನು ಕಳಿಸಿದ್ದ ಟೇಪನ್ನು (ಮಕ್ಕಳ ಟೇಪನ್ನು) ತಿರುಗಿಸಿ ಕೇಳಿದರು. ಆಶಾ ಕೈಲಾಸರ ಮಾತು ಕೇಳಿಬಂದಾಗ ನಿನ್ನ ತಾಯಿಯ ಮುಖದಲ್ಲಿ ಮೆಲುನಗೆ ಮೂಡಿತು. ನಿಮ್ಮೆಲ್ಲರ ವಿಷಯ ಬೇಕಾದಷ್ಟು ಪ್ರಶ್ನೆ ಕೇಳಿದರು: ಮಕ್ಕಳ ಶಾಲೆ ಎಷ್ಟು ದೂರ ? ಬಸ್ ನಿಲ್ದಾಣ ಎಷ್ಟು ದೂರದಲ್ಲಿದೆ ? ಮನೆಯಲ್ಲಿ ಈಗ ನಲ್ಲಿಯ ವ್ಯವಸ್ಥೆ ಚೆನ್ನಾಗಿದೆಯೆ ? ಮಕ್ಕಳಿಗೆ ಒಳ್ಳೆಯ ಆಹಾರ ಸಿಕ್ಕುತ್ತೆ ತಾನೆ ? ಮಕ್ಕಳಿಗೆ ಪ್ರೀತಿ ಸಲ್ಲಬೇಕು, ಅದು ಬಹು ಮುಖ್ಯ, ನ್ಯಾನ್ಸಿಗೆ ಇದನ್ನು ಹೇಳಿ ಆಶಾ ಕೆಮ್ಮುತ್ತಾಳಲ್ಲ, ಡಾಕ್ಟರಿಗೆ ತೋರಿಸಿದಿರ? ಇತ್ಯಾದಿ, ಇತ್ಯಾದಿ. (ಅಂದ ಹಾಗೆ, ನ್ಯಾನ್ಸಿ, ಎಲ್ಲಾ ಬಿಟ್ಟು ಆಶಾ ಕೆಮ್ಮಿದ್ದನ್ನೇಕೆ ರಿಕಾರ್ಡು ಮಾಡಿದೆ !)

ಗ್ರಾಮುಡೆಟ ಹಾಕಿಕೊಂಡಿದ್ದ ಟ್ರಿಪ್ಪಿನ ಯೋಜನೆ ಮುಂದಕ್ಕೆ ಹೋಯಿತು. ನಾಳೆ ಬೆಳಗ್ಗೆ ಒಂಬತ್ತೂವರೆ ಘಂಟೆಗೆ ಹೊರಡುವುದೆಂದು ಗೊತ್ತಾಯಿತು. ಪ್ರಯಾಣ ನಿಮ್ಮ ತಂದೆಯ ಕಾರಿನಲ್ಲೇ. ಮಧ್ಯಾಹ್ನದ ಲಂಚ್‌ನ ಏರ್ಪಾಡೆಲ್ಲ ಅವರಿಗೇ ಸೇರಿದ್ದು. That is my department. Don't you tell me what to do? (ಅದು ನನ್ನ ಇಲಾಖೆ. ಏನು ಮಾಡಬೇಕೆಂಬು ದನ್ನು ನೀವು ಯಾರೂ ಹೇಳತಕ್ಕದ್ದಲ್ಲ) ಎಂದು ನಿನ್ನ ತಾಯಿ ಗುಡುಗಿದರು. ನಮ್ಮ ಮನೆಯಲ್ಲೇನೊ ಡಯಾನ ಇಲ್ಲದಿದ್ದರೂ ತಿಂಡಿ ತೀರ್ಥದ ವ್ಯವಸ್ಥೆ ಸರಿಯಾಗಿಯೇ ಇದೆ. ಎಣ್ಣೆಗಾಯಿ, ಪಲ್ಯ, ಹುಳಿ, ದೋಸೆ, ನಿನ್ನ ತಮ್ಮನಿಗೆ ಪ್ರಿಯವಾದ ಗೂಪ್‌ಮ (ನ್ಯಾನ್ಸಿಯ ತಮ್ಮ 'ಉಪ್ಪುಮಾ'ವನ್ನು ಗೂಪ್‌ಮ ಎಂದು ಉಚ್ಚರಿಸುತ್ತಾನೆ)—ರಾಮು ಯಾವುದನ್ನು ಬೇಕಾದರೂ ತಯಾರು ಮಾಡಬಲ್ಲ. ಮೆಕ್‌ಮಿಲನ್‌ರು ಬರುವ ಹೊತ್ತಿಗೆ ಮಸಾಲೆದೋಸೆ ಮಾಡಬೇಕೆಂದು ಎಲ್ಲ ಸಿದ್ಧತೆಯನ್ನೂ ಮಾಡಿಕೊಂಡಿದ್ದ. ನಿನ್ನ ತಾಯಿ ದೋಸೆಯನ್ನು ಬಹಳ ಮೆಚ್ಚಿಕೊಂಡು ಅದರ ರೆಸಿಪಿ (recipe–ಏನೇನು

ಹಾಕಬೇಕು, ಹೇಗೆ ಮಾಡಬೇಕು ಮುಂತಾದ ವಿವರಗಳು) ಬರೆಸಿಕೊಂಡರು.

ಆಶಾ, ಕೈಲಾಸ್, ನಾನು ಹೊರಟ ಮೇಲೆ ಎಷ್ಟು ಸಲ ಜಗಳ ಆಡಿದಿರಿ ? ನ್ಯಾನ್ಸಿಗೆ ಹಿಸ್ಟೀರಿಯ (hysteria) ಬರುವಂತೆ ಮಾಡಿದ್ದೀರೊ (ನಿಮ್ಮ ಗಲಭೆಯಿಂದ ಹುಚ್ಚು ಹಿಡಿಯುವಂತೆ ಮಾಡಿದ್ದೀರೋ ಎಂಬ ಭಾವನೆ) ಅಥವಾ ಇನ್ನೂ ಆ ಘಟ್ಟವನ್ನು ತಲಪಿಲ್ಲವೊ ?

ಕಮಲಮ್ಮನವರೆ, ಹೇಗಿದ್ದೀರಿ ? ಹೈಸ್ಕೂಲು ಮುಗಿಸಿ ಕಾಲೇಜಿಗೆ ಸೇರ ಲಿರುವವರನ್ನು ಬಹಳ ಮರ್ಯಾದೆಯಿಂದ ಮಾತಾಡಿಸಬೇಕಲ್ಲವೆ? ಟೇಪಿನಲ್ಲಿ ನಿನ್ನ ಮಾತನ್ನು ಕೇಳಿ ಗ್ರಾಮಡೆಟ 'ಕಮಲ ಬಹಳ ಚೆನ್ನಾಗಿ ಮಾತಾಡು ತ್ತಾಳೆ' ಎಂದರು. ನಿನಗೆ ಜಂಬ ಬಂದುಬಿಟ್ಟೀತು, ಜೋಕೆ. ಏನೊ ಮೊಮ್ಮಗ ಳಿಗೆ ಸಂತೋಷವಾಗಲಿ ಅಂತ ಹೇಳಿದರು ಅಷ್ಟೆ.

ಎಲ್ಲ ಹೇಗಿದ್ದೀರಿ ? ಈ ಸಲ ಮಳೆ ಚೆನ್ನಾಗಿ ಬಂತೆ ? ಹಣ್ಣಿನ ಗಿಡ ಹಾಕಿಸಬೇಕೆಂದಿದ್ದರಲ್ಲ, ಹಾಕಿಸಿದಿರ ?

ನ್ಯಾನ್ಸಿ, ನಿನ್ನ ತಂದೆಯ ಅಪೇಕ್ಷೆಯಂತೆ ನಿನಗೆ ಈಗಲೇ ಕೂತು ಕಾಗದ ಬರೆಯುತ್ತಿದ್ದೇನೆ. ಅವರು ಹೇಳಿದ ಒಂದು ಮಾತು ನನಗೆ ಸ್ವಲ್ಪ ವಿಚಿತ್ರ ವಾಗಿ ಕಂಡಿತು. 'ಅಮೆರಿಕದಲ್ಲಿ ಕಾಗದ ಬರೆಯುವುದಕ್ಕೆ ಕವರನ್ನೇ (cover or envelope) ಕೊಳ್ಳಬೇಕಾಗಿಲ್ಲ. ಏರೋಗ್ರಾಂ (aero-gramme) ಅಂತ ಒಂದು ಬಗೆಯ ಕಾಗದ ಇದೆ, ಈಗ ಅದು ನನ್ನಲ್ಲಿಲ್ಲ. ಇದ್ದಿದ್ದರೆ ಕೊಡಬಹುದಾಗಿತ್ತು' ಎಂದರು. ಭಾರತದಲ್ಲೂ ಏರೋಗ್ರಾಂ ಇದೆ ಯೆನ್ನುವುದು ಅವರಿಗೆ ತಿಳಿದಿರಬೇಕು! ನೀನು ಪ್ರತಿ ಸಾರಿಯೂ ಅವರಿಗೆ ಏರೋಗ್ರಾಂನಲ್ಲೇ ಬರೆಯುತ್ತೀಯಲ್ಲವೆ ?

ನೀನು ಕಳಿಸಿದ ಚಿತ್ರಗಳಲ್ಲಿ ಲೀಲ (ನನ್ನ ಹಿರಿಯ ಸೊಸೆ) ಎರಡನ್ನಿಟ್ಟು ಕೊಂಡಳು. ಇನ್ನೆರಡನ್ನು ರಾಮುವಿಗೆ ಕೊಟ್ಟೆ. ಉಳಿದದ್ದನ್ನು ಇವತ್ತು ನಿನ್ನ ತಾಯಿಗೆ ತಲುಪಿಸಿದೆ.

ಗ್ರಾಮಡೆಟ 'ನಮ್ಮಲ್ಲಿಗೆ ಬಂದು ಎರಡು ವಾರ ಇದ್ದು ಬಿಡಿ. ಟ್ರೈಯ್ಲರನ್ನು ಸಂಪೂರ್ಣವಾಗಿ ನಿಮಗೇ ಬಿಟ್ಟುಕೊಡುತ್ತೇವೆ. ನೀವು ಏನೋ ಬರೆಯು ತ್ತಿದ್ದೀರಂತೆ. ನಿಮಗೆ ಪುಸ್ತಕಗಳು ಬೇಕಾದರೆ ಲಿಂಕನ್ ಕಾಲೇಜಿನಿಂದ ತರಿಸಿ ಕೊಡುತ್ತೇವೆ. ಯಾವ ಚಿಂತೆಯೂ ಇಲ್ಲದೆ ಇದ್ದು ಬಿಡಿ' ಎಂದು ನನಗೆ ಬಹಳ ಆದರದ ಆಹ್ವಾನ ಕೊಟ್ಟಿದ್ದಾರೆ. ಒಂದು ವಾರಾಂತ್ಯವನ್ನಾದರೂ ಅವರೊಡನೆ ಕಳೆಯಬೇಕೆಂದಿದ್ದೇನೆ.'

ಮಾರನೆಯ ದಿನ ಗ್ರಾಮಡೆಟ ಅಪ್ಪಣೆ ಮಾಡಿದಂತೆ ಟ್ರಿಪ್ ಹೊರಟ ದ್ದಾಯಿತು. ಭಾನುವಾರವಾದ್ದರಿಂದ ರಾಮು ಕ್ಲಿನಿಕ್ಕಿನ ನೆಪ ಹೇಳಿ ತಪ್ಪಿಸಿ ಕೊಳ್ಳುವಂತೆಯೂ ಇರಲಿಲ್ಲ! ಒಂಬತ್ತೂ ಕಾಲು ಘಂಟೆಗೆ ಸರಿಯಾಗಿ ನಮ್ಮ ಮನೆಯ ಮುಂದೆ ಕಾರ್ ಬಂದು ನಿಂತಿತು : 'ಸಿದ್ಧವಾಗಿದ್ದೀರ ರಾಯರೇ ?' ಎಂದು ಗ್ರಾಮಡೆಟರ ದನಿ ಕೇಳಿಸಿತು. ಗಾಡಿ ಹತ್ತಿ ಕುಳಿತೆವು. ಮೆಕ್‌ಮಿಲನ್‌ರೇ

ಚಾಲಕರು. ನಾನು ಮಗ್ಗುಲಲ್ಲಿ ಕುಳಿತೊಡನೆ ಬಾಗಿಲು ಮುಚ್ಚಿಕೊಂಡು ಕಿಟಕಿಯ ಗಾಜನ್ನು ಮೇಲಕ್ಕೇರಿಸುವ ಪ್ರಯತ್ನ ಮಾಡಿದೆ. ಮೆಕ್‌ಮಿಲನ್ ಇರಲಿ ಬಿಡಿ, ನಾನು ನೋಡಿಕೊಳ್ಳುತ್ತೇನೆ' ಎಂದವರೇ ತಮ್ಮ ಸೀಟಿನ ಬಳಿ ಇದ್ದ ಗುಂಡಿಯೊಂದನ್ನು ಒತ್ತಿದರು—ಗಾಜು ಮುಚ್ಚಿಕೊಂಡಿತು. ಅವರು "ನಾನು ಇಲ್ಲಿಂದಲೇ ಎಲ್ಲ ಬಾಗಿಲು ಕಿಟಕಿಗಳನ್ನೂ ಮುಚ್ಚುವುದು ತೆಗೆಯುವುದೂ ಸಾಧ್ಯ, ರಾಯರೆ; ಇದು ಕ್ಯಾಡಿಲಾಕ್ ಕಾರು" ಎಂದರು. ಅವರು ಈ ಮಾತಿಗೆ ನನ್ನಿಂದ ಏನಾದರೂ ಪ್ರತಿಕ್ರಿಯೆಯನ್ನು ನಿರೀಕ್ಷಿಸಿಯಾರೆಂದು ನನಗೆ ತೋರಲಿಲ್ಲ. 'ಹಾಗೇನು' ಎಂದು ಲೋಕಾಭಿರಾಮವಾಗಿ ಹೇಳಿ ಸುಮ್ಮನಾದೆ. ನಾನು ಭಾರತಕ್ಕೆ ವಾಪಸು ಬಂದು ಕೆಲವು ತಿಂಗಳಾದ ಮೇಲೆ ನ್ಯಾನ್ಸಿ ಹೇಳಿದಳು : 'ನನ್ನ ತಂದೆ ಕ್ಯಾಡಿಲಾಕ್ ಕಾರನ್ನು ಕೊಂಡೆ' ಎಂದು ಕಾಗದ ಬರೆದಿದ್ದರು. ನನ್ನ ಉತ್ತರದಲ್ಲಿ ಅದರ ಪ್ರಸ್ತಾಪ ಮಾಡಲಿಲ್ಲ. ಅವರು ಮುಂದಿನ ಕಾಗದದಲ್ಲಿ ನೀನು 'ಕ್ಯಾಡಿಲಾಕ್ ವಿಷಯ ಏನೂ ಬರೆಯಲೇ ಇಲ್ಲವಲ್ಲ' ಎಂದು ಅಕ್ಷೇಪಿಸಿದರು, ಎಂದು. ಆಗ ಆ ಕಾರಿನ ವಿಷಯ ನಾನು ಏನಾದರೂ ಪ್ರಶಂಸೆಯ ಮಾತಾಡಬೇಕಾಗಿತ್ತು ಅನ್ನಿಸಿತು ! ಹಿಂದೆ ಒಂದೆರಡು ಸಾರಿ ಇಂಥ ಸಂದರ್ಭಗಳಲ್ಲಿ ನಾನು ಉದ್ದೇಶಪೂರ್ವಕವಾಗಿ ಆಶ್ಚರ್ಯವನ್ನೂ ತೋರಿಸಿರಲಿಲ್ಲ, ಹೊಗಳಿಕೆಯನ್ನೂ ಸಲ್ಲಿಸಿರಲಿಲ್ಲ. ಈ ಸಲ ಅಂಥ ಉದ್ದೇಶವೇನೂ ಇರಲಿಲ್ಲ—ಹೊಗಳಬೇಕೆಂದು ತೋರಲಿಲ್ಲ. ಅಷ್ಟೆ. ಅಮೆರಿಕದಲ್ಲಿ ಕಾರು ದೊಡ್ಡಸ್ತಿಕೆಯ ಲಾಂಛನವಲ್ಲ, ಆದರೆ ಕ್ಯಾಡಿಲಾಕ್ ಕಾರಿನ ಮಾತು ಬೇರೆ! ಹೊಗಳಿ ಮನಸ್ಸಿಗೆ ಸಂತೋಷ ಕೊಟ್ಟಿದ್ದರೆ ನನ್ನ ಗಂಟೇನೂ ಹೋಗುತ್ತಿರಲಿಲ್ಲ. ನಾವೆಲ್ಲ ಒಂದಲ್ಲ ಒಂದು ಸಲ ಮಕ್ಕಳಂತೆ ಹೊಗಳಿಕೆಯನ್ನು ಬಯಸುತ್ತೇವೆ !

ನಾವು ಮೊದಲು ಹೋದದ್ದು ನ್ಯೂಗ್ಲೇರಸ್‌ಗೆ. ಅದು ಇತಿಹಾಸದ ದೃಷ್ಟಿಯಿಂದ ಬಹಳ ಮುಖ್ಯವಾದ ಊರಂತೆ. ಸುಮಾರು ಒಂದು ಶತಮಾನದ ಕೆಳಗೆ ಸ್ವಿಟ್ಸರ್ಲೆಂಡ್‌ನಿಂದ ಕೆಲವು ಜನ ಬಂದು ಅಲ್ಲಿ ನೆಲಸಿದರಂತೆ. ಮಾತೃಭೂಮಿಯ ನೆನಪು ಸ್ಥಿರವಾಗಿರಲೆಂದು ಅವರು ತಮ್ಮ ಹಳೆಯ ಊರಿನ ಬೀದಿಗಳನ್ನೂ ಮನೆಗಳನ್ನೂ ಅಲ್ಲಿದ್ದಂತೆಯೇ ಇಲ್ಲಿಯೂ ಮಕ್ಕಿ ಕಾ ಮಕ್ಕಿ ಪುನರ್ರಚಿಸಿದರಂತೆ. ಇದು ನನ್ನಲ್ಲಿ ಉತ್ಸಾಹವನ್ನು ಉಕ್ಕಿಸದಿದ್ದರೂ ಬಾಯಲ್ಲಿ "ನೋಡಿದಿರ ! ಯಾರ ಆಸಕ್ತಿಯನ್ನಾದರೂ ಕೆರಳಿಸೀತು, ಇಂಥ ಊರು ! ನನಗೆ ಏಕಕಾಲದಲ್ಲಿ ಅಮೆರಿಕದಲ್ಲೂ ಸ್ವಿಟ್ಸರ್ಲೆಂಡ್‌ನಲ್ಲೂ ಇದ್ದಂತೆ ಅನುಭವವಾಗುತ್ತಿದೆ" ಎಂದು ಉದ್ಗರಿಸಿದೆ. ಗ್ರಾಮಡೆಟ ನನ್ನ ಆಸಕ್ತಿಯನ್ನು ಕಂಡು

ಸಂತೋಷಪಟ್ಟರು. ಪ್ರಸಿದ್ಧಿ ಪಡೆದ ಕ್ಯೂರಿಯೊ ಅಂಗಡಿಯೊಂದಕ್ಕೆ ಭೇಟಿ ಕೊಟ್ಟು ಅಲ್ಲಿದ್ದ ಸಾಮಾನುಗಳನ್ನೆಲ್ಲ ನೋಡಿದ್ದಾಯಿತು. ಅಂಗಡಿಯವನು ಒಂದು ಮಾದರಿಯ ತಾಮ್ರದ ಚೆಂಬಿನ ಕಡೆಗೆ ನನ್ನ ಗಮನವನ್ನು ಸೆಳೆದ. ಅದು 19ನೆಯ ಶತಮಾನದ ಸ್ವಿಟ್ಸರ್ಲೆಂಡಿನ ವೈಶಿಷ್ಟ್ಯವಂತೆ, ಬೆಲೆ 25 ಡಾಲರು. ನಾನು ಅದನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅದು ನಮ್ಮ ಮೈಸೂರಿನ ಮನೆಯಲ್ಲಿ ಸ್ನಾನಕ್ಕಾಗಿ ಬಳಸುತ್ತಿದ್ದ ಚೆಂಬಲ್ಲ ಎಂದು ದೃಢಪಡಿಸಿಕೊಂಡೆ. ಅದು ಇಷ್ಟು ದೂರ ಪ್ರಯಾಣಮಾಡಿ ಬಂದಿರಲಾರದು!

ಮಿನರಲ್ ಪಾಯಿಂಟನ್ನು ನಮಗೆ ತೋರಿಸಲೇ ಬೇಕೆಂದು ಗ್ರಾಮಡೆಟ ದೃಢ ನಿಶ್ಚಯ ಮಾಡಿಕೊಂಡಿದ್ದರು. ಐತಿಹಾಸಿಕ ದೃಷ್ಟಿಯಿಂದ ಅದು ನೋಡಬೇಕಾದ ಸ್ಥಳ. ಪುರಾತನ ಕಾಲದಲ್ಲಿ (ಅಮೆರಿಕದಲ್ಲಿ ಪುರಾತನಕಾಲ ಎಂದರೆ ಒಂದಲ್ಲ ಎರಡಲ್ಲ, 100–150 ವರ್ಷಗಳ ಹಿಂದೆ!) ಅಲ್ಲಿ ಸೀಸದ ಗಣಿಗಳಿದ್ದವು. ಸೀಸವನ್ನು ಅಗೆದು ತೆಗೆಯಲು ಇಂಗ್ಲೆಂಡಿನ ಕಾರ್ನ್‌ವಾಲ್ (Cornwall—ಅಲ್ಲಿಯ ತವರದ ಗಣಿಗಳು ಪ್ರಸಿದ್ಧ)ನಿಂದ ಗಣಿ ಕೆಲಸಗಾರರನ್ನು ಕರೆಸಿದ್ದರಂತೆ. ಕಾಲರಾಯ ಇನ್ನೂ ಹಸುಗೂಸಾಗಿದ್ದಾಗ, ನಾಗರಿಕತೆ ಇನ್ನೂ ಭ್ರೂಣಾವಸ್ಥೆಯಲ್ಲಿದ್ದಾಗ, ಒಂದೂವರೆ ಶತಮಾನದ ಕೆಳಗೆ ತಮ್ಮ ದೇಶದಿಂದ ಮತ್ತೊಂದಕ್ಕೆ—ಅಲ್ಲಿ ಯಾವ ಹುಲಿ ಕರಡಿಗಳಿವೆಯೊ ಯಕ್ಷಕಿನ್ನರ ರಾಕ್ಷಸರಿದ್ದಾರೆಯೋ ಎಂಬ ಹೆದರಿಕೆಗೆ ಮಣಿಯದೆ ನಾಲ್ಕಾರು ಸಾವಿರ ಮೈಲಿ ಸಮುದ್ರವನ್ನು ದಾಟಿ ಬಂದರು, ಆ ಜನ! ತಮಗೆ ಅನಾದಿ ಕಾಲದಿಂದ ಒಗ್ಗಿ ಬಂದಿದ್ದ ಸ್ವೀಯ ತವರದ ಧೂಳನ್ನು ಬಿಟ್ಟು ಅಲ್ಲಿ ಆ ಪರಕೀಯ ಸೀಸದ ಧೂಳನ್ನು ಸೇವಿಸಬೇಕಾಯಿತು. ತಾಳು ಕಂಬನಿಯೆ, ತುಂಬು ಕಂಬನಿಯು, ಗಣಿಯ ಕಾರ್ಮಿಕರ ಬವಣೆಗೆ!

ಅಲ್ಲಿ ಒಂದು ಮ್ಯೂಸಿಯಂ ಏರ್ಪಡಿಸಿದ್ದಾರೆ. ಅದರಲ್ಲಿ ಹಿಂದೆ ಕಾರ್ಮಿಕರು ಬಳಸಿದ ಚಮಚ, ಸೌಟು, ಊಟದ ಗಂಗಾಳ—ಇವೆಲ್ಲ ಇನ್ನೂ ಅಚ್ಚಳಿಯದೆ ಉಳಿದು ಪ್ರವಾಸಿಗರಿಗೆ ರೋಮಾಂಚನವನ್ನೂ ಮಾಲೀಕರಿಗೆ ಕಾಂಚನವನ್ನೂ ತರುತ್ತಿವೆ. ಅಗೋ ಅದೇ ಆಗ ನೆಲವನ್ನಗೆದ ಗುದ್ದಲಿ, ಆಗ ಕಮ್ಮಾರನ ಕೈಯಲ್ಲಿದ್ದ ಸುತ್ತಿಗೆ; ಅದೇ ಕಲ್ಲಿನ ಮೇಲೆ ಆ ಮನೆಯ ಮಾಲೀಕ ಕೂತು ಆಗ ತಂಬಾಕು ಸೇವಿಸುತ್ತಿದ್ದ! This is tne house that Jack built; this is the rat that lived in the house that Jack built*

* ಇದೊಂದು ಮಕ್ಕಳಿಗಾಗಿ ಕಟ್ಟಿದ ಕವನ.

(ಇದೇ ಜಾಕ್ ಕಟ್ಟಿದ ಮನೆ. ಇದೇ ಜಾಕ್ ಕಟ್ಟಿದ ಮನೆಯಲ್ಲಿ ವಾಸಿಸುತ್ತಿದ್ದ ಹೆಗ್ಗಣ).

ಮಿನರಲ್ ಪಾಯಿಂಟು ನನ್ನ ಮೇಲೆ ಬೀಸಿದ ಸಂಮೋಹಜಾಲದಿಂದ ಹೇಗೋ ಬಿಡುಗಡೆ ಪಡೆದು ಅಲ್ಲಿಂದ 'ಬಂಡೆಯ ಮೇಲಿನ ಮನೆ'ಯನ್ನು ನೋಡಹೋದೆವು. ಬಯಲಿನಿಂದ ಹಠಾತ್ತಾಗಿ ಎದ್ದ ಎತ್ತರವಾದ ದೈತ್ಯ ಪ್ರಮಾಣದ ಬಂಡೆಯ ಆಕಾರವನ್ನೇ ಅನುಸರಿಸಿ ಕಟ್ಟಿದ ಆ ಮನೆ ನಿಜವಾಗಿ ನೋಡಬೇಕಾದ್ದು. 'ಹೀಗೆ ಕಟ್ಟಬೇಕು' ಎಂದು ಯಾರೂ ಯೋಜನೆ ಹಾಕಿ ನಕ್ಷೆ ಬರೆದುಕೊಂಡು ಕಟ್ಟಿದಂತಿಲ್ಲ, ಆ ಮನೆ. ಅಲ್ಲಲ್ಲೆ ಜ್ಯಾಮಿತಿಸಮ್ಮತವಾದ ಚೌಕಕೊಠಡಿಗಳಿವೆಯಾದರೂ ಅದು ಬಹುಮಟ್ಟಿಗೆ ಮದ್ಯಮತ್ತವಾದ ಹಾವೊಂದು ಹರಿದಂತೆ ಎಲ್ಲೆಲ್ಲೋ ಹರಿದಿದೆ. ವಿನ್ಯಾಸದ ಅನಿರೀಕ್ಷಿತತೆಯಿಂದಾಗಿ ಅದು ಆಕರ್ಷಕವಾಗಿದೆ. ಅದರೊಳಗಿರುವ ಮ್ಯೂಸಿಯಮ್ಮನ್ನು ಯೋಜಿಸಿದವನು ನಿಜವಾಗಿ ಪ್ರತಿಭಾಶಾಲಿ. ಯೂರೋಪಿನಿಂದ ಜನ ಅಮೆರಿಕಕ್ಕೆ ಹೊಸದಾಗಿ ವಲಸೆ ಬಂದರಲ್ಲ, ಆ ಕಾಲದಲ್ಲಿ ಕಟ್ಟಿದ—ಅಥವಾ 'ಕಟ್ಟಿದ' ಎನ್ನುವುದಕ್ಕಿಂತ 'ಅಸ್ತಿತ್ವಕ್ಕೆ ಬಂದ' ಎನ್ನುವುದೇ ಸರಿ! ಊರೊಂದರ ಪ್ರತಿಕೃತಿಯಿದೆ, ಆ ಮ್ಯೂಸಿಯಮ್ಮಿನಲ್ಲಿ. ಆಗ ಇದ್ದಂತೆಯೇ ರಸ್ತೆ, ಮನೆಗಳ ಸಾಲು, ಬೀದಿಯಲ್ಲಿ ನಿಂತಿರುತ್ತಿದ್ದ ವಾಹನಗಳು, ಮನೆಯೊಳಗೆ ಅಡಿಗೆಮನೆ ಬಚ್ಚಲುಮನೆ ಇತ್ಯಾದಿಗಳ ವಿನ್ಯಾಸ, ಬೀದಿಯಲ್ಲೊಂದು ಕಡೆ ಕಮ್ಮಾರನ ಕುಲುಮೆ (ಕಮ್ಮಾರನ ಪ್ರತಿಮೆಯೂ ಇದೆ)—ಇದೆಲ್ಲದರ ಪುನರ್ರಚನೆ ಅಲ್ಲಿದೆ. ಅದು ಕೇವಲ ವಸ್ತುಸಂಗ್ರಹಮಾಡುವ ಮ್ಯೂಸಿಯಮ್ ಅಲ್ಲ— ಕಾಲಸಮುದ್ರದಲ್ಲಿ ಎಂದೋ ಮುಳುಗಿಹೋದ ಜೀವನ ನಮ್ಮೆದುರಿಗೆ ಮತ್ತೆ ಜೀವಂತವಾದಂತೆ ಭಾಸವಾಗುತ್ತದೆ.

ಷೆಡ್ಯೂಲಿಗನುಸಾರವಾಗಿ ನೋಡಬೇಕಾಗಿದ್ದ ಗುಹೆಗೂ ಹೋದೆವು. ಶತಮಾನಕ್ಕೊಂದು ಸೆಂಟಿಮೀಟರಿನಂತೆ ಮೇಲಿನಿಂದ ಇಳಿಯುವ ಮತ್ತು ಕೆಳಗಿನಿಂದ ಏರುವ ಸ್ಟ್ಯಾಲಕ್ಟೈಟ್ ಮತ್ತು ಸ್ಟ್ಯಾಲಗ್ಮೈಟ್‌ಗಳನ್ನು (stalactites and stalagmites—ದ್ರವ ಘನಿಸಿದ್ದರಿಂದಾಗುವ ಶಿಲೆ) ನಾನು ನೋಡಿರಲಿಲ್ಲ. ಅದೊಂದು ಹೊಸ ಅನುಭವ. ಗುಹೆಯೊಳಗೆ ಬೆಳಕನ್ನು ಆಡಿಸಿದಾಗ ರತ್ನಭಂಡಾರವೊಂದು ಬಿರಿದು ವಜ್ರ ವೈಢೂರ್ಯ ಪಚ್ಚೆ ನೀಲಗಳು ದಿಕ್ಕಾಪಾಲಾಗಿ ಕಿಡಿಯಂತೆ ಹಾರಿದ ಅನುಭವವಾಗುತ್ತದೆ. ಇತ್ತೀಚೆಗೆ ಅದಕ್ಕಿಂತ ಹೆಚ್ಚು ವೈವಿಧ್ಯವುಳ್ಳ ಮತ್ತು ಸುಂದರವಾದ ಗುಹೆಗಳನ್ನು ನೋಡಿದ್ದೇನೆ. ಆದರೆ ಆ ಪ್ರಥಮದರ್ಶನ ಕೊಟ್ಟ ಆನಂದ ಇನ್ನೂ

ನೆನಪಿನಲ್ಲಿದೆ.

ಸಣ್ಣದೊಂದು ಸರೋವರದ ದಡದಲ್ಲಿ ಊಟವನ್ನು ಮುಗಿಸಿದೆವು. ಗ್ರಾಮಡೆಟ ಒಳ್ಳೇ ರುಚಿಕರವಾದ ಊಟವನ್ನು ತಯಾರಿಸಿ ತಂದಿದ್ದರು— ಸ್ಯಾಲಡ್, ಬ್ರೆಡ್ ಮತ್ತು ಜಾಮ್ (ಅವರೇ ಮಾಡಿದ್ದು), ಹಣ್ಣುಗಳು, ಫ್ರೆಂಚ್‌ಫ್ರೈ. ಸಂಜೆ ನಮ್ಮನ್ನು ಮನೆಗೆ ಬಿಟ್ಟು ಅವರು ತಮ್ಮ ಮೋಟಲಿಗೆ ಹೋದರು. ಬೆಳಗ್ಗೆ ಹೊತ್ತಿಗೆ ಮುಂಚೆ ಅವರು ಲಿಂಕನ್‌ಗೆ ಹೊರಡುವ ಏರ್ಪಾಡು ಮಾಡಿಕೊಂಡಿದ್ದರು. ನಾವು ಅಲ್ಲಿಗೆ ಹೋಗುವ ಕಾಲ ಅನಿಶ್ಚಿತ ವಾಗಿಯೇ ಉಳಿಯಿತು

## ಅಮೆರಿಕದಲ್ಲಿ ಸ್ವಾತಂತ್ರ್ಯಘೋಷಣೆಯ 20ನೇ ವರ್ಷವರ್ಧಂತಿ

"ಎಲ್ಲ ಮಾನವರೂ ಸಮಾನರಾಗಿಯೇ ಸೃಷ್ಟಿಯಾದವರು; ಸೃಷ್ಟಿಕರ್ತ ಅವರೆಲ್ಲರಿಗೂ ಅನ್ಯಾಕ್ರಾಂತವಾಗಲಾರದ ಕೆಲವು ಹಕ್ಕುಗಳನ್ನು ಕೊಟ್ಟಿದ್ದಾನೆ; ಅವುಗಳಲ್ಲಿ ಜೀವಿಸಿರುವ ಹಕ್ಕೂ ಸ್ವಾತಂತ್ರ್ಯದ ಹಕ್ಕೂ ಸುಖವನ್ನು ಸಾಧಿಸುವ ಹಕ್ಕೂ ಸೇರಿವೆ—ಇವೆಲ್ಲ ಸ್ವತಸ್ಸಿದ್ಧವಾದ ಸತ್ಯಗಳು ಎಂದು ನಮ್ಮ ದೃಢವಾದ ನಂಬಿಕೆ." (We hold these truths to be self–evident, that all men are created equal, that they are endowed by their creator with certain inalienable rights, that among these are life, liberty, and the pursuit of happiness.)

ಈ ವಾಕ್ಯ—ಅಮೆರಿಕದ ಸಂಯುಕ್ತ ಸಂಸ್ಥಾನಗಳ ಸ್ವಾತಂತ್ರ್ಯ ಘೋಷಣೆಯಲ್ಲಿ (Declaration of Independence ನಲ್ಲಿ) ಎರಡನೆಯ ವಾಕ್ಯ—ಈಗ ಜಗತ್ಪ್ರಸಿದ್ಧವಾಗಿದೆ. ಈ ಘೋಷಣೆಯನ್ನು ಬರೆದವನು ಜೆಫರ್ಸನ್. 1776 ರ ಜುಲೈ 4ರಲ್ಲಿ ಅದಕ್ಕೆ ಹದಿಮೂರು ರಾಜ್ಯಗಳ ಪ್ರತಿನಿಧಿಗಳು ರುಜುಮಾಡಿದರು. 1976ರ ಜುಲೈ ನಾಲ್ಕನೇ ತಾರೀಖು ಆ ಘೋಷಣೆಯ 200ನೆಯ ವರ್ಧಂತಿ. ಅವತ್ತೂ ಅಮೆರಿಕನ್ ಪತ್ರಿಕೆಗಳೆಲ್ಲಾ ಅದರ ಪುನರಾವರ್ತನೆ ಮಾಡಿದವು. ರೇಡಿಯೊ ಟೀವಿಗಳು ಅದನ್ನು ಪ್ರಸಾರ ಮಾಡಿದವು. ಇಲ್ಲಿಗೆ (ಜೇನ್ಸ್‌ವಿಲ್‌ಗೆ) ಹತ್ತಿರದಲ್ಲಿರುವ ಮಿಲ್ವಾಕಿ (Milwaukee)ಯಲ್ಲಿ ಅದನ್ನು ಮತ್ತೆ ಬರೆದು ವಿಸ್ಕಾನ್ಸಿನ್ ರಾಜ್ಯದ ಇಂದಿನ ಪ್ರತಿನಿಧಿಗಳೂ

ಪ್ರಮುಖರೂ ಅದಕ್ಕೆ ರುಜುಮಾಡಿದರು. ಈ ಜನಾಂಗ ತನ್ನ ಅಭ್ಯುದಯ ವನ್ನು ನೆನೆದು 'ಎರಡು ಶತಮಾನಗಳ ಹಿಂದಿನ ಆದರ್ಶದಲ್ಲಿ ಇಂದೂ ಜೀವ ತುಂಬಿ ತುಳುಕುತ್ತಿದೆ' ಎಂದು ಕುಣಿದು ಕುಪ್ಪಳಿಸುತ್ತಿದೆ. ಮಾತ್ರವಲ್ಲ, ಪಡೆದದ್ದನ್ನು ಉಳಿಸಿಕೊಳ್ಳಬೇಕು, ಇನ್ನೂ ಪಡೆಯಬೇಕಾದ್ದನ್ನು ಸಾಧಿಸಲು ಸಂತತವಾದ ಪ್ರಯತ್ನ ನಡಸುತ್ತಿರಬೇಕು, ಎಂದು ತನ್ನನ್ನು ತಾನು ಎಚ್ಚರಿಸಿ ಕೊಳ್ಳುತ್ತಲೂ ಇದೆ. ಜೇನ್ಸ್‌ವಿಲ್‌ನಲ್ಲೂ ಉತ್ಸವದ ಸಡಗರ, ರಾತ್ರಿ ಎಲ್ಲೆಲ್ಲೂ ಮತಾಪು, ನಕ್ಷತ್ರಬಾಣ, ಆಕಾಶಬಾಣ. ಹೂಬಾಣ, ಕತ್ತಲಿನ ಒಡಲಿನಿಂದ ಹಠಾತ್ತಾಗಿ ಸಾವಿರ ಹೂವು ಅರಳಿವೆ. ತಮಸ್ಸಿನಿಂದ ಜ್ಯೋತಿಯ ವೃಷ್ಟಿ!

ಆದರೆ ಆ ವೃಷ್ಟಿ ನೆಲದವರೆಗೂ ಬರಲೊಲ್ಲದು. ಆ ಹೂವುಗಳು ಕತ್ತಲ ವೊಗ್ಗಿನಿಂದ ಅರಳಿ ಮತ್ತೆ ಕತ್ತಲಿನಲ್ಲೇ ಲೀನವಾಗುತ್ತವೆ. ಈ ಹೂಬಾಣ ಗಳ ಹಣೆಬರಹವೇ ಇಷ್ಟು. ಅವು ಮಾನವನ ಆತ್ಮವಂಚನೆಯ ಪ್ರತೀಕ. ನಾವು ಸೃಷ್ಟಿಸಿದ್ದು, ನಾವು ಕಂಡದ್ದು, ತಮಸ್ಸಿನ ಆಚೆಯಿರುವ ಆದಿತ್ಯವರ್ಣದ ಮಹಾಪುರುಷನ ಪ್ರಭಾಮಂಡಲವಲ್ಲ, ಕೇವಲ ಹೂಬಾಣ! ಅದು ಅರಳಿದಾಗ ಸುಂದರವಾಗಿ ಕಂಡಿತು. ಆದರೆ ಮಾನವನ ಉದ್ಧಾರವಾಗಬೇಕಾದರೆ ಈ ಗಗನಕುಸುಮದಿಂದಲ್ಲ. ಅರಳಬೇಕಾದದ್ದು ಹೃದಯಕುಸುಮ. ಅದು ಇನ್ನೂ ಅರಳಿಲ್ಲ.

ಸ್ವಾತಂತ್ರ್ಯಕ್ಕಾಗಿ ಫ್ರಾನ್ಸ್ ಮಹಾಕ್ರಾಂತಿಯನ್ನು ನಡಸಿತು. ಸಾಮಾನ್ಯಮಾನವನಿಗೆ ಮಾನವತೆಯ ಹಕ್ಕು ಲಭಿಸಬೇಕಾದರೆ ಕ್ರಾಂತಿ ಅಲ್ಲದೆ ಬೇರೆ ಮಾರ್ಗವಿಲ್ಲ ಎಂದೇ ಆಗ ಅನೇಕರಿಗೆ ತೋರಿತು. ಆ ಅರುಣೋದಯಕಾಲದಲ್ಲಿ ಬದುಕಿದ್ದದ್ದೇ ಒಂದು ಮಹದಾನಂದ, ಯುವಕ ರಾಗಿದ್ದದ್ದಂತೂ ಸಾಕ್ಷಾತ್ ಸ್ವರ್ಗ, ಎಂದು ಕವಿಗಳು ಹಾಡಿದರು. ಆದರೆ ಕ್ರಾಂತಿಕಾಲದಲ್ಲಿ ಅದೆಷ್ಟು ನಿರಪರಾಧಿ ಜನರ ರಕ್ತ ಹರಿಯಿತೊ! ಆ ಹೊಳೆ ಯಲ್ಲಿ ಚಾತುರ್ಯದಿಂದ ಹರಿಗೋಲು ನಡಸಿಕೊಂಡು ಬಂದು ಪಟ್ಟಭದ್ರ ನಾದವನು ಸ್ವಾತಂತ್ರ್ಯಪುರುಷನಲ್ಲ, ನೆಪೋಲಿಯನ್. ರಷ್ಯದಲ್ಲೂ ಅದೇ ಕಥೆ, ರಕ್ತಪಾತ, ಸರ್ವಾಧಿಕಾರಿಗಳ ಅವತಾರ. ಬ್ರಿಟಿಷರು ಸ್ವಾತಂತ್ರ್ಯಕ್ಕಾಗಿ ಯಾದವೀ ಯುದ್ಧ ನಡಸಿದರು, ಒಬ್ಬ ದೊರೆಯ ತಲೆ ಕಡಿದರು. ಆದರೆ ತಾವು ಪಡೆದ ಸ್ವಾತಂತ್ರ್ಯವನ್ನು ನೆರೆಯ ಐರ್ಲೆಂಡಿಗೆ ಕೊಡಲೊಪ್ಪಲಿಲ್ಲ. ಅಲ್ಲದೆ ಭಾರತೀಯರ ಮತ್ತು ಇತರರ ಸ್ವಾತಂತ್ರ್ಯವನ್ನು ಅಪಹರಿಸಿ ಪ್ರಪಂಚ ದಲ್ಲಿ ಕಾಲುಭಾಗವನ್ನು ಆಕ್ರಮಿಸಿಕೊಂಡು ಚಕ್ರಾಧಿಪತ್ಯ ಕಟ್ಟಿದರು. ಅದು

ಅಪರಾಧವೆಂಬ ಅರಿವೂ ಅವರಿಗಿರಲಿಲ್ಲ. 'ನಮ್ಮ ಚಕ್ರಾಧಿಪತ್ಯದ ಮೇಲೆ ಸೂರ್ಯಾಸ್ತವಿಲ್ಲ' ಎಂದು ಜಂಬ ಕೊಚ್ಚಿದರು. ಅಟ್ಲಾಂಟಿಕ್ ಚಾರ್ಟರ್ (Atlantic Charter) ಘೋಷಿಸುವುದರಲ್ಲಿ ಭಾಗಿಯಾದ ವಿನ್‌ಸ್ಟನ್ ಚರ್ಚಿಲ್ ಅದನ್ನು ಭಾರತಕ್ಕೆ ಅನ್ವಯಿಸಲೊಲ್ಲದೆ "ನಾನು ದೊರೆಯ ಪ್ರಧಾನಮಂತ್ರಿಯಾದದ್ದು ಬ್ರಿಟಿಷ್ ಚಕ್ರಾಧಿಪತ್ಯದ ಅಂತ್ಯಕ್ರಿಯಾ ಸಮಾರಂಭದಲ್ಲಿ ಅಧ್ಯಕ್ಷತೆ ವಹಿಸಲೆಂದಲ್ಲ!" ಎಂದು ನಿರ್ದಾಕ್ಷಿಣ್ಯವಾಗಿ ಹೇಳಿದ.

ನಾವು, ಭಾರತೀಯರು, ಮಾನವ ತನ್ನಲ್ಲಿ ಸರ್ವಭೂತಗಳನ್ನೂ ಸರ್ವಭೂತಗಳಲ್ಲಿ ತನ್ನನ್ನೂ ಕಾಣಬೇಕೆಂಬ ತತ್ವವನ್ನು ಪ್ರತಿಪಾದಿಸಿದವರು. 'ಸರ್ವಭೂತ'ಗಳಲ್ಲಿ ಹರಿಜನರನ್ನು ಸೇರಿಸಲಾರದೆ ಹೋದೆವು. ಮಾನವನ ಹೃದಯಪುಷ್ಪ (ಅಲ್ಲೊಬ್ಬ ಕ್ರಿಸ್ತ, ಇಲ್ಲೊಬ್ಬ ಗಾಂಧಿ ಹೀಗೆ ಕೆಲವರನ್ನು ಮರೆತರೆ) ಎಲ್ಲಿಯೂ ಅರಳಿಲ್ಲವೇನೊ!

ಇನ್ನು ತಮ್ಮ ಸ್ವಾತಂತ್ರ್ಯದ ದ್ವಿತೀಯ ಶತಮಾನೋತ್ಸವವನ್ನು ವಿಜೃಂಭಣೆಯಿಂದ ಆಚರಿಸುತ್ತಿರುವ ಅಮೆರಿಕನ್ನರ ಕಥೆಯೇನು? ವಿಯಟ್ನಾಮ್ ಯುದ್ಧದ ಭಯಂಕರ ನೆನಪು ಇನ್ನೂ ಹಸಿಯಾಗಿದೆ. ಅದಿರಲಿ. ಇಂಗ್ಲೆಂಡಿನಲ್ಲಿ ದೊರೆಯದಿದ್ದ ಮತಸ್ವಾತಂತ್ರ್ಯವನ್ನು ಪಡೆಯಲು 17ನೆಯ ಶತಮಾನದಲ್ಲಿ ಅಮೆರಿಕಕ್ಕೆ ಬಂದ 'ಪಿಲ್‌ಗ್ರಿಮ್ ಫಾದರ್ಸ್' (Pilgrim Fathers) "ಮೊದಲು (ದೇವರಿಗೆ ಕೃತಜ್ಞತೆ ಸಲ್ಲಿಸುವುದಕ್ಕಾಗಿ) ಮೊಣಕಾಲ ಮೇಲೆ ಬಿದ್ದರು, ಅನಂತರ ಆದಿವಾಸಿಗಳ ಮೇಲೆ ಬಿದ್ದರು."(They fell on their knees, and then upon the aborigines). ಇದು ಅಮೆರಿಕನ್ನರೇ ಹಾರಿಸುತ್ತಿದ್ದ ಹಾಸ್ಯಚಟಾಕಿ!

ಮಾರನೆಯ ದಿನ ಒಂದು ವೃತ್ತಪತ್ರಿಕೆಯಲ್ಲಿ 200ನೇ ವರ್ಷ ವರ್ಧಂತಿಯ ಉತ್ಸವಗಳ ಬಣ್ಣನೆಯಿದ್ದ ಪುಟದಲ್ಲೇ ಈ ವಾಕ್ಯವನ್ನು ಕಂಡೆ: "ಸ್ವಾತಂತ್ರ್ಯ ಘೋಷಣೆಯಲ್ಲಿ ಎಲ್ಲೂ ಅಮೆರಿಕನ್ ಇಂಡಿಯನ್ನರ ಮಾತಿಲ್ಲ. ಜನಾಂಗದೊಳಗಿನ ಈ ಜನಾಂಗದ ಮಟ್ಟಿಗೆ ಸ್ವಾತಂತ್ರ್ಯಸಮರ ಇನ್ನೂ ನಡೆಯುತ್ತಿದೆ." (Nowhere in the Declaration of Independence is there mention of the American Indian. For this nation within a nation, the battle for independence is still being fought) ತನ್ನ ಗ್ಯಾಸ್ ಸ್ಟೇಷನ್ನಿನಲ್ಲಿ ಕಾರುಗಳಿಗೆ ಗ್ಯಾಸ್ (ಪೆಟ್ರೋಲ್) ತುಂಬುತ್ತಿದ್ದ ವೆಯ್ನ್ ರೈಟರ್ ಎಂಬವನು ಹೇಳಿದನಂತೆ:

"ಇದು ಬಿಳಿಯ ಜನರ ಹಬ್ಬ. ಅಷ್ಟೆ, ಅದರ ಯೋಗ್ಯತೆ! ನಾನು ಅದನ್ನು ಆಚರಿಸುವುದಿಲ್ಲ." (It's just a white man's holiday—that's al it is. I won't be celebrating it.) ಬಿಳಿಯ ಗಂಡನನ್ನು ಮದುವೆಯಾಗಿದ್ದ ಮಿನೋಮಿನಿ ಇಂಡಿಯನ್ ಮಹಿಳೆಯೊಬ್ಬಳು ಪ್ರೆಸಿಡೆಂಡ್ ಫೋರ್ಡರು ಅಮೆರಿಕನ್ ಜನಾಂಗವನ್ನು ಸಂಬೋಧಿಸಿ ಪ್ರಸಾರ ಮಾಡಿದ ಭಾಷಣದಲ್ಲಿ ಅಮೆರಿಕನ್ ಇಂಡಿಯನ್ನರ ಹೆಸರು ಸಹ ಇರಲಿಲ್ಲ, ಎಂದು ಆಕ್ಷೇಪಿಸಿದಳಂತೆ.

ನಿಜವಾಗಿ ಆ ದಿನ ಟೀವಿಯಲ್ಲಿ ಭಾಗವಹಿಸಿದ ಕೆಲವರಿಗಾದರೂ ಮನಸ್ಸಿನಲ್ಲಿ ಸ್ವಲ್ಪ ಅಳುಕು ಇದ್ದಂತೆ ತೋರಿತು. ತಾವು ಅಷ್ಟೊಂದು ಧಾರಾಳವಾಗಿ ಓಡಾಡಿಸುತ್ತಿದ್ದ ಸ್ವಾತಂತ್ರ್ಯದ ಮಾತಿಗೂ ಇಂಡಿಯನ್ನರ ವಿಷಯದಲ್ಲಿ ಬಿಳಿಯ ಜನ ನಡೆದುಕೊಂಡ ರೀತಿಗೂ ಹೊಂದಿಕೆಯಿಲ್ಲವೆಂಬ ಅರಿವು ಅವರಲ್ಲಿ ಇದ್ದಿರಬೇಕು. ಒಂದು ಸಾರಿ ಇಬ್ಬರು (ವಾಲ್ಟರ್ ಕ್ರಾಂಕೈಟ್ ಮತ್ತು ಇನ್ನೊಬ್ಬರು ಎಂದು ನೆನಪು) ಇಂಡಿಯನ್ನರ ಪ್ರಸ್ತಾಪ ಮಾಡಿದರು. ಅವರು ಬಿಳಿಯ ಅಮೆರಿಕನ್ನರ ವರ್ತನೆಯನ್ನು ಸಮರ್ಥಿಸುವ ಸಾಹಸಕ್ಕೆ ಕೈಹಾಕಲಿಲ್ಲ. ಅಮೆರಿಕದ ನದಿ, ಪಟ್ಟಣ, ರಾಜ್ಯ ಮುಂತಾದುವುಗಳ ಹೆಸರುಗಳಲ್ಲಿ ಅರ್ಧಭಾಗ ಇಂಡಿಯನ್ ಹೆಸರುಗಳು (ಮಸ್ಕೀಗನ್, ಮಿಷಿಗನ್, ಇಲ್ಲಿನಾಯ್, ಮ್ಯಾಸಚೂಸೆಟ್ಸ್, ಇತ್ಯಾದಿ) ಎಂದು ಹೇಳಿ ತೃಪ್ತರಾದರು.

ಒಬ್ಬರಿಬ್ಬರು ಕಪ್ಪುಜನರ* ಕಷ್ಟವನ್ನೂ ಅದನ್ನು ನಿವಾರಿಸಲು ಇದುವರೆಗೆ ನಡೆದಿರುವ ಪ್ರಯತ್ನವನ್ನೂ ಪ್ರಸ್ತಾಪಿಸಿದರು. ಇಂಡಿಯನ್ನರಿಗಾದಷ್ಟಲ್ಲದಿದ್ದರೂ ಕಪ್ಪು ಜನರಿಗೂ ಸಾಕಷ್ಟು ಅನ್ಯಾಯವಾಗಿದೆಯಷ್ಟೆ. ಆದರೆ ಅವರು ಅಳಿಯುತ್ತಿರುವ ಜನಾಂಗವಲ್ಲ. ಬಿಳಿಯರೊಡನೆ ವ್ಯವಸ್ಥಿತವಾಗಿ ಹೋರಾಡುತ್ತಿದ್ದಾರೆ. ಅಮೆರಿಕನ್ನರು ಗುಲಾಮಗಿರಿಯನ್ನು ತೊಡೆದುಹಾಕಿದ್ದನ್ನೂ ಕು ಕ್ಲುಕ್ಸ್ ಕ್ಲ್ಯಾನನ್ನು (Ku Klux Klan) ಹದಕ್ಕೆ ತಂದದ್ದನ್ನೂ ಹೆಮ್ಮೆಯಿಂದ ಹೇಳಿಕೊಳ್ಳಬಹುದು. ಆದರೆ ಈಗಲೂ ಆ ಜನರು ಸಹಿಸಬೇಕಾದ ಕೋಟಲೆಯಿದೆ. ಎಷ್ಟೋ ಬಿಳಿಯ ಜನರು ಈಗಲೂ 'ನೀಗ್ರೊ' ಎಂದರೆ ಉರಿದುಬೀಳುತ್ತಾರೆ. ನಮ್ಮ ನ್ಯಾನ್ಸಿಯ ಹತ್ತಿರದ ಬಂಧುವೊಬ್ಬರು—ಹಳೆಯ ಕಾಲದವರು, ಮೊನ್ನೆ ಮೊನ್ನೆ ತೀರಿಕೊಂಡವರು—ಹೇಳುತ್ತಿದ್ದ

---

* ಇತ್ತೀಚೆಗೆ 'ನೀಗ್ರೋ' ಎಂಬ ಪದಕ್ಕೆ ಬದಲಾಗಿ 'ಕಪ್ಪುಜನ' ಎನ್ನುವ ಪರಿಪಾಠ ಬಂದಿದೆ.

ರಂತೆ: "ಇದಕ್ಕೆಲ್ಲ (ಅಂದರೆ ಅಮೆರಿಕದಲ್ಲಿ ಅಹಿತವಾದದ್ದು ಏನು ನಡೆದರೂ— ಟಾರ್ನೇಡೊ ಸುಂಟರಗಾಳಿಗಳು, ಭೂಕಂಪ ಇತ್ಯಾದಿಗಳು ಮೊದಲುಗೊಂಡು! —ಅದಕ್ಕೆಲ್ಲ) ಈ ಹಾಳು ನೀಗ್ರೋಗಳೇ ಕಾರಣ! ಅವರನ್ನು ಒದ್ದೋಡಿಸಿ, ಎಲ್ಲ ಸರಿಹೋಗುತ್ತೆ" (It's all because of these bl-y niggers, you know. Kick them out and everything will be all right) ಎಂದು. ಆದರೂ ಅವರ ಸ್ಥಿತಿಯನ್ನು ಉತ್ತಮಗೊಳಿಸುವ ಪ್ರಯತ್ನ ನಡೆಯುತ್ತಿದೆ—ಇಲ್ಲವೆನ್ನುವಂತಿಲ್ಲ. ವರ್ಣೀಯರ ವಿಷಯದಲ್ಲಿ ಅಮೆರಿಕನ್ ನೀತಿ ಬ್ರಿಟನ್ನಿನದಕ್ಕಿಂತ ಉದಾರ ಎಂದು ಎರಡು ದೇಶಗಳನ್ನೂ ಬಲ್ಲ ಜನರು ಹೇಳಿದ್ದನ್ನು ಕೇಳಿದ್ದೇನೆ. ನನಗೆ ಇಂಗ್ಲೆಂಡಿನ ಅನುಭವವಿಲ್ಲ. ಅಮೆರಿಕದಲ್ಲೇನೊ ನನ್ನೊಡನೆ ವ್ಯವಹರಿಸಿದವರೆಲ್ಲ ನನಗೂ ಬಿಳಿಯರಿಗೂ ಯಾವ ಭೇದವೂ ಇಲ್ಲ ಎಂಬಂತೆಯೇ ನಡೆದುಕೊಂಡಿದ್ದಾರೆ. ಆದರೆ ಅವರು ಭಾರತೀಯರಿಗೆ ಕೊಡುವ ಸೌಜನ್ಯವನ್ನು ಕಪ್ಪು ಜನರಿಗೆ ಕೊಡುವುದಿಲ್ಲವಂತೆ. ನಾವು ಯಾರಿಗೆ ಅನ್ಯಾಯ ಮಾಡಿದ್ದೇವೋ ಅವರನ್ನು ಕಂಡರೆ ನಮಗಾಗದಿರುವುದು ಸ್ವಾಭಾವಿಕ; ಆದರೆ ನಮಗಾಗಲಿ ಅನ್ಯಾಯಕ್ಕೆ ಗುರಿಯಾದವರಿಗಾಗಲಿ ಹಿತವಲ್ಲ.

ನನಗೆ ಟೀವಿಯ ವಿಷಯದಲ್ಲಿ ಸ್ವಲ್ಪ ಅಸಡ್ಡೆ; ಆದರೂ ವರ್ಧಂತಿಯ ಉತ್ಸವಗಳಿಗೆ ಸಂಬಂಧಪಟ್ಟ ಸಿ. ಬಿ. ಎಸ್. (C. B. S.—ಕೊಲಂಬಿಯ ಬ್ರಾಡ್‌ಕ್ಯಾಸ್ಟಿಂಗ್ ಸಿಸ್ಟಮ್) ಕಾರ್ಯಕ್ರಮಗಳನ್ನು ಬಹಳ ಆಸಕ್ತಿಯಿಂದಲೇ ನೋಡಿದೆ. ಸತ್ವರಹಿತ, ಜೀವರಹಿತ, ಯಾಂತ್ರಿಕ ಕಾರ್ಯಕ್ರಮಗಳನ್ನೂ, ದರೋಡೆ ಮತ್ತು ಖೂನಿಕೋರರನ್ನು ಕುರಿತ ಕಾರ್ಯಕ್ರಮಗಳನ್ನೂ, ಭಯಾನಕ ಚಿತ್ರಗಳನ್ನೂ (horror pictures), ಕುದುರೆಗಳ ಖುರಪುಟಧ್ವನಿ, ರಿವಾಲ್ವರುಗಳ ಮತ್ತು ಸಬ್‌ಮೆಷೀನ್ ಗನ್ನುಗಳ ರ್‍ಯಾಟ್ ಟ್ಯಾಟ್ ಟ್ಯಾಟ್, ಹೊಳೆಯುವ ಅಲಗು, ಉರುಳುವ ಹೆಣ, ಇತ್ಯಾದಿಗಳೇ ಪ್ರಧಾನವಾಗುಳ್ಳ 'ವೈಲ್ಡ್ ವೆಸ್ಟ್' (wild west) ಕಥೆಗಳನ್ನೂ ನೋಡಿ ಜುಗುಪ್ಸೆಗೊಂಡಿದ್ದ ಮನಸ್ಸು ವಿಚಾರಪ್ರಚೋದಕ ಕಾರ್ಯಕ್ರಮಗಳನ್ನು ಸ್ವಾಗತಿಸಿತು. ಅಮೆರಿಕನ್ ಟೀವಿಯಲ್ಲಿ ಈ ಬಗೆಯ ಕಾರ್ಯಕ್ರಮಗಳು ಬರುತ್ತವೆ, ಪ್ರಸಾರ ಕೌಶಲ ಆಶ್ಚರ್ಯಗೊಳಿಸುವಷ್ಟು ಬೆಳೆದಿದೆ, ಎಂಬುದನ್ನು ಅಲ್ಲಗಳೆಯುವಂತಿಲ್ಲ. ಛಾಯಾಚಿತ್ರ ಕಲೆ, ಸುಸಂಬದ್ಧತೆ, ತರ್ಕಸರಣಿ, ಇವೆಲ್ಲ ಅತ್ಯುತ್ತಮ ಮಟ್ಟದಲ್ಲಿರುವ ಎಷ್ಟೋ ಚಿತ್ರಗಳನ್ನು ನೋಡಿದ್ದೇನೆ. ಈಗಂತೂ ಒಂದು ದೊಡ್ಡ ರಾಷ್ಟ್ರದ ಆರ್ಥಿಕ, ರಾಜಕೀಯ, ಮತ್ತು ಸಾಮಾಜಿಕ ಪ್ರಗತಿ

ಯನ್ನು ತಿಳಿದುಕೊಳ್ಳುವ ಸಂದರ್ಭ. ಹೆಚ್ಚು ಕಡಮೆ ದಿನವನ್ನೆಲ್ಲ—ಹೂಬಾಣ ಪ್ರದರ್ಶನವನ್ನು ನೋಡಹೋದ ಕಾಲವನ್ನು ಏನಾಯಿಸಿ—ಟೀವಿಯ ಮುಂದೇ ಕಳೆವೆ. ಪ್ರಸಿದ್ಧ ವ್ಯಾಖ್ಯಾನಕಾರ ವಾಲ್ಟರ್ ಕ್ರಾಂಕೈಟರೂ ಅವರ ಜೊತೆಗೆ ಬೆವರ್ಲಿ ಸಿಲ್ಸ್, ಡ್ಯಾನಿ ಕೇ (Walter Cronkite, Beverley Sills, Danny Kaye) ಮುಂತಾದ ಹೆಸರಾಂತ ವ್ಯಕ್ತಿಗಳೂ ಅಂದಿನ ಕಾರ್ಯಕ್ರಮಗಳನ್ನು ಕುರಿತು ವ್ಯಾಖ್ಯಾನ ಮಾಡಿದರು.

ವಾಲ್ಟರ್ ಕ್ರಾಂಕೈಟರ ಪ್ರಸಾರಕೌಶಲ ನನಗೆ ಬಹಳ ಮೆಚ್ಚಿಕೆಯಾಯಿತು. ಅವರದ್ದು ಪ್ರಸನ್ನವಾದ ಮುಖಮುದ್ರೆ, ಇನ್ನೇನು ಬಿರಿಯಲಿದೆ ಎನ್ನುವಂಥ ನಗೆ ಮೊಗ್ಗು, ಹಿತವಾದ ದನಿ, ಸ್ಫುಟವಾದ ಉಚ್ಚಾರಣೆ, ನಿಷ್ಪಕ್ಷಪಾತವೂ ಸುಸಂಬದ್ಧವೂ ಆದ ವಿಚಾರಸರಣಿ. ಅವರು ಪ್ರಸಾರ ಮಾಡುತ್ತಿರಲಿಲ್ಲ; ತಮ್ಮ ಮಿತ್ರಗೋಷ್ಠಿಯಲ್ಲಿ (ನಾವೂ, ಅಂದರೆ ಶ್ರೋತೃಗಳು, ಆ ಮಿತ್ರವರ್ಗಕ್ಕೆ ಸೇರಿದವರು ಎಂಬ ಭಾವನೆ ಬಂತು) ಸಲಿಗೆಯಿಂದ ಅನೌಪಚಾರಿಕವಾಗಿ ಮಾತಾಡುತ್ತಿದ್ದರು. ಮುಖಕ್ಕೆ ಅಪ್ಪಳಿಸುವಂಥ ದೇಶಾಭಿಮಾನದ ಉದ್ರೇಕವಿಲ್ಲ. ತಮ್ಮದು ಮಹತ್ವವುಳ್ಳ ರಾಷ್ಟ್ರ, ಅದಕ್ಕೆ ಒಂದಲ್ಲ ಹತ್ತು ದೃಷ್ಟಿಗಳಿಂದ ಪ್ರಪಂಚದಲ್ಲಿ ಅಗ್ರಸ್ಥಾನವಿದೆ, ಅಂಥ ರಾಷ್ಟ್ರದ ಇತಿಹಾಸದಲ್ಲಿ ಇದೊಂದು ಚಿರಸ್ಮರಣೀಯ ದಿನ—ಇದೆಲ್ಲದರ ಅರಿವು ಇತ್ತಾದರೂ ಕಣ್ಣು ಕುಕ್ಕುವಂತಿರಲಿಲ್ಲ. ಅವರ ಶೈಲಿಯೂ ಜೀವನಕ್ಕೆ—ಆಡು ಮಾತಿಗೆ—ದೂರವಲ್ಲದ, ಒಂದು ಬಗೆಯ ಸಾಹಿತ್ಯದ ಕೃತಕತೆಯಿಲ್ಲದ, ಅಲಂಕಾರಿಕವಲ್ಲದ ಸರಳ ಶೈಲಿ. ಸುಸಂಸ್ಕೃತರು ತಮ್ಮ ಸ್ನೇಹಿತರೊಡನೆ ಮಾತಾಡುವಾಗ ಸ್ವಾಭಾವಿಕವಾಗಿ ಬರುವ ದನಿಯ ಏರಿಳಿತ, ಅಯತ್ನತಃ ಸಂದರ್ಭಕ್ಕೆ ಹೊಂದಿಕೊಂಡು ಸುಳಿದು ಹೋಗುವ ಮೃದು ಹಾಸ್ಯ—ಅವರ ವ್ಯಾಖ್ಯಾನವನ್ನು ಕೇಳುವುದೊಂದು ಆನಂದ. ಆತ ಅಮೆರಿಕದಲ್ಲಿ ಎಲ್ಲರ ಗೌರವವನ್ನೂ ಗಳಿಸಿದ್ದಾನೆಂದು ಕೇಳಿದ್ದೇನೆ. ಆ ದಿನದ ಕಾರ್ಯಕ್ರಮದಲ್ಲಿ ಅವರ ಜೊತೆ ಸ್ವಲ್ಪ ಕಾಲ ಸೇರಿದ್ದ ಡ್ಯಾನಿ ಕೇ ಮಿಲಿಯಗಟ್ಟಲೆ ಹಣ ಸಂಪಾದಿಸಿ ಬಡ ಹುಡುಗರ ಪಾಲನೆಗಾಗಿ ಮಿಲಿಯಗಟ್ಟಲೆ ದಾನ ಮಾಡಿದ್ದಾರಂತೆ. ಅಮೆರಿಕನ್ನರೆಲ್ಲ ಚಾರ್ವಾಕರು, ಸ್ವಸುಖಸಾಧಕರು, ಎಂದು ನಾವು ಸುಲಭಸಾಮಾನ್ಯೀಕರಣದ ಮಾತು ಹಾರಿಸುವುದುಂಟಷ್ಟೆ. ಡ್ಯಾನೀ ಕೇ ತಮ್ಮ ಐಶ್ವರ್ಯವನ್ನು ವಿನಿಯೋಗಿಸುವ ರೀತಿಯನ್ನು ಕೇಳಿದಾಗ ಮಹದಾನಂದವಾಯಿತು.

ಸಿ.ಬಿ.ಎಸ್. ನಲ್ಲೇ ಪ್ರಸಾರ ಮಾಡುವ ಎರಿಕ್ ಸೆವರೈಡ್ (Eric Sevareid) ಕೂಡ ವಾಲ್ಟರ್ ಕ್ರಾಂಕೈಟರಂತೆಯೇ ಪ್ರಸಿದ್ಧರು. ಆದರೆ

ಅವರ ಪ್ರಸಾರದ ಭಾವನೆ ಬೇರೆ ರೀತಿಯದು. ಇಬ್ಬರೂ ತಕ್ಕಮಟ್ಟಿಗೆ ವಯಸ್ಸಾದವರು. ಕ್ರಾಂಕೈಟರ ಮುಖ ಸ್ವಲ್ಪ ತುಂಬಿಕೊಂಡಂತೆ ಕಂಡರೆ ಸೆವರೈಡ್ ರದ್ದು ನೀಳವಾದ ಚೂಪಾದ ಮುಖ. ಅವರ ಮಾತಿನಲ್ಲೂ ಆ ಚೂಪು ಕಾಣುತ್ತದೆ. ಕ್ರಾಂಕೈಟರು ತಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳುತ್ತಾರಾದರೂ ನಿಷ್ಪಕ್ಷಪಾತವಾಗಿ ಎರಡೂ ಕಡೆಗೂ ಹೇಳಬೇಕಾದ್ದನ್ನು ಬಡದೆ ಹೇಳುತ್ತಾರೆ. ಸೆವರೈಡ್ ಎರಡು ಪಕ್ಷದ ವಾದವನ್ನೂ ಗಮನಕ್ಕೆ ತಂದುಕೊಳ್ಳುತ್ತಾರಾದರೂ ತಮ್ಮ ಅಭಿಪ್ರಾಯವನ್ನು ಕ್ರಾಂಕೈಟರಿಗಿಂತ ಹೆಚ್ಚು ಹರಿತವಾಗಿ ಮಂಡಿಸುತ್ತಾರೆ. ಮಾತ್ರವಲ್ಲ, 'ಇದು ತೀರ್ಪು' ಎನ್ನುವಂತೆ ಅದರ ಮೇಲೆ ತಮ್ಮ ಮುದ್ರೆಯನ್ನೊತ್ತಿ ಕಳಿಸುತ್ತಾರೆ. ಕ್ರಾಂಕೈಟರಲ್ಲಿಲ್ಲದ 'ಶ್ರೀ ಭಗವಾನುವಾಚ' (Thus saith the Lord) ಮನೋಭಾವ ಸವರೈಡ್‌ರಲ್ಲಿ ಕಾಣುತ್ತದೆ. ಅದರ ಭಗವಾನರ ಮಾತು ಆಳವಾದ ಯೋಚನೆಯ ಫಲಿತಾಂಶವಷ್ಟೆ—ಸವರೈಡ್‌ರ ಮಾತೂ ಹಾಗೇ ಪ್ರಮಾಣಭೂತವಾದದ್ದು. ಅವರನ್ನು 'ಸಿ.ಬಿ.ಎಸ್. ಸೇಜ್' (C.B.S. Sage) ಎಂದು ಕರೆಯುತ್ತಾರೆ. ಸೇಜ್ (ಜ್ಞಾನಿ)ನ ಗುಣ ಅವರ ಪ್ರಸಾರದಲ್ಲಿ ಕಾಣುತ್ತದೆ.

ಇವರಿಬ್ಬರ ವ್ಯಾಖ್ಯಾನವನ್ನು ಕೇಳಿದಮೇಲೆ ರೇಡಿಯೋ ಪ್ರಸಾರದಲ್ಲಿ ನಾವು ಇನ್ನೂ ಸಾಧಿಸಬೇಕಾದದ್ದು ಬೆಟ್ಟದಷ್ಟಿದೆ ಎನ್ನಿಸಿತು.

ಆ ದಿನದ ಟೀವಿ ಕಾರ್ಯಕ್ರಮದಲ್ಲಿ ಇಂಗ್ಲೆಂಡಿನ ರಾಣಿ ಎಲಿಸಬೆತ್‌ರ ಪತಿ ಪ್ರಿನ್ಸ್ ಫಿಲಿಪ್‌ರೊಡನೆ ಅಮೆರಿಕದವರೊಬ್ಬರು ನಡೆಸಿದ ಭೇಟಿಯೂ ಒಂದು. ಇವೆರಡು ದೇಶಗಳ ಸಂಬಂಧ ಸ್ವಲ್ಪ ವಿಚಿತ್ರವಾದದ್ದು, ಆದರೆ ಮಾನವನ ಸ್ವಭಾವಕ್ಕೆ ಸಹಜವಾದದ್ದೂ ಹೌದು. ಅಮೆರಿಕಕ್ಕೆ (ನಿಷ್ಕೃಷ್ಟವಾಗಿ ಹೇಳಬೇಕಾದರೆ ಅಮೆರಿಕದ ಸಂಯುಕ್ತ ಸಂಸ್ಥಾನಗಳಿಗೆ) ಇಂಗ್ಲೆಂಡ್ ಮಾತೃಭೂಮಿ ಎಂದು ಹೇಳುವುದುಂಟಷ್ಟೆ. ಈ ಮಾತು ಕೆಂಪು ಇಂಡಿಯನ್ನರಿಗೆ ವಿಚಿತ್ರವಾಗಿ ಕಾಣುತ್ತದೆ. ವರ್ಧಂತ್ಯುತ್ಸವಕ್ಕೆ ಅವರ ಪ್ರತಿಕ್ರಿಯೆಯನ್ನು ಹಿಂದೆಯೇ ಪ್ರಸ್ತಾಪಿಸಿದ್ದೇನೆ. ವರ್ಧಂತಿಯ ವೈಭವವೆಲ್ಲ ನಡೆಯುತ್ತಿದ್ದಾಗಲೇ ಒಬ್ಬ ಮಿನೋಮಿನೀ ಇಂಡಿಯನ್ ಹೇಳಿದನಂತೆ: "ಅಮೆರಿಕ 200 ವರ್ಷದ ಕೆಳಗೆ ಹುಟ್ಟಿತು, ಇವರು ಬಂದ ಮೇಲೆ, ಎನ್ನುವಂತೆ ಮಾತಾಡುತ್ತಾರೆ, ಈ ಜನ! ಇವರ ತಾತ ಮುತ್ತಾತ ಕುಲತಾತಂದಿರು ಹುಟ್ಟುವುದಕ್ಕಿಂತ ಎಷ್ಟೋ ಸಾವಿರ ವರ್ಷ ಹಿಂದಿನಿಂದ ಇದ್ದೇ ಇತ್ತು, ಈ ದೇಶ!"

ಅದನ್ನೆ ಮೂಲೆಗುಂಪಾಗಿ ರಿಸರ್ವೇಷನ್ (reservation : ಇಂಡಿಯನ್ನರ ವಾಸಕ್ಕಾಗಿ ಕಾದಿಟ್ಟ ಭೂಮಿ) ಗಳಲ್ಲಿ ಬಿದ್ದಿರುವ, ಬಹುಶಃ ಹೇಳ

ಹೆಸರಿಲ್ಲದೆ ನಾಶವಾಗುವುದರಲ್ಲಿರುವ ಈ ಬಡಪಾಯಿಗಳ ಮಾತು ಯಾವ ಲೆಕ್ಕಕ್ಕೆ ಬಂದೀತು ! ಬಿಳಿಯರ ನಾಗರಿಕತೆಯ ರೋಣುಗಲ್ಲು ಅವರ ಮೇಲೆ ಹರಿದು ಹೋಗಿದೆ. ನೆಲ ಅಗೆಯುವ ಜನ ತಾವು ಅಗೆದ ನೆಲದ ಎತ್ತರ ಎಷ್ಟೆಂಬುದರ ಅಳತೆ ಸಿಕ್ಕಲೆಂದು ಅಲ್ಲಲ್ಲೇ 'ಸಾಕ್ಷಿಗುಡ್ಡೆ'ಗಳನ್ನು* ಬಿಟ್ಟಿರುತ್ತಾರೆ. ಅಳಿದುಳಿದಿರುವ ಇಂಡಿಯನ್ನರು ಇಂಥ ಸಾಕ್ಷಿ ಗುಡ್ಡೆಗಳು. ಹೊಸ ಜೀವನದ ಹುಚ್ಚು ಹೊಳೆ ಹರಿದು ಈ ಗುಡ್ಡೆಗಳು ಎಂದು ಕರಗಿ ಹೋಗುತ್ತವೆಯೊ ! ಅದಂತಿರಲಿ. ಇಂದೇನೋ ಇಡೀ ಪ್ರಪಂಚದ ದೃಷ್ಟಿಯಲ್ಲಿ ಅಮೆರಿಕ ಎಂದರೆ : ಬಿಳಿಯ ಜನರ, ಮುಖ್ಯವಾಗಿ ವಾಸ್ಪುಗಳ (**WASP = White Anglo Saxon Protestant**) ದೇಶ. ವಾಸ್ಪುಗಳಿಗೆ ಇಂಗ್ಲೆಂಡ್ ಮಾತೃಭೂಮಿ, ಆದ್ದರಿಂದ ಅಮೆರಿಕಕ್ಕೂ ಅದು ಮಾತೃಭೂಮಿ.

ತಾಯಿ ತಂದೆಯರು ಬೆಳೆದ ಮಕ್ಕಳೊಡನೆ 'ಮಿತ್ರವತ್' ಆಚರಿಸಬೇಕಂತೆ. ಇಂಗ್ಲೆಂಡ್ ಹಾಗೆ ಮಾಡಲಿಲ್ಲ. 'ಹೇಳಿದ ಮಾತು ಕೇಳು. ಎದುರು ಮಾತಾಡಬೇಡ' ಎಂದು ಚಿಕ್ಕ ಮಕ್ಕಳನ್ನು ದಂಡಿಸುವಂತೆ ದಂಡಿಸಹೊರಟಿತು. ಅಮೆರಿಕ ಮಾತೃಭೂಮಿಯಿಂದ ಬೇರೆಯಾಗಿ ಸಿಡಿದು ತಾಯಿಗೆ ಬುದ್ಧಿ ಕಲಿಸಿತು. ಶಿಷ್ಯನಿಂದ ಗುರುವೂ ಮಕ್ಕಳಿಂದ ತಾಯಿ ತಂದೆಯರೂ ಪರಾಜಯವನ್ನು ಬಯಸಬೇಕಂತೆ. ಇಂಗ್ಲೆಂಡ್ ಬಯಸದಿದ್ದರೂ ಪರಾಜಯ ಸುಖ (!) ವನ್ನು ಪಡೆಯಿತು.

ಈಗಲೇನೋ ಇಂಗ್ಲೆಂಡ್ ತನ್ನ ಪುತ್ರಿಯ ವಿಷಯದಲ್ಲಿ ವಾತ್ಸಲ್ಯವನ್ನು ಬೆಳೆಸಿಕೊಂಡಿದೆ. ಎರಡನೆಯ ಮಹಾಯುದ್ಧ ಮುಗಿಯುವುದರಲ್ಲಿದ್ದಾಗ ಇಂಗ್ಲೆಂಡಿನ ಪ್ರಧಾನಿ ವಿನ್‌ಸ್ಟನ್ ಚರ್ಚಿಲ್ಲರು ನನಸಾದ ವಿಜಯದ ಕನಸಿನ ಜೊತೆಗೆ ಮತ್ತೊಂದು ಕನಸನ್ನೂ ಕಂಡರು : ಆ್ಯಂಗ್ಲೋ–ಸ್ಯಾಕ್ಸನ್ ಜನಾಂಗದವರಿಬ್ಬರೂ (ಇಂಗ್ಲೆಂಡ್ ಮತ್ತು ಅಮೆರಿಕ) ಭುಜಕ್ಕೆ ಭುಜ ಕೊಟ್ಟು ಹೆಮ್ಮೆಯಿಂದಲೂ ದರ್ಪದಿಂದಲೂ ಪ್ರಪಂಚದ ನೆತ್ತಿಯ ಮೇಲೆ ಕವಾತು ಹೆಜ್ಜೆ ಹಾಕುವ ಕನಸು ! ಅವರ ಭಾಗಕ್ಕೆ ಪ್ರಪಂಚದ ಭವಿಷ್ಯವೆಂದರೆ ವಾಸ್ಪ್‌ಗಳ ಭವಿಷ್ಯ. ಹಿಟ್ಲರ್ ನಾರ್ಡಿಕ್ ರೇಸ್‌ನ (Nordic race) ಕನಸು ಕಂಡರೆ ಚರ್ಚಿಲ್ ಆ್ಯಂಗ್ಲೋ–ಸ್ಯಾಕ್ಸನ್ ರೇಸ್‌ನ ಕನಸು ಕಂಡ–ಭ್ರಮರ ಕೀಟ ನ್ಯಾಯ ಕೆಲಸ ಮಾಡಿತೋ ಏನೊ.

---

* ಸಾಕ್ಷಿಗುಡ್ಡೆ ಎಂಬ ಪದ ನಮ್ಮ ಊರಿನ ಸುತ್ತ ಮುತ್ತ ಬಳಕೆಯಲ್ಲಿತ್ತು. ಈಗಲೂ ಇರಬಹುದು.

ಇತ್ತ ಅಮೆರಿಕದಲ್ಲೂ ಮಾತೃಭೂಮಿಯ—ಅಥವಾ 'ಆ ಹಳೆಯ ದೇಶ'ದ (The old country) ಎಂದರೆ ಸರಿಹೋದೀತೇನೋ—ವ್ಯಾಮೋಹ ಮರುಕಳಿಸಿದೆ. ಆಂಗ್ಲರು ಮೊದಮೊದಲು ನೆಲಸಿದ್ದು ಆಗ ನ್ಯೂ ಇಂಗ್ಲೆಂಡ್* ಎನ್ನಿಸಿಕೊಂಡಿದ್ದ ಪ್ರಾಂತದಲ್ಲಿ. ರಾಜಕೀಯ ಜಾಗ್ರತಿ ಮೊದಲು ಬೆಳೆದದ್ದೂ ಈ ಪ್ರಾಂತದಲ್ಲೇ. "ನಾವು ಕಟ್ಟಿರುವ ರಾಜ್ಯ ಇಂಗ್ಲೆಂಡಿನ (ಅಥವಾ ಯೂರೋಪಿನ) ಪ್ರತಿಬಿಂಬವಲ್ಲ; ಆದಕ್ಕೆ ತನ್ನತನವೊಂದಿದೆ," ಎಂಬ ಅರಿವು ಮೊದಲು ಮೂಡಿದ್ದೂ ಅಲ್ಲೇ. ಈ ಪ್ರಾಂತದ ಸಾಂಸ್ಕೃತಿಕ ಕೇಂದ್ರ ಬಾಸ್ಟನ್ (Boston). ಅಲ್ಲಿಯ ಸುಸಂಸ್ಕೃತ, ಮತ್ತು ಪ್ರತಿಷ್ಠಾಪೂಜಕ, ಜನರನ್ನು 'ಬಾಸ್ಟನ್ ಬ್ರಾಹ್ಮಣರು' ಎಂದು ಕುಹಕದಿಂದ ಕರೆಯುವುದುಂಟು. (ಈ ಕುಹಕವನ್ನು ಕೇಳಿ ರೇಗಬೇಕಾದವರು ಬಾಸ್ಟನ್ನಿನವರೋ ಅಥವಾ ಬ್ರಾಹ್ಮಣರೋ ಅಥವಾ ಇಬ್ಬರೂವೊ!)

ನ್ಯೂ ಇಂಗ್ಲೆಂಡಿನಲ್ಲಿ ನೆಲಸಿದವರು 'ಆ ಹಳೆಯ ದೇಶ'ದ ಭಾಷೆ, ನಡೆ ನುಡಿ, ಸಂಗೀತ, ಸಂಸ್ಕೃತಿ, ನ್ಯಾಯವಿತರಣ ಪದ್ಧತಿ—ಇವೆಲ್ಲವನ್ನೂ ಮುಂದು ವರಿಸಿಕೊಂಡು ಹೋದದ್ದು ಸ್ವಾಭಾವಿಕ. ಮೊದಮೊದಲು ಸೃಷ್ಟಿಯಾದ ಅಮೆರಿಕನ್ (ನ್ಯೂ ಇಂಗ್ಲೆಂಡ್) ಸಾಹಿತ್ಯದಲ್ಲೂ ಇಂಗ್ಲಿಷ್ ಸಾಹಿತ್ಯದ ದನಿ ಹೆಚ್ಚಾಗಿ ಕೇಳಿಬರುತ್ತಿತ್ತು. "ಇದೆಲ್ಲದರಿಂದಾಗಿ, ಮತ್ತು ಸಂಯುಕ್ತ ಸಂಸ್ಥಾನಗಳ ಸಂಪತ್ತು ಮತ್ತು ಶಕ್ತಿಗಳಿಂದಾಗಿ, ಅಮೆರಿಕ ಎಂದರೆ ಸಂಯುಕ್ತ ಸಂಸ್ಥಾನಗಳು, ಸಂಯುಕ್ತ ಸಂಸ್ಥಾನಗಳು ಎಂದರೆ ವಾಸ್ಪುಗಳ ದೇಶ" ಎಂಬ ಅಸ್ಪಷ್ಟ ಮತ್ತು ಅನಿಷ್ಕೃಷ್ಟ ಭಾವನೆ ಎಲ್ಲರಲ್ಲೂ ಬೆಳೆದು ಬಂದಿದೆ. ಅಮೆರಿಕಾ ಖಂಡದಲ್ಲಿ ಎಷ್ಟೊಂದು ರಾಜ್ಯಗಳಿವೆ, ಸಂಯುಕ್ತ ಸಂಸ್ಥಾನಗಳಲ್ಲಿ ಎಷ್ಟೊಂದು ಜನಾಂಗದವರು ಬಂದು ನೆಲಸಿದ್ದಾರೆ, ಎಂಬುದನ್ನು ಬಲ್ಲವರ ಮನಸ್ಸಿನಲ್ಲಿ ಕೂಡ ಈ ಭಾವನೆ ಕಾಣುತ್ತದೆ. ಸಂಯುಕ್ತ ಸಂಸ್ಥಾನಗಳ ಜನವಂತೂ ತಮ್ಮನ್ನು ಮಾತ್ರ ಗಮನದಲ್ಲಿಟ್ಟುಕೊಂಡು 'We Americans' ಎನ್ನುವುದು ಸರ್ವಸಾಮಾನ್ಯ.

ಮೇಲೆ ಹೇಳಿದ ವಾಸ್ಪ್ ಅಭಿಮಾನ ಇಂಗ್ಲೆಂಡಿನ ಬುಡಕಟ್ಟಿಗೆ ಸೇರಿದ ಅಮೆರಿಕನ್ನರಲ್ಲಿ ಈಗಲೂ ಇಲ್ಲದಿಲ್ಲ. ಇಂಗ್ಲೆಂಡಿನವರು ತಮ್ಮ ವಂಶ ಎಷ್ಟು ಪುರಾತನವಾದದ್ದು ಎಂದು ಹೇಳಿಕೊಳ್ಳಬೇಕಾದರೆ "ನಾವು ಇಂಗ್ಲೆಂಡನ್ನು

---

* ಮೆಯ್ನ್, ನ್ಯೂ ಹ್ಯಾಂಪ್‌ಷೈರ್, ವರ್ಮಾಂಟ್, ಮ್ಯಾಸಚುಸೆಟ್ಸ್, ರೋಡ್ ಐಲೆಂಡ್, ಕನೆಕ್ಟಿಕಟ್—ಈ ರಾಜ್ಯಗಳನ್ನೊಳಗೊಂಡ ಪ್ರಾಂತ.

(1066ನಲ್ಲಿ) ಜಯಿಸಲು ಬಂದ ಡ್ಯೂಕ್ ವಿಲಿಯಮ್‌ನೊಡನೆ ಬಂದವರು" (We came over with the Conqueror) ಎನ್ನುತ್ತಾರಂತೆ. ಇದು ಇಂಗ್ಲೆಂಡಿನಲ್ಲಿ ಪ್ರಚಲಿತವಾಗಿರುವ ಹಾಸ್ಯ. ಹಾಗೇ ಅಮೆರಿಕನ್ನರು "ನಾವು ಮೇಫ್ಲವರ್ ಹಡಗಿನಲ್ಲಿ ಬಂದವರು" (We came over in The Mayflower) ಎಂದುಕೊಳ್ಳಬಹುದು. ವಾಸ್ತವವಾಗಿ ಪುರಾತನತೆಯ ಆಧಾರದ ಮೇಲೆ ಜಂಬ ಕೊಚ್ಚಬೇಕಾದರೆ ನಾವೆಲ್ಲ ಇನ್ನೂ ಎಷ್ಟೋ ಮಿಲಿಯಗಟ್ಟಲೆ ವರ್ಷ ಹಿಂದಕ್ಕೆ ಹೋಗಿ ಅಗ ಹುಟ್ಟಿದ ಜೀವಕಣವೊಂದನ್ನು ಹೆಸರಿಸಬಹುದು. ಯಾರೋ, ಆ ಪುರಾತನತಮ ವಂಶಸ್ಥಾಪಕನನ್ನು ಯಾರೂ ಹೆಮ್ಮೆಯಿಂದ ಸ್ಮರಿಸುವುದಿಲ್ಲ !

ಅಂತೂ 'ಆ ಹಳೆಯ ದೇಶ'ದ ಮೇಲಿನ ವ್ಯಾಮೋಹ ಬಲವಾಗಿಯೇ ಇತ್ತು. ಈಗಲೂ ಅದು ಪೂರ್ತಿ ಹೋಗಿಲ್ಲವೇನೊ. ಇತ್ತೀಚೆಗೆ ಅಮೆರಿಕದ ಕುಬೇರನೊಬ್ಬ ಪುರಾತನ ಲಂಡನ್ ಸೇತುವೆಯನ್ನು ಖರೀದಿಗೆ ಪಡೆದು ಅದರ ಒಂದೊಂದು ಕಲ್ಲನ್ನೂ ಜಾಗರೂಕತೆಯಿಂದ ತನ್ನ ದೇಶಕ್ಕೆ ಸಾಗಿಸಿ ಅಲ್ಲಿ (ಆ್ಯರಿಸೋನಾ ರಾಜ್ಯದಲ್ಲಿ) ಅದನ್ನು ಹಿಂದಿದ್ದಂತೆಯೇ ಕಟ್ಟಿದ್ದಾನಂತೆ. ಈ ಮನೋವೃತ್ತಿ ಇವನೊಬ್ಬನಿಗೆ ಮೀಸಲಲ್ಲ. ಷಿಕಾಗೋವಿಗೆ ಹತ್ತಿರ ಇರುವ ಉಪನಗರವೊಂದರಲ್ಲಿ ಪೀಸಾದ ಬಾಗಿದ ಗೋಪುರವನ್ನು (The leaning tower of Pisa) ಅನುಕರಿಸುವ ಗೋಪುರವನ್ನು ನೋಡಿದ ನೆನಪಿದೆ. ಹಾಗೆಯೇ ಕೆನಡಾದ ಮಾಂತ್ರಿಯಲ್ ಪಟ್ಟಣದಲ್ಲಿ ರೋಮ್‌ನ ಸೆಂಟ್ ಪೀಟರ್ಸ್ ಚರ್ಚನ್ನು ಅನುಕರಿಸುವ ಸಣ್ಣ ಪ್ರಮಾಣದ ಚರ್ಚೊಂದಿದೆ.

ಇಂಗ್ಲೆಂಡನ್ನೂ ಯೂರೋಪನ್ನೂ ಕುರಿತ ಅಭಿಮಾನವನ್ನು ವಿರೋಧಿಸುವ ಮನೋವೃತ್ತಿಯೂ ಬಹಳ ಹಿಂದಿನಿಂದ ಇದ್ದದ್ದೇ. 1773ರಲ್ಲಿ ನಡೆದ ಪ್ರಸಿದ್ಧವಾದ 'ಬಾಸ್ಟನ್ ಟೀ ಪಾರ್ಟಿ'* ಈ ವಿರೋಧದ ಪ್ರದರ್ಶನಗಳಲ್ಲೊಂದು. ಮೊದಲು ರಾಜಕೀಯ ಮತ್ತು ಆರ್ಥಿಕ ಕಾರಣಗಳಿಂದಾಗಿ ಹುಟ್ಟಿದ ವಿರೋಧ ಬಹು ಬೇಗ ಸಾಹಿತ್ಯಸಂಸ್ಕೃತಿಗಳ ಕ್ಷೇತ್ರಕ್ಕೂ ಹಬ್ಬಿತು. "ಯೂರೋಪಿನ ಜನರ ದೃಷ್ಟಿ ಭವಿಷ್ಯದ ಕಡೆಗಿಲ್ಲ ; ಅವರು ಸುವರ್ಣಯುಗ

* ಅಮೆರಿಕದಲ್ಲಿ ಬಲವಂತವಾಗಿ ಮಾರಲು ಇಂಗ್ಲೆಂಡಿನವರು ಒಂದು ಹಡಗು ತುಂಬ ಟೀ ಕಳಿಸಿದರು. ಬಾಸ್ಟನ್ನಿನವರು ಇಂಡಿಯನ್ನರ ವೇಷ ಹಾಕಿಕೊಂಡು ಆ ಹಡಗಿಗೆ ನುಗ್ಗಿ ಟೀ ಎಲ್ಲವನ್ನೂ ಸಮುದ್ರಕ್ಕೆ ಎಸೆದರು. ಇದೇ 'ಬಾಸ್ಟನ್ ಟೀ ಪಾರ್ಟಿ.'

ಹಿಂದೆಯೇ ಆಗಿ ಹೋಯಿತು ಎಂದು ನಂಬಿದ್ದಾರೆ ; ಗ್ರೀಸಿನ ಭವ್ಯತೆಯನ್ನೂ ರೋಮಿನ ವೈಭವವನ್ನೂ ನೆನೆನೆನೆದು ನಿಟ್ಟುಸಿರುಬಿಡುತ್ತಾರೆ. ನಮಗಾದರೋ, ಸುವರ್ಣಯುಗ ಮುಂದೆ ಮಿನುಗುತ್ತಿದೆ ; ಅದು ಇನ್ನೂ ಸಾಧಿಸಬೇಕಾದದ್ದು; ಸಾಧಿಸುವವರು–ನಾವು!" ಈ ಭಾವನೆ ಅಮೆರಿಕನ್ನರಲ್ಲಿ ಕಳೆದ ಶತಮಾನದಲ್ಲೇ ಸಾಕಷ್ಟು ಬೆಳೆದು ಯೂರೋಪಿನ ಅನುಕರಣಕ್ಕೆ ಪ್ರತಿರೋಧಿಯಾಗಿತ್ತು. ಇಟಲಿಯವರಿಗೆ ತಮ್ಮ ಹಳೆಯ ಸಂಸ್ಕೃತಿಯ ವಿಷಯದಲ್ಲೂ ಮೈಕಲ್ ಏಂಜಲೊ, ರಾಫಯೆಲ್ ಮುಂತಾದ ಕಲೆಗಾರರ ವಿಷಯದಲ್ಲೂ ಇರುವ ಹೆಮ್ಮೆಯನ್ನು ಮಾರ್ಕ್ ಟ್ವೆಯ್ನ್ (Mark Twain) ತನ್ನ Innocents Abroad ಎಂಬ ಕೃತಿಯಲ್ಲಿ ಹಾಸ್ಯಮಾಡಿದ್ದಾನೆ. ಅವನಿಗೆ ಮೈಕಲ್ ಏಂಜಲೋವಿನ ಕಲೆ ರುಚಿಸಲಿಲ್ಲವೆಂದಲ್ಲ. ಅವನ ಹಾಸ್ಯ ಹುಮ್ಮಸ್ಸಿನಿಂದ ಬಂದದ್ದು, ಕಹಿಯಿಲ್ಲದ್ದು. ಆದರೂ ಅದರಲ್ಲಿ ಅಮೆರಿಕದ ಯುವನಾಗರಿಕ ಉಡಾಫೆಯ ಕಂಠಸ್ವರವನ್ನು ಗುರುತಿಸಬಹುದು.

ಯೂರೋಪಿಯನ್ ಸಂಸ್ಕೃತಿಯ ಅನುಕರಣವನ್ನು ಕಂಡು ರೇಗಿದ ಎಮರ್ಸನ್ (Emerson) "ಯೂರೋಪಿಯನ್ ಆಸ್ಥಾನಗಳ ಕಲಾದೇವಿಯರ ದನಿಯನ್ನು ಇಷ್ಟು ಕಾಲ ಕೇಳಿದ್ದೇ ಹೆಚ್ಚು, ಇನ್ನು ಸಾಕು" ಎಂದನಂತೆ. ಈ ಮಾತನ್ನು ಆಲಿವರ್ ವೆಂಡಲ್ ಹೋಮ್ಸ್ (Oliver Wendell Holmes) 'ಅಮೆರಿಕದ ಬೌದ್ಧಿಕ ಸ್ವಾತಂತ್ರ್ಯದ ಘೋಷಣೆ' ಎಂದು ಕರೆದ. ಫಿಲಿಪ್ ಫ್ರೆನೊ (ಇವನೂ 19ನೆಯ ಶತಮಾನದವನು) ಎಂಬ ಕವಿಯ ರೋಷ ಇನ್ನೂ ಕಠಿನವಾದ ಮಾತಿನಲ್ಲಿ ಅಭಿವ್ಯಕ್ತಿ ಪಡೆಯಿತು:

Can we never be thought
To have learning or grace
Unless it be brought
From that damnable place!

(ಪಾಂಡಿತ್ಯ, ಅಂದ ಚೆಂದ ಒನಪು ಒಯ್ಯಾರಗಳು, ಇವನ್ನೆಲ್ಲ ಆ ಸುಡುಗಾಡು ಸ್ಥಳದಿಂದಲೇ ತರಬೇಕೆ? ಹಾಗೆ ತರದಿದ್ದರೆ ಅವು ನಮ್ಮ ಭಾಗಕ್ಕೆ ಇಲ್ಲವೇ ಇಲ್ಲ ಎನ್ನಬೇಕು!) 'ಆ ಸುಡುಗಾಡು ಸ್ಥಳ' ಎಂದರೆ ಬ್ರಿಟನ್!

ಸ್ವಾತಂತ್ರ್ಯ ಘೋಷಣೆಯ ವರ್ಧಂತಿಗೆ ಸಂಬಂಧಪಟ್ಟ ಟೀವಿ ಕಾರ್ಯಕ್ರಮಗಳನ್ನು ನೋಡುತ್ತಿರುವಾಗ ಈ ಯೋಚನೆಗಳೆಲ್ಲ ಮನಸ್ಸಿನಲ್ಲಿ ಹೊಳೆದು ಹೋದವು. ನಾವು ನಿನ್ನೆ ಮೊನ್ನೆ ಪಡೆದ ಸ್ವಾತಂತ್ರ್ಯದ, ಮತ್ತು ಯೂರೋಪಿಯನ್ ಸಂಸ್ಕೃತಿ ನಮ್ಮ ಮೇಲಿಟ್ಟ ದಾಳಿಯ ನೆನಪೂ

ಬಂತು. ಯೂರೋಪಿಯನ್ ಪ್ರಭಾವವನ್ನು ವಿರೋಧಿಸಿ ದಂಗೆಯೆದ್ದದ್ದು ಅಮೆರಿಕನ್ನರ ಮೈಗೆ ಒಳ್ಳೆಯದು. ಅವರು ಯೂರೋಪಿನ ಸಂಬಂಧವನ್ನು ಕಡಿದುಕೊಂಡು ಬೇರೊಂದು ವಾತಾವರಣದಲ್ಲಿ ನೆಲಸಿದವರು. ಹೊಸ ದೇಶಕ್ಕೂ ಹೊಸಜೀವನಕ್ಕೂ ಹೊಂದುವಂಥ ತನ್ನತನದ ಸಂಪ್ರದಾಯವನ್ನು ಅವರು ಸೃಷ್ಟಿಸಿ ಬೆಳಸಿಕೊಳ್ಳಬೇಕಾಗಿತ್ತು; ಹಳೆಯ ದೇಶದ ಸಂಸ್ಕೃತಿ ಸೃಷ್ಟಿ ಪ್ರಚೋದಕವಾಗುವುದಕ್ಕೆ ಬದಲು ಕತ್ತಿಗೆ ನೇಣಾಗದಂತೆ ನೋಡಿಕೊಳ್ಳಬೇಕಾಗಿತ್ತು.

ನಮ್ಮ ಇಂದಿನ ಸ್ಥಿತಿಗೂ ಅವರದ್ದಕ್ಕೂ ವ್ಯತ್ಯಾಸವಿದೆ. ನಾವಿರುವುದು ನಮ್ಮ ಪೂರ್ವಿಕರ ದೇಶದಲ್ಲೇ; ಅಲ್ಲಿಂದ ಬೇರು ಕಿತ್ತುಕೊಂಡು ಬೇರೆಲ್ಲಿಗೂ ಹೋಗಿಲ್ಲ. ಆದ್ದರಿಂದ ಸಾವಿರಾರು ವರ್ಷಗಳಿಂದ ವಿಚ್ಛಿತ್ತಿಯಿಲ್ಲದೆ ಬೆಳೆದು ಬಂದ ನಮ್ಮ ಸಂಸ್ಕೃತಿ ನಮಗೆ ಪರಕೀಯವಲ್ಲ—ಅಮೆರಿಕನ್ನರಿಗೆ ಯೂರೋಪಿನ ಸಂಸ್ಕೃತಿ ಪರಕೀಯ ಎನಿಸಿದಂತೆ, ತನ್ನತನ 'ದೇಶ'ವೊಂದಕ್ಕೇ ಸಂಬಂಧಪಟ್ಟದ್ದಲ್ಲ. ಕಾಲಕ್ಕೂ ಸಂಬಂಧಪಟ್ಟದ್ದು, ಎಂಬುದನ್ನು ನೆನಪಿನಲ್ಲಿಟ್ಟುಕೊಂಡರೂ ಮೇಲೆ ಹೇಳಿದ ಮಾತು ನಿಜ. ಭಾರತ ಶತಶತಮಾನಗಳ ಕಾಲದಲ್ಲಿ ಇತರ ಸಂಸ್ಕೃತಿಗಳ ಸಂಪರ್ಕ ಪಡೆದು ಅವುಗಳ ಕೊಡುಗೆಯಿಂದ ಪುಷ್ಟವಾಯಿತಾದರೂ ತನ್ನ ವೈಶಿಷ್ಟ್ಯವನ್ನು ಕಳೆದುಕೊಳ್ಳಲಿಲ್ಲ. ಬ್ರಿಟಿಷರು ನಮ್ಮನ್ನು ಆಳಿದ ಕಾಲದಲ್ಲಿ ಯೂರೋಪಿನ ಶ್ರೀಮಂತ, ದೃಪ್ತ, ಮತ್ತು ಆಕ್ರಮಣಶೀಲ ಯುವ ನಾಗರಿಕತೆ ನಮ್ಮ ಮೇಲೆ ದಾಳಿಯಿಟ್ಟಾಗ, ನಮ್ಮ ಸಂಸ್ಕೃತಿ ನಾಶವಾದೀತು, ರಾಜಕೀಯ ದಾಸ್ಯದ ಜೊತೆಗೆ ಚಿತ್ತದಾಸ್ಯವೂ ಬಂದೀತು ಎಂಬ ಭಯವಿತ್ತು. ಬಹುಶಃ ಆ ಭಯವೇ ನಮ್ಮನ್ನು ಕಾಪಾಡಿತು. ಆ ಕಾಲದಲ್ಲಿ ಬಂದ ಹೊಸ ವಿಮರ್ಶಾತ್ಮಕ ದೃಷ್ಟಿಯಿಂದ ನಮ್ಮ ಪರಂಪರೆಯನ್ನು ಒರೆಗಲ್ಲಿಗೆ ಹಚ್ಚಿದೆವು; ಅದರ ಸ್ವರೂಪವನ್ನೂ ಒಳ ಅರ್ಥವನ್ನೂ ಹಿಂದಿನವರಿಗಿಂತ ಚೆನ್ನಾಗಿಯೇ ಅರ್ಥಮಾಡಿಕೊಂಡೆವು ಅದರಿಂದ ಗರಿಗಟ್ಟಿಕೊಂಡು ಮತ್ತೆ ನಮ್ಮ ಪ್ರತಿಭೆ ಗಗನಕ್ಕೇರಿತು. ನಾವು ಚಿತ್ತದಾಸ್ಯಕ್ಕೆ ಹೆಚ್ಚು ಬಲಿಯಾದದ್ದು ಬ್ರಿಟಿಷರ ಹಿಡಿತದಲ್ಲಿದ್ದಾಗಲಲ್ಲ. ಸ್ವಾತಂತ್ರ್ಯ ಪಡೆದ ಮೇಲೆ! ಈಗ ನಮ್ಮಲ್ಲಿ ಎತ್ತ ನೋಡಿದರೂ ನವಕುಬೇರರ ಪ್ರಾಕೃತ ಪಾಶ್ಚಾತ್ಯ ಜೀವನದ ಅನುಕರಣೆ ಕಣ್ಣು ಕುಕ್ಕುತ್ತದೆ.

ಅಮೆರಿಕನ್ನರು ಈಗ ಅನುಕರಣವನ್ನು ಬಹುಮಟ್ಟಿಗೆ ಬಿಟ್ಟು ಇಂಗ್ಲೆಂಡಿನ (ಮತ್ತು ಇಡೀ ಯೂರೋಪಿನ) ವಿಷಯದಲ್ಲಿ ಅನುಗ್ರಹದ ಮನೋಭಾವವನ್ನು ತಳೆದಿದ್ದಾರೆ. ಮುಪ್ಪಿನಿಂದ ಕುಗ್ಗಿ ಅರಳುಮರುಳಾಗಿರುವ ಅಜ್ಜನ

ವಿಷಯದಲ್ಲಿ ಯುವಕ ತಳೆಯಬಹುದಾದ ಮನೋಭಾವವೂ ಅನುಗ್ರಹದ ಜೊತೆಗೆ ಸೇರಿದೆ. ಯೂರೋಪಿನವರು ನಡೆಯಬೇಕಾದರೆ ನಾವು ಕೊಟ್ಟ ಊರುಗೋಲನ್ನು ಊರಿಕೊಂಡೇ ನಡೆಯಬೇಕು ಎಂಬ ಭಾವನೆ ಅವರ ಮಾತಿನಲ್ಲಿ ಸುಳಿದು ಹೋಗುವುದುಂಟು. ಯೂರೋಪು ಅಮೆರಿಕದ ಬಡ ಬಂಧು. ಈ ಜರ್ಝರಿತ ಮುದಿ ಯೂರೋಪಿನ—ಮುಖ್ಯವಾಗಿ ಇಂಗ್ಲೆಂಡಿನ —ವಿಷಯದಲ್ಲಿ ಭಾರತೀಯರು ಸದಭಿಪ್ರಾಯ ಇಟ್ಟುಕೊಂಡಿರುವುದೇಕೆ ಎನ್ನು ವುದು ಅವರಿಗೆ ಬಿಡಿಸಲಾರದ ಒಗಟು. "ಅವರು ನಿಮ್ಮನ್ನು 150 ವರ್ಷ ಕಾಲ ತುಳಿದಿಟ್ಟಿದ್ದರು. ಅವರ ಮಾತೆತ್ತಿದರೆ ನೀವು ಉರಿದೇಳಬೇಕು. ಹೀಗಿದ್ದರೂ ನಿಮಗೆ ಅವರಲ್ಲಿ ಗೌರವ. ನಮ್ಮ ಹುಳುಕನ್ನು ಮಾತ್ರ ಎತ್ತಿ ಆಡುತ್ತೀರಿ. ಇದೇಕೆ?"—ಈ ಪ್ರಶ್ನೆಯನ್ನು ನಾನು ಎರಡು ಬಾರಿ ಕೇಳಿದ್ದೇನೆ—ಒಂದು ಬಾರಿ ಭಾರತದಲ್ಲೇ ಭೇಟಿಯಾದ ಅಮೆರಿಕನ್ ಪ್ರಾಧ್ಯಾಪಕರೊಬ್ಬರಿಂದ. ಮತ್ತೊಂದು ಬಾರಿ ಅಮೆರಿಕದಲ್ಲೇ ಅಲ್ಲಿಯ ಶ್ರೀಸಾಮಾನ್ಯರೊಬ್ಬರಿಂದ.

ಅಮೆರಿಕನ್ ಸ್ವಾತಂತ್ರ್ಯದ ದ್ವಿತೀಯ ಶತಮಾನೋತ್ಸವವನ್ನು ಆಚರಿಸಿದ ಸಂದರ್ಭದಲ್ಲಿ ಅನುಗ್ರಹ, ಅನುಕಂಪ, ಬಂಧುತ್ವಕ್ಕೆ ಸಹಜವಾದ ಆದರ, ಹಿಂದಿನ ಜಗಳವನ್ನು ಮರೆಯೋಣ ಎಂಬ ಔದಾರ್ಯ—ಈ ಮನೋಭಾವಗಳೆಲ್ಲ ಒಂದಲ್ಲ ಒಂದು ಸಲ ಅಭಿವ್ಯಕ್ತಿ ಪಡೆದವು. ಐಶ್ವರ್ಯ, ಶುದ್ಧ ವಿಜ್ಞಾನ, ತಂತ್ರಜ್ಞಾನ (ಟೆಕ್ನಾಲಜಿ), ಯುದ್ಧಶಕ್ತಿ, ಇವೆಲ್ಲ ದೃಷ್ಟಿಗಳಿಂದಲೂ ಈಗ ಅಮೆರಿಕ ಪ್ರಮುಖರಾಷ್ಟ್ರವಾಗಿದೆಯಷ್ಟೆ. ಆದ್ದರಿಂದ ಒಂದಾನೊಂದು ಕಾಲದಲ್ಲಿ ಅವರನ್ನು ಸ್ವಲ್ಪಮಟ್ಟಿಗೆ ಕಾಡಿದ ಕೀಳರಿವು (inferiority complex) ಈಗ ಕರಗಿಹೋಗಿದೆ. ಅಥವಾ ಅದರ ಶೇಷ ಸ್ವಲ್ಪ ಇದೆಯೊ? 'ಇತರರ ಕಣ್ಣಿಗೆ ನಮ್ಮ ಸಂಸ್ಕೃತಿ ಕಸುಗಾಯಿನಂತೆಯೋ ದೋರೆಗಾಯಿಯಂತೆಯೋ ಕಾಣುತ್ತದೆ' ಎಂಬ ಭಾವನೆಯೂ ಇರುವಂತೆ ಒಂದೊಂದು ವೇಳೆ ತೋರುತ್ತದೆ.

ಈಗ ಅವರು ಹಳೆಯ ಬಂಧುತ್ವವನ್ನು ಸ್ವಲ್ಪ ಭಾವೋದ್ರೇಕದಿಂದಲೇ ನೆನೆದು ಕೊಂಡಂತೆ ತೋರಿತು. ಪ್ರಸಿದ್ಧವಾದ 'ಕ್ರಿಶ್ಚಿಯನ್ ಸೈನ್ಸ್ ಮಾನಿಟರ್' ಪತ್ರಿಕೆಯು ಇಂಗ್ಲೆಂಡಿನ ರಾಣಿ ಅಮೆರಿಕಕ್ಕೆ (ಜುಲೈ 7ನೇ ತಾರೀಖು) ಕೊಟ್ಟ ಭೇಟಿಯನ್ನು ಪ್ರಸ್ತಾಪಿಸುತ್ತ ಹೇಳಿತು: "ಮುಮ್ಮಡಿ ಜಾರ್ಜನ (ಅಮೆರಿಕ ಸ್ವಾತಂತ್ರ್ಯಸಮರ ಹೂಡಿದಾಗ ಇಂಗ್ಲೆಂಡಿನ ದೊರೆ ಆಗಿದ್ದವನು ಜಾರ್ಜ್ III) ಉತ್ತರಾಧಿಕಾರಿ ಮೊನ್ನೆ ಬುಧವಾರದ ದಿನ ವಿಜಯೋತ್ಸಾಹದಿಂದಲೋ ಎಂಬಂತೆ ಮಿಲಿಯಗಟ್ಟಲೆ ಅಮೆರಿಕನ್ನರ

ಕ್ಷಮಾರ್ದ್ರ ಹೃದಯವನ್ನು ಪ್ರವೇಶಿಸಿದಳು."*

ಅದೇ ಪತ್ರಿಕೆ ಒಂದು ಕಾರ್ಟೂನನ್ನೂ ಪ್ರಕಟಿಸಿತು: ನಕ್ಷತ್ರಗಳನ್ನೂ ಪಟ್ಟಿಗಳನ್ನೂ (**Stars and Stripes** —ಅಮೆರಿಕದ ಧ್ವಜ) ಉಳ್ಳ ಷರ್ಟು ಹಾಕಿಕೊಂಡಿರುವ ಮಧ್ಯವಯಸ್ಕನೊಬ್ಬ ತನ್ನ ಮನೆಯ ಬಾಗಿಲನ್ನು ತೆರೆಯುತ್ತಿದ್ದಾನೆ. ಬಾಗಿಲು ತಟ್ಟಿದ್ದವಳು ತಕ್ಕಮಟ್ಟಿಗೆ ವಯಸ್ಸಾದ, ಆದರೆ ಹಣ್ಣು ಹಣ್ಣು ಮುದುಕಿಯಲ್ಲದ, ಮಹಿಳೆ. ಅವಳು ಎದೆಯ ಮೇಲೆ ಯೂನಿಯನ್ ಜ್ಯಾಕ್(**Union Jack**–ಇಂಗ್ಲೆಂಡಿನ ಧ್ವಜ) ಧರಿಸಿದ್ದಾಳೆ. ಮನೆಯ ಯಜಮಾನ ಅವಳನ್ನು ನಗುಮುಖದಿಂದ ಸ್ವಾಗತಿಸುತ್ತ ತನ್ನ ಹೆಂಡತಿಯನ್ನು ಕೂಗಿ ಆನಂದದಿಂದ "ಅಮ್ಮ ಕಣೆ, ಅಮ್ಮ ಬಂದಿದಾಳೆ!" ಎಂದು ಹೇಳುತ್ತಿದ್ದಾನೆ.

ವರ್ಧಂತಿಯ ದಿನ ಟೀವಿ ಪ್ರದರ್ಶನಕ್ಕಾಗಿ ಪ್ರಿನ್ಸ್ ಫಿಲಿಪ್ (ರಾಣಿ ಎಲಿಸಬೆತ್ ಅವರ ಪತಿ)ರನ್ನು ಭೇಟಿ ಮಾಡಿದ ಅಮೆರಿಕನ್ ಒಂದು ಪ್ರಶ್ನೆ ಕೇಳಿದ:

"ಹಿಂದೆ ನಾವು ನಿಮ್ಮೊಡನೆ ಸ್ವಾತಂತ್ರ್ಯಕ್ಕಾಗಿ ಕಾದುತ್ತಿದ್ದಾಗ ನಿಮ್ಮ ಜನ ಒಂದು ದೊಡ್ಡ ದುಷ್ಕೃತ್ಯ ನಡೆಸಿದರು. ನಮ್ಮ ಕ್ಯಾಪಿಟಲ್ (capitol–ಅಮೆರಿಕದ ಕಾಂಗ್ರೆಸ್ ಭವನ) ಅನ್ನು ಸುಟ್ಟುಹಾಕಿದರು. ನಮ್ಮನ್ನು ಸಮಾಧಾನಗೊಳಿಸುವಂತೆ ಏನಾದರೂ ಹೇಳುತ್ತೀರಾ?"

ಪ್ರಶ್ನೆಯಲ್ಲಿ ಕಹಿಯೇನೂ ಇರಲಿಲ್ಲ. ಫಿಲಿಪ್ ಕೊಟ್ಟ ಉತ್ತರ ಸರಿಯಾಗಿ ಕೇಳಿಸಲಿಲ್ಲ. ಆದರೆ ಅವರ ಮುಖದಲ್ಲಿ ಮುಗುಳುನಗೆಯೂ ಸ್ನೇಹಭಾವವೂ ಇದ್ದದ್ದು ಸ್ಪಷ್ಟವಾಗಿ ಕಂಡಿತು.

ಇಂಗ್ಲೆಂಡ್–ಅಮೆರಿಕಗಳ ನಂಟತನಕ್ಕೆ ಬೇಕಾದಷ್ಟು ಪ್ರಾಮುಖ್ಯ ದೊರೆಯಿತು. ಯಾರೋ ಒಬ್ಬರು (ಅಮೆರಿಕನ್ನರೋ ಆಂಗ್ಲರೋ–ನೆನಪಿಲ್ಲ) ರಾಣಿ ಎಲಿಜಬೆತ್‌ರಿಗೂ ಅಮೆರಿಕದ ಸೇನಾನಿಯೂ ಪ್ರಥಮ ಅಧ್ಯಕ್ಷರೂ ಆದ ಜಾರ್ಜ್ ವಾಷಿಂಗ್ಟನ್‌ರಿಗೂ ಹತ್ತಿರದ ಸಂಬಂಧ, ರಾಣಿಯು ವಾಷಿಂಗ್ಟನ್‌ರ ಏಳನೇ ತಲೆಯ ದಾಯಾದಿ, ಎಂದು ಕೂಡ ಪತ್ತೆಮಾಡಿದರಂತೆ! ಅದು ನಿಜವಾದರೆ ಇಂಗ್ಲೆಂಡಿನವರೂ ನಂಟತನವನ್ನು ಆನಂದದಿಂದಲೇ ನೆನೆದಿರಬಹುದು. ಅದರ ಜೊತೆಗೆ ಕೃತಜ್ಞತೆಯೂ ಬೆರೆದಿರಬಹುದು. ಪ್ರಪಂಚ ಸಂಗ್ರಾಮ

---

* "The heir of George III made a triumphant entry Wednesday (July 7) into the forgiving hearts of millions of Americans."

ಗಳೆರಡರಲ್ಲೂ ಅಮೆರಿಕದ ನೆರವಿಲ್ಲದಿದ್ದರೆ ಯೂರೋಪು ತತ್ತರಿಸಿ ಹೋಗುತ್ತಿತ್ತು. ಯುದ್ಧ ಮುಗಿದ ಮೇಲೂ 'ಹಳೆಯ ದೇಶ'ದವರು ಅಮೆರಿಕದಿಂದ ಬೇಕಾದಷ್ಟು ಸಹಾಯ ಪಡೆದಿದ್ದಾರೆ. ಮುಂದೂ ಅವರ ಸಹಾಯ ಬೇಕಾಗಬಹುದು. ಅಮೆರಿಕನೊಡನೆ ಸೌಹಾರ್ದದಿಂದಿರುವುದು ಬುದ್ಧಿವಂತಿಕೆಯೂ ಹೌದು—ಸಿನಿಕರು "ಇಂಗ್ಲೆಂಡಿನ ಬ್ರೆಡ್ಡಿಗೆ ಬೆಣ್ಣೆ ಅಮೆರಿಕದಿಂದ ಬರಬೇಕು" ಎಂದಾರು! ರಾಣಿಯವರು "ನಾವು ಅಮೆರಿಕವನ್ನು ಕಳೆದುಕೊಂಡದ್ದರಿಂದ ದೊಡ್ಡ ಪಾಠ ಕಲಿತಂತಾಯಿತು" ಎಂಬ ಅರ್ಥಬರುವ ಮಾತಾಡಿದರೆಂದು ನೆನಪು. ಇಂಗ್ಲೆಂಡಿಗೆ ಈಗ ಅಮೆರಿಕ ತಮ್ಮ ಕೈತಪ್ಪಿಸಿಕೊಂಡು ಸ್ವಾತಂತ್ರ್ಯ ಗಳಿಸಿಕೊಂಡದ್ದು ಒಳ್ಳೆಯದೇ ಆಯಿತು ಎನ್ನಿಸುತ್ತಿರಬೇಕು. ಇವೆರಡೂ ಈಗಲೂ ಒಂದೇ ಆಡಳಿತಕ್ಕೆ ಒಳಪಟ್ಟು ಒಂದೇ ರಾಷ್ಟ್ರವಾಗಿದ್ದಿದ್ದರೆ, ಆ ರಾಷ್ಟ್ರದಲ್ಲಿ ಮೊದಲು ಬೇಯುತ್ತಿದ್ದದ್ದು ಅಮೆರಿಕದ ಬೇಳೆ—ಇಂಗ್ಲೆಂಡಿನದಲ್ಲ! ಸಂಪತ್ತಿನಲ್ಲೂ ಶಕ್ತಿಯಲ್ಲೂ ಇಂಗ್ಲೆಂಡು ಹಿಂದಾಗಿದೆ.

ಇಂಗ್ಲೆಂಡ್ ಅಮೆರಿಕಗಳು ಗಳಿಸಿದ ವಿಜಯ ಐಶ್ವರ್ಯಗಳು ಅಂತಿರಲಿ. ಎಷ್ಟೋ ರಾಷ್ಟ್ರಗಳು ಆ ಬಗೆಯ ಸಾಧನೆ ಮಾಡಿದ್ದಾಗಿದೆ, ಅವು ಕಟ್ಟಿದ ಸಾಮ್ರಾಜ್ಯಗಳು ಮಣ್ಣು ಮುಕ್ಕಿದ್ದೂ ಆಗಿದೆ. ಹಿಂದೆ ಜಾಮ್ಷಿದನು ಸುರಾಮತ್ತನಾಗಿ ವೈಭವದಿಂದ ಮೆರೆದ ಬಳಿ ಇಂದು ಸಿಂಹಗಳೂ ಓತಿಗಳೂ ದರ್ಬಾರು ನಡೆಸುತ್ತಿವೆಯಂತೆ—ಉಮರ್ ಖಯ್ಯಾಮ್ ಹೇಳುತ್ತಾನೆ! ಆದರೆ ಇವೆರಡು ರಾಷ್ಟ್ರಗಳೂ ಸಾಹಿತ್ಯ, ವಿಜ್ಞಾನ, ಮುಂತಾದುವುಗಳಲ್ಲಿ ಮಾಡಿದ ಸಾಧನೆ ಮರೆಯತಕ್ಕದ್ದಲ್ಲ. ಅವು ಈಗ ಸ್ನೇಹಭಾವದಿಂದಿರುವುದು ವಿಶ್ವಸೌಹಾರ್ದಕ್ಕೆ ಪೀಠಿಕೆಯಾಗುವುದಾದರೆ! ಆದರೆ ಈ ದುಷ್ಟ ಪ್ರಪಂಚದಲ್ಲಿ ಸಾಮಾನ್ಯವಾಗಿ ಎರಡು ರಾಷ್ಟ್ರಗಳು ಸ್ನೇಹ ಬೆಳೆಸುವುದೆಂದರೆ ಮೂರನೆಯದನ್ನು ಹತ್ತಿಕ್ಕುವುದಕ್ಕೆ!

## ರಾಕೀ ಪರ್ವತಪ್ರಾಂತ

ರಾಮು ಪ್ರತಿವರ್ಷವೂ ಒಂದು ತಿಂಗಳು ವಿಶ್ರಾಂತಿ ತೆಗೆದುಕೊಳ್ಳುವ ಪರಿಪಾಠ ಇಟ್ಟುಕೊಂಡಿದ್ದಾನೆ. ಡಯಾನ ಇಂಗ್ಲೆಂಡಿನಿಂದ ಬಂದ ಮೇಲೆ ಈ ವರ್ಷದ ರಜ ಆರಂಭವಾಗಬೇಕು. ಅಮೆರಿಕದಲ್ಲಿ ವಿಶ್ರಾಂತಿ ಎಂದರೆ, ನಾವು ಇರುವ ಊರಿನಲ್ಲೂ ಸುತ್ತಮುತ್ತಲೂ ಕಾರನ್ನು ಓಡಿಸುವ ಬದಲು ಮತ್ತಾವು

ದಾದರೂ ಕಡೆಯಲ್ಲಿ ಓಡಿಸುವುದು—ಬಸ್ ಚಾಲಕನ ರಜ (bus mans holiday)!* ರಾಮುವಿನ ಮನಸ್ಸಿನಲ್ಲಿ ಆ್ಯರಿಸೋನಕ್ಕೆ ಹೋಗಿ ಗ್ರ್ಯಾಂಡ್ ಕ್ಯಾನ್ಯನ್ (Grand Canyon) ನೋಡಿಕೊಂಡು ಬರಬೇಕೆಂಬ ಯೋಚನೆಯಿತ್ತು. 1973ರಲ್ಲೇ ಹಾಕಿಕೊಂಡ ಈ ಕಾರ್ಯಕ್ರಮ ಯಾವುದೋ ಕಾರಣದಿಂದ ನಡೆಯಲಿಲ್ಲ. ಈ ಸಲ ಆದರ ಮಾತು ಬಂದಾಗ ನಮ್ಮ ಜೊತೆಯಲ್ಲಿದ್ದ ಸ್ನೇಹಿತರೊಬ್ಬರು "ಈ ಕಾಲದಲ್ಲಿ ಕೆನಡಾಕ್ಕೆ ಹೋದರೆ ಚೆನ್ನ. ಬ್ಯಾನ್ಫ್ ನ್ಯಾಷನಲ್ ಪಾರ್ಕು, ಲೂಯೀಸ್ ಸರೋವರ, ಅಲ್ಲಿಯ ಹಿಮಾವೃತ್ತ ಪರ್ವತಗಳು—ಇವನ್ನೆಲ್ಲ ನೋಡುವುದಕ್ಕೆ ಹತ್ತು ಕಣ್ಣು ಸಾಲದು" ಎಂದು ಸಲಹೆ ಕೊಟ್ಟರು.

ಹಿಮಾವೃತ ಪರ್ವತ ಎಂದೊಡನೆ ನನ್ನ ಕಿವಿ ನೆಟ್ಟಗಾಯಿತು. ನಾನು ಬಯಲು ಸೀಮೆಯವನು. ಆದರೂ—ಅಥವಾ ಆದ್ದರಿಂದ?—ನನಗೂ ಪರ್ವತಪ್ರಾಂತಕ್ಕೂ ಮಾನಸಿಕ ಬಾಂಧವ್ಯ ಹೆಚ್ಚು. ನಮ್ಮ ಜಿಜ್ಞಾಸುಗಳು, ಭಕ್ತರು, ತಪಸ್ವಿಗಳು, ಕವಿಗಳು, ಪುರಾಣೇತಿಹಾಸಕಾರರು, ಎಲ್ಲರ ಮನಸ್ಸನ್ನೂ ಸೂರೆಗೊಂಡಿರುವ, ನಮ್ಮ ಪುಣ್ಯನದಿಗಳ ಉಗಮಸ್ಥಾನವಾದ ಹಿಮಾಲಯ ಪ್ರಾಂತದಲ್ಲಿ ಮನದಣಿಯ ಸಂಚರಿಸಬೇಕೆಂಬ ಉತ್ಕಟವಾದ ಬಯಕೆ ಇನ್ನೂ ಕನಸಾಗಿಯೇ ಉಳಿದಿದೆ. ಬದರೀನಾಥವೊಂದಕ್ಕೆ ಒಂದು ಸಾರಿ 'ಹೋದ ಪುಟ್ಟ, ಬಂದ ಪುಟ್ಟ' ಎಂಬಂತೆ (ಅದೂ ಜೀಪ್‌ನಲ್ಲಿ!) ಹೋಗಿ ಬಂದರೆ 'ಪೃಥಿವ್ಯಾ ಇವ ಮಾನದಂಡಃ' ಇರುವ ಭವ್ಯ ಪರ್ವತ ಮಾಲೆಯನ್ನು ನೋಡಿದಂತಾಯಿತೆ! ಒಂದು ಸಾರಿ ವಿಮಾನದಲ್ಲಿ ಹೋಗುತ್ತಿದ್ದಾಗ ಹಿಮಾವೃತ ಆಲ್ಪ್ಸ್ ಪರ್ವತ ಪಂಕ್ತಿಯ ದಿವ್ಯ ಸೌಂದರ್ಯವನ್ನು ಕಂಡೆ. ನನ್ನ ಆಸೆ ತೃಪ್ತಿ ಪಡೆಯುವ ಬದಲು ಸಾಣೆ ಹಿಡಿದಂತಾಯಿತು, ಇದೊಂದು ವೇದನೆ ಎನ್ನುವಷ್ಟು ತೀವ್ರವಾಯಿತು. ಹಿಮಾಲಯದಲ್ಲಿ ಸಂಚರಿಸುವುದಂತೂ ಕನಸೇ—ನನ್ನ ವಯಸ್ಸನ್ನು ನೆನೆದುಕೊಂಡರೆ. ಕೆನಡಾದಲ್ಲಿ ಅದೇ ಬಗೆಯ ಸೌಂದರ್ಯವನ್ನು ಸ್ವಲ್ಪವಾದರೂ ಅನುಭವಿಸಬಹುದೇನೊ. ಇಲ್ಲಿ ಸಂಚಾರಕ್ಕೆ ಬೇಕಾದ ಸೌಲಭ್ಯಗಳೆಲ್ಲ ಇವೆ, ನನ್ನ ಯೋಗಕ್ಷೇಮ ನೋಡಿಕೊಳ್ಳಲು ರಾಮು ದಯಾನ ಇದ್ದಾರೆ.... ಇದರ ಆಕರ್ಷಣೆ ಹೆಚ್ಚಿದಂತೆಲ್ಲ ಗ್ರ್ಯಾಂಡ್ ಕ್ಯಾನ್ಯನ್ ಮೇಲಿನ ಆಸಕ್ತಿಯೂ ಹೆಚ್ಚಿತು.

* ಇಂಗ್ಲಿಷ್‌ನಲ್ಲಿ 'ಬಸ್ ಚಾಲಕನ ರಜ' ಎಂಬುದೊಂದು ಗಾದೆ. ಬಸ್ ಚಾಲಕ ರಜ ತೆಗೆದುಕೊಂಡರೆ ತನ್ನ ಬಸ್ಸಿಗೆ ಬದಲಾಗಿ ಇನ್ನೊಂದು ಬಸ್ಸಿನಲ್ಲಿ ಕೂತು ಪ್ರಯಾಣ ಮಾಡುತ್ತಾನೆ. ಎಂದಿದ್ದರೂ ಬಸ್ಸು ಅವನ ತಲೆಗೆ ಕಟ್ಟಿದ್ದು!

ಕಮರಿಯನ್ನು ನೋಡಬೇಕಾದರೆ ತಲೆ ಬಾಗಬೇಕು. ಪರ್ವತವನ್ನು ನೋಡಬೇಕಾದರೆ ತಲೆ ಎತ್ತಬೇಕು! ನನಗೆ ತಲೆಯೆತ್ತಿ ನಡೆಯುವುದೇ ಹಿತ. ಆ ಕಮರಿಯ ವಿಷಯ ನಾನು ಕೇಳಿದ್ದ ಹೊಗಳಿಕೆ ಅತಿಯಾದ್ದರಿಂದ ವೆಗಟಾಗಿತ್ತು.

ನನಗೆ ಗ್ರ್ಯಾಂಡ್ ಕ್ಯಾನ್ಯನ್ ಮೇಲಿನ ವ್ಯಾಮೋಹವಿರಬೇಕೆಂದು ಭಾವಿಸಿ ರಾಮು ಕೇಳಿದ :

"ಏನು ಮಾಡೋಣ? ಲೇಕ್ ಲೂಯೀಸ್‌ಗೆ ಹೋಗಬಹುದು. ತೊಂದರೆಯೇನೂ ಇಲ್ಲ. ಆದರೆ ಗ್ರ್ಯಾಂಡ್ ಕ್ಯಾನ್ಯನ್ ಮೂರು ವರ್ಷದಿಂದ ಕಾದಿದೆ!"

"ಕಾದಿರಲೇಳು. ಶಬರಿ ಎಷ್ಟು ವರ್ಷ ಕಾದಿದ್ದಳು, ರಾಮ ಬರುವನೆಂದು! ಅಹಲ್ಯೆ ಎಷ್ಟು ಶತಮಾನ ಕಾದಿದ್ದಳು! ಈ ಕ್ಯಾನ್ಯನ್‌ದೇನಂತೆ ಹೆಚ್ಚುಗಾರಿಕೆ?"

ರಾಮು "ನನಗೆ ಬೇಕಾಗಿದ್ದದ್ದೂ ಅದೇ" ಅಂದ.

ಡಯಾನ ಸುನೀಲ್ ಇಬ್ಬರೂ ಜುಲೈ ಮೊದಲ ವಾರದಲ್ಲೇ ಬಂದರು. ಚಿಕ್ಕ ಮಗುವಾದ ಅರುಣನನ್ನು ಪ್ರವಾಸಕಾಲದಲ್ಲಿ ನೋಡಿಕೊಳ್ಳುವುದು ಕಷ್ಟ. ಡಯಾನಳ ಅಕ್ಕ, ಲ್ಯಿನ್, ಅವನ ಯೋಗಕ್ಷೇಮ ವಹಿಸಿಕೊಂಡಿದ್ದಳು. ನಾವು ಪ್ರವಾಸ ಮುಗಿಸಿಕೊಂಡು ಬರುವ ವೇಳೆಗೆ ಲ್ಯಿನ್ ಅರುಣರಿಬ್ಬರೂ ಜೇನ್ಸ್‌ವಿಲ್‌ಗೆ ಬರುವಂತೆ ಏರ್ಪಾಡಾಗಿತ್ತು.

ನಾವು ಹೊರಟದ್ದು ಜುಲೈ 21ನೆಯ ತಾರೀಖು. ಅಮೆರಿಕದಲ್ಲಿ ಕಾರ್ ಪ್ರಯಾಣಕ್ಕೆ ಮಾಡಿಕೊಳ್ಳಬೇಕಾದ ಸಿದ್ಧತೆ ತೀರ ಸರಳವಾದದ್ದು. ಕ್ಷೌರದ ಸಲಕರಣೆ (ನನಗೂ ದಾಡಿಗೂ ಬದ್ಧ ದ್ವೇಷವಿರುವುದರಿಂದ), ಹಲ್ಲುಜ್ಜುವ ಬ್ರಷ್ಷು, ಬದಲಾಯಿಸಲು ಎರಡು ಜೊತೆ ಬಟ್ಟೆ, ಇಷ್ಟನ್ನು ಚೀಲಕ್ಕೆ ತುಂಬಿದರೆ ಸರಿ; ಜಯಪರಮೇಶ್ವರಿ ಹೇಳುವುದೊಂದೇ ಬಾಕಿ. ಆದರೂ ನನ್ನ ಮನಸ್ಸಿನಲ್ಲಿ ಸಣ್ಣದೊಂದು ಆತಂಕವಿತ್ತು: ಒಂದಲ್ಲ ಎರಡಲ್ಲ, ಇಪ್ಪತ್ತು ದಿನದ ಪ್ರಯಾಣ. ಅನ್ನಬ್ರಹ್ಮದ ಸಾಕ್ಷಾತ್ಕಾರ ಮಾಡಿಕೊಳ್ಳುವುದು ಹೇಗೆ? ನನ್ನ ಮಟ್ಟಿಗೆ 'ಅನ್ನ' ಎನ್ನುವುದು ಎಲ್ಲ ತಿನಿಸುಗಳಿಗೂ ಅನ್ವಯಿಸುವ ಪದವಲ್ಲ. ಲಕ್ಷಣವಾಗಿ ಅಕ್ಕಿ ಬೇಯಿಸಿ ಮಾಡಿದ ಅನ್ನ. ಅದು ಇಲ್ಲಿಯ ರೆಸ್ಟೊರಾಂಟುಗಳಲ್ಲಿ ಸಾಮಾನ್ಯವಾಗಿ ಸಿಕ್ಕುವುದಿಲ್ಲ. ಆದರೂ ಯಾವುದಾದರೂ ಕರುಣಾರ್ದ್ರಚಿತ್ತದ ದೈವ ಕಣ್ಣುಬಿಟ್ಟು ನೋಡೀತೋ ಏನೊ! ನಿರಾಶೆ ಸಲ್ಲದು, ನಮ್ಮ ಸಿದ್ಧತೆ ನಾವು ಮಾಡಿಕೊಳ್ಳಬೇಕು, ಎಂದುಕೊಂಡು

ಹುಳಿಯುನ್ನದ ಗೊಜ್ಜನ್ನೂ ಹುಣಸೆಕಾಯಿ ತ್ವಕ್ಕನ್ನೂ ಕಟ್ಟಿಕೊಂಡೆ. ಅನ್ನ ಸಿಕ್ಕಿದರೆ ಅವಕ್ಕೆಲ್ಲ ಉಪಯೋಗವುಂಟು; ಸಿಕ್ಕದಿದ್ದರೆ ನಷ್ಟವಿಲ್ಲ. ಇದಾದ ಮೇಲೆ ಉಳಿದ ಯೋಚನೆಯೊಂದೇ: ಮೋಟಲುಗಳಲ್ಲಿ ಕಾಫಿ ಸರಬರಾಜು ಮಾಡುವುದಿಲ್ಲ. ನಾನೋ. ಬೆಳಗಿನ ಜಾವ ನಾಲ್ಕು ಘಂಟೆಗೇ ಕಾಫಿ ಕುಡಿಯುವವನು. ಆದ್ದರಿಂದ ಕ್ಷಣಸಿದ್ಧ ('ಧಿಡೀರ್' ಎಂಬ ಪದವನ್ನು ನಾನು ಇಕ್ಕಳದಿಂದಲೂ ಮುಟ್ಟಲೊಲ್ಲೆ. ಖಂಡನೆಗಾಗಿ ಇಲ್ಲಿ ಅದನ್ನು ಬರೆದ ಮೇಲೆ ಕೈ ತೊಳೆದುಕೊಂಡಿದ್ದೇನೆ!) ಕಾಫಿ, ಸಕ್ಕರೆ, ಹಾಲಿನಪುಡಿ, ಇವನ್ನೂ ಚೀಲಕ್ಕೆ ಸೇರಿಸಿದೆ. ಇನ್ನು ಬಿಸಿಲೋ ಮಳೆಯೋ ಸುಂಟರಗಾಳಿಯೋ ತಂಗಾಳಿಯೋ, ಬಂದದ್ದೆಲ್ಲ ಬರಲಿ, ಸುಖದುಃಖೇ ಸಮೇ ಕೃತ್ವಾ ಇದ್ದು ಬಿಡುತ್ತೇನೆ.

ಆಹಾರದ ವಿಷಯದಲ್ಲಿ ಇಲ್ಲಿ ಕಲಿಯಬೇಕಾದ್ದನ್ನೆಲ್ಲ ಕಲಿತಾಯಿತೆಂದು ಭ್ರಮಿಸಿ ಶಾಕಾಹಾರಿಗಳಿಗೊಂದು ಸಂದೇಶವನ್ನು ಬೇರೆ ಕೊಟ್ಟಿದ್ದೇನಷ್ಟೆ. ಈ ಸಲ 2–3 ದಿನ ಪ್ರಯಾಣ ಮಾಡುವುದರೊಳಗೇ ತಿಳಿಯಿತು, ಕಲಿಯಬೇಕಾದ್ದು ಇನ್ನೂ ಇದೆಯೆಂದು. ಯಾವುದಾದರೂ ದೈವ ಅನ್ನವನ್ನು ಒದಗಿಸೀತು ಎಂದುಕೊಂಡದ್ದು ಸುಳ್ಳಾಗಲಿಲ್ಲ. ದಾರಿಯ ಡಿಪಾರ್ಟ್‌ಮೆಂಟ್ ಸ್ಟೋರುಗಳಲ್ಲಿ ನಿಮಿಷಾನ್ನವೂ (ಬಿಸಿನೀರು ಚುಮುಕಿಸಿಬಿಟ್ಟರೆ ಒಂದು ನಿಮಿಷದಲ್ಲೇ ಸಿದ್ಧವಾಗುವ ಅನ್ನ; ಅದನ್ನು ಮೊದಲೇ ಮುಕ್ಕಾಲು ಬೇಯಿಸಿರುತ್ತಾರೆ) ಬೇಯಿಸಿದ ತರ್ಕಾರಿ ಟಿನ್ನುಗಳೂ ಸಿಕ್ಕುತ್ತವೆಂಬುದನ್ನು ಪತ್ತೆ ಮಾಡಿದೆವು. ನೀರಿನೊಡನಿರುವ ಆ ತರ್ಕಾರಿಗೆ ಉಪ್ಪು ಮೆಣಸು ಬೆರಸಿದರೆ ಸೊಗಸಾದ ಸಾಂಬಾರ್ ಆಗುತ್ತದೆ. ನಂಜಿಕೊಳ್ಳುವುದಕ್ಕೆ ಬೇಕಾದರೆ ಈರುಳ್ಳಿ ಬಳೆಗಳನ್ನು (onion rings—ಬಳೆಯ ಆಕಾರದಲ್ಲಿ ಕರಿದು ಸಿದ್ಧಮಾಡಿದ ಬೋಂಡ) ತರಬಹುದು. ಈ ಬಗೆಯ ಊಟಕ್ಕೆ ಒಂದೇ ಡಾಲರು ವೆಚ್ಚ. ರೆಸ್ಟೊರಾಂಟಿನ ಊಟಕ್ಕೆ ನಾಲ್ಕು ಡಾಲರು. ಇವನು ಜಿಪುಣ ಎಂದುಕೊಳ್ಳಬೇಡಿ. ನಾನು ಹಿಗ್ಗುತ್ತಿರುವುದು ಮೂರು ಡಾಲರ್ ಉಳಿಸಿದ್ದಕ್ಕಲ್ಲ, ಆ ರೆಸ್ಟೊರಾಂಟಿನವನಿಗೆ ಲಾಭ ತಪ್ಪಿಸಿದ್ದಕ್ಕಾಗಿ. ಈ bloated capitalistsಗೆ (ಬೊಜ್ಜು ಬೆಳೆದ ಬಂಡವಾಳಗಾರರಿಗೆ) ಹಾಗೇ ಆಗಬೇಕು!

## ಬ್ಯಾನ್ಫ್ ನ್ಯಾಷನಲ್ ಪಾರ್ಕ್

ನಾವು ಕೈಗೊಂಡಿದ್ದದ್ದು ಸುಮಾರು 5000 ಮೈಲಿಯ ಪ್ರಯಾಣ. ಆದ್ದರಿಂದ ಮೊದಲ ಎರಡು ದಿನ ರಾತ್ರಿ ತಂಗುವುದು ವಿನಾ ಎಲ್ಲಿಯೂ ಕಾಲ ಕಳೆಯದೆ ದಿನಕ್ಕೆ 450–500 ಮೈಲಿಯಂತೆ ಮಿನಿಸೋಟ ಮತ್ತು ಉತ್ತರ

ಡಕೋಟ ರಾಜ್ಯಗಳನ್ನು ದಾಟಿ ಗ್ರ್ಯಾಂಡ್ ಫೋರ್ಕ್ಸ್ ಎಂಬ ಊರಿಗೆ ಬಂದೆವು. ಅದು ಕೆನಡಾ ಗಡಿಯ ಹತ್ತಿರ ಇದೆ. ಗಡಿಯ ಅಧಿಕಾರಿ ವೀಸಾ ವಿಷಯದಲ್ಲಿ ಏನಾದರೂ ತಕರಾರು ಮಾಡಿಯಾನು ಎಂಬ ಶಂಕೆಯಿತ್ತು. ಆದರೆ ವರಾಂಡದಲ್ಲಿ ನಿಂತಿದ್ದ ಅಧಿಕಾರಿ ನಮ್ಮ ಕಾರಿನ ಬಳಿಗೇ ಬಂದು ಪಾಸ್‌ಪೋರ್ಟುಗಳ ಮೇಲೆ ಕಣ್ಣು ಹಾಯಿಸಿ "ಓ. ಕೆ., ನಿಮ್ಮ ಪ್ರಯಾಣ ಸುಖಕರವಾಗಲಿ" ಎಂದು ಹರಸಿ ನಮ್ಮನ್ನು ಕಳಿಸಿಕೊಟ್ಟ. ಪಾಸ್‌ಪೋರ್ಟು ಗಳ ಮೇಲೊಂದು ಮುದ್ರೆ ಒತ್ತುವ ಗೋಜಿಗೂ ಹೋಗಲಿಲ್ಲ.

ಕೆನಡಾದ ಮಾನಿಟೋಬ ಸಸ್ಕಾಚಿವನ್ ರಾಜ್ಯಗಳೆರಡನ್ನೂ ದಾಟಿ ನಾವು ಆಲ್ಬರ್ಟಾದಲ್ಲಿರುವ ಬ್ಯಾನ್ಫ್ ನ್ಯಾಷನಲ್ ಪಾರ್ಕಿಗೆ ಹೋಗಬೇಕು. ಲೇಕ್ ಲೂಯೀಸ್ ಇರುವುದು ಆ ಪಾರ್ಕಿನಲ್ಲೇ. ಗಡಿಯಿಂದ ಸುಮಾರು 600–700 ಮೈಲಿಯ ಪ್ರಯಾಣ. ಒಂದು ಕಡೆ ವಿಶ್ರಾಂತಿಗೆಂದು ನಿಂತಾಗ ರಸ್ತೆಯ ಇಕ್ಕೆಲ್ಲದಲ್ಲೂ ಕಾಡು ಕಳೆಯಂತೆ ಬೆಳೆದಿದ್ದ ಒಂದು ಬಗೆಯ ಗಿಡ ಕಣ್ಣಿಗೆ ಬಿತ್ತು. ಹಸುರು ಮತ್ತು ಬೂದಿಯ ಬಣ್ಣ ಬೆರೆದ ಸಣ್ಣ ಎಲೆಗಳು. ಎಲೆಗಳ ಮಾಟ ನಮ್ಮ ಮರುಗದಂತೆಯೇ ಇತ್ತು. ಅದರ ಜೊತೆಗೆ ಅಲ್ಲಲ್ಲೇ ಅದೇ ಬಣ್ಣದ ಇನ್ನೊಂದು ಬಗೆಯ ಗಿಡ—ಅದು ನಮ್ಮ ದವನದಂತಿತ್ತು. ನನ್ನ ಕುತೂಹಲ ಕೆರಳಿ ಹತ್ತಾರು ಗಿಡಗಳನ್ನು ಕಿತ್ತು ತಂದೆ—ಮರುಗ ದವನ ಗಳಂತೆಯೇ ಸುವಾಸನೆ! ಹಳೆಯ ಸ್ನೇಹಿತರಿಬ್ಬರನ್ನು ಕಂಡಂತೆ ಆನಂದ ವಾಯಿತು. ಆ ಗಿಡಗಳು ಮರುಗ ದವನಗಳ ಸೋದರರು ; ಅಥವಾ ದೊಡ್ಡಪ್ಪ ಚಿಕ್ಕಪ್ಪನ ಮಕ್ಕಳು ಎನ್ನಬಹುದೇನೊ; ಮಾನಿಟೋಬ ಸಸ್ಕಾಚಿವನ್ ಆಲ್ಬರ್ಟಾ ವೈಯೊಮಿಂಗ್ ರಾಜ್ಯಗಳಲ್ಲಿ ಅನೇಕ ಕಡೆ ಈ ಗಿಡಗಳು ಹುಲುಸಾಗಿ ಬೆಳೆದಿದ್ದುದನ್ನು ನೋಡಿದೆ.

ಕೆನಡಾದ ಹೆದ್ದಾರಿಗಳಲ್ಲಿ ಮಾರ್ಗಸೂಚನೆಗಳು (road signs) ಸಂಯುಕ್ತ ಸಂಸ್ಥಾನಗಳಲ್ಲಿರುವಷ್ಟು ಸಮರ್ಪಕವಾಗಿ ಕಾಣಲಿಲ್ಲ. ಒಂದೆರಡು ಸ್ಥಳಗಳಲ್ಲಿ ದಾರಿ ಕವಲೊಡೆದ ಕಡೆ ಯಾವ ರಸ್ತೆ ಎಲ್ಲಿಗೆ ಹೋಗುತ್ತದೆಂಬು ದನ್ನು ಸೂಚಿಸಿರಲಿಲ್ಲ. ಇದು ಅಮೆರಿಕದಲ್ಲಿ ಅಪರೂಪ! ನಮಗೆ ಮೊದಲು ಸಿಕ್ಕಿದ ರೆಸ್ಟೋರಾಂಟಿನ ಅನುಭವವೂ ಹಿತವಾಗಲಿಲ್ಲ. ನಾವು ಫಲಾಮೃತ ಬೇಕೆಂದಾಗ ಅಲ್ಲಿಯ ಮಾಣಿ (ವೆಯ್ಟರನ್ನು ಮಾಣಿ ಎಂದು ಕರೆದಿದ್ದೇನೆ) "ತಲಾ ಒಂದು ಡಾಲರಿಗಿಂತ ಕಡಮೆಯ ಆರ್ಡರಾದರೆ ನಾವು ಸರಬರಾಜು ಮಾಡುವುದಿಲ್ಲ" ಎಂದು ಎಚ್ಚರಿಕೆ ಕೊಟ್ಟ. ನಮ್ಮ ಆರ್ಡರು* ಒಂದು ಡಾಲರಿ

---

*ಆರ್ಡರು (order): ಅಮೆರಿಕದ ರೆಸ್ಟೋರಾಂಟುಗಳಲ್ಲಿ ಇದೊಂದು

ಗಿಂತ ಹೆಚ್ಚೇ ಆಗುತ್ತಿತ್ತು—ಸುನೀಲ ಒಬ್ಬನಿಗೇ ಅದು ಸಾಕಾಗುತ್ತಿರಲಿಲ್ಲ. ಆದರೆ ಆ ವೆಯ್ಟರನ ಅವಿನಯದಿಂದ ಅಸಮಾಧಾನಗೊಂಡು ನಾವು ಎದ್ದು ಹೊರಟೆವು. ಗಿರಾಕಿಗಳನ್ನು ಕಳೆದುಕೊಂಡೆನಲ್ಲ ಎಂದು ರೆಸ್ಟೋರಾಂಟಿನವ ನೇನೂ ಕಣ್ಣೀರು ಕರೆಯಲಿಲ್ಲ. ಆದರೆ ನಾವು ನಮ್ಮ ಪ್ರತಿಷ್ಠೆಯನ್ನು ಉಳಿಸಿ ಕೊಂಡೆವು. ನಮ್ಮ ಬಾಯಾರಿಕೆಯನ್ನೂ ಉಳಿಸಿಕೊಂಡೆವು.

ರಾಕೀ ಪರ್ವತಪ್ರಾಂತದ ಆ ಭಾಗಕ್ಕೊಂದು ಹೆಬ್ಬಾಗಿಲು ಎನ್ನಿಸಿ ಕೊಂಡಿರುವ ಊರು—ಕ್ಯಾನ್‌ಮೋರ್. ಕೆನಡಾದಲ್ಲೂ ಸಂಯುಕ್ತ ಸಂಸ್ಥಾನಗಳಲ್ಲೂ 2000 ಮೈಲಿಗಳಿಗಿಂತ ಹೆಚ್ಚು ದೂರ ಹಬ್ಬಿರುವ ರಾಕೀ ಪರ್ವತಶ್ರೇಣಿಯ ವಿಷಯ ಯಾವುದೋ ಸಂದರ್ಭದಲ್ಲಿ ಸ್ವಲ್ಪ ಓದಿದ್ದೆ. ಆದರೆ ನೆನಪಿನಲ್ಲಿ ಉಳಿದಿದ್ದದ್ದು ಅದು ಗ್ರಿಸ್ಲಿ ಕರಡಿಗಳ (grizzly bears) ವಾಸಸ್ಥಾನ ಎಂಬುದೊಂದು ಮಾತ್ರ. ನಾವು ನೋಡಹೊರಟಿದ್ದ ನ್ಯಾಷನಲ್ ಪಾರ್ಕುಗಳೆಲ್ಲ—ಲೂಯೀಸ್ ಸರೋವರ ; ಇಡೀ ಬ್ಯಾನ್ಫ್ ನ್ಯಾಷನಲ್ ಪಾರ್ಕು ; ಗ್ಲೇಸಿಯರ್, ಗ್ರ್ಯಾಂಡ್ ಟೇಟನ್, ಯೆಲ್ಲೋ ಸ್ಟೋನ್ ಪಾರ್ಕು ಗಳು—ಮತ್ತು ನಾವು ನೋಡಲಾಗದಿದ್ದ ಹಲವಾರು ಪಾರ್ಕುಗಳು ಆ ಪರ್ವ ತದ ಹರವಿನಲ್ಲೇ ಸೇರಿದ್ದವೆಂಬುದು ನನಗೆ ತಿಳಿದಿರಲಿಲ್ಲ. ನಮಗೆ ಕೆನೇಡಿಯನ್ ರಾಕೀಗಳ ಪ್ರಥಮ ಪರಿಚಯವಾದದ್ದೆಂದರೆ ಕ್ಯಾನ್‌ಮೋರಿಗೆ ಹೋದೊಡನೆ ಕಾಣುವ 'ಮೂವರು ಸೋದರಿ'ಯರನ್ನು (the three sisters—ಮೂರು ಭವ್ಯವಾದ ಶಿಖರಗಳು) ನೋಡಿದಾಗ. ಈ ಮೂವರು ಸೋದರಿಯರಲ್ಲೂ 'ಮಾತಾ, ಕೃಪಾಸಾಗರೀ' ಗುಣಗಳ ಲವಲೇಶವೂ ಇಲ್ಲ ; ಮೂವರೂ 'ಮಹಾ ಭಯಕರೀ' ಎನ್ನಬಹುದಾದವರೇ. ಸ್ತ್ರೀ ಸಹಜವಾದ ಮಾರ್ದವ ಕೋಮ ಲತೆಗಳನ್ನು ಧಿಕ್ಕರಿಸಿ ಪಾಷಾಣಶಕ್ತಿಯ ಪ್ರತೀಕಗಳಾಗಿ ನಿಂತಿದ್ದಾರೆ, ಈ ಜೆತ್ತಲೆಬಂಡೆಯ ಸೋದರಿಯರು. ಎಷ್ಟಾಗಲಿ ರಾಕೀ (ಬಂಡೆಯ) ಪರ್ವತದ ಶಿಖರಗಳು ತಾನೆ!

ಕ್ಯಾನ್‌ಮೋರಿನಲ್ಲಿ ನಾವು ಇಳಿದುಕೊಂಡಿದ್ದ ಮೋಟೆಲು ಬಹಳ ಮನೋಹರವಾದ ಸ್ಥಳದಲ್ಲಿತ್ತು; ಕೊಠಡಿಗಳೊಳಗಿನ ವ್ಯವಸ್ಥೆಯೂ ಚೆನ್ನಾ ಗಿತ್ತು. ಕೆನಡಾದ ಪ್ರವಾಸೋದ್ಯಮ ಇಲಾಖೆಯವರು ತಮ್ಮ ಅತಿಥಿಗಳ

---

ಪಾರಿಭಾಷಿಕ ಪದವಾಗಿರುವಂತೆ ತೋರುತ್ತದೆ. 'ಒಂದು ಆರ್ಡರ್ ಐಸ್‌ಕ್ರೀಮ್, ಒಂದು ಆರ್ಡರ್ ಸ್ಯಾಂಡ್‌ವಿಚ್' (one order of ice-cream, one order of sandwich) ಎಂದು ಹೇಳುವುದು ಬಹು ಸಾಮಾನ್ಯ.

ಸೌಕರ್ಯದ ವಿಷಯದಲ್ಲಿ ಬಹಳ ಶ್ರದ್ಧೆ ವಹಿಸುತ್ತಾರೆಂದು ಜನ ಹೇಳುತ್ತಾರೆ. ಸುಂದರವಾದ ಚಿತ್ರಗಳನ್ನುಳ್ಳ ಕರಪತ್ರಗಳನ್ನೂ ಪದರಪತ್ರಗಳನ್ನೂ (folders) ಕೊಡುವುದಲ್ಲದೆ ಪ್ರವಾಸಿಗಳ ಅನಿಸಿಕೆಗಳನ್ನು ತಿಳಿದುಕೊಳ್ಳಲು ಪ್ರಶ್ನಾವಳಿಗಳನ್ನು ತಯಾರು ಮಾಡಿ ಅವನ್ನು ಮೋಟಲುಗಳ ಮೇಜಿನ ಮೇಲಿಟ್ಟಿರುತ್ತಾರೆ. ನಿಮ್ಮ ಹೆಸರೇನು, ಯಾವ ದೇಶದವರು, ನೀವು ಬಂದದ್ದು ಸ್ವಂತ ವಾಹನದಲ್ಲೇ ಅಥವಾ ರೈಲು ಬಸ್ಸು ಇತ್ಯಾದಿಗಳಲ್ಲೇ, ಕೊಠಡಿಯನ್ನು ಕಾದಿರಿಸಲು ಮೊದಲೇ ಏರ್ಪಾಡು ಮಾಡಿದ್ದಿರ, ಇಲ್ಲಿರುವ ಆಕರ್ಷಣೆಗಳಲ್ಲಿ ನಿಮಗೆ ತುಂಬ ಮೆಚ್ಚಿಕೆಯಾದದ್ದೇನು, ಬೇಸರ ತಂದದ್ದೇನು, ಯಾವ ಬಗೆಯ ಸೌಕರ್ಯಗಳನ್ನು ಹೆಚ್ಚು ಬಳಸಿದಿರಿ, ಹಣ ಎಷ್ಟು ವೆಚ್ಚವಾಯಿತು, ಯಾವ ಬಾಬಿಗೆ ಎಷ್ಟು—ಈ ಪ್ರಶ್ನಾವಳಿಗೆ ಉತ್ತರ ಬರೆದುಕೊಡಿ ಎಂದು ಮೋಟಲಿನವರಾಗಲಿ ಇತರರಾಗಲಿ ನಮ್ಮನ್ನು ಕಾಡಲಿಲ್ಲ. ಬರೆದುಕೊಟ್ಟರೆ ತಮಗೂ ಪ್ರವಾಸಿಗಳಿಗೂ ಬಹಳ ಅನುಕೂಲ, ವ್ಯವಸ್ಥೆಯನ್ನು ಉತ್ತಮಗೊಳಿಸಲು ಸಹಾಯವಾಗುತ್ತದೆ, ಎಂದು ವಿನಯದಿಂದ ಸೂಚಿಸಿದರು, ಅಷ್ಟೆ.

ಮಾರನೆಯ ದಿನ ಊಟದ ಹೊತ್ತಿಗೆ ಲೂಯೀಸ್ ಸರೋವರವನ್ನು ತಲಪಬೇಕೆಂದು ಹೊತ್ತಿಗೆ ಮುಂಚೆಯೇ ಹೊರಟೆವು. ರಸ್ತೆಯ ಉದ್ದಕ್ಕೂ ಬೆಟ್ಟಗಳು, ಪೈನ್ ಕಾಡು, ಕಾಡುಬೆಟ್ಟಗಳೆರಡನ್ನೂ ಪ್ರತಿಬಿಂಬಿಸುವ ನಿರ್ಮಲವೂ ಪ್ರಶಾಂತವೂ ಆದ ಸಣ್ಣ ದೊಡ್ಡ ಸರಸ್ಸುಗಳು. ನನ್ನ ಕಿವಿಗೆ ಬಹು ಇಂಪಾಗಿ ತೋರಿದ ಒಂದು ಹೆಸರು—ಅದು ಇಂಡಿಯನ್ ಜನಾಂಗದವರು ಇಟ್ಟಿದ್ದಿರಬೇಕು—ನೆನಪಿನಲ್ಲಿ ನಿಂತಿದೆ: ಮಿನ್ನಿವಾಂಕ (Minnewanka.) ಹೆಸರೆಷ್ಟು ಇಂಪೋ ಸರೋವರವೂ ಅಷ್ಟೇ ಸುಂದರ. ಇದನ್ನೆಲ್ಲ ನೋಡುತ್ತ ಮನಸ್ಸು ಗೆಲುವಾಗಬೇಕು. ಆದರೆ ಅಂದೇಕೋ ನನಗೆ ಸ್ವಲ್ಪ ವಿಚಿತ್ರವಾದ ಅನುಭವವಾಯಿತು. ಹಾವಿನಂತೆ ಸುತ್ತಿ ಸುತ್ತಿ ಹರಿಯುವ ಆ ರಸ್ತೆ ನಮ್ಮನ್ನು ಯಾವುದೋ ಚಕ್ರಭೀಮನ ಕೋಟೆಯೊಳಕ್ಕೆ ಸೆಳೆದೊಯ್ಯುತ್ತಿರುವಂತೆ ತೋರಿತು. ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಎಲ್ಲ ದಿಕ್ಕುಗಳಿಂದಲೂ ಗಿರಿವನಗಳು ನಮ್ಮ ಕಡೆಗೆ ಧಾವಿಸಿ ಬಂದು ನಮ್ಮನ್ನು ಬಂಧಿಸುತ್ತಿವೆ. ಆ 'ಮೂವರು ಸೋದರಿ'ಯರಂತೂ ನಾವು ರಸ್ತೆಯಲ್ಲಿ ತಿರುವು ಹಾಕಿದಂತೆಲ್ಲ ಈಗೊಂದು ಕಡೆ ಆಗೊಂದು ಕಡೆ ನಮ್ಮ ಮೇಲೆ ಕಾವಲಿಟ್ಟ ಭೂತಗಳಂತೆ ಕಾಣಿಸಿಕೊಳ್ಳುತ್ತಿದ್ದರು!

ನಾವು ಮೇಲುಮೇಲಕ್ಕೆ ಹತ್ತಿದಂತೆಲ್ಲ ಈ ಭ್ರಮೆ ಕಳೆದು ಭೂವ್ಯಾಕಾಶಗಳ ವಿಸ್ತಾರ ಮತ್ತೆ ಅನುಭವಕ್ಕೆ ಬರತೊಡಗಿತು. ಅದೇನು ವೈವಿಧ್ಯ,

ಈ ಪ್ರಾಂತದ ಸೊಬಗಿನಲ್ಲಿ! ಬೆಟ್ಟ ಹೊಳೆ ಸರೋವರ; ಒಂದು ತಿರುವಿನಲ್ಲಿ ಕಂಡು ಮತ್ತೊಂದರಲ್ಲಿ ಮರೆಯಾಗುವ ಕಾಡುಹೂವುಗಳ ಹಾಸು; ಮಗ್ಗುಲಲ್ಲಿ ದೇವದಾರುಗಳ ಹಸಿರಿನಿಂದ ಆವೆಮುಚ್ಚಿದ ಕಣಿವೆ, ಅದರಿಂದಾಚೆಗೆ ಮತ್ತೆ ಪರ್ವತಪಂಕ್ತಿ. ಶಿಖರಗಳ ಇಕ್ಕೆಲದಲ್ಲೂ ಎಳೆಬಿಸಿಲಿನಲ್ಲಿ ಹೊಳೆಯುವ ಹಿಮವು ಅದಕ್ಕೆ ಉತ್ತರೀಯವನ್ನು ಹೊದಿಸಿದಂತಿದೆ. ಕೆಲವು ವೇಳೆ ಶಿಖರವೊಂದರ ಭವ್ಯತೆ ನಮ್ಮ ಗಮನಕ್ಕೆ ಬರದಿರಬಹುದೆಂಬ ಶಂಕೆಯಿಂದ ಪ್ರಕೃತಿದೇವಿ ಹಸಿರುಗಪ್ಪಿನ ವನದ ಚೌಕಟ್ಟು ಹಾಕಿ ಅದನ್ನು ಪ್ರದರ್ಶನಕ್ಕಿಡುತ್ತಾಳೆ. ಒಂದುಕಡೆ—ವರ್ಮಿಲಿಯನ್ ಸರೋವರದ ದಾರಿಯಲ್ಲಿ—ಹಿಮವೋಖಲೆ ಹಿಮಮಾಲೆ ಹಿಮಮುಕುಟಗಳನ್ನು ಧರಿಸಿದ ಉನ್ನತ ಶಿಖರ ಆರೇಳು ಸಾಮಂತಶಿಖರಗಳೊಡನೆ ದಿಗ್ವಿಜಯಕ್ಕೆ ಹೊರಟಿದೆ........

ಯೋಜನೆಗನುಸಾರವಾಗಿ ನಾವು ಊಟದ ಹೊತ್ತಿಗೆ ಲೂಯೀಸ್ ಸರೋವರವನ್ನು ತಲಪಿದೆವು. ಇಲ್ಲಿಯ ಪ್ರಕೃತಿಸೌಂದರ್ಯದ ಖ್ಯಾತಿ ಅಮೆರಿಕದಲ್ಲೆಲ್ಲ ಹಬ್ಬಿದೆ. ಪ್ರತಿವರ್ಷವೂ ಬೇಸಗೆಯಲ್ಲಿ ಇಲ್ಲಿಗೆ ಸಾವಿರಾರು ಜನ ಪ್ರವಾಸಿಗಳು ಬರುತ್ತಾರೆ, ಶಾಂತಿಯನ್ನು ಪಡೆಯುವುದಕ್ಕೆ—ಮತ್ತು ಇಲ್ಲಿಯ ಶಾಂತಿಗೆ ಭಂಗ ತರುವುದಕ್ಕೆ. ಈ ವಿರೋಧಾಭಾಸ ಮಾನವಜೀವನಕ್ಕೆ ತಪ್ಪಿದ್ದಲ್ಲ!

ಪ್ರಯಾಣಕಾಲದಲ್ಲಿ ಹಸಿವು ಹೆಚ್ಚು; ಅಲ್ಲದೆ ಈ ಕಳಂಕವಿಲ್ಲದ ವಾತಾವರಣದಲ್ಲಿ ತಿಂದದ್ದೆಲ್ಲ ಬೇಗ ಭಸ್ಮವಾಗಿ ಹೋಗುತ್ತದೆ. ಕಾರಿನಿಂದ ಇಳಿದೊಡನೆ ನಾವು ರೆಸ್ಟೊರಾಂಟಿಗೆ ಹೊರಟೆವು, ಸುಸೀಲನನ್ನು ಹಿಂಬಾಲಿಸಿ. ಹಸಿವನ್ನು ತೀರಿಸಿಕೊಂಡು ಸರೋವರದ ತೀರದಲ್ಲೊಂದು ಕಡೆ ಕಟ್ಟಿರುವ ದೇಶೋವಿಶಾಲವಾದ ಶಬಲವರ್ಣದ ಏರು ನೆಲದ ಮೇಲೆ ಕುಳಿತೆವು. ಕಾಡು ಎಡಬಲಗಳಿಂದ ಬೆಟ್ಟದ ಇಳಿಜಾರನ್ನು ಅನುಸರಿಸಿ ನೀರಿನವರೆಗೂ ಹಬ್ಬಿತ್ತು. ದಟ್ಟವಾಗಿದ್ದ ಈ ಕಾಡುಗಳ ನಡುವೆ ಸರೋವರಕ್ಕೆ ಭವ್ಯವಾದ ಹಿನ್ನೆಲೆಯಾಗಿ ಹಿಮಪರ್ವತ. ಅಲ್ಲಲ್ಲೇ ಪದರಗಲ್ಲು (stratified rock) ಸ್ವಲ್ಪ ಮುಂಚಾಚಿಕೊಂಡಿದ್ದದ್ದರಿಂದ ಹಿಮ ಮೆಟ್ಟಲು ಮೆಟ್ಟಲಾಗಿ ಕಂಡಿತು. ಅವತ್ತು ಬೆಟ್ಟದ ತುದಿಯಲ್ಲಿ ಮೋಡಗಳ ದಟ್ಟಣೆ; ನೀಲವರ್ಣದ ಅಭಾವದಿಂದಾಗಿ ಆಕಾಶವನ್ನೂ ಹಿಮಪರ್ವತವನ್ನೂ ಪ್ರತ್ಯೇಕಿಸುವ ಗಗನರೇಖೆಯಿರಲಿಲ್ಲ. ಛಾಯಾಚಿತ್ರಕಾರನೊಬ್ಬ 'ಇಲ್ಲಿ ಇದೊಂದೇ ಕೊರತೆ' ಎಂದ. ಅವನ ದೃಷ್ಟಿಯಿಂದ ಅದು ನಿಜ. ನನಗೇನೋ ಆಗ ಪರ್ವತದ ಭವ್ಯತೆ ಅದರಿಂದ ಹೆಚ್ಚಿದಂತೆ ತೋರಿತು—ಅದು ಅಸೀಮವಾಯಿತು. ಒಂದೆರಡು ಕಡೆ ಸಣ್ಣ ಗುಡ್ಡಗಳನ್ನು

ಸುತ್ತ ವರಿದು ಬಂದ ಹಿಮೋಪನದಿಗಳನ್ನು ಒಳಗೊಂಡು ಚಲನೆ ಕಾಣದಂತೆ ಹರಿಯುತ್ತಿತ್ತು. 'ವಿಕ್ಟೋರಿಯ ಗ್ಲೇಸಿಯರ್'.

ಡಯಾನ ರಾಮು ಸುನೀಲರು ಸುತ್ತಾಡಲು ಹೊರಟರು; ನಾನು ಅಲ್ಲೇ ಕುಳಿತೆ. ಅಂದೇನೋ ನನ್ನ ಪುಣ್ಯ, ಆ ಸ್ಥಳದಲ್ಲಿ ಜನ ಸಂದಣಿಯಿರಲಿಲ್ಲ. ಎಲ್ಲ ಕಡೆಯಲ್ಲೂ ಕಾಡಿನ ಮತ್ತು ಬೆಟ್ಟಗಳ ರಕ್ಷಣೆಯಿದ್ದದ್ದರಿಂದ ಗಾಳಿಯಿರಲಿಲ್ಲ; ಸರೋವರದಲ್ಲಿ ಕಿರು ಅಲೆಗಳು ಸಹ ಕಾಣುತ್ತಿರಲಿಲ್ಲ. ಅದು ಇತ್ತ ಪರ್ವತದ ಬಿಳುಪನ್ನೂ ಅತ್ತ ಕಾಡಿನ ಹಸುರುಗಪ್ಪನ್ನೂ ಪ್ರತಿಬಿಂಬಿಸುತ್ತ ಧ್ಯಾನದಲ್ಲಿತ್ತು. ನನಗೆ ಶಾಂತಿಯ ಅರಿವಾದದ್ದು ಹಠಾತ್ತಾಗಿಯಲ್ಲ, ಚಳಿಗಾಲದ ಎಳೆಬಿಸಿಲಿನಲ್ಲಿ ಸುಖೋಷ್ಣವು ದೇಹದ ಕಣಕಣಕ್ಕೂ ಮೆಲ್ಲಮೆಲ್ಲನೆ ವ್ಯಾಪಿಸುವಂತೆ. ಆ ವಾತಾವರಣ ಮನಸ್ಸಿನ ವಕ್ರಗತಿಯನ್ನು ನೇರ್ಪಡಿಸಿತು. ಶಾಂತಿ ಇರವಿನಲ್ಲೆಲ್ಲ ಸಾವಧಾನವಾಗಿ ವ್ಯಾಪಿಸಿದ್ದು ಮಾನಸಿಕ ಅನುಭವ ಮಾತ್ರವಲ್ಲ, ಬಾಹ್ಯೇಂದ್ರಿಯಗಳ ಅನುಭವ ಕೂಡ, ಎನ್ನಿಸಿತು....ಇಂಥ ಸ್ಥಳದಲ್ಲೇ ಇರಬೇಕು, ತಪಿಸ್ಸಿನಿಂದ ಇತ್ತ ಕೃಶಾಂಗಿಯೂ ಅತ್ತ ತೇಜಸ್ವಿಯೂ ಆದ 'ಅಪರ್ಣಾ' (ಪಾರ್ವತಿ) ದೇವಿಯನ್ನು ಕಾಮಹರನು ಒಲಿಸಿಕೊಂಡದ್ದು. ಈ ವಾತಾವರಣದಲ್ಲಿ ಕಾಮವನ್ನು ಮೀರಿದ ಒಲುಮೆ ಸಾಧ್ಯವೇನೋ.... ಇಲ್ಲಿ ದೇವತೆಗಳು ಸಂಚರಿಸುತ್ತಾರೆಂದರೆ, ತುಂಬುರು ನಾರದರ ಗಾನ ಕೇಳಿ ಬರುತ್ತದೆಂದರೆ, ಅದು ಪ್ರಣವದ ಶ್ರುತಿಗೆ ಹೊಂದಿಕೊಳ್ಳುತ್ತದೆಯೆಂದರೆ— ನಂಬಬಹುದು....

ಈ ವಾತಾವರಣಕ್ಕೆ ಹೊಂದುವ ಮಿಥಕಪ್ರಪಂಚದಲ್ಲಿ ಸ್ವಲ್ಪಕಾಲ ಓಲಾಡುವುದು ಹಿತ, ಆರೋಗ್ಯಕರವೂ ಹೌದು—ಅದು ಮಿಥಕ ಪ್ರಪಂಚವೆಂಬುದರ ಅರಿವು ಮನಸ್ಸಿನ ಒಳಪದರದಲ್ಲಿ ಕಾವಲಾಗಿ ನಿಂತಿದ್ದರೆ, ಸ್ವಲ್ಪ ಕಾಲ ಮಾತ್ರ. ಈ ಪ್ರಪಂಚದಲ್ಲಿ ಹೆಚ್ಚು ಹೊತ್ತು ಉಸಿರೆಳೆಯಲಾಗದು. ಬಿಟ್ಟು ಹೊರಡಲೂ ಆಗದು!

ಡಯಾನ ರಾಮು ಸುನೀಲರು ಮರಳಿಬಂದರು. ಮನಸ್ಸಿಲ್ಲದ ಮನಸ್ಸಿನಿಂದ ಆ ಸ್ಥಳವನ್ನು ಬಿಟ್ಟು ಹೊರಟೆ.

ಮುಂದಿನ ಗಮ್ಯ—ಮಾಂಟ್ಯಾನ (Montana) ರಾಜ್ಯದಲ್ಲಿರುವ ಗ್ಲೇಸಿಯರ್ ನ್ಯಾಷನಲ್ ಪಾರ್ಕು. ದಾರಿಯಲ್ಲೊಂದು ಕಡೆ ಬಿಸಿನೀರಿನ ಬುಗ್ಗೆಯಿರುವ ಬಳಿ ಸುಂದರವಾದ ಕೊಳವನ್ನು ಕಟ್ಟಿದ್ದಾರೆ. ಗಂಧಕ ಮಿಶ್ರಿತವಾದ ಬಿಸಿನೀರು ಒಂದು ಕಡೆಯಿಂದ ಅದರೊಳಕ್ಕೆ ಹರಿದು ಮತ್ತೊಂದು ಕಡೆಯಿಂದ ಹೊರ ಹೊರಡುತ್ತದೆ. ನಾವು ಹೋದಾಗ ಅದರಲ್ಲಿ ನೀರಿಗಿಂತ

ಸ್ನಾನಮಾಡುವ ಜನರೇ ಹೆಚ್ಚಾಗಿದ್ದಂತೆ ತೋರಿತು. ಸುನೀಲನೂ ರಾಮುವೂ ಸ್ನಾನಮಾಡಿದರು. ನಾನು ಮಾತ್ರ "ನಿಮಗೆ ಬರುವ ಪುಣ್ಯದಲ್ಲಿ ನನಗೂ ಕಡಲೆಕಾಳಿನಷ್ಟು ಧಾರೆಯೆರೆದು ಕೊಡಿ" ಎಂದು ಬೇಡಿ ಅಷ್ಟರಲ್ಲೇ ತೃಪ್ತ ನಾದೆ. ಈ ಗಂಧಕ (?) ಜಲದ ಬುಗ್ಗೆ ಪುಣ್ಯತೀರ್ಥವೇನಲ್ಲ. ಆದರೆ ಅಷ್ಟೊಂದು ಜನ ನೀರಿನಲ್ಲಿದ್ದದ್ದನ್ನು ನೋಡಿದಾಗ ಅದು ಪುಣ್ಯತೀರ್ಥದಷ್ಟೇ ಕೊಳಕಾಗಿರಬಹುದು ಎನ್ನಿಸಿತು.

ಸ್ವಲ್ಪದೂರ ಮುಂದುವರಿದ ಮೇಲೆ ಸುಂದರದೃಶ್ಯವೊಂದನ್ನು ಸವಿಯ ಲೆಂದು ಗಾಡಿಯನ್ನು ನಿಲ್ಲಿಸಿ ಇಳಿದೆವು. ಕೂಡಲೇ ದೇವದಾರುಗಳ ಗುಂಪಿನಿಂದ ಬಹು ಮುದ್ದಾದ ಅಳಿಲುಜಾತಿಯ ಪ್ರಾಣಿಯೊಂದು ಓಡುತ್ತ, ನೆಗೆಯುತ್ತ ನಮ್ಮ ಹತ್ತಿರಕ್ಕೇ ಬಂದು ಹಿಂಗಾಲ ಮೇಲೆ ನಿಂತು ತಿಂಡಿಗಾಗಿ ಕೈ (ಮುಂಗಾಲು) ಒಡ್ಡಿತು. ಅದರ ಮುಖದ ಮೇಲೆ ಅನುನಯದಂತೆ ಕಂಡದ್ದು ನನ್ನ ಭ್ರಾಂತಿಯೋ ಏನೋ ಕಾಣೆ. ಸಾಕಿದಬೆಕ್ಕನ್ನೋ ನಾಯಿಮರಿಯನ್ನೋ ಚಿಕ್ಕಮಕ್ಕಳು ಎದೆಗೆ ಅಪ್ಪಿಕೊಳ್ಳುವಂತೆ ಆ ಪ್ರಾಣಿಯನ್ನು ಎತ್ತಿಕೊಂಡು ಅಪ್ಪಬೇಕೆಂದು ಉತ್ಕಟವಾದ ಬಯಕೆ ಬಂತು. ಅದು ಹೆದರಿ ಓಡಿಹೋದೀತು ಎಂದು ಸುಮ್ಮನಾದೆ. ಇಲ್ಲಿ ಪ್ರಾಣಿಗಳಿಗೆ ಆಹಾರ ಕೊಡಬಾರದೆಂಬ ನಿಯಮ ವಿದೆ. ಹಾಗೆ ಕೊಟ್ಟರೆ ಅವಕ್ಕೆ ಅಜೀರ್ಣವಾದೀತೆಂಬ ಭಯದ ಜೊತೆಗೆ ಅವಕ್ಕೆ ಸ್ವತಃ ಆಹಾರ ಸಂಪಾದಿಸಿಕೊಳ್ಳುವ ಶಕ್ತಿ ಉಡುಗಿಹೋದೀತೆಂಬ ಭಯವೂ ಉಂಟಂತೆ. ನಾವು ನಿಯಮವನ್ನು ಉಲ್ಲಂಘಿಸಿದೆವು—ಆ ಪ್ರಾಣಿಗೆ ಏನನ್ನೂ ಕೊಡದೆ ಹೋಗುವುದಕ್ಕೆ ಮನಸ್ಸು ಸರ್ವಥಾ ಒಪ್ಪಲಿಲ್ಲ. ಸುನೀ ಲನ ಕೈಯಲ್ಲಿ ಒಂದೆರಡು ಕಡಲೆಯ ಕಾಯಿಗಳನ್ನಿಟ್ಟೆವು. ಅವನು ಹೆದರುತ್ತ ಕೈನೀಡಿದ. ಅಳಿಲು (ಅದು 'ಚಿಪ್‌ಮಂಕ್' ಎಂಬ ಪ್ರಾಣಿಯಿರಬೇಕು) ಯಾವ ಹಿಂಜರಿಕೆಯೂ ಇಲ್ಲದೆ ಅದನ್ನು ತೆಗೆದುಕೊಂಡು ತಿಂದಿತು. ಅದೇ ದಿನ ಮತ್ತೊಂದು ಕಡೆ ಒಂದು ಹುಲ್ಲೆಕರು ಹೀಗೆಯೇ ತಿನಿಸನ್ನು ಬೇಡಿತು, ಪಡೆಯಿತು.

ಬರ್ನಡ್ ಷಾ ತನ್ನ 'ಬ್ಯಾಕ್ ಟು ಮೆಥ್ಯೂಸೆಲ' (Back to Methuseiah) ಎಂಬ ನಾಟಕದಲ್ಲಿ 'ಪರ್ವತಗಳು ಶವಗಳು, ಅಷ್ಟೆ' ಎಂದಿ ದ್ದಾನೆ. ಒಂದು ದೃಷ್ಟಿಯಿಂದ ಅವನು ಹೇಳಿದ್ದು ನಿಜವೇನೊ. ನನಗೆ ಪ್ರಕೃತಿಯ ಇಂಥ ಸುಂದರದೃಶ್ಯದ ಮುಂದೆ ನಿಂತಾಗ ಬೆಟ್ಟ ನದಿ ಸರೋವರ ಮುಂತಾದ ನಿರ್ಜೀವಿ ವಸ್ತುಗಳು, ಮರಗಿಡ ಹೂವುಗಳಂಥ ಕೆಳ (!) ಮಟ್ಟದ 'ಜೀವಿ'ಗಳು, ಕೀಟ, ಪಕ್ಷಿ ಅಳಿಲುಗಳಂಥ ಮೇಲ್ಮಟ್ಟದ ಜೀವಿಗಳು—ಇವು

ಗಳನ್ನು ಬೇರ್ಪಡಿಸಿ 'ಇದು ನಿರ್ಜೀವಿ, ಇದು ಜೀವಿ' ಎಂದು ವಿಂಗಡಿಸುವುದು ಕಷ್ಟವಾಗುತ್ತದೆ—ವೈಜ್ಞಾನಿಕ ದೃಷ್ಟಿಯಿಂದ ಅವನ್ನು ಕುರಿತು ಚರ್ಚೆಮಾಡು ವಾಗ ಹೊರತು. ಇಡೀ ಪ್ರಕೃತಿ ಒಂದು ಜೀವಂತ ವ್ಯಕ್ತಿಯಾಗುತ್ತದೆ. ಆ ಅಳಿಲಿನ ಕೈ (ಮುಂಗಾಲು) ಹೇಗೆ ಅಳಿಲಿನಿಂದ ಬೇರೆಯಲ್ಲವೋ ಹಾಗೇ ಗಿರಿವನ ನದಿಜೀವಿಗಳೆಲ್ಲವನ್ನೂ ಒಳಗೊಂಡ ಪ್ರಕೃತಿಯಿಂದ ಅಳಿಲು ಬೇರೆ ಯಲ್ಲ. ನಾನೂ ಸಹ ಅದರಿಂದ ಬೇರೆಯಲ್ಲ ಎನ್ನುವ ಭಾವನೆಯೂ ಬರುತ್ತದೆ, ದಾರ್ಶನಿಕ ಮನೋವೃತ್ತಿ ಪ್ರಬಲವಾದಾಗ. ಆದರೆ ನನ್ನಲ್ಲಿ ಅದು ಹೆಚ್ಚು ಕಾಲ ನಿಲ್ಲುವುದಿಲ್ಲ; ಸುಳಿದು ಮಾಯವಾಗಿ ಕಣ್ಣುಮುಚ್ಚಾಲೆಯಾಡುತ್ತದೆ. ನಾವು ಬಾಹ್ಯ ಪ್ರಕೃತಿಯನ್ನು ನೋಡುವಂತೆ ನಮಗಿಂತ ಮೇಲ್ಮಟ್ಟದ ಜೀವಿ ಯೊಬ್ಬ ಈ ಪ್ರಪಂಚವನ್ನು ನೋಡುತ್ತಿದ್ದರೆ ಅವನು ನಮ್ಮನ್ನೂ ಪ್ರಕೃತಿಯ ಭಾಗವೆಂದೇ ಪರಿಗಣಿಸಿಯಾನು; ಅರ್ಥವತ್ತಾಗಿ ಮಾತಾಡಬಲ್ಲೆವಾದ್ದರಿಂದ ನಾವು ಪ್ರಕೃತಿಯ ಪ್ರಾತಿನಿಧಿಕ ಅಂಶ ಎಂದು ಕೊಂಡಾನು.

ಅವತ್ತು ನನಗೆ ಅನ್ನಿಸಿತು: ಆ ಹುಲ್ಲೆಕರು ಅಳಿಲುಗಳು ಪ್ರಕೃತಿಯ ಪ್ರಾತಿನಿಧಿಕ ಅಂಶಗಳಾಗಿ ನಮ್ಮೆದುರಿಗೆ ಬಂದು ನಿಂತವೆಂದು. ಸಾಮಾನ್ಯ ವಾಗಿ ಈ ಪ್ರಾಣಿಗಳು ನಮ್ಮನ್ನು ನೋಡಿದರೆ ಹೆದರಿ ಓಡಿಹೋಗುತ್ತವೆ. ಅದು ಆಶ್ಚರ್ಯವೇನಲ್ಲ—ನಾವು ನಮ್ಮ ಆಹಾರಕ್ಕೆ ಮಾತ್ರವಲ್ಲ, ಕೇವಲ ಹಿಂಸೆಯ ಮತ್ತು ಕೊಲೆಯ ಲಾಲಸೆಗಾಗಿ ಪ್ರಾಣಿಗಳನ್ನು ಕೊಲ್ಲುತ್ತೇವೆ ಎಂಬುದನ್ನು ನೆನೆದರೆ. ಈಗ ಈ ಪ್ರಾಂತದಲ್ಲಿ ಬೇಟೆಯನ್ನು ನಿಷೇಧಿಸಿರುವುದ ರಿಂದ ಪ್ರಕೃತಿಗೂ ಮಾನವನಿಗೂ ಮತ್ತೆ ಬಾಂಧವ್ಯ ಏರ್ಪಟ್ಟಿದೆ. ಅವತ್ತು ಆ ಪ್ರಾಣಿಗಳು ನಮ್ಮೆದುರಿಗೆ ನಿಂತು ನಮ್ಮ ಕೊಡುಗೆಯನ್ನು ಸ್ವೀಕರಿಸಿದ್ದು "ನೀವು ನಮ್ಮ ಬಂಧುಗಳು, ನಿಮಗೆ ನಮ್ಮಲ್ಲಿ ಪ್ರೀತಿಯಿದೆಯೆಂದು ನಾವು ಬಲ್ಲೆವು!" ಎಂದು ಪ್ರಕೃತಿದೇವಿ ನಮಗೆ ಕೊಟ್ಟ ಪ್ರಶಸ್ತಿ.

ಈ ಪಾರ್ಕುಗಳಲ್ಲಿ ನೂರಾರು ಮೈಲಿ ರಸ್ತೆಗಳಿವೆ. ಸಾವಿರಾರು ಮೈಲಿ ಕಾಲುದಾರಿಗಳೂ (trails) ಇವೆ. ಎಲ್ಲವನ್ನೂ ನೋಡಬೇಕಾದರೆ ವಾರ ಗಟ್ಟಲೆ ಅಲ್ಲಲ್ಲಿ ಶಿಬಿರ ಹೂಡಿ ಕಾಲುನಡಿಗೆಯಲ್ಲಿ ಸುತ್ತಬೇಕು. ನಮಗೆ ಅಷ್ಟು ಅವಕಾಶವಿರಲಿಲ್ಲ. ಅಮೆರಿಕನ್ನರು ಕೂಡ ಹಾಗೆ ಒಂದೊಂದು ಸ್ಥಳದಲ್ಲೂ ಬಹುಕಾಲ ನಿಲ್ಲುವುದು ಅಪರೂಪವೇ. ಅವರ ಕಾಲು—ಕಾಲಲ್ಲ, ಕಾರು ಎನ್ನುವುದೇ ಸರಿ!—ನಿಂತ ಕಡೆ ನಿಲ್ಲುವುದಿಲ್ಲ. ಗ್ಲೇಸಿಯರ್ ಪಾರ್ಕಿನಲ್ಲಿ ಒಂದು ಕೊನೆಯಿಂದ ಮತ್ತೊಂದರವರೆಗೂ ಹೋಗುವ ಪ್ರಸಿದ್ಧವಾದ ರಸ್ತೆಯೊಂದಿದೆ. ಅದಕ್ಕೆ ಇಂಡಿಯನ್ನರು Going-to-the-sun road (ಸೂರ್ಯನ ಬಳಿಗೆ

ಹೋಗುವ ರಸ್ತೆ) ಎಂಬ ಹೆಸರನ್ನು ಕೊಟ್ಟಿದ್ದಾರೆ. ಬೆಟ್ಟಗಳನ್ನು ಸುತ್ತಿಕೊಂಡು ಐವತ್ತು ಮೈಲಿ ಹೋಗುವ ಆ ರಸ್ತೆಯು ಇಕ್ಕೆಲದಲ್ಲೂ ರಾಕೀ ಪ್ರಾಂತದ ಸೌಂದರ್ಯವೆಲ್ಲವನ್ನೂ ಶೇಖರಿಸಿ ಪ್ರದರ್ಶನಕ್ಕಿಟ್ಟಿದ್ದಾರೆಯೇನೊ ಎನ್ನಿಸಿತು. ಬ್ಯಾನ್ಫ್‌ಪಾರ್ಕಿನಲ್ಲಿ—ನಾವು ನೋಡಿದ ಭಾಗದಲ್ಲಿ—ಜಲಪಾತಗಳು ಕಾಣಲಿಲ್ಲ. ಈ ರಸ್ತೆಯಲ್ಲಿ ಅಲ್ಲಲ್ಲೇ ಎತ್ತರವಾದ, ಆದರೆ ವಿಸ್ತಾರವಾಗಲಿ ಗಾತ್ರವಾಗಲಿ ಇಲ್ಲದ, ಜಲಪಾತಗಳಿವೆ. ಬೆಟ್ಟದ ಶಿಖರದಿಂದ ಮುತ್ತಿನ ಸರವನ್ನು ಇಳಿಯಬಿಟ್ಟಂತೆ, ಸುಂದರಿಯೊಬ್ಬಳ ಅವಕುಂಠನ ಜಾರಿಬಿದ್ದು ಗಾಳಿಯೊಡನೆ ಸರಸವಾಡಿದಂತೆ—ಈ ಜಲಪಾತಗಳು ಭವ್ಯವಲ್ಲದಿದ್ದರೂ ಅವಕ್ಕೇ ವಿಶಿಷ್ಟವಾದ ಚೆಲುವೊಂದಿತ್ತು. ಬೇಸಗೆ ಮುಂದುವರಿದಂತೆಲ್ಲ ಅವುಗಳಲ್ಲಿ ಕೆಲವು ಅದೃಶ್ಯವಾಗುತ್ತವೆಯಂತೆ, ಬೆಟ್ಟದ ಪಾರ್ಶ್ವ ಟೊಳ್ಳಾಗಿದ್ದ ಒಂದೆರಡು ಕಡೆ ಗೋಡೆಹಾಕಿದಂತೆ ಹಿಮ ಬಿದ್ದು ಗುಹೆಗಳನ್ನು ನಿರ್ಮಿಸಿತ್ತು. ಅವುಗಳ ಮುಂದೆ 'ಅಪಾಯ' ಎಂದು ಬೋರ್ಡು ಹಾಕಿದ್ದಾರೆ. ಅವುಗಳೊಳಕ್ಕೆ ಹೋಗಿ ಗೋಡೆಯನ್ನು ಮುಟ್ಟಿದರೆ ಅದು ಕುಸಿದುಬೀಳುವ ಸಂಭವವುಂಟಂತೆ.

ಆ ರಸ್ತೆಯಲ್ಲಿ ಅತ್ಯುನ್ನತ ಸ್ಥಳ—ಲೋಗನ್. ಅಲ್ಲಿ ಉಪಾಹಾರಕ್ಕಾಗಿ ಸ್ವಲ್ಪ ಹೊತ್ತು ನಿಂತೆವು. ಅಲ್ಲಿಂದ ಪರ್ವತದ ಒಳಭಾಗದ ಸುಂದರ ಪ್ರದೇಶಗಳಿಗೆ ಹೋಗುವ ಒಂದೆರಡು ಕಾಲುದಾರಿಗಳಿವೆ. ಹತ್ತಿರದಲ್ಲೇ ವಿಸ್ತಾರವಾದ ಹಿಮದ ಹೊಲ (ice field) ಕಾಣಿಸುತ್ತಿತ್ತು. ಆ ದಾರಿಯಲ್ಲಿ ಸ್ವಲ್ಪ ದೂರ ಹೋಗಿಬರೋಣ ಎಂದುಕೊಂಡೆವು. ಗ್ರಿಸ್ಲಿ ಕರಡಿಗಳಿಗೂ ಅದೇ ಯೋಚನೆ ಅದೇ ಕಾಲದಲ್ಲೇ ಬರಬೇಕೆ! "ಗ್ರಿಸ್ಲಿಗಳು ಓಡಾಡುತ್ತಿವೆಯಾದ್ದರಿಂದ ಕಾಲುದಾರಿಗಳಲ್ಲಿ ಸಂಚಾರವನ್ನು ನಿಷೇಧಿಸಿದೆ" ಎಂದು ಅಲ್ಲಿ ಬೋರ್ಡು ಹಾಕಿತ್ತು. ಈ ಗ್ರಿಸ್ಲಿಗಳು ಬಹಳ ಜಗಳಗಂಟ ಸ್ವಭಾವದ ಪ್ರಾಣಿಗಳು. ವಿನಾಕಾರಣ ಜನಗಳ ಮೇಲೆ ಬೀಳುತ್ತವಂತೆ. ಪ್ರಕೃತಿಗೆ ಮಾನವನೊಡನಿರಬೇಕಾದ ಮಧುರ ಬಾಂಧವ್ಯ ಇತ್ಯಾದಿ ಥಿಯರಿಗಳು ಗ್ರಿಸ್ಲಿಗಳ ಗಮನಕ್ಕೆ ಬಂದಿಲ್ಲ, ಅಥವಾ ಅವು ಆ ಥಿಯರಿಗಳಿಗೆ ಒಪ್ಪಿಗೆ ಕೊಟ್ಟಿಲ್ಲ.

ಅಂದು ಸಂಜೆ ಸೂರ್ಯ ಮುಳುಗುವ ವೇಳೆಗೆ ಬೆಟ್ಟವನ್ನಿಳಿದು ರಸ್ತೆಯ ಮಗ್ಗುಲಲ್ಲೇ ಕಾಣುವ ಸೆಂಟ್‌ಮೇರಿ ಸರೋವರಕ್ಕೆ ಬಂದೆವು. ಸಂಜೆಗತ್ತಲು ಕವಿಯುತ್ತ ಬಂದು ಅಲ್ಲಿ ಅಪೂರ್ವವಾದ ಶಾಂತಸುಂದರ ವಾತಾವರಣ ತುಂಬಿತ್ತು.

ತುಂಬಿರಲಿ ನನ್ನ ಆಕ್ಷೇಪಣೆಯೇನೂ ಇಲ್ಲ. ನನ್ನ ಮನಸ್ಸನ್ನು ರೆಸ್ಟೊರಾಂಟೂ ಮೋಟಲಿನ ಮೆತ್ತನೆಯ ಹಾಸಿಗೆಯೂ ಆಕ್ರಮಿಸಿವೆ. ಊಟ

ಮುಗಿಸಿಕೊಂಡು ನೆಮ್ಮದಿಯಾಗಿ ಮಲಗಿದ ಮೇಲೆ ಆ ಶಾಂತಸೌಂದರ್ಯಕ್ಕೆ ಕರೆ ಕಳಿಸುತ್ತೇನೆ—ಕಣ್ಣೆಳೆದುಕೊಂಡು ಹೋಗದಿದ್ದರೆ. ನಾನು ವರ್ಡ್ಸ್‌ವರ್ತ್ ಪಂಥದವನು. I recollect emotion in tranquillity (ನೆಮ್ಮದಿಯಾಗಿರುವಾಗ ಭಾವೋತ್ಕರ್ಷವನ್ನು ನೆನಪಿಗೆ ತಂದುಕೊಳ್ಳುತ್ತೇನೆ). ಈಗಿನ್ನೂ ಆ ನೆಮ್ಮದಿ ಬಂದಿಲ್ಲ, ಬಂದಿರುವುದು ನಿದ್ದೆ.

## ಗ್ರ್ಯಾಂಡ್ ಟೀಟನ್ ಪಾರ್ಕ್, ಯೆಲ್ಲೋಸ್ಟೋನ್ ಪಾರ್ಕ್ ಇತ್ಯಾದಿ

ಗ್ಲೇಸಿಯರ್ ಪಾರ್ಕಿನಿಂದ ಗ್ರ್ಯಾಂಡ್ ಟೀಟನ್ ಪಾರ್ಕಿಗೂ ಹೋಗಬಹುದು, ಯೆಲ್ಲೋಸ್ಟೋನ್ ಪಾರ್ಕಿಗೂ ಹೋಗಬಹುದು. ನಾವು ಮೊದಲು ಗ್ರ್ಯಾಂಡ್ ಟೀಟನ್‌ಗೆ ಹೋಗಿ ಯೆಲ್ಲೋಸ್ಟೋನನ್ನು ಕೊನೆಗಿಟ್ಟುಕೊಳ್ಳಬೇಕೆಂದು ನಿಶ್ಚಯಿಸಿದೆವು. ಇಲ್ಲಿಯ ಪ್ರವಾಸಿ ಕೇಂದ್ರಗಳಲ್ಲಿ ಕೊಡುವ ಪದರ ಪತ್ರ (folder) ಗಳನ್ನೂ ಮಾರುವ ಚಿತ್ರಪುಸ್ತಕಗಳನ್ನೂ ನೋಡಿದರೆ ಪ್ರತಿಯೊಂದು ಪಾರ್ಕೂ ಉಳಿದವುಗಳಿಗಿಂತ ಸುಂದರವಾದದ್ದು ಎಂಬ ಭಾವನೆ ಬರುತ್ತದೆ. ವಾಸ್ತವವಾಗಿ ಅವನ್ನು ನೋಡಿದಾಗಲೂ ಹಾಗೇ ಅನ್ನಿಸುತ್ತದೆ. ಇದು ಹೆಚ್ಚು ಅದು ಕಡಮೆ ಎಂಬ ಯೋಚನೆ ಅಷ್ಟಾಗಿ ಬರುವುದಿಲ್ಲ. ಅಲ್ಲದೆ ನೂರಾರು ಅಂಶಗಳನ್ನೊಳಗೊಂಡ ಆ ಸಂಕೀರ್ಣಸೊಬಗಿಗೆ ಕಣ್ಣು ಕಿವಿ ಮನಗಳನ್ನು ತೆರೆದಿಟ್ಟ ಆತ್ಮ ತಣಿಯುವವರೆಗೆ ಅಲ್ಲಿದ್ದರೆ ತಾನೆ ಅವನ್ನು ಹೋಲಿಸಿ ನೋಡುವ ಹಕ್ಕು ಸಿದ್ಧಿಸುವುದು!

ನನ್ನ ನೆನಪಿರುವ ಮಟ್ಟಿಗೆ ಗ್ರ್ಯಾಂಡ್ ಟೀಟನ್ ಪಾರ್ಕಿನಲ್ಲಿ ಸೌಂದರ್ಯಕ್ಕಿಂತ ಭವ್ಯತೆ ಹೆಚ್ಚು. ಇದು ಈಗ ಬರುತ್ತಿರುವ ಭಾವನೆ. ಗ್ರ್ಯಾಂಡ್ ಟೀಟನ್, ಟೀವಿನಾಟ್, ಮೌಂಟ್ ಒವನ್ ಮುಂತಾದ ಶಿಖರಗಳ ಎದುರು ನಿಂತಾಗ ಯೋಚನೆಗೆ ಅವಕಾಶವೇ ಇರುವುದಿಲ್ಲ! ಗ್ರ್ಯಾಂಡ್ ಟೀಟನ್ ಮತ್ತು ಅದರ ಸಂಗಡಿಗ ಶಿಖರಗಳ ಗುಂಪನ್ನು The Cathedral Group (ಕೆಥೀಡ್ರಲ್ ಗುಂಪು) ಎಂದು ಕರೆಯುತ್ತಾರೆ. ಈ ಕೆಥೀಡ್ರಲ್ಲಿನ ಗೋಪುರಗಳನ್ನು ಕಟ್ಟಿದ್ದು—ಅಲ್ಲ, ಕಡೆದದ್ದು—9000 ವರ್ಷಗಳ ಕೆಳಗೆ, ಕಡೆದ ಶಿಲಾಶಿಲ್ಪಿಗಳು: ಆ ಕಾಲದಲ್ಲಿ ಇಲ್ಲೆಲ್ಲ ಉರುಳುತ್ತಿದ್ದ ನೀರ್ಗಲ್ಲ ನದಿಗಳು (glaciers). ಈ ಶಿಖರಗಳು ಹಠಾತ್ತಾಗಿ, ದೇವದಾರು ವನದ ಮುನ್ನೆಲೆಯಿಂದ ನೆಗೆದು, ಸ್ಥಿರವಾಗಿದ್ದರೂ ಅಂತರಿಕ್ಷವನ್ನು ಭೇದಿಸಿಕೊಂಡು

ಬಾಹ್ಯಾಕಾಶಕ್ಕೆ ಹಾರುತ್ತಿರುವಂತೆ ಭಾಸವಾಗುತ್ತದೆ. ಹಿಂದೆ ಪರ್ವತಗಳಿಗೆ ರೆಕ್ಕೆಯಿತ್ತೆಂದೂ ಅವುಗಳ ಸ್ವಚ್ಛಂದ ಹಾರಾಟದಿಂದಾಗುತ್ತಿದ್ದ ಭಯಂಕರ ಪರಿಣಾಮವನ್ನು ತಪ್ಪಿಸಲು ಇಂದ್ರ ರೆಕ್ಕೆಗಳನ್ನು ಕತ್ತರಿಸಿದನೆಂದೂ ನಮ್ಮವರು ಕಲ್ಪಿಸಿದ ಮಿಥಕ ನೆನಪಿಗೆ ಬಂತು. ಈ ಶಿಖರಸಮೂಹವನ್ನು ಮಾನವ ನಿರ್ಮಿತವಾದ ಯಾವ ಕಟ್ಟಡಕ್ಕಾಗಲಿ ಹೋಲಿಸುವುದು (ಅದಕ್ಕೆ ಕೆಥೀಡ್ರಲ್ ಗುಂಪು ಎಂಬ ಹೆಸರು ಕೊಟ್ಟಿರುವುದು) ಅಷ್ಟೇನೂ ಉಚಿತವಲ್ಲ. ಮನೋಹರ, ಸುಂದರ, ಉನ್ನತ ಮುಂತಾದ ಗುಣವಾಚಕಗಳಿಗೆ ಈ ಶಿಖರಗಳನ್ನು ಬಣ್ಣಿಸುವಷ್ಟು ಚೈತನ್ಯವಿಲ್ಲ! ಇಲ್ಲಿ ಪ್ರಕೃತಿದೇವಿ 'ಶಕ್ತಿರೂಪೇಣ ಸಂಸ್ಥಿತಾ'. ಈ ರೂಪದಲ್ಲಿ ಪ್ರಕೃತಿ ಭವ್ಯತೆಯ ಪರಮಾವಧಿ.

ಗ್ರ್ಯಾಂಡ್ ಟೇಟನ್ ಪಾರ್ಕನ್ನು ಬಿಟ್ಟು ಹೊರಡುವ ಮುನ್ನ ಮೂಸ್ ಜಂಕ್ಷನ್ ಎಂಬ ಸ್ಥಳದಲ್ಲಿ ನೋಡಿದ ಎರಡು ದೃಶ್ಯಗಳು ನೆನಪಿನಲ್ಲಿವೆ, ಒಂದು ಅಲ್ಲಿರುವ 'ಚರ್ಚ್ ಆಫ್ ದಿ ಟ್ರಾನ್ಸ್‌ಫಿಗರೇಷನ್' ( The Church of the Transfiguration) ಎಂಬ ಕ್ರೈಸ್ತ ದೇವಾಲಯ, ಅದು ಬಹಳ ಸರಳ ರೀತಿಯಲ್ಲಿ ಮರದ ದಿಮ್ಮಿಗಳಿಂದ ಕಟ್ಟಿದ್ದು. ಎಲ್ಲ ಮತದವರಿಗೂ ಅಲ್ಲಿ ಪ್ರವೇಶವುಂಟು. ಆದರೆ ವಿಶಾಲವಾದ ಕಿಟಕಿಯಿಂದ ಹಿನ್ನೆಲೆಯಲ್ಲಿರುವ ಪರ್ವತಮಾಲೆ ಚೌಕಟ್ಟು ಹಾಕಿದ ಚಿತ್ರದಂತೆ ಕಾಣುತ್ತದೆ. ಡಯಾನ ಅದರೊಳಗೆ ಸ್ವಲ್ಪ ಹೊತ್ತು ನಿಂತು ಬಂದಳು, ಬಹುಶಃ ಮನಸ್ಸಿನಲ್ಲೇ ಯೇಸು ಕಲಿಸಿದ ಸ್ತೋತ್ರವನ್ನು ಹೇಳಿಕೊಂಡಳು. ಆ ಭವ್ಯ ಹಿನ್ನೆಲೆಯನ್ನು ಬಳಸಿಕೊಂಡು ಭವ್ಯತಮ ಕಲ್ಪನೆಯೊಂದರ ಸಂಕೇತವಾಗಿ ದೇವಾಲಯವನ್ನು ಕಟ್ಟಿದ್ದು ಉಚಿತ ಎನ್ನಿಸಿತು ನನಗೆ ನಮ್ಮ ಬದರೀನಾಥ ಕೇದಾರನಾಥ ಮುಂತಾದ ಪರ್ವತಕ್ಷೇತ್ರಗಳ ನೆನಪಾಯಿತು. ಬಹುಶಃ ನಮ್ಮವರು ದೇವಾಲಯವನ್ನು ಪರ್ವತ ಶಿಖರದ ತಪ್ಪಲಿನಲ್ಲೇ ಕಟ್ಟುತ್ತಿದ್ದರು.

ಎರಡನೆಯ ದೃಶ್ಯ—ಮೂಸ್ ಜಂಕ್ಷನ್ನಿನಲ್ಲೇ ನಾವು ನೋಡಿದ ಒಂದು ಏಕಾಂಕ ನಾಟಕ. ಅದರ ಕಥಾವಸ್ತು : ಅಮೆರಿಕ ತನ್ನ ಸ್ವಾತಂತ್ರ್ಯದ ಎರಡನೆಯ ಶತಮಾನೋತ್ಸವವನ್ನು ಆಚರಿಸುತ್ತಿದ್ದಾಗ ಅದನ್ನು ನೋಡಲು ಸತ್ತು ಸ್ವರ್ಗದಲ್ಲಿದ್ದ ನಾಲ್ಕು ಜನ ಪ್ರಸಿದ್ಧ ಅಮೆರಿಕನ್ನರು—ಬೆಂಜಮಿನ್ ಫ್ರ್ಯಾಂಕ್ಲಿನ್, ಜಾನ್ ಆ್ಯಡಮ್ಸ್, ಏಬ್ರಹಮ್ ಲಿಂಕನ್, ಮತ್ತು ಮಾರ್ಕ್ ಟ್ವೇಯ್ನ್—ಮತ್ತೆ ಭೂಮಿಗೆ ಬಂದಿದ್ದಾರೆ. ಅವರೆಲ್ಲ ತಮ್ಮ ಕಾಲದಿಂದೀಚೆಗೆ ಅಮೆರಿಕದಲ್ಲಾಗಿರುವ ಬದಲಾವಣೆಗಳನ್ನೂ ಐತಿಹಾಸಿಕ ಘಟನೆಗಳನ್ನೂ ಗಮನಿಸಿ ವ್ಯಾಖ್ಯಾನ ಮಾಡುತ್ತಾರೆ. ಅಮೆರಿಕನ್ನರು ಇಂದಿ

ಯನ್ನರನ್ನೂ ಕಪ್ಪು ಜನರನ್ನೂ ನಡಸಿಕೊಂಡ ರೀತಿ, ಅವರ ಭೋಗಲಾಲಸೆ, ಹೆಮ್ಮೆ, ಇತ್ಯಾದಿಗಳನ್ನು ಟೀಕಿಸುವುದಕ್ಕಾಗಿ ನಾಟಕಕಾರ ಒಬ್ಬ ಸಿನಿಕ್ ಮನುಷ್ಯನನ್ನೂ ಸೃಷ್ಟಿಸಿದ್ದ. ದೇಶದ ಪ್ರಗತಿಗೆ ತೀರ ಮುಖ್ಯವಾದದ್ದೇನು ಎಂಬುದರ ಚರ್ಚೆಯೂ ನಡೆಯಿತು. ಫ್ರ್ಯಾಂಕ್ಲಿನ್‌ಗೆ ಮುಖ್ಯವೆನಿಸಿದ್ದು ವಿಜ್ಞಾನ; ಜೈಡರ್ವುನ್‌ಗೆ: ಕಾನೂನಿಗನುಸಾರವಾಗಿ ನಡೆಯುವ ಪ್ರವೃತ್ತಿ; ಲಿಂಕನ್‌ಗೆ: ಸರ್ವಸಮತೆ ಮತ್ತು ಐಕ್ಯ; ಮಾರ್ಕ್ ಟ್ವೆಯ್ನ್‌ಗೆ: ಹಾಸ್ಯ ಪ್ರವೃತ್ತಿ. ನಾಟಕದ ಉದ್ದೇಶ ಮೇಲೆ ಹೇಳಿದಂಥ ವಿಚಾರವನ್ನು ಕೆರಳಿಸುವುದು. ನಾಟಕವನ್ನು ಆಡಿದ್ದು ಬಯಲಿನಲ್ಲಿ. ಪರದೆ ಸೀನರಿಗಳೇನೂ ಇಲ್ಲ. ರಂಗಮಂಟಪವೇ ಇಲ್ಲ. ಬರೀ ನೆಲದ ಮೇಲೆ ನಿಂತು ಆಡಿದ ನಾಟಕ, ಅದು ಯಶಸ್ವಿಯಾಗಿಯೇ ನಡೆಯಿತು. ವಸ್ತು ಅಮೆರಿಕದ ಪರಿಸರದಿಂದ ಸ್ವಾಭಾವಿಕವಾಗಿ ಹೊರಹೊಮ್ಮಿದ್ದು, ಕಪ್ಪು ಜನರ ಮತ್ತು ಇಂಡಿಯನ್ನರ ಪಾಡು ಸಹಜವಾಗಿಯೇ ಕರುಣೆಗೆ ಎಡೆಗೊಟ್ಟಿತು. ಅದರ ಜೊತೆಗೆ ಸ್ವಲ್ಪ ಮೊನೆಯುಳ್ಳ ಹಾಸ್ಯವೂ ಇತ್ತಾದ್ದರಿಂದ ಇತ್ತ ಕರುಣೆ ಉತ್ಪ್ರೇಕ್ಷಿತವಾಗಲಿಲ್ಲ, ಶಿಥಿಲವಾಗಲಿಲ್ಲ; ಅತ್ತ ಹಾಸ್ಯ ಬರಿಯ ಚಕಮಕಿಯಾಗಲಿಲ್ಲ. ಅದಕ್ಕೆ ಗಾಂಭೀರ್ಯದ ಹಿನ್ನೆಲೆಯಿತ್ತು. ದೊಡ್ಡ ಕಲಾಕೃತಿಯೇನೂ ಅಲ್ಲವೆಂದರೂ ಆ ನಾಟಕ ಮನರಂಜನೆಯೆನ್ನು ಒದಗಿಸಿತು; ವಿಚಾರವನ್ನೂ ಪ್ರಚೋದಿಸಿತು.

## ಯೆಲ್ಲೊಸ್ಟೋನ್ ನ್ಯಾಷನಲ್ ಪಾರ್ಕ್

ದೇಶದಲ್ಲಿರುವ ಪ್ರೇಕ್ಷಣೀಯ ಸ್ಥಳಗಳನ್ನು ಖಾಸಗಿ ಜನರು ವಶಪಡಿಸಿಕೊಂಡು ತಮ್ಮ ಲಾಭಕ್ಕಾಗಿ ಉಪಯೋಗಿಸದಂತೆ, ಅಲ್ಲಿ ಪಟ್ಟಣಗಳೂ ಕೈಗಾರಿಕೆಗಳೂ ಹುಟ್ಟಿಕೊಂಡು ಪರಿಸರವನ್ನು ಮಲಿನಮಾಡದಂತೆ, ಬೇಟೆಗಾರರು ಪ್ರಾಣಗಳನ್ನು ಕೊಲೆಮಾಡದಂತೆ, ಆ ಸ್ಥಳಗಳ ವಿಶಿಷ್ಟ ಸೌಂದರ್ಯಕ್ಕೆ ರಕ್ಷಣೆಕೊಟ್ಟು, ಅವನ್ನು 'ನ್ಯಾಷನಲ್ ಪಾರ್ಕ್' ಆಗಿ ಕಾದಿಡಬೇಕೆಂಬ ಕಲ್ಪನೆ ಮೊದಲು ಹೊಳೆದದ್ದು ಅಮೆರಿಕನ್ನರಿಗೆ; ಹಾಗೆ ನಿರ್ಮಾಣವಾದ ಪಾರ್ಕುಗಳಲ್ಲಿ ಯೆಲ್ಲೊಸ್ಟೋನ್ ಪಾರ್ಕೇ ಮೊದಲನೆಯದು—ಎಂದು ಇಲ್ಲಿಯ ಜನ ಹೇಳಿದ್ದನ್ನು ಕೇಳಿದ್ದೇನೆ. ಇದು ಎಷ್ಟು ನಿಜವೋ ತಿಳಿಯದು. ನನಗೇನೋ 'ನ್ಯಾಷನಲ್ ಪಾರ್ಕ್' ಎಂಬ ಹೆಸರು ಮೊದಲು ಪರಿಚಯವಾದದ್ದು ಯೆಲ್ಲೊಸ್ಟೋನ್ ಪಾರ್ಕಿನ ವಿಷಯ ಓದಿದಾಗ. ಅಮೆರಿಕದ ಈ ಭಾಗವನ್ನು ಒಂದು ಶತಮಾನದ ಹಿಂದೆಯೇ ಸರ್ವೆಮಾಡಿ ಈ ಪಾರ್ಕನ್ನು ಸ್ಥಾಪಿಸಿದರಂತೆ. 1972ರಲ್ಲಿ ಇದಕ್ಕೆ ನೂರು ವರ್ಷ ತುಂಬಿತು. ಸುಮಾರು

$2\frac{1}{4}$ ಮಿಲಿಯನ್ ಎಕರೆಗಳಷ್ಟು ವಿಸ್ತೀರ್ಣವುಳ್ಳ ಈ ಪಾರ್ಕು ಪ್ರಪಂಚದಲ್ಲೇ ಅತ್ಯಂತ ದೊಡ್ಡದಂತೆ.

ಹಿಮ ಮುಚ್ಚಿದ ಬೆಟ್ಟಗಳು, ವನ ನದಿ ಸರೋವರ ಇತ್ಯಾದಿಗಳು ಇತರ ಪಾರ್ಕುಗಳಲ್ಲಿ ನಾವು ಕಂಡದ್ದೇ. ಆದರೆ ದೊಡ್ಡ ಜಲಪಾತಗಳನ್ನೂ ನದಿಗಳು ಭೂಮಿಯನ್ನು ಕೊರೆದು ನಿರ್ಮಿಸಿದ ದೊಡ್ಡ ಕ್ಯಾನ್ಯನ್‌ಗಳನ್ನೂ ಆ ಪಾರ್ಕು ಗಳಲ್ಲಿ ನೋಡಿರಲಿಲ್ಲ. ಇಲ್ಲಿಯ ಜಲಪಾತಗಳಲ್ಲಿ ಒಂದೆರಡೇನೋ ಸಣ್ಣವು; ಜಲಪಾತಗಳಾಗಬೇಕೆಂಬ ಉದ್ದೇಶದಿಂದ ಹೊರಟು ಮಧ್ಯದಲ್ಲೇ ಮನಸ್ಸು ಬದಲಾಯಿಸಿ ರಭಸದಿಂದ ಇಳಿಜಾರಿನಲ್ಲಿ ನುಗ್ಗುವುದರಲ್ಲೇ ತೃಪ್ತಿ ಪಡೆದಿವೆ. ಆದರೆ ಯೆಲ್ಲೋಸ್ಟೋನ್ ನದಿಯ ಎರಡು ಜಲಪಾತಗಳು—ಮೇಲಿನ ಜಲ ಪಾತ ಮತ್ತು ಕೆಳಗಿನ ಜಲಪಾತ (the upper and lower falls)— ಬಹುಸುಂದರವಾದ ಪರಿಸರದಲ್ಲಿವೆ. ಆ ನದಿ ಕೊರೆದಿರುವ ಕ್ಯಾನ್ಯನ್ ಸಾವಿರ ಅಡಿಗಳಿಗಿಂತ ಹೆಚ್ಚು ಆಳವಾದದ್ದು; ಜಲಪಾತದಿಂದ ಮುಂದೆ ಈ ಕ್ಯಾನ್ಯನ್ ನಲ್ಲಿ ನದಿ ಹರಿಯುತ್ತದೆ. ಆಳ ಹೆಚ್ಚಾದ್ದರಿಂದ ಕೆಲವು ಕಡೆ ನೀರು ಕಾಣುವುದೇ ಇಲ್ಲ. ಇದಕ್ಕೆ ಯೆಲ್ಲೋಸ್ಟೋನ್ ಗ್ರ್ಯಾಂಡ್ ಕ್ಯಾನ್ಯನ್ ಎಂದು ಹೆಸರು ಕೊಟ್ಟಿದ್ದಾರೆ. ಇದು ನೋಡಲೇ ಬೇಕಾದ ದೃಶ್ಯ.

ಇದು ಆಗಾಗ ಭೂಕಂಪವಾಗುವ ಪ್ರದೇಶ. 1959ರಲ್ಲಿ ಆದ ಭೂಕಂಪದ ಪರಿಣಾಮವಾಗಿ ಹೊಸದೊಂದು ಸರೋವರ ಸೃಷ್ಟಿಯಾಯಿತಂತೆ. ನಮ್ಮ ಮಾರ್ಗದರ್ಶಿ ಅದನ್ನು ಬಹಳ ಹೆಮ್ಮೆಯಿಂದ ತೋರಿಸಿದ. ಇಲ್ಲಿಯ ಸರೋ ವರಗಳಲ್ಲಿ ಬಹಳ ದೊಡ್ಡದಾದ ಯೆಲ್ಲೋಸ್ಟೋನ್ ಸರೋವರ ಪ್ರಪಂಚದಲ್ಲೇ ಅತ್ಯಂತ ಎತ್ತರದಲ್ಲಿರುವ ಸರೋವರವಂತೆ—ದಕ್ಷಿಣ ಅಮೆರಿಕದಲ್ಲಿರುವ ಟಿಟಿ ಕಾಕ ಸರೋವರವೊಂದನ್ನು ಬಿಟ್ಟರೆ. ಅತ್ಯಂತ ಎತ್ತರ, ಅತ್ಯಂತ ಆಳ, ಅತ್ಯಂತ ದೊಡ್ಡದು—ಇದನ್ನು ಹೇಳಿಕೊಳ್ಳುವುದೆಂದರೆ ಅಮೆರಿಕನ್ನರಿಗೆ ಆನಂದ.

ಕಾಡುಮೃಗಗಳ ರಕ್ಷಣೆಯೂ ಈ ಪಾರ್ಕನ್ನು ಸ್ಥಾಪಿಸಿದವರ ಉದ್ದೇಶ ಗಳಲ್ಲೊಂದು. ಗ್ರಿಸ್ಲಿಯಾಗಲಿ ಕರಿಯ ಕರಡಿಯಾಗಲಿ ನಮಗೆ ದರ್ಶನ ಕೊಡಲಿಲ್ಲ. ಆದರೆ ಅತಿ ಸುಂದರವಾದ ಅಚ್ಚ ಬಿಳಿಯ ರಾಕೀ ಆಡುಗಳನ್ನು ಎರಡು ಮೂರು ಸಾರಿ ನೋಡಿದೆವು. ಸಾಜೆ ಸ್ನೇಕ್ ನದಿಯ ದಡದಲ್ಲಿ ಎಂಟು ಮೂಸ್ (ಜಿಂಕೆಯ ಜಾತಿಯ ಪ್ರಾಣಿ)ಗಳ ಹಿಂಡು ಹಿಂದೆ ಕಾಣಿಸಿತು. ಈ ಪ್ರಾಣಿಗಳಿಲ್ಲ ಬ್ಯಾನ್ಫ್, ಗ್ಲೇಸಿಯರ್, ಟೀಟನ್ ಪಾರ್ಕುಗಳಲ್ಲೂ ಇವೆ ಯಂತೆ. ಯೆಲ್ಲೋಸ್ಟೋನ್ ಪಾರ್ಕಿನಲ್ಲಿ ನಾವು ಕಂಡ ಮತ್ತೊಂದು ವಿಶೇಷ ದೃಶ್ಯವೆಂದರೆ ಕಲ್ಲಾಗಿದ್ದ ಮರ (petrified tree). ಕಲ್ಲಾದ ಕಾಡಿನ

ಅವಶೇಷ ಇಲ್ಲಿ ಕೆಲವು ಕಡೆ ಇದೆ. ನಾವು ನೋಡಿದ ಮರದ ಸುತ್ತ ಕಟಕಟೆ ಹಾಕಿ ಜನ ಅದನ್ನು ಮುಟ್ಟದ ಹಾಗೆ ವ್ಯವಸ್ಥೆ ಮಾಡಿದ್ದಾರೆ. ಅದು ಎಷ್ಟೋ ಮಿಲಿಯನ್ ವರ್ಷಗಳ ಕೆಳಗೆ ಬದುಕಿದ್ದ ಮರ; ಹುಟ್ಟಿ ಬೆಳೆದ ಸ್ಥಳದಲ್ಲೇ ಈಗಲೂ ನಿಂತಿದೆ.

ಇವೆಲ್ಲಕ್ಕಿಂತ ಹೆಚ್ಚಾಗಿ ಇಲ್ಲಿಯ ವೈಶಿಷ್ಟ್ಯವೆಂದರೆ ಬಿಸಿನೀರಿನ ಬುಗ್ಗೆಗಳು ಮತ್ತು ಗೀಸರ್‌ಗಳು. ಈ ಬುಗ್ಗೆಗಳಿರುವ ಕ್ಷೇತ್ರಗಳಲ್ಲಿ—ಇಂಥ ಹಲವಾರು ಕ್ಷೇತ್ರಗಳಿವೆ, ಈ ಪಾರ್ಕಿನಲ್ಲಿ—ಎಷ್ಟೋ ಕಡೆ ನೆಲದಲ್ಲಿ ಮಣ್ಣೇ ಕೊತಕೊತನೆ ಕುದಿಯುತ್ತಿರುವುದು ಕಾಣುತ್ತದೆ. ಇನ್ನು ಕೆಲವು ಕಡೆ ಕುದಿಯುವ ಸ್ಥಳಗಳ ನಡುವೆ ಸಣ್ಣ ಹಳ್ಳ ಅಥವಾ ಹೊಂಡಗಳಾಗಿವೆ. ಅದರೊಳಗಿನ ನೀರು ಅತಿ ಸುಂದರವಾದ ಪಚ್ಚೆಯ, ಸಮುದ್ರದ ಹಸುರಿನ ಬಣ್ಣಗಳನ್ನು ತಾಳಿರುತ್ತದೆ. ಎಮರಲ್ಡ್ ಸ್ಪ್ರಿಂಗ್ಸ್, ಬೆರಿಲ್ ಸ್ಪ್ರಿಂಗ್ಸ್ ಎಂಬವನ್ನು ನಾವು ನೋಡಿದೆವು. ಈ ಬಿಸಿನೀರಿನಲ್ಲಿ ಸುಣ್ಣಕಲ್ಲಿನ ಅಂಶ ಇರುತ್ತದೆಯಂತೆ. ಕೆಲವು ಕಡೆ ಇದು ಘನಿಸಿ ಎತ್ತರವಾದ ದಿಬ್ಬಗಳಾಗಿವೆ. ಅವುಗಳ ನಡುವೆ ಆಲ್ಗೀ ಎಂಬ ಸಸ್ಯ ಬೆಳೆದು ಆ ಸ್ಥಳವೆಲ್ಲ ಹತ್ತಾರು ಬಣ್ಣಗಳಿಂದ ತೊಳಗುತ್ತದೆ. ಇಂಥ ಸ್ಥಳಗಳಲ್ಲಿ ನೆಲದ ಮೇಲೆ ಹಲಗೆಗಳನ್ನು ಹಾಸಿ ಕಾಲು ದಾರಿಗಳನ್ನು ಮಾಡಿದ್ದಾರೆ. ಅವುಗಳ ಮೇಲೆಯೇ ನಡೆಯಬೇಕು, ಅತ್ತಿತ್ತ ಹೆಜ್ಜೆ ಹಾಕಿದರೆ ಕುದಿಯುವ ಮಣ್ಣಿನಲ್ಲಿ ಹೂತುಹೋಗಬಹುದು. ಪ್ರವಾಸಿಗಳಿಗೆ ಎಚ್ಚರಿಕೆ ಕೊಟ್ಟು ಅವರನ್ನು ಸರಿಯಾದ ದಾರಿಯಲ್ಲಿ ಕರೆದುಕೊಂಡು ಹೋಗಲು ಮಾರ್ಗದರ್ಶಿಗಳೂ ಇರುತ್ತಾರೆ. ಈ ಬುಗ್ಗೆಗಳಿಂದ ಎದ್ದ ಹಬೆ ಎಷ್ಟೋ ದೂರದಿಂದ ಕಾಣುತ್ತದೆ.

ಇಂಥ ಚಟುವಟಿಕೆಯುಳ್ಳ ಮತ್ತು ಇಷ್ಟು ವಿಸ್ತಾರವಾದ ಬುಗ್ಗೆಗಳ ಪ್ರದೇಶ ಇನ್ನೆಲ್ಲಿಯೂ ಇಲ್ಲವಂತೆ. ಫಿಲಿಪೀನ್ಸ್‌ನ ಮೇಯೋನ್ ಅಗ್ನಿಪರ್ವತದ ತಪ್ಪಲಲ್ಲಿ ಇಂಥ ಪ್ರದೇಶವನ್ನು ನೋಡಿದ್ದೆ. ಆದರೆ ಅದು ಯೆಲ್ಲೊಸ್ಟೋನ್ ಪಾರ್ಕನ್ನು ನೋಡಿದ ಮೇಲೆ ಕೇವಲ ಮಕ್ಕಳ ಆಟಕ್ಕಾಗಿ ಏರ್ಪಡಿಸಿದ ಕ್ಷೇತ್ರವಾಗಿ ಕಾಣುತ್ತದೆ. ಅಲ್ಲದೆ ಅಲ್ಲಿ ಗಗನಕ್ಕೆ ಚಿಮ್ಮುವ ಗೀಸರ್‌ಗಳೂ ಇಲ್ಲ. ಇಲ್ಲಿ ಮೂರುಸಾವಿರಕ್ಕಿಂತ ಹೆಚ್ಚಾಗಿ ಬುಗ್ಗೆಗಳಿವೆ. ಮೂರು ನಾಲ್ಕು ಅಡಿಗಳಿಂದ ಹಿಡಿದು ನೂರಾರು ಅಡಿ ಎತ್ತರಕ್ಕೆ ನೀರಿನ ಧಾರೆಯನ್ನು ಚಿಮ್ಮಿಸುವ ಗೀಸರ್‌ಗಳು ಇಲ್ಲಿ 200ಕ್ಕಿಂತ ಹೆಚ್ಚು ಇವೆ. ಇವುಗಳಲ್ಲಿ ಅತ್ಯಂತ ಹೆಸರುವಾಸಿಯಾದ ಗೀಸರ್: 'ಓಲ್ಡ್ ಫೆಯ್ತ್‌ಫುಲ್' (Old Faithful). ಇದಕ್ಕಿಂತ ದೊಡ್ಡ ಗೀಸರ್‌ಗಳಿವೆಯಾದರೂ ಇದು ಸ್ವಲ್ಪ ಹೆಚ್ಚು ಕಡಮೆ

ಕ್ಲುಪ್ತವಾದ ಕಾಲಕ್ಕೆ ಚಿಮ್ಮುತ್ತದೆಯಾದ್ದರಿಂದ ಇದಕ್ಕೆ ಪ್ರಸಿದ್ಧಿ ಬಂದಿದೆ. ಓಲ್ಡ್ ಫೇಯ್ತ್‌ಫುಲ್ ಎಂಬ ಹೆಸರೇ ಸೂಚಿಸುವಂತೆ ಅದು 'ನೆಚ್ಚಬಹುದಾದ ನಂಬಿಕಸ್ಥ' ಗೀಸರ್. ಇತ್ತೀಚೆಗೆ ಇದನ್ನು ಮೊದಲಿನಷ್ಟು ನೆಚ್ಚುವಂತಿಲ್ಲವಂತೆ. ನಾವು ಅದರ ಬಳಿಗೆ ಹೋದಾಗ ಅದು ಆಗ ತಾನೆ ಚಿಮ್ಮುವುದನ್ನು ನಿಲ್ಲಿಸಿತ್ತು. ಮತ್ತೆ ಅದು ಚಿಮ್ಮಿದ್ದು 90 ನಿಮಿಷಗಳಾದಮೇಲೆ.

ಅಂತೂ ಪರ್ವತ ನದಿ ಸರೋವರ ಕಾಡು ಕ್ಯಾನ್ಯನ್ ಗೀಸರ್ ಬುಗ್ಗೆಗಳು, ಕಲ್ಲಾದ ಕಾಡಿನ ಅವಶೇಷ, ಪ್ರಾಣಿಸಂಪತ್ತು—ಇಷ್ಟು ವೈವಿಧ್ಯವುಳ್ಳ ಸ್ಥಳ ಇನ್ನೆಲ್ಲೂ ಇಲ್ಲ ಎಂದು ಅಮೆರಿಕನ್ನರು ಹೇಳುವುದನ್ನು ನಂಬಬಹುದು. ಈ ಪಾರ್ಕು ಪ್ರಪಂಚದ ವಿಸ್ಮಯಗಳಲ್ಲೊಂದು. ಅದನ್ನು ನೋಡಿದ ಮೇಲೆ 'ಇಂಥ ಸುಂದರ, ರಮ್ಯ, ರುದ್ರರಮ್ಯ, ಭವ್ಯ ಪ್ರಾಕೃತಿಕ ಸಂಪತ್ತುಳ್ಳ ನಾಡನ್ನು ಈ ವಾಸ್ಪುಗಳು (Wasps) ಹೊಡೆದು ಕೊಂಡುಬಿಟ್ಟರಲ್ಲ!' ಎಂದು ಹೊಟ್ಟೆಕಿಚ್ಚು ಪಡುವಂತಾಯಿತು. ಅವರು ತಮ್ಮ ದೇಶದ ಪ್ರಕೃತಿ ಸೌಂದರ್ಯದ ವಿಷಯದಲ್ಲಿ ಹೆಮ್ಮೆ ಕೊಚ್ಚಿದರೆ ಅದು ಕ್ಷಮಾರ್ಹ.

## ಬಫಲೊ ಬಿಲ್ ಮ್ಯೂಸಿಯಂ, ಮೌಂಟ್ ರಷ್‌ಮೋರ್ ಇತ್ಯಾದಿ

ಯೆಲ್ಲೊಸ್ಟೋನ್ ಪಾರ್ಕಿನಿಂದ ದಕ್ಷಿಣಕ್ಕೆ ಸುಮಾರು 50 ಮೈಲಿ ಪ್ರಯಾಣ ಮಾಡಿದರೆ ಕೋಡಿ (Cody) ಎಂಬ ಊರು ಸಿಕ್ಕುತ್ತದೆ. ಅದರ ಹೆಸರನ್ನು ಕೇಳದಿದ್ದವರೂ ಸಹ ಅದನ್ನು ಸ್ಥಾಪಿಸಿದ ಬಫಲೊ ಬಿಲ್ (ಅವನ ನಿಜವಾದ ಹೆಸರು ವಿಲಿಯಂ ಫ್ರೆಡ್‌ರಿಕ್ ಕೋಡಿ) ಎಂಬವನ ಹೆಸರನ್ನು ಕೇಳಿರುತ್ತಾರೆ. ಅಮೆರಿಕಕ್ಕೆ ಹೋಗುವುದಕ್ಕೆ ಮುಂಚೆಯೇ ನನಗೆ ಆ ಅಡ್ಡ ಹೆಸರಿನ ಪರಿಚಯ ಇತ್ತು—ಅದನ್ನು ಯಾವ ಸಂದರ್ಭದಲ್ಲಿ ಓದಿದ್ದೆನೋ ನೆನಪಿಲ್ಲ. ಆತ ಬೇಹುಗಾರನಾಗಿ, ಬೇಟೆಗಾರನಾಗಿ, ನಾಟಕ ಮುಂತಾದ ಪ್ರದರ್ಶನ ಸಂಸ್ಥೆಗಳನ್ನು ನಡಸಿದವನಾಗಿ, ಇಂಡಿಯನ್ನರೊಡನೆ ವ್ಯವಹರಿಸುವುದರಲ್ಲಿ ಚತುರನಾಗಿ, ಪ್ರಸಿದ್ಧಿ ಪಡೆದವನು. ಕೋಡಿ ಪೆಟ್ರೋಲನ್ನು ಶುದ್ಧಿಮಾಡುವ ಕೈಗಾರಿಕೆಗಾಗಿಯೂ ಹೆಸರು ಪಡೆದಿದೆಯಂತೆ—ಈ ಪ್ರಾಂತದಲ್ಲಿ ಪ್ರಯಾಣ ಮಾಡುತ್ತಿದ್ದಾಗ ಯಾರ ಕೈವಾಡವನ್ನೂ ಬಯಸದೆ ತಮ್ಮ ಪಾಡಿಗೆ ತಾವು ತೈಲವನ್ನೆತ್ತುತ್ತಿದ್ದ ಪಂಪುಗಳನ್ನು ಅಲ್ಲಲ್ಲೇ ನೋಡಿದ್ದೆವು.

ಇಲ್ಲಿ ನನ್ನನ್ನು ಆಕರ್ಷಿಸಿದ್ದು 'ಬಫಲೊ ಬಿಲ್ ಐತಿಹಾಸಿಕ ಕೇಂದ್ರ ಮತ್ತು ಬಫಲೊ ಬಿಲ್ ಮ್ಯೂಸಿಯಂ'. ಇನ್ನೂ ಮೊನ್ನೆ ಮೊನ್ನೆ ಅಮೆರಿಕದ ಪಶ್ಚಿಮ ಭಾಗ ನಾಗರಿಕತೆಯನ್ನು ಕಾಣದೆ, ಕಾನೂನು ಕಟ್ಟು ಪಾಡು ವ್ಯವಸ್ಥೆ ಗಳೇನನ್ನೂ ಕಾಣದೆ ಮಾನವೀಯತೆಗೆ ಬೆಲೆಯೇನನ್ನೂ ಕೊಡದೆ ಕೇವಲ ಸ್ವೈರಸಾಹಸ ಚಂಡ ಪ್ರತಾಪಗಳು ತಾಂಡವವಾಡುವ ಪ್ರಾಂತವಾಗಿದ್ದಿತಷ್ಟೆ. ಆ ಕಾಲದ ಜನ ಉಪಯೋಗಿಸುತ್ತಿದ್ದ ಬಟ್ಟೆ ಬರೆ ಆಯುಧಗಳು, ಇತರ ಜೀವನ ಸಾಮಗ್ರಿಗಳು, ಅವರ ಹೋರಾಟದ ಬದುಕನ್ನು ಪ್ರತಿಬಿಂಬಿಸಿರುವ ಚಿತ್ರಗಳು—ಇವೆಲ್ಲವನ್ನೂ ಈ ಮ್ಯೂಸಿಯಂನಲ್ಲಿ ಶೇಖರಿಸಿಟ್ಟಿದ್ದಾರೆ, ಅವು ಗಳ ವಿಷಯವಾಗಿ ತಿಳಿವಳಿಕೆ ಕೊಡುವ ಲಿಖಿತ ವಿವರಣೆಯೂ ಇತ್ತೆಂದು ನೆನಪು. ಅದು ಬಿಳಿಯರು ಬಿಳಿಯರೊಡನೆ (ಇಂಗ್ಲಿಷರು ಫ್ರೆಂಚರೊಡನೆ), ಕೆಂಪುಜನ ಕೆಂಪುಜನರೊಡನೆ ಬಿಳಿಯರು ಕೆಂಪುಜನರೊಡನೆ, ನಯನೀತಿ ಗಳೇನೂ ಇಲ್ಲದೆ ಹೋರಾಡುತ್ತಿದ್ದ ಕಾಲ. ಆ ಪ್ರಾಂತದಲ್ಲಿ ಮತ್ತು ಆ ಕಾಲ ದಲ್ಲಿ ಇದ್ದ ಸ್ಥಿತಿಯನ್ನು ನಿರ್ದೇಶಿಸುವ 'wild west' ಎಂಬ ಮಾತು ಇಂದೂ ಬಳಕೆಯಲ್ಲಿದೆ. ದ್ರೋಹ, ದರೋಡೆ, ಖೂನಿ, ಹೆಣ್ಣನ್ನು ಬಲಾತ್ಕಾರವಾಗಿ ಹೊತ್ತು ಕೊಂಡು ಹೋಗುವುದು, ಹುಚ್ಚು ಸಾಹಸ, ಗುಂಡಿನೇಟು, ಚಿತ್ರಹಿಂಸೆ, ಇತ್ಯಾದಿಗಳೆಲ್ಲವನ್ನೂ ಸೂಚಿಸುತ್ತದೆ, ಆ ಮಾತು.

ಈ ಐತಿಹಾಸಿಕ ಕೇಂದ್ರದಲ್ಲಿ ಬೇರೆ ಬೇರೆ ಕಾಲಗಳಲ್ಲಿ ಸ್ಥಾಪಿತವಾದ ಮೂರು ಭಾಗಗಳಿವೆ. ವಿಂಚೆಸ್ಟರ್ ಮ್ಯೂಸಿಯಂ, ಬಯಲಿನ ಇಂಡಿಯನ್ ಮ್ಯೂಸಿಯಂ (The Plains Indians museum), ಮತ್ತು ಚಿತ್ರಶಾಲೆ. ವಿಂಚೆಸ್ಟರ್ ಮ್ಯೂಸಿಯಮ್ಮಿನಲ್ಲಿ ಹಳೆಯ ಕಾಲದ ಬಿಲ್ಲು, ಕ್ರಾಸ್ ಬೊ (cross-bow : ಸರಳವಾದ ಯಂತ್ರವನ್ನು ಜೋಡಿಸಿ ಆ ಮೂಲಕ ಬಾಣ ಪ್ರಯೋಗ ಮಾಡಬಹುದಾದ ಬಿಲ್ಲು), ಪಿಸ್ತೂಲು, ಫ್ಲಿಂಟ್‌ಲಾಕ್ ಬಂದೂಕ ರೈಫಲ್, ಇತ್ಯಾದಿಗಳಿಂದ ಹಿಡಿದು ಆಧುನಿಕ ಮಾರಕಾಸ್ತ್ರಗಳವರೆಗೆ ಸುಮಾರು 5000 ಬಗೆಯ ಶಸ್ತ್ರಾಸ್ತ್ರಗಳನ್ನೂ ರಕ್ಷಾಕವಚ ಇತ್ಯಾದಿಗಳನ್ನೂ ಶೇಖರಿಸಿ ಇಟ್ಟಿದ್ದಾರೆ. ಯುದ್ಧಶಾಸ್ತ್ರಾಭ್ಯಾಸ ಮಾಡುವವರಿಗೆ ಇದರಲ್ಲಿ ಬಹಳ ಆಸಕ್ತಿ ಯುಂಟಾಗಬಹುದು. ಹಿಂಸೆ, ರಕ್ತಪಾತ, ಕೊಲೆಗಳನ್ನೇ ಮನಸ್ಸಿಗೆ ತರುವ, ಬದುಕುವ ಸಾಧನಗಳಿಗೆ ಬದಲಾಗಿ ಸಾವಿನ ಸಾಧನಗಳನ್ನೇ ಪ್ರದರ್ಶಿಸುವ ಈ ಭಾಗ ನನಗೇನೂ ಗೆಲವು ತರಲಿಲ್ಲ.

ಅಲ್ಲಿಂದ ಹೊರಡುವುದರಲ್ಲಿದ್ದಾಗ ಸಿಂಧಿ ಮಹನೀಯನೊಬ್ಬ ಸಿಕ್ಕಿ ಮಾತಾಡಿಸಿದ. ಆತ ಕೆಲವು ದಶಕಗಳ ಕೆಳಗೇ ಅಮೆರಿಕಕ್ಕೆ ಬಂದು ನೆಲಸಿದ

ನಂತೆ. ಎತ್ತರವಾದ ಆಳು, ಬಿಗಿಯಾದ ಮೈಕಟ್ಟು, ಮುಕ್ಕಾಲು ನರೆತಿದ್ದ ಗಡ್ಡ. ಮನುಷ್ಯ ಸ್ನೇಹಪರನೆಂದು ತೋರಿತು. ನಾವಿಬ್ಬರೂ ಮತ್ತೆ ಸೇರುವ ಸಂಭವವಿಲ್ಲವೆಂದು ಭಾವನೆ ಮನಸ್ಸಿನಲ್ಲಿದ್ದದ್ದರಿಂದಲೋ ಏನೊ, ಇಬ್ಬರೂ ಹೆಸರು ಹೇಳಿಕೊಳ್ಳಲಿಲ್ಲ. ಆದರೆ ಮಾತು ಕಥೆ ಬೇಕಾದ ಹಾಗೆ ನಡೆಯಿತು. ಅಷ್ಟು ವರ್ಷ ಕಾಲ ಅಮೆರಿಕದಲ್ಲಿದ್ದರೂ ಆತನಲ್ಲಿ ಆ ದೇಶವನ್ನು ಕುರಿತ ವ್ಯಾಮೋಹವೇನೂ ಬೆಳೆದಂತೆ ತೋರಲಿಲ್ಲ. "ಬಂದದ್ದಾಯಿತು, ಇಲ್ಲಿ ಇದ್ದು ಬಿಟ್ಟಿದ್ದೇನೆ. ಎಲ್ಲ ಅನುಕೂಲವಾಗಿದೆ. ಭಾರತಕ್ಕೆ ಬಂದರೆ ಮತ್ತೆ ಹೊಸ ಜೀವನ ಆರಂಭಿಸಬೇಕು. ಈ ವಯಸ್ಸಿನಲ್ಲಿ (ಆತ ನನಗಿಂತ ಎಂಟೊಂಬತ್ತು ವರ್ಷ ಚಿಕ್ಕವನು, ಸುಮಾರು ಎಪ್ಪತ್ತು ವರ್ಷ) ಇದ್ದ ಕಡೆ ಇರುವುದೇ ಹಿತ. ಆದರೆ ನಿಜವಾಗಿ ಹೇಳಬೇಕಾದರೆ ನನಗೆ ಈ ದೇಶ ಹಿತವೆನ್ನಿಸಲಿಲ್ಲ" ಎಂದ.

ನಾನು ಕೇಳಿದೆ : "ಅಮೆರಿಕ ಇಷ್ಟು ದಶಕಗಳ ಕಾಲ ನಿಮ್ಮನ್ನು ಸಲಹಿದೆ ಎಂದ ಮೇಲೆ ನ್ಯಾಯವಾಗಿ ಅದರ ವಿಷಯದಲ್ಲಿ ಆದರವಿರಬೇಕಲ್ಲವೆ? ಇದು ನಾನು ಕೇಳಬಾರದ ಪ್ರಶ್ನೆ, ಕ್ಷಮಿಸಿ. ನೀವು ಬಹಳ ಸರಳವಾಗಿ ಮನಬಿಚ್ಚಿ ಮಾತಾಡುತ್ತಿರುವುದರಿಂದ ಕೇಳುವ ಧೈರ್ಯ ಮಾಡಿದ್ದೇನೆ."

"ನೀವು ಕ್ಷಮೆ ಕೇಳಬೇಕಾದದ್ದೇನೂ ಇಲ್ಲ. ನಿಮ್ಮದು ಚುಚ್ಚುಮಾತಲ್ಲ, ಅದರ ಹಿಂದೊಂದು ಸರ್ವರಿಗೂ ಅನ್ವಯಿಸುವ ತತ್ವ (general principle) ಇದೆ ಎಂಬುದನ್ನು ಬಲ್ಲೆ. ಆ ತತ್ವಕ್ಕೆ ನನ್ನ ಒಪ್ಪಿಗೆಯೂ ಇದೆ. ನನಗೆ ಇಲ್ಲಿ ಯಾರೊಬ್ಬರ ಮೇಲೂ ದ್ವೇಷವಿಲ್ಲ, ಅಸಮಾಧಾನವಿಲ್ಲ. ವರ್ಣೀಯನೆಂದು ಯಾರೂ ನನಗೆ ಅವಮಾನ ಮಾಡಿಲ್ಲ. ಇಲ್ಲಿಯ ಜೀವನಕ್ರಮ ನನಗೆ ಹಿಡಿಸದು, ಅಷ್ಟೆ. ಈ ಸಮ್ಮತಿಪ್ರದ ಸಮಾಜದಲ್ಲಿ (in this permissive society) ಏನು ಬೇಕಾದರೂ ನಡೆಯಬಹುದು. ಸಲಿಂಗಿಕಾಮ, ಹಾದರ ಮೊದಲುಗೊಂಡು ಏನೇ ನಡೆದರೂ ಅದು ತಪ್ಪಲ್ಲ! ಅಪರಾಧವೇನಿದ್ದರೂ ಅಪರಾಧವನ್ನು ಮಾಡಿದವನದ್ದಲ್ಲ. ಸಮಾಜದ್ದು, ಅವನ ಅಪ್ಪ ಅಮ್ಮನದ್ದು. ಅದೂ ಸರಿಯಲ್ಲ. ಏಕೆಂದರೆ ಆ ಅಪ್ಪ ಅಮ್ಮನ ಅಪರಾಧದ ಜವಾಬ್ದಾರಿ ಅವರ ಅಪ್ಪ ಅಮ್ಮನ—ಹಾಗೇ ಹಿಂದು ಹಿಂದಕ್ಕೆ ಹೋಗುತ್ತ ಅವನ ಪೂರ್ವಿಕರೆಲ್ಲರ—ಮೇಲೆ ಒರಗಬೇಕೇನೊ! ಯಾವುದು ಅಪರಾಧ ಎಂಬುದನ್ನು ನಿರ್ಣಯಿಸುವುದೂ ಸಾಧ್ಯವಲ್ಲ. ಮೌಲ್ಯಗಳೇ ಬದಲಾಯಿಸಿವೆ....ನಮ್ಮ ದೇಶದಲ್ಲೂ ಅಷ್ಟೇ. ಈಗ ಭಾರತದಲ್ಲಿರುವ ನಿಮಗೆ ಹೇಗೆನ್ನಿಸುತ್ತದೆಯೋ ಕಾಣೆ. ನಾನು ವೃತ್ತಪತ್ರಿಕೆಗಳ ಮೂಲಕ, ಅವರಿವರ ಮಾತಿನ ಮೂಲಕ, ಆಗಾಗ ನನಗೆ ಬರುವ ಕಾಗದಗಳ ಮೂಲಕ, ಭಾರತದಲ್ಲಿ ನಡೆಯುತ್ತಿರು

ವುದನ್ನು ತಕ್ಕಮಟ್ಟಿಗೆ ತಿಳಿದುಕೊಳ್ಳುತ್ತಿದ್ದೇನೆ. ನಮ್ಮ ದೇಶ ಎಂದೂ ಇಷ್ಟು ಕೆಟ್ಟಿರಲಿಲ್ಲ. ಲಂಚಕೋರರು, ಪಕ್ಷಗಳ ಆಯಾರಾಮ್ ಗಯಾರಾಮ್‌ಗಳು, ವರ್ಷಗಟ್ಟಲೆ ರಾಜಕೀಯ ಚದುರಂಗ ಆಡುತ್ತ ರಾಜ್ಯದ ಯೋಗಕ್ಷೇಮದ ಕಡೆಗೆ ಲಕ್ಷ್ಯಕೊಡದೆ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳುವುದರಲ್ಲೇ ನಿರತರಾದ ಮಂತ್ರಿಗಳು, ಸ್ವಾತಂತ್ರ್ಯ ಬಂದು ಮೂವತ್ತು ವರ್ಷಗಳಾದ ಮೇಲೆ ಮೊದಲಿಗಿಂತ ಹೆಚ್ಚಾಗಿ ಬಿಳಿಯರನ್ನು ಅನುಕರಿಸುವ 'ಸುಶಿಕ್ಷಿತ' ಜನರು, ಮೂಕರಂತೆ ಹೆಳವರಂತೆ ಇದನ್ನೆಲ್ಲ ಸಹಿಸುವ ಜಡಜನತೆ—ಏನು ಬಂತೋ, ನಮ್ಮ ದೇಶಕ್ಕೆ !"

ಮಾತಾಡುತ್ತ ಆಡುತ್ತ ಆತನ ಉದ್ವೇಗ ಹೆಚ್ಚಿತು. ಅಮೆರಿಕದ ವಿಷಯ ಆತ ಆಡಿದ ಮಾತು ಕೇವಲ ವಸ್ತುಸ್ಥಿತಿಯ ನಿರೂಪಣೆ. ಭಾರತದ ವಿಷಯ ಮಾತಾಡಿದಾಗ ಅವನ ದನಿಯಲ್ಲಿ—ತಿರಸ್ಕಾರವಲ್ಲ—ಸಂಕಟವಿತ್ತು. ಕಾನೂನಿನ ದೃಷ್ಟಿಯಿಂದ ಆತ ಅಮೆರಿಕನ್, ಆದರೂ ಭಾರತದ ಮಾತು ಬಂದಾಗ ಅವನ ಹೃದಯದ ತುಡಿತ ಸ್ವಲ್ಪ ಹೆಚ್ಚುತ್ತಿತ್ತು. ಇದನ್ನು ಕಂಡು ಆತನ ವಿಷಯದಲ್ಲಿ ಅಭಿಮಾನವುಂಟಾಯಿತು. ಅದರೆ ಆತನ ಪ್ರಶ್ನೆಗೆ ನಾನು ಕೊಡಬಹುದಾದ ಉತ್ತರವೇನೂ ಇರಲಿಲ್ಲ (ಅದು ಉತ್ತರ ಬಯಸಿದ ಪ್ರಶ್ನೆಯೂ ಅಲ್ಲ !) "ಏನು ಬಂತೋ ನಮ್ಮ ದೇಶಕ್ಕೆ" ಎಂದು ನಾನೂ ಪ್ರಶ್ನೆಯ ಪುನರಾವರ್ತನೆ ಮಾಡಿದೆ. ಪ್ರತಿಭಟಿಸಲಾರದೆ ಚಾವಟಿ ಏಟು ತಿಂದವನಂತೆ, ಆತ ಹೇಳಿದ ಮೂಕ ಹೆಳವನಂತೆ, ಭಾರತದ ಕಳಂಕದ ಕಥೆಯನ್ನು ಕೇಳಿ ತಲೆ ತಗ್ಗಿಸಿದೆ.

ಇಷ್ಟು ಮಾತು ನಡೆಯುವುದರೊಳಗೆ ಮ್ಯೂಸಿಯಮ್ಮಿನ ಇತರ ಭಾಗಗಳನ್ನು ನೋಡುತ್ತಿದ್ದ ರಾಮು ಡಯಾನ ಸುನೀಲರು ಬಂದರು. ಅವರನ್ನು ನನ್ನ ಸಿಂಧಿ ಸ್ನೇಹಿತನಿಗೆ ಪರಿಚಯ ಮಾಡಿಕೊಟ್ಟೆ. ಅನಂತರ ಆತ 'ಗುಡ್ ಬೈ' ಹೇಳಿ ಹೊರಟುಹೋದ. ನಾವು ಇಂಡಿಯನ್ ಮ್ಯೂಸಿಯಂ ನೋಡಲು ಹೋದೆವು. ಅಲ್ಲಿ ಆ ಜನಾಂಗದವರ ಉಡುಪು, ಮಣಿಗಳಿಂದ ಅವರು ತಯಾರಿಸಿದ ಕಲಾಕೃತಿಗಳು, ಅವರು ತಂಬಾಕು ಸೇದಲು ಬಳಸುತ್ತಿದ್ದ ನಾಳ, ಟಾಮಹಾಕ್ (tomahawk—ಒಂದು ಬಗೆಯ ಗಂಡುಗೊಡಲಿ), ಮುಂತಾದ್ದನ್ನೆಲ್ಲ ಪ್ರದರ್ಶಿಸಿದ್ದಾರೆ. ಬಿಳಿಯರು ಜೀವಂತ ಇಂಡಿಯನ್ನರನ್ನಿಟ್ಟಿರುವುದು ಈ ಮ್ಯೂಸಿಯಮ್ಮಿನಲ್ಲಲ್ಲ—ಅವರಿಗಾಗಿ ಕಾದಿಟ್ಟಿರುವ 'ರಿಸರ್ವೇಷನ್'ಗಳಲ್ಲಿ !

ಇಂಡಿಯನ್ ಮ್ಯೂಸಿಯಮ್ಮಿನಿಂದ ಚಿತ್ರಶಾಲೆಗೆ ಹೋದೆವು. ಇಲ್ಲಿಯ ಚಿತ್ರಗಳ ವಸ್ತುವೂ ಬಹುಮಟ್ಟಿಗೆ 'ವೈಲ್ಡ್ ವೆಸ್ಟ್' (ಸ್ವಚ್ಛಂದ ಪಶ್ಚಿಮದ)

ಜೀವನ—ಬಲ, ಹುಚ್ಚು ಸಾಹಸ, ಹಿಂಸೆ, ಕೊಲೆ, ಒಬ್ಬನನ್ನು ಕೊಲ್ಲಬೇಕೆಂದು ಬಂದೂಕವನ್ನು ಗುರಿಯಿಟ್ಟು ಹಿಡಿದಿರುವವನನ್ನು ಮತ್ತೊಬ್ಬ ಆ ಕ್ಷಣದಲ್ಲೇ ಕೊಂದದ್ದು, ಸಾಯುವವನ ಮುಖದ ಅಸಹ್ಯವೇದನೆ–ಇದೊಂದು ಚಿತ್ರ; ತಮಗೆ ಪ್ರಿಯರಾದವರ ಶವದ ಬಳಿ ಕುಳಿತು ಸಂಕಟಪಡುತ್ತಿರುವ ಬಂಧುಗಳು—ಮತ್ತೊಂದು ಚಿತ್ರ. ಜೊತೆಗೆ ಕಾಡೆಮ್ಮೆಗಳನ್ನು ಬೇಟೆಯಾಡುವ ಚಿತ್ರ—ಮನುಷ್ಯರ ವಿಷಯದಲ್ಲೇ ಇಲ್ಲದ ಕರುಣೆ ಪ್ರಾಣಿಗಳ ವಿಷಯದಲ್ಲಿ ಎಲ್ಲಿಂದ ಬರಬೇಕು! 1850ರಲ್ಲಿ ಎರಡು ಕೋಟಿ ಕಾಡೆಮ್ಮೆಗಳಿದ್ದವಂತೆ, ಅಮೆರಿಕದಲ್ಲಿ. ನಲವತ್ತು ವರ್ಷ ಕಳೆಯುವುದರೊಳಗೆ ಅವುಗಳ ಸಂಖ್ಯೆ 551ಕ್ಕೆ ಇಳಿದಿತ್ತು ! ನಮ್ಮ ದೇಶದಲ್ಲಿ ಅನುಪಮ ಶಕ್ತಿ, ರುದ್ರಸೌಂದರ್ಯ ಗಾಂಭೀರ್ಯಗಳನ್ನುಳ್ಳ—ಜಿಮ್ ಕಾರ್ಬೆಟ್‌ನಿಂದ* 'large-hearted gentleman' (ವಿಶಾಲ ಹೃದಯದ ಮಹನೀಯ) ಎಂಬ ಪ್ರಶಸ್ತಿ ಪಡೆದಿರುವ —ಹುಲಿಗೆ ಈಗ ಬಂದಿರುವ ಪಾಡನ್ನು ನೆನೆದುಕೊಂಡೆ. ಅಮೆರಿಕನ್ನರು ಕಾಡೆಮ್ಮೆಗಳನ್ನು ಕೊಂದದ್ದು ಆಹಾರಕ್ಕಾಗಿ, ಆ ಪ್ರಾಣಿಯ ಚರ್ಮಕ್ಕಾಗಿ, ಬೇಟೆಯ ವ್ಯಸನದಿಂದಾಗಿ ಕೂಡ. ನಮ್ಮಲ್ಲಿ ರಾಜರು ಹುಲಿಗಳನ್ನು ಕೊಂದದ್ದು ಖುಷಿಗಾಗಿ (ಹುಲಿಯ ಚರ್ಮವನ್ನು ಪ್ರದರ್ಶಿಸುವುದೂ 'ಖುಷಿ'ಗೆ ಸೇರಬೇಕು) ಮತ್ತು ತಮ್ಮ ದೇಶಕ್ಕೆ ಭೇಟಿಕೊಟ್ಟ ವೈಸರಾಯರಿಗೋ ಚಕ್ರವರ್ತಿಕುಮಾರನಿಗೋ ಅವರ ಅನುಯಾಯಿಗಳಿಗೋ ಖುಷಿ ಪಡಿಸುವುದಕ್ಕಾಗಿ (ನರಭಕ್ಷಕರಾದ್ದರಿಂದ ಕೊಲೆಗೆ ಗುರಿಯಾದ ಹುಲಿಗಳು ಎಲ್ಲೋ ಅಲ್ಪಸ್ವಲ್ಪ) ಅಮೆರಿಕನ್ನರೇನೋ ಈಗ ಕಾಡೆಮ್ಮೆಗಳ ಸಂಖ್ಯೆಯನ್ನು ಕೆಲವು ದಶಸಾವಿರಗಳಿಗೆ ಏರಿಸಿದ್ದಾರಂತೆ. ನಮ್ಮ ಹುಲಿಗಳ ಸಂಖ್ಯೆ ಏರುತ್ತಿದೆಯೋ ಇಲ್ಲವೋ ಕಾಣೆ.

ಮ್ಯೂಸಿಯಮ್ಮಿನಲ್ಲಿದ್ದ ಎರಡು ಚಿತ್ರಗಳು ಇವೆಲ್ಲಕ್ಕಿಂತ ಹೆಚ್ಚಾಗಿ ನಮ್ಮ ಗಮನವನ್ನು ಸೆಳೆದವು. ಒಂದರ ಶೀರ್ಷಿಕೆ: 'The Last of the Race' (ಜನಾಂಗದ ಕೊನೆಯವರು). ಅದು ಇಂಡಿಯನ್ ಸಂಸಾರವೊಂದರ ಚಿತ್ರ, ಸಂಸಾರದ ಯಜಮಾನ ಮಧ್ಯವಯಸ್ಸಿಗೆ ಬಂದಿಲ್ಲ, ತುಂಬು ಯೌವನ

---

* ಜಿಮ್ ಕಾರ್ಬೆಟ್: ಭಾರತದಲ್ಲಿದ್ದು ಸಾಮಾನ್ಯ ಭಾರತೀಯರ ಪ್ರೀತಿಯನ್ನು ಸಂಪಾದಿಸಿದ ಪ್ರಸಿದ್ಧ ಬೇಟೆಗಾರ. 'ದಿ ಮೋಹನ್ ಮ್ಯಾನ್ ಈಟರ್' ಮೊದಲಾದ ಬೇಟೆಯ ಕಥೆಗಳನ್ನು ಬರೆದಿದ್ದಾನೆ. ಅವನು ಕೊಂದದ್ದು ನರಭಕ್ಷಕರಾದ ಹುಲಿಗಳನ್ನು ಮಾತ್ರ. ಆತನ ಹೆಸರು ಕೊಟ್ಟು ಭಾರತ ಸರ್ಕಾರ 'ಕಾರ್ಬೆಟ್ ನ್ಯಾಷನಲ್ ಪಾರ್ಕ್' ಅನ್ನು ಸ್ಥಾಪಿಸಿದೆ.

ದವನು—ಸರಳು ಹೊಡೆದಂತೆ ನೇರವಾಗಿ ನಿಂತಿದ್ದಾನೆ, ಕೈಕಟ್ಟಿಕೊಂಡು. ಅವನ ಮುಖದಲ್ಲಿ ಏನು ಬಂದರೂ ಸಹಿಸಬಲ್ಲೆ ಎನ್ನುವ ಸ್ಥೈರ್ಯ, ನಿರಾಶೆಯಿಂದ ಬಂದ ನಿಷ್ಠುರತೆ, ಎರಡೂ ಬೆರೆದಿವೆ. ಅವನು ದುರ್ಬಲನಲ್ಲ, ಆದರೆ ಕ್ರೂರವಾದ ವಿಧಿಯೆದುರು ತನ್ನ ಕೈ ಸಾಗದೆಂದು ಬಲ್ಲ. ಈ ಸಂಸಾರ ಇರುವುದು ದಿಗಂತದವರೆಗೂ ಕಾಣುತ್ತಿರುವ ಸಮುದ್ರದ ತೀರದಲ್ಲಿ. ಸಮುದ್ರದ ಮೇಲೆ ಮುನ್ನೆಲೆಯಲ್ಲಿ ಮಬ್ಬುಗತ್ತಲೆ, ಹಿನ್ನೆಲೆಯಲ್ಲಿ ಇನ್ನೂ ದಟ್ಟವಾದ ಕತ್ತಲೆ. ಆ ಸಂಸಾರ ಹಿಂದಕ್ಕೆ ಹೋಗುವಂತಿಲ್ಲ; ಹೋದರೆ ಮುಂದಕ್ಕೇ ಹೋಗಬೇಕು—ಆ ಕತ್ತಲು ಕಡಲಿನ ಆಳಕ್ಕೆ. ಇದನ್ನು ನೋಡಲಾರದೆಯೋ ಏನೊ, ಯುವಕ ಬೇರೊಂದು ಕಡೆಗೆ ತಿರುಗಿದ್ದಾನೆ.

ಒಂದು ಬಂಡೆಯ ಮೇಲೆ ಪಟ್ಟೆತಲೆಯ ಮುದುಕ (ಯುವಕನ ತಂದೆ?) ಏನೋ ಸಲಹೆ ಕೊಡುವವನಂತೆ ಕೈಯೆತ್ತಿ ಕುಳಿತಿದ್ದಾನೆ. ವಯಸ್ಸಾದ ಹೆಂಗಸು (ಅವನ ಹೆಂಡತಿ?) ಅವನ ಕಡೆ ನೋಡುತ್ತಿದ್ದಾಳೆ. ಎಡಗಡೆ ಏನೇನೂ ಉತ್ಸಾಹವಿಲ್ಲದ ಕೃಶವಾದ ಕುದುರೆಯೊಂದು ತಲೆಬಗ್ಗಿಸಿಕೊಂಡು ನಿಂತಿದೆ. ಎರಡು ಎಮ್ಮೆಗಳ ತಲೆಯೋಡುಗಳು ಅಸ್ತವ್ಯಸ್ತವಾಗಿ ಬಿದ್ದಿವೆ. ಯುವತಿಯೊಬ್ಬಳು (ಯಜಮಾನನ ಹೆಂಡತಿ ?) ತಲೆ ತಗ್ಗಿಸಿಕೊಂಡು ತನ್ನ ಮಗುವನ್ನು ನೋಡುತ್ತಿದ್ದಾಳೆ. ಸಾಗರದ ಮೇಲೆ, ಚಿತ್ರದ ಮಧ್ಯಭಾಗದಲ್ಲಿ, ಎರಡು ರಣಹದ್ದುಗಳು ಹಾರಾಡುತ್ತಿವೆ. ಸೂರ್ಯ ಮುಳುಗುತ್ತಿದ್ದಾನೆ. ಮುನ್ನೆಲೆಯಲ್ಲಿ ಕಡಿದು ಉರುಳಿರುವ ಮರಗಳ ಕಾಂಡದ ಮೇಲೂ ಮುರಿದ ಕೊಂಬೆಗಳ ಮೇಲೂ ಇಂಡಿಯನ್ನರ ಕಾಲ ಬಳಿ ಇರುವ ಅಲೆಗಳ ನೊರೆಯ ಮೇಲೂ ಎಲ್ಲೋ ಸ್ವಲ್ಪ ಬೆಳಕು ಬಿದ್ದಿದೆ; ಉಳಿದೆಲ್ಲ ಕಡೆ ಮೊದಲು ಮಬ್ಬಾಗಿದ್ದು ಅನಂತರ ಹೆಚ್ಚಿರುವ ಕತ್ತಲು. ಇಂಡಿಯನ್ನರಿಗೆ ಉಳಿದಿರುವ ಮಾರ್ಗ: ಕಡಲಿನ ಆಳ: ಉಳಿದಿರುವ ಬೆಳಕು ಬದುಕುಗಳು: ಆ ಉಪ್ಪು ನೀರಿನ ಬಿಳಿಯ ನೊರೆ.

ಬಹಳ ಹಿಂದೆ ಓದಿದ್ದ ವಾಷಿಂಗ್ಟನ್ ಅರ್ವಿಂಗ್‌ನ 'Traits of Indian Character' ಎಂಬ ಪ್ರಬಂಧದ ಕೊನೆಯ ವಾಕ್ಯ ನನ್ನ ನೆನಪಿಗೆ ಬಂತು. ಅದನ್ನು ಹುಡುಕಿ ಭಾಷಾಂತರಿಸಿ ಇಲ್ಲಿ ಉದಾಹರಿಸಿದ್ದೇನೆ: ಒಬ್ಬ ವೃದ್ಧ ಹೇಳಿದ: "ಇನ್ನು ಹಿಂದಕ್ಕೆ ಹೋಗಲು ಸ್ಥಳವಿಲ್ಲ ಎನ್ನುವಷ್ಟು ದೂರ ನಮ್ಮನ್ನು ಹಿಮ್ಮೆಟ್ಟಿಸಿದ್ದಾರೆ. ನಮ್ಮ ಕೈಗೊಡಲಿಗಳು ಮುರಿದುಹೋಗಿವೆ, ಬಿಲ್ಲುಗಳು ತುಂಡಾಗಿವೆ. ಬೆಂಕಿ (ಶಿಬಿರದ ಬೆಂಕಿ) ಆರಿ ತಣ್ಣಗಾಗುತ್ತಿದೆ. ಇನ್ನು ಸ್ವಲ್ಪವೇ ಸ್ವಲ್ಪ ಕಾಲ—ಬಿಳಿಯ ಮನುಷ್ಯ ನಮಗೆ ಕೊಡುತ್ತಿರುವ

ಕಿರುಕುಳ ನಿಲ್ಲುತ್ತದೆ. ಏಕೆಂದರೆ (ಅಷ್ಟರೊಳಗೆ) ನಮ್ಮ ಅಸ್ತಿತ್ವವೇ ಕೊನೆಗಂಡಿರುತ್ತದೆ."

ಇನ್ನೊಂದು ಚಿತ್ರದ ಹೆಸರು 'The Trail' (ಜಾಡು). ಗಟ್ಟಿಮುಟ್ಟಾಗಿರುವ, ಗಡ್ಡ ಬಿಟ್ಟಿರುವ ಬಿಳಿಯನೊಬ್ಬ ಕುದುರೆಯ ಮೇಲೆ ಕುಳಿತಿದ್ದಾನೆ. ಕೈಯಲ್ಲಿ ಬಂದೂಕವಿದೆ. ಅವನೇ ಗುಂಪಿನ ನಾಯಕ. ಇನ್ನೊಬ್ಬ ಚರ್ಮದಲ್ಲಿ ಮಾಡಿದ ದಿರಸು ಹಾಕಿ ಕೊಂಡಿದ್ದಾನೆ; ಎತ್ತರವಾಗಿ ಬೆಳೆದಿರುವ ಹುಲ್ಲನ್ನು ಎರಡು ಕೈಯಿಂದಲೂ ತಳ್ಳಿ ಜಾಡನ್ನು (ಇಂಡಿಯನ್ನರು ಹೋಗಿರುವ ಜಾಡನ್ನು ಎಂದು ಊಹಿಸಬಹುದು) ಕಂಡು ಹಿಡಿಯಲು ಪ್ರಯತ್ನಿಸುತ್ತಿದ್ದಾನೆ. ಅವನ ಕುದುರೆ ಹತ್ತಿರದಲ್ಲೇ ನಿಂತಿದೆ. ಬಹುಶಃ ಆ ಗುಂಪು ಇಂಡಿಯನ್ನರ ಬೆನ್ನಟ್ಟಿ ಹೊರಟಿದೆ. ಚಿತ್ರದಲ್ಲಿರುವ ಇನ್ನಿಬ್ಬರಲ್ಲಿ ಒಬ್ಬ ಕ್ಷಣಮಾತ್ರದಲ್ಲಿ ಗುಂಡು ಹಾರಿಸಲು ಸಿದ್ಧವಾಗಿ ಬಂದೂಕನ್ನು ಹಿಡಿದು ನಿಂತಿದ್ದಾನೆ. ಇನ್ನೊಬ್ಬ 'ಈ ಕಡೆ ಮುಂದುವರಿಯೋಣ' ಎನ್ನುವಂತೆ ಕೈಚಾಚಿ ನಿಂತಿದ್ದಾನೆ. ಅವರ ಮುಂದೆ ಭೂಮಿಯೆಲ್ಲ ಬೆಳಕಿನಲ್ಲಿ ತೊಯ್ದಿದೆ.

ಒಂದು ಚಿತ್ರದಲ್ಲಿ ಸಾಯುತ್ತಿರುವ ಜನಾಂಗ; ಇನ್ನೊಂದರಲ್ಲಿ ಆ ಸತ್ತವರ ಗೋರಿಯ ಮೇಲೆ ಹೊಸ ಜೀವನವನ್ನು ಕಟ್ಟುತ್ತಿರುವ ಜನಾಂಗ. ಮೊದಲನೆಯದರಲ್ಲಿ ಹಸಿವು, ನಿರಾಶೆ, ನಿಷ್ಕ್ರಿಯೆ, ಕತ್ತಲು; ಎರಡನೆಯದರಲ್ಲಿ ಹಸಿವು, ನಿರಾಶೆ ಇತ್ಯಾದಿಗಳಿಗೆ ಕಾರಣರಾದವರ ದಾಷ್ಟತ್ತು, ಆತ್ಮವಿಶ್ವಾಸ, ಕಾರ್ಯೋತ್ಸಾಹ; ಅವರ ಮುಂದೆ ಬೆಳಕು.

ಇವೆರಡು ಚಿತ್ರಗಳ ಫೋಟೋ ತೆಗೆಯಬೇಕೆಂದು ಪ್ರಯತ್ನಿಸಿದೆವು. ಚಿತ್ರ ಸರಿಯಾಗಿ ಬರಲಿಲ್ಲ. ನಾನು ಮ್ಯೂಸಿಯಮ್ಮನ್ನು ಬಹಳ ಆಸಕ್ತಿಯಿಂದ ನೋಡಿದೆ. ಆದರೆ ನೋಡಿ ಮುಗಿದ ಮೇಲೆ ಮನಸ್ಸಿನಲ್ಲಿ ವ್ಯಾಕುಲವಿತ್ತು. ಆ ಸಂಸ್ಥೆಯನ್ನು ಸ್ಥಾಪಿಸಿದವರು ಇಂಡಿಯನ್ನರ ಪಾಡಿಗಾಗಿ ಮರುಗಿದ್ದಿರಬಹುದು, ಮರುಗಿದ್ದರೆನ್ನುವುದಕ್ಕೆ ಆಧಾರವಿದೆ—ನಮಗೆ ಕೊಟ್ಟ ಪದಪತ್ರವೊಂದರಲ್ಲಿ ಇಂಡಿಯನ್ನರ ಪರವಾದ ಈ ಮಾತಿತ್ತು: "ನೆತ್ತಿಚರ್ಮ (scalp) ಸುಲಿಯುವ* ಪರಿಪಾಠ ಪ್ರಥಮತಃ ಇಂಡಿಯನ್ನರದ್ದೆ? ಅದರ

---

* ಇಂಡಿಯನ್ನರು ಶತ್ರುಗಳನ್ನು ಜಯಿಸಿದ ಮೇಲೆ ಅವರ ನೆತ್ತಿಚರ್ಮವನ್ನು ಕೂದಲು ಸಹಿತ ಸುಲಿದು ಅದನ್ನು ವಿಜಯದ ಗುರುತಾಗಿ ಇಟ್ಟುಕೊಳ್ಳುತ್ತಿದ್ದರೆಂದು ಸಾಮಾನ್ಯವಾದ ನಂಬಿಕೆ. ಇಂಗ್ಲಿಷಿನಲ್ಲಿ He is out for my scalp (ಅವನು ನನ್ನ ನೆತ್ತಿಚರ್ಮ ಸುಲಿಯಲು ಹೊರಟಿದ್ದಾನೆ ಅಂದರೆ ಅವನು ನನ್ನನ್ನು ನಾಶಮಾಡಲು ಹೊರಟಿದ್ದಾನೆ) ಎಂಬ ಪ್ರಯೋಗವುಂಟು. ಈ ಪದ್ಧತಿ

ಹುಟ್ಟು ಉದ್ದೇಶಗಳೆರಡಕ್ಕೂ ಬಿಳಿಯರು ಇಂಡಿಯನ್ನರು ಜವಾಬ್ದಾರರು ಎಂಬ ವಿಷಯದಲ್ಲಿ ಸಂದೇಹಕ್ಕೆ ಆಸ್ಪದವಿದೆ. ಬಹುಶಃ ಈ ಪದ್ಧತಿ ಎಷ್ಟೋ ಇಂಡಿಯನ್ ಕುಲದವರಿಗೆ ಪರಿಚಿತವಾಗಿರಲಿಲ್ಲ. ಅದು ನೆತ್ತಿಚರ್ಮದ ಬೇಟೆಗೆಂದೇ ಹೊರಟ ಬಿಳಿಯ ಜನರ ನಡತೆಯಿಂದ ಪ್ರಚೋದಿತವಾದ ಪ್ರತಿಕ್ರಿಯೆ ಎಂದು ತೋರುತ್ತದೆ." ಈ ವಾಕ್ಯವನ್ನು ಬರೆದವನು ಇಂಡಿಯನ್ನರಲ್ಲಿ ಸಹಾನುಭೂತಿಯುಳ್ಳವನೇ ಆಗಿರಬೇಕು. ಆದರೂ ಆ ಮ್ಯೂಸಿಯಂ ಬಿಳಿಯಜನರ ಧೈರ್ಯ ಸಾಹಸಗಳನ್ನೇ ಎತ್ತಿ ತೋರಿಸಿದಂತೆ ಭಾಸವಾಯಿತು—ಆಗ. ಈಗ ನನ್ನ ಭಾವನೆ ತಪ್ಪಿರಬಹುದು ಎನ್ನಿಸುತ್ತದೆ. ಅಂದೇನೋ "ಈ ಬಿಳಿಯ ಜನ ಬೆಲೆ ಕೊಡುವುದು ಶಕ್ತಿ ಸಾಹಸಗಳಿಗೆ, ಮಾನವದಯಾಮೃತಕ್ಕಲ್ಲ" ಎಂದುಕೊಂಡೇ ಅಲ್ಲಿಂದ ಹೊರಟೆ.

ಮ್ಯೂಸಿಯಂ ನನ್ನ ಮೇಲೆ ಸ್ವಲ್ಪ ಹೆಚ್ಚಿನ ಪರಿಣಾಮವನ್ನೇ ಉಂಟು ಮಾಡಿರಬೇಕು. ಅವತ್ತು ರಾತ್ರಿ ಬಹಳ ಹೊತ್ತಿನವರೆಗೆ ನಿದ್ದೆ ಬರಲಿಲ್ಲ. ಪಾಶ್ಚಾತ್ಯರಿಗೆ ವಿರೋಧವಾದ ಪೂರ್ವಗ್ರಹ ನನ್ನನ್ನು ಬಲವಾಗಿ ಮೆಟ್ಟಿದೆ, ಇದಕ್ಕೆ ತಡೆಹಾಕಬೇಕು ಎಂದುಕೊಂಡು ಅವರ ಪರವಾಗಿ ಹೇಳಬಹುದಾದುದನ್ನು ನೆನಪಿಗೆ ತಂದುಕೊಂಡೆ. ಮೆಕ್ಸಿಕೋವನ್ನು ಜಯಿಸಿದ ಕಾರ್ಟೆಸ್, ಪೆರು ರಾಜ್ಯವನ್ನು ಜಯಿಸಿದ ಪಿಸಾರೋ, ಇಬ್ಬರೂ ಧರ್ಮಕರ್ಮಗಳ ಯೋಚನೆಯೇ ಇಲ್ಲದೆ ವರ್ತಿಸಿದರು, ನಂಬಿಸಿ ದ್ರೋಹ ಮಾಡಿದರು, ತಮ್ಮ ನಂತರ ಯೂರೋಪಿನಿಂದ ಬಂದವರಿಗೆ ಆ ಬಗೆಯ ಮೇಲ್ಪಂಕ್ತಿ ಹಾಕಿಕೊಟ್ಟರು, ನಿಜ. ಆದರೆ ಅವರ ಚಾಕಚಕ್ಯ, ಅವರು ಬಳಸುತ್ತಿದ್ದ ಆಯುಧಗಳು, ಇವೆಲ್ಲ ಇಂಡಿಯನ್ನರದ್ದಕ್ಕಿಂತ ಹೆಚ್ಚು ಪರಿಣಾಮಕಾರಿ. ಅಂದ ಮೇಲೆ ಅವರಲ್ಲಿ ನಾಗರಿಕತೆ ಹೆಚ್ಚು ಬೆಳೆದಿತ್ತು ಎಂದು ತಾನೆ ಅರ್ಥ? ಶಸ್ತ್ರಾಸ್ತ್ರಗಳು ಹಿಂಸೆ ಕೊಡುವ ಮತ್ತು ಕೊಲ್ಲುವ ಸಾಧನಗಳು ಎಂದು ಒಪ್ಪಿದರೂ ಅವನ್ನು ತಯಾರಿಸಬಲ್ಲ ಶಕ್ತಿಯನ್ನು ಮೆಚ್ಚಬೇಕಲ್ಲವೆ? ಅಲ್ಲದೆ ಯೂರೋಪಿಯನ್ನರು ಶಸ್ತ್ರಾಸ್ತ್ರಗಳನ್ನು ಮಾತ್ರವಲ್ಲದೆ ಮಾನವಜೀವನಕ್ಕೆ ಹಿತಕರವಾದ ಎಷ್ಟೋ ಯಂತ್ರಗಳನ್ನು ನಿರ್ಮಿಸಿದ್ದಾರೆ. ಹಾರ್ಗ್ರೀವ್ಸನ ಸ್ಪಿನ್ನಿಂಗ್ ಜೆನ್ನಿಯಿಂದ (spinning jenny : ನೂಲುವ ಯಂತ್ರ) ಹಿಡಿದು ಮಂಗಳಗ್ರಹ ಶುಕ್ರ ಗ್ರಹಗಳಿಗೆ ಹೋಗಬಲ್ಲ ಸಾಧನಗಳವರೆಗೆ ಎಂಥ ಅದ್ಭುತವಾದ ಸೌಲಭ್ಯ

---

ಬಿದ್ದದ್ದು ನಿಜ. ಅದರ ಮೂಲದ ವಿಷಯದಲ್ಲಿ ಭಿನ್ನಾಭಿಪ್ರಾಯ ಸಾಧ್ಯ ಎಂದು ಮೇಲಿನ ವಾಕ್ಯ ಸೂಚಿಸುತ್ತದೆ.

ಗಳನ್ನು ಸೃಷ್ಟಿಸಿದ್ದಾರೆ! ಇದನ್ನೆಲ್ಲ ಕೆಂಪುಜನರ ನಾಗರಿಕತೆ ಸಾಧಿಸುತ್ತಿತ್ತೆ? ಇಡೀ ಮಾನವ ಜನಾಂಗದ ಹಿತದ ದೃಷ್ಟಿಯಿಂದ ಈ ಕಾಡುಜನರ ಸಂಸ್ಕೃತಿ ನಾಶವಾಗಿ ಅದರ ಸ್ಥಾನದಲ್ಲಿ ಬಿಳಿಯಜನರ ನಾಗರಿಕತೆ ಸ್ಥಾಪಿತವಾದರೆ ನಷ್ಟಕ್ಕೆ ಬದಲಾಗಿ ಕಲ್ಯಾಣವೇ ಅಲ್ಲವೆ?

ಈ ವಾದ ಹೊಸದಲ್ಲ. ನನ್ನ ಮನಸ್ಸು ಅದನ್ನು ಒಪ್ಪಲೊಲ್ಲದು. ತಂತ್ರಜ್ಞಾನವೇ (technology) ನಾಗರಿಕತೆ, ಅದೇ ಸಂಸ್ಕೃತಿ, ಎಂದು ನಂಬುವವರಿಗೆ ಇದು ನ್ಯಾಯುವಾಗಿಯೇ ಕಾಣುತ್ತದೆ. ಇಂದಿನ ಪ್ರಪಂಚದಲ್ಲಿ ಬಹುಜನ ಇವೆರಡನ್ನೂ (ಸಂಸ್ಕೃತಿ ಮತ್ತು ತಂತ್ರಜ್ಞಾನಗಳನ್ನು) ಅಭಿನ್ನವಾದವುಗಳೆಂದೇ ಭಾವಿಸಿರುವಂತೆ ತೋರುತ್ತದೆ. ಈ ಯುಗದಲ್ಲಿ ಕವಿಗಳು, ನಾಟಕಕಾರರು; ನಮ್ಮ ಗಾಂಧಿಯಂಥ ಅಹಿಂಸಾವಾದಿಗಳು; ಪಾಶ್ಚಾತ್ಯರ ಐನ್‌ಸ್ಟೈನ್‌ನಂಥ ಸಾತ್ವಿಕ ವಿಜ್ಞಾನಿಗಳು, ಅವತರಿಸಿದ್ದಾರೆ, ನಿಜ. ಆದರೆ ಅದು ತಂತ್ರಕಲಾಯುಗದ ತಪ್ಪಲ್ಲ! ಆ ಯುಗ ಅವರನ್ನು ಇರಗೊಟ್ಟಿತು, ಅಷ್ಟೆ; ಅದೂ ಉತ್ಸಾಹ ಸಂತೋಷಗಳಿಂದಲ್ಲ. ಐನ್‌ಸ್ಟೈನ್‌ಗೆ ಕೊಟ್ಟ ಕೋಟಲೆಯನ್ನೂ ಗಾಂಧಿಗೆ ಕೊಟ್ಟ ಗುಂಡಿನೇಟನ್ನೂ ಮರೆಯುವಂತಿಲ್ಲ.

ಮೇಲೆ ಹೇಳಿದ ವಾದದಿಂದ ಒಂದು ಹೆಜ್ಜೆ ಮುಂದಿಟ್ಟರೆ ಸಾಕು. ಹಿಟ್ಲರನ 'ನಾರ್ಡಿಕ್ ರೇಸ್' (Nordic Race) ವಾದಕ್ಕೂ ಅದರ ಭೀಕರ ಪರಿಣಾಮಗಳಿಗೂ ಎಡೆಯಾಗುತ್ತದೆ.

ಮಾಯಾ ಇಂಡಿಯನ್ನರೂ ಆ್ಯಸ್‌ಟೆಕ್ ಇಂಡಿಯನ್ನರೂ ನರಬಲಿ ಕೊಡುತ್ತಿದ್ದರೆಂಬುದು ನಿಜ. ಮಧ್ಯಮಯುಗದಲ್ಲಿ ಬಿಳಿಯ ಜನ 'ಇಂಕ್ವಿಸಿಷನ್' (Inquisition: ಪಾಷಂಡವಾದಿಗಳ ವಿಚಾರಣೆಗಾಗಿ ಏರ್ಪಟ್ಟಿದ್ದ ಮತೀಯ ನ್ಯಾಯಸ್ಥಾನ) ವ್ಯವಸ್ಥೆ ಮಾಡಿಕೊಂಡು ಪಾಷಂಡ ಎನ್ನಿಸಿಕೊಂಡವರನ್ನು ಕಂಬಕ್ಕೆ ಕಟ್ಟಿ ಜೀವಸಹಿತ ಸುಡುತ್ತಿದ್ದರೆಂಬುದೂ ನಿಜ. ಈ ಕೆಳಗೆ ಕಾಣಿಸಿರುವ ಘಟನೆ—ಪತ್ರಿಕೆಯೊಂದರಲ್ಲಿ ವರದಿಯಾಗಿರುವ ಪ್ರಕಾರ—ನಡೆದದ್ದು ಮಧ್ಯಮಯುಗದಲ್ಲಲ್ಲ, 1864ರಲ್ಲಿ:

"ದಾಳಿಮಾಡಲು ಬಂದ ಸವಾರರ ಗುಂಪು ಸೂರ್ಯೋದಯಕ್ಕೆ ಮುಂಚೆ ಶಿಬಿರದೊಳಕ್ಕೆ ನಾಗಾಲೋಟದಿಂದ ಕುದುರೆಗಳನ್ನೋಡಿಸಿಕೊಂಡು ಬಂತು. ಶಿಬಿರದಲ್ಲಿದ್ದವರಲ್ಲಿ ಕೆಲವರು ದಂಗುಬಡಿದಂತಾಗಿ ತಮ್ಮದೇ ಒಂದು ಮನೆಯ ಮೇಲೆ ಏರಿಸಿದ್ದ ಅಮೆರಿಕನ್ ರಾಷ್ಟ್ರಧ್ವಜದ ಅಡಿಯಲ್ಲಿ ಹುದುಗಿಕೊಂಡು ನಿಂತರು. ಇನ್ನು ಕೆಲವರು ಭಯದಿಂದ ದಿಕ್ಕೆಟ್ಟು ಅವಿತುಕೊಳ್ಳಲು ಓಡಿದರು. ಆದರಿಂದೇನೂ ಪ್ರಯೋಜನವಾಗಲಿಲ್ಲ. ಕೊಲೆಮಾಡಿಯೇ ತೀರಬೇಕೆಂದು

ನಿಶ್ಚಯಿಸಿಕೊಂಡು ಬಂದಿದ್ದ ದಾಳಿಕಾರರು ಗಂಡಸರ ನೆತ್ತಿಚರ್ಮವನ್ನು (scalp) ಮಾತ್ರವಲ್ಲ, ಹೆಂಗಸರು ಮಕ್ಕಳ ನೆತ್ತಿ ಚರ್ಮವನ್ನು ಕೂಡ ಸುಲಿದು ಕೊಂಡರು. ಸ್ಮಾರಕಗಳಾಗಿ ಅವನ್ನು ತೆಗೆದುಕೊಂಡು ಹೋದರು. ಕಲವೇ ಘಂಟೆಗಳೊಳಗಾಗಿ 125ಕ್ಕಿಂತ ಹೆಚ್ಚು ಜನ—ಬಹುಮಟ್ಟಿಗೆ ಹೆಂಗಸರು ಮಕ್ಕಳು—ಸತ್ತು ಹೋದರು."

ಮೇಲಿನ ವರದಿಯಾದ ಮೇಲೆ ಪತ್ರಿಕೆ ಹೀಗೆ ವ್ಯಾಖ್ಯಾನಮಾಡಿತು: "ಇದೇನು ಬಿಳಿಯರ ಶಿಬಿರದ ಮೇಲೆ ಇಂಡಿಯನ್ನರು ನಡಸಿದ ದಾಳಿಯ ಕಥೆಯೆ? ಅಲ್ಲ. ಕೊಲೆಗೆ ಗುರಿಯಾದ ಶಿಬಿರ: ಕೊಲೊರೇಡೋವಿನ ಸ್ಯಾಂಡ್ ಕ್ರೀಕ್‌ನಲ್ಲಿ, 1864ರಲ್ಲಿ. ಶಾಂತಜೀವನ ನಡಸುತ್ತಿದ್ದ ಷೈಯಾನ್ (Cheyenne) ಇಂಡಿಯನ್ನರ ಹಳ್ಳಿ. ಕೊಲೆ ನಡಸಿದ ತಂಡದಲ್ಲಿ ಕೆಲವರು ಯುವಕ ಆಫೀಸರುಗಳು ದಾಳಿಯ ಯೋಜನೆಯನ್ನು ವಿರೋಧಿಸಿದಾಗ ತಂಡದ ನಾಯಕ—ಆತ ಮೊದಲು ಮೆಥಡಿಸ್ಟ್ ಪಾದ್ರಿಯಾಗಿದ್ದನಂತೆ!—ಹೇಳಿದ: 'ಇಂಡಿಯನ್ನರಿಗೆ ಸಹಾನುಭೂತಿ ತೋರಿಸುವವನು ಯಾರೇ ಆಗಲಿ, ಅವನನ್ನು ನರಕಕ್ಕೆ ದಬ್ಬಿ! ನಾನು ಇಂಡಿಯನ್ನರನ್ನು ಕೊಲ್ಲಬೇಕೆಂದು ಬಂದಿದ್ದೇನೆ. ಭಗವಂತನ ಸ್ವರ್ಗದ ಅಡಿಯಲ್ಲಿ ದೊರೆಯುವ ಯಾವ ಸಾಧನವಾದರೂ ಸರಿಯೆ, ಅದನ್ನು ಬಳಸುವುದು ನ್ಯಾಯ ಮತ್ತು ಗೌರವಾರ್ಹ ಎಂದು ನನ್ನ ನಂಬಿಕೆ'."—1760ರಿಂದ ಮೊದಲಾಗುವ ದಶಕದಲ್ಲಿ ಬ್ರಿಟಿಷ್ ನಾಯಕನೊಬ್ಬ ಈ ಸಮಸ್ಯೆಯನ್ನು ಮತ್ತಷ್ಟು ಸೂಕ್ಷ್ಮ ರೀತಿಯಲ್ಲಿ ಬಿಡಿಸಿದ: ಇಂಡಿಯನ್ನರಿಗೆ ಸಿಡುಬುರೋಗದ ಸೋಂಕು ತಗಲಿದ್ದ ಕಂಬಳಿಗಳನ್ನು ಕೊಡಬೇಕೆಂದು ಅಪ್ಪಣೆ ಮಾಡಿದನಂತೆ!

ಈ ನಾಯಕರು ಬಿಳಿಯ ಜನರೆಲ್ಲರ ಪ್ರತಿನಿಧಿಗಳಲ್ಲ. ಅವರ ನಡತೆಯನ್ನು ಬಿಳಿಯ ಜನರೆಲ್ಲ ಮೆಚ್ಚುವುದಿಲ್ಲ. ಮೇಲೆ ಉದಾಹರಿಸಿರುವ ವರದಿಯೂ ಅದರ ಮೇಲಿನ ಖಂಡನಾತ್ಮಕ ವ್ಯಾಖ್ಯಾನವೂ ಬಿಳಿಯ ಜನರಿಂದಲೇ ಬಂದದ್ದು. ಅಂದಮೇಲೆ ಮಾನವದಯಾಮೃತ ಅವರಲ್ಲಿ ಎಲ್ಲೋ ಜೀವಂತವಾಗಿದೆ ಎಂದಂತಾಯಿತು. ಆದರೆ ಒಟ್ಟಿನಲ್ಲಿ ಅದಕ್ಕೆ ಶಕ್ತಿ ಸಾಲದು. ನಾಗರಿಕರು, ಸುಸಂಸ್ಕೃತರು ಎಂದುಕೊಳ್ಳುವ ಜನಾಂಗದವರೇ ಇಂಥ ಕೃತ್ಯಗಳನ್ನು ನಡಸಿರುವಾಗ, ಈಗಲೂ ನಡಸುತ್ತಿರುವಾಗ (ಲಕ್ಷಗಟ್ಟಲೆ ಯೆಹೂದ್ಯರ ಕೊಲೆಯಾದದ್ದು, ವಿಯಟ್ನಾಮ್‌ನ ನರಹತ್ಯೆ, ಇವೆಲ್ಲ ಈ ಶತಮಾನದಲ್ಲೇ ನಡೆದವಷ್ಟೆ!) ನಾವು ಹಿಂದಿನ ಕಾಲದ ಇಂಡಿಯನ್ನರ ಮೇಲೇಕೆ ಕಲ್ಲು ಬೀರಬೇಕು?

ಅಮೆರಿಕದಲ್ಲಿ ವಾಸ್ಪುಗಳು (ಬಿಳಿಯ ಆ್ಯಂಗ್ಲೋ ಸ್ಯಾಕ್ಸನ್ ಪ್ರಾಟೆಸ್ಟೆಂಟರು) ಸಾಧಿಸಿದ್ದೆಲ್ಲವನ್ನೂ ಕೆಂಪು ಜನರು ಸಾಧಿಸುತ್ತಿದ್ದರೆ? ಯಾರು ಬಲ್ಲರು! ಆ್ಯಸ್‌ಟೆಕ್ ಜನರ ಮತ್ತು ಮಾಯಾ ಜನರ ನಾಗರಿಕತೆ ಅಷ್ಟೇನೂ ಕಳಪೆಯದಲ್ಲ. ಅಲ್ಲದೆ ಬಿಳಿಯ ಜನರು ಸಾಧಿಸಿರುವುದೆಲ್ಲವನ್ನೂ ಸಾಧಿಸಬೇಕಾಗಿತ್ತೆ ಎಂಬ ಪ್ರಶ್ನೆಯೂ ಕೇಳಬೇಕಾದದ್ದು. ಅವರ ನಾಗರಿಕತೆಯಿಂದ ಪ್ರಪಂಚ ಎಷ್ಟು ತಲ್ಲಣಿಸಿದೆ ಎಂಬುದು ಈಗೀಗ ಗೋಚರವಾಗುತ್ತಿದೆ. ಇಂದಿನ ಸಮ್ಮತಿಸಮಾಜದಲ್ಲಿ ಆಧ್ಯಾತ್ಮಿಕ ಮೌಲ್ಯಗಳಿಗೆ ಸಂಚಕಾರ ಬಂದಿದೆಯೆಂಬ ಮಾತು ಒತ್ತಟ್ಟಿಗಿರಲಿ. ಭೌತಪ್ರಪಂಚಕ್ಕೆ ಆಗಿರುವ ಒಂದೇ ಒಂದು ಕೇಡನ್ನು ಕಾಣಿಸಿದರೆ ಸಾಕು. ಅಣುಶಕ್ತಿ ವಿಕಿರಣ, ಕೀಟನಾಶಕಗಳಂಥ ರಾಸಾಯನಿಕ ವಸ್ತುಗಳ ಬಳಕೆ, ಕಾರ್ಖಾನೆಗಳಿಂದ ಹೊರ ಹೊರಡುವ ಕಲ್ಮಷ, ಮಾನವ ತಡೆಯಲಾರದಷ್ಟು ಸದ್ದು, ವೇಗ—ಈ 'ನಾಗರಿಕತೆ'ಯಿಂದಾಗಿ ನಮ್ಮ ಭೂಮಿ ವಿಷಮಯವಾಗುತ್ತಿದೆ, ಮಾನವನ ಬದುಕಿಗೆ ಅಯೋಗ್ಯವಾಗುತ್ತಿದೆ, ಎಂದು ವಿಜ್ಞಾನಿಗಳು ಸಾರುತ್ತಿದ್ದಾರೆ.

ಪರಿಸರ ವಿಜ್ಞಾನಿಗಳು ಇಂದು ಕೊಡುತ್ತಿರುವ, ಎಚ್ಚರಿಕೆಯನ್ನು 'ಅನಾಗರಿಕ' ಕೆಂಪುಜನರ ನಾಯಕನೊಬ್ಬ 1855ರಲ್ಲೇ ಕೊಟ್ಟನೆಂದರೆ ನಂಬುವುದು ಕಷ್ಟ! ಆದರೂ ಅವನು ಕೊಟ್ಟದ್ದು ನಿಜ. ವಾಷಿಂಗ್ಟನ್ ರಾಜ್ಯದಲ್ಲಿದ್ದ ಸುವಾಮಿಷ್ ಇಂಡಿಯನ್ ಬಣದ ಆ ನಾಯಕನ ಹೆಸರು ಸಿಯಾತಲ್. ಅವನ ಹೆಸರಿನ ಅಮೆರಿಕನ್ ರೂಪವನ್ನೇ ಸಿಯಾಟ್ಲ್ (Seattle) ನಗರಕ್ಕೆ ಇಟ್ಟಿದ್ದಾರೆ. ಆಗ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷನಾಗಿದ್ದ ಫ್ರಾಂಕ್ಲಿನ್ ಪಿಯರ್ಸ್ (Franklin Pierce) ಸಿಯಾತಲ್‌ಗೆ "ನಿಮ್ಮ ಬಣಕ್ಕೆ ಸೇರಿರುವ ಜಮೀನನ್ನು ನಮಗೆ ಖರೀದಿಗೆ ಕೊಡಿ" ಎಂದು ಕಾಗದ ಬರೆದನಂತೆ. ಆ ಕಾಗದಕ್ಕೆ ಸಿಯಾತಲ್ ಬರೆದ ಉತ್ತರದಲ್ಲಿ ಎದ್ದು ತೋರುವ ಆತ್ಮಗೌರವ, ದ್ವೇಷಕ್ಕಾಗಲಿ ಗೋಳುಕರೆಗಾಗಲಿ ಇಳಿಯದೆ ಅಪ್ರಿಯ ಸತ್ಯವನ್ನು ಕಂಡು ಕಾಣಿಸುವ ಆತ್ಮವಂತಿಕೆ, ಭವಿಷ್ಯದೃಷ್ಟಿ, ಆಡಂಬರವಿಲ್ಲದ ಕವಿಸಹಜವಾದ ಮನೋವೃತ್ತಿ—ಇವು ನನ್ನನ್ನು ಬೆರಗುಗೊಳಿಸಿದವು. ಆ ಪತ್ರದ ಕೆಲವು ಭಾಗಗಳನ್ನು* ಇಲ್ಲಿ ಅನುವಾದಿಸಿದ್ದೇನೆ:

* ಇಲ್ಲಿ ನಾನು ಅನುವಾದಿಸಿರುವ ಭಾಗಗಳು 'ಹಿಂದೂ' ಪತ್ರಿಕೆಯಲ್ಲಿ ಬಹಳ ಹಿಂದೆ ಪ್ರಕಟವಾಗಿದ್ದವಂತೆ. ಇದನ್ನು ನನ್ನ ಗಮನಕ್ಕೆ ತಂದವರು ಶ್ರೀ ಜಿ. ಟಿ. ನಾರಾಯಣರಾಯರು (ಅವರೂ ಆ ಭಾಗಗಳನ್ನು ಅನುವಾದಿಸಿದ್ದಾರೆ). ಇಂಗ್ಲಿಷ್ ಮೂಲವನ್ನು ನನಗೆ ಒದಗಿಸಿಕೊಟ್ಟವರು ಶ್ರೀ ಜೆ. ಆರ್. ಲಕ್ಷ್ಮಣರಾಯರು. ಈ ಮಿತ್ರರಿಗೂ 'ಹಿಂದೂ' ಪತ್ರಿಕೆಗೂ ನಾನು ಋಣಿ.

"ವಾಷಿಂಗ್ಟನ್ನಿನಲ್ಲಿರುವ ಮಹಾನಾಯಕರು (the great chief) ಹೇಳಿ ಕಳಿಸಿದ್ದಾರೆ, 'ನಿಮ್ಮ ಭೂಮಿಯನ್ನು ಕೊಳ್ಳುತ್ತೇವೆ' ಎಂದು. ಮಹಾನಾಯಕರು ಸ್ನೇಹದ ಮತ್ತು ಸದ್ಭಾವನೆಯ ಸಂದೇಶವನ್ನೂ ಕಳಿಸಿದ್ದಾರೆ. ಇದು ಅವರಲ್ಲಿ ಸೌಜನ್ಯ. ಏಕೆಂದರೆ ಆ ಸ್ನೇಹಕ್ಕೆ ಪ್ರತಿಯಾಗಿ ಅವರಿಗೆ ನಮ್ಮ ಸ್ನೇಹದ ಅವಶ್ಯಕತೆಯೇನೂ ಇಲ್ಲ. ಇದನ್ನು ನಾವು ಬಲ್ಲೆವು. ನಾವು ನಿಮ್ಮ ಕೇಳಿಕೆಗೆ ಗಮನಕೊಡುತ್ತೇವೆ. ಹಾಗೆ ಮಾಡದಿದ್ದರೆ ಬಿಳಿಯ ಜನ ಬಂದೂಕು ಸಹಿತ ಬಂದು ನಮ್ಮ ಭೂಮಿಯನ್ನು ವಶಪಡಿಸಿಕೊಳ್ಳಬಹುದು; ಇದನ್ನೂ ನಾವು ಬಲ್ಲೆವು....

"ಅಂತರಿಕ್ಷವನ್ನೂ ಭೂಮಿ ತಾಯಿಯ ಮಡಿಲ ಸುಖೋಷ್ಣವನ್ನೂ ಮಾರುವುದು ಹೇಗೆ? ಈ ಯೋಚನೆಯೇ ನಮಗೆ ವಿಚಿತ್ರವಾಗಿ ಕಾಣುತ್ತದೆ. ಗಾಳಿಯ ಆಪ್ಯಾಯನದ ಮೇಲಾಗಲಿ ನೀರಿನ ಚಂಚಲಕಾಂತಿಯ ಮೇಲಾಗಲಿ ನಾವಿನ್ನೂ ಒಡೆತನವನ್ನು ಸಂಪಾದಿಸಿಲ್ಲ! ಅವನ್ನು ನಮ್ಮಿಂದ ಹೇಗೆ ತಾನೆ ಕೊಂಡೀರಿ? ಈ ನೆಲದ ಪ್ರತಿ ಅಂಗುಲವೂ ನನ್ನ ಜನಕ್ಕೆ ಪವಿತ್ರ. ಹೊಳೆಯುವ ಪೈನ್‌ಸೂಜಿ (ಪೈನ್ ಮರದ ಎಲೆ) ಮರಳುತೀರ, ಕತ್ತಲ ಕಾಡಿನಲ್ಲಿ ಕವಿಯುವ ಮಂಜು, ತೆರವಾದ ವನಸ್ಥಲ, ಗುಂಗುಟ್ಟುವ ಕೀಟ—ಪ್ರತಿಯೊಂದಕ್ಕೂ ನಮ್ಮ ನೆನಪಿನಲ್ಲೂ ನಮ್ಮ ಅನುಭವದಲ್ಲೂ ಪವಿತ್ರ ಸ್ಥಾನವಿದೆ.

"ಬಿಳಿಯ ಜನರಿಗೆ ನಮ್ಮ ಪದ್ಧತಿಗಳೂ ನಡೆವಳಿಕೆಗಳೂ ಅರ್ಥವಾಗುವುದಿಲ್ಲವೆಂದು ಬಲ್ಲೆವು. ಅವರ ಮಟ್ಟಿಗೆ ಭೂಮಿಯ ಒಂದು ಭಾಗ ಇನ್ನೊಂದರಂತೆ; ಯಾವುದಾದರೂ ಒಂದೇ. ಅವರು ಆಗಂತುಕರು. ರಾತ್ರಿ ಬರುತ್ತಾರೆ, ಭೂಮಿಯಿಂದ ತಮಗೆ ಬೇಕಾದ್ದನ್ನೆಲ್ಲ ತೆಗೆದುಕೊಳ್ಳುತ್ತಾರೆ, ಅಷ್ಟೆ. ಈ ಮಣ್ಣು ಅವರ ಸೋದರನಲ್ಲ, ಶತ್ರು. ಅದನ್ನು ಜಯಿಸಿದ ಮೇಲೆ ಅವರು ಮುಂದಕ್ಕೆ ಹೊರಡುತ್ತಾರೆ....ಅವರ ಹಸಿವು ಈ ಮಣ್ಣನ್ನು ಕಬಳಿಸಿ ಮುಂದೆ ಸಾಗುತ್ತದೆ; ಇಲ್ಲಿ ಉಳಿಯುವುದು ಮರುಭೂಮಿ, ಕೆಂಪುಜನರು ಕಾಡುಮನುಷ್ಯರಷ್ಟೆ; ಅದರಿಂದಲೇ ಇರಬಹುದು: ನಿಮ್ಮ ಪಟ್ಟಣಗಳು ನಮ್ಮ ಕಣ್ಣಿಗೆ ನೋವು ತರುತ್ತವೆ....

"ನಾನು ನಿಮ್ಮ ಕೇಳಿಕೆಗೆ ಒಪ್ಪಬಹುದೆಂದು ನಿಶ್ಚಯಿಸಿದರೆ, ಒಂದು ಷರತ್ತು ಹಾಕುತ್ತೇನೆ: ಈ ಪ್ರಾಂತದಲ್ಲಿರುವ ಮೃಗಗಳನ್ನು ಬಿಳಿಯ ಜನ ತಮ್ಮ ಸೋದರರಂತೆ ಕಾಣಬೇಕು, ಸೋದರರಂತೆ ನಡಸಿಕೊಳ್ಳಬೇಕು....

"ಒಂದು ವಿಷಯ ನಮಗೆ ಖಚಿತವಾಗಿದೆ; ಎಂದಾದರೂ ಒಂದು ದಿನ ಅದು ಬಿಳಿಯ ಜನರ ಗೋಚರಕ್ಕೂ ಬಂದೀತು: ನಮ್ಮಿಬ್ಬರ ದೇವನೂ

ಒಬ್ಬನೇ. ನಮ್ಮ ಭೂಮಿಯನ್ನು ನಿಮ್ಮ ಸ್ವತ್ತಾಗಿ ಮಾಡಿಕೊಳ್ಳಬಯಸುತ್ತೀರಲ್ಲ, ಹಾಗೆಯೆ ಜೀವರನ್ನೂ ನಿಮ್ಮ ಸ್ವತ್ತಾಗಿ ಮಾಡಿಕೊಳ್ಳಬಹುದೆಂದು ನೀವು ಭಾವಿಸುವಿರೇನೊ, ಅದು ಸಾಧ್ಯವಲ್ಲ. ಅವನು ಮಾನವರೆಲ್ಲರ ದೇವರು. ಅವನ ಕರುಣೆ ಬಿಳಿಯ ಜನಕ್ಕೂ ಕೆಂಪು ಜನಕ್ಕೂ ಸಮವಾಗಿ ಸಲ್ಲುತ್ತದೆ. ಅವನ ದೃಷ್ಟಿಯಲ್ಲಿ ಈ ಭೂಮಿ ಅಮೂಲ್ಯವಾದದ್ದು. ಅದಕ್ಕೆ ನೀವು ಕೇಡು ಉಂಟುಮಾಡಿದರೆ ಅದನ್ನು ಸೃಷ್ಟಿಸಿದವನ ಮೇಲೆ ತಿರಸ್ಕಾರದ ಮಳೆ ಕರೆದಂತೆ. ಬಿಳಿಯ ಜನರೂ ಕೂಡ ಎಂದೋ ಒಂದು ದಿನ—ಬಹುಶಃ ಇತರ ಜನಾಂಗದವರಿಗಿಂತ ಮುಂಚೆಯೇ—ಕಾಲರಾಯನ ವಶವಾಗುತ್ತಾರೆ. ನೀವು ಮಲಗುವ ಹಾಸಿಗೆಯನ್ನು ನೀವೇ ಹೀಗೆ ಹೊಲಸುಮಾಡುತ್ತ ಹೋದರೆ ಎಂದೋ ಒಂದು ರಾತ್ರಿ ಆ ಹೊಲಸಿನಿಂದಲೇ ಉಸಿರು ಕಟ್ಟಿ ಸಾಯುತ್ತೀರಿ. ಕಾಡೆಮ್ಮೆಗಳನ್ನೆಲ್ಲ ಕೊಂದಮೇಲೆ, ಕಾಡುಕುದುರೆಗಳನ್ನೆಲ್ಲ ಪಳಗಿಸಿದ ಮೇಲೆ, ಕಾಡಿನ ಪವಿತ್ರವಾದ ಮೂಲೆ ಮೂಲೆಯೂ ಮಾನವ ಗಂಧದಿಂದ ದಟ್ಟವಾದ ಮೇಲೆ, ಕಾಲದಿಂದ ಮಾಗಿರುವ ಈ ಬೆಟ್ಟಗಳ ಸುಂದರ ದೃಶ್ಯವೆಲ್ಲ ಜಲ್ಪಿಸುವ ಹೆಂಗಳೆಯರಿಂದ ಮುಚ್ಚಿಹೋದ ಮೇಲೆ—ನಮ್ಮ ಹಸುರುಹೊದರುಗಳೆಲ್ಲಿ? ಗರುಡನೆಲ್ಲಿ ? ಇವೆಲ್ಲವನ್ನೂ ಕೊನೆಯಬಾರಿ ಕಳಿಸಿಕೊಟ್ಟು ಕೈತೊಳೆಯುವ ಅನುಭವ—ಅನೇ ಜೀವನದ ಅಂತ್ಯ, ಮರಣದ ಆದಿ!

* * *

“ಬಿಳಿಯ ಜನರ ಪಟ್ಟಣಗಳಲ್ಲಿ ಎಲ್ಲೂ ಗಲಭೆಯಿಲ್ಲದೆ ನೆಮ್ಮದಿಯಾದ ಸ್ಥಳವಿಲ್ಲ. ವಸಂತದ ಎಲೆಗಳ ಮರ್ಮರ ಶಬ್ದವೂ ಕೀಟಗಳ ರೆಕ್ಕೆಯ ಗುಂಗೂ ಎಲ್ಲೂ ಕೇಳಿಸವು. ನಾನು ಕೇವಲ ಕಾಡುಮನುಷ್ಯ, ಅರ್ಥಮಾಡಿಕೊಳ್ಳುವ ಶಕ್ತಿಯಿಲ್ಲದವನು; ಅದರಿಂದಲೇ ಇರಬಹುದು: ಈ ನಗರಗಳ ಗಲಭೆ ನನ್ನ ಕಿವಿಗೆ ಶಲ್ಯದ ಇರಿತದಂತೆ ತೋರುತ್ತದೆ; ವ್ಹಿಪ್‌ಪೂರ್‌ವಿಲ್‌ನ* ಮಧುರ ಸ್ವರವನ್ನು ಕೇಳಲಾಗದಿದ್ದರೆ, ರಾತ್ರಿಯ ಹೊತ್ತಿನಲ್ಲಿ ಕೊಳದ ಸುತ್ತಮುತ್ತ ನಡೆಯುವ ಕಪ್ಪೆಗಳ ವಾಗ್ವಾದ ನಿಂತುಹೋದರೆ—ಬದುಕಿ ಫಲವೇನು! ಕೆಂಪುಜನರಿಗೆ ನಿಮ್ಮ ಗಲಭೆ ಬೇಡ. ದಿನಮಧ್ಯದ ಮಳೆಯಲ್ಲಿ ಮಿಂದು ಶುದ್ಧವಾಗಿ, ದೇವದಾರುವಿನ ಪರಿಮಳವನ್ನು ಹೊತ್ತು ಬರುವ ತಂಗಾಳಿಯ ಸ್ಪರ್ಶವೇ ಸಾಕು, ಈ ಗಾಳಿ ಕೆಂಪುಜನರ ದೃಷ್ಟಿಯಲ್ಲಿ ಅಮೂಲ್ಯವಾದದ್ದು. ಮೃಗ,

---

*Whip poorwill: ಇದೊಂದು ಅಮೆರಿಕನ್ ಪಕ್ಷಿ, ಆ ಹೆಸರು ಅದರ ಕೂಗಿನ ಅನುಕರಣ.

ಮರ, ಮಾನವ—ಎಲ್ಲ ಹಂಚಿಕೊಳ್ಳುತ್ತಾರೆ, ಆ ಗಾಳಿಯನ್ನು. ಬಿಳಿಯ ಜನರ ಗಮನವಾದರೋ ತಾವು ಉಸಿರಾಡುವ ಗಾಳಿಯ ಕಡೆ ಹರಿದಂತೆಯೇ ತೋರುವುದಿಲ್ಲ.

"ಬಿಳಿಯ ಜನ ಯಾವ ಕನಸು ಕಾಣುತ್ತಾರೆ? ಚಳಿಗಾಲದ ದೀರ್ಘ ರಾತ್ರಿಗಳಲ್ಲಿ ತಮ್ಮ ಮಕ್ಕಳೆದುರಿಗೆ ಯಾವ ಆಸೆ ಆಕಾಂಕ್ಷೆಗಳನ್ನು ಹೇಳಿಕೊಳ್ಳುತ್ತಾರೆ? ಆ 'ಭವಿಷ್ಯ', ಆ 'ನಾಳೆ' ಬೇಗ ಬರಬಾರದೆ! ಎಂಬ ಆಸೆ ಅಂಕುರಿಸುವಂತೆ ಮಕ್ಕಳ ಮನಸ್ಸಿನ ಮೇಲೆ ಯಾವ ಕಣಸಿನ ಮುದ್ರೆಯನ್ನೊತ್ತುತ್ತಾರೆ? ಇದು ತಿಳಿದರೆ ನಿಮ್ಮ ನಡವಳಿಕೆ ನಮಗೆ ಅರ್ಥವಾದೀತು. ಆದರೆ ನಾವು ಕಾಡು ಜನ! ಬಿಳಿಯ ಜನರ ಕನಸುಗಳು ನಮಗೆ ಕಾಣಿಸವು. ಅವು ನಮ್ಮಿಂದ ಬಚ್ಚಿಟ್ಟ ಸರಕು. ಆದ್ದರಿಂದ ನಾವು ಎಂದಿನಂತೆ ನಮ್ಮ ದಾರಿಯಲ್ಲೇ ನಡೆಯುತ್ತೇವೆ. ನಾವು ನಿಮ್ಮ ಕೇಳಿಕೆಗೆ ಒಪ್ಪಿದರೆ, ನೀವು ನಮಗಾಗಿ ಕೆಲವು ಪ್ರಾಂತಗಳನ್ನು ಕಾದಿಡುತ್ತೇವೆಂದು ಭರವಸೆ ಕೊಟ್ಟಿದ್ದೀರಲ್ಲ, ಅವು ನಮಗೆ ದೊರೆತಾವು ಎಂಬ ಆಸೆಯಿಂದ. ಇನ್ನು ನಮಗೆ ಉಳಿದಿರುವ ಅಲ್ಪಕಾಲವನ್ನು ನಮಗೆ ಸರಿತೋರಿದಂತೆ ಅಲ್ಲಿ ಕಳೆದು ಮುಗಿಸಬಹುದೇನೊ. ಕೊನೆಯ ಕೆಂಪು ಮನುಷ್ಯ ಈ ಭೂಮಿಯಿಂದ ಅದೃಶ್ಯನಾದ ನಂತರವೂ, ಅವನ ನೆನಪು ಕೂಡ ವಿಶಾಲವಾದ ಹುಲ್ಲುಗಾವಲಿನ ಮೇಲೆ ಹರಿದು ಕಾಣದಾಗುವ ಮೋಡದ ನೆರಳಿನಂತಾದ ಮೇಲೂ, ನನ್ನ ಜನರ ಬಯಲುಚೇತನಗಳು ಈ ತೀರಗಳಲ್ಲಿ ಆಶ್ರಯಪಡೆದು ಸುಳಿದಾಡುತ್ತಿರುತ್ತವೆ. ಏಕೆಂದರೆ ಎಳೆಯ ಮಗು ತನ್ನ ತಾಯಿಯ ಹೃದಯಸ್ಪಂದನವನ್ನು ಪ್ರೀತಿಸುವಂತೆ ನನ್ನ ಜನ ಈ ಮಣ್ಣನ್ನು ಪ್ರೀತಿಸುತ್ತಾರೆ. ನಮ್ಮ ಭೂಮಿಯನ್ನು ನಿಮಗೆ ಮಾರಿದರೆ—ನಾವು ಅದನ್ನು ಪ್ರೀತಿಸಿದಂತೆಯೇ ನೀವೂ ಪ್ರೀತಿಸಿ; ನಾವು ಅದಕ್ಕೆ ನಮ್ಮ ಮನಸ್ಸನ್ನು ಧಾರೆಯೆರೆದುಕೊಟ್ಟಂತೆ ನೀವೂ ಕೊಡಿ; ಅದನ್ನು ಪಡೆದುಕೊಂಡ ಹೊಸದರಲ್ಲಿ ಹೇಗೋ ಹಾಗೆಯೇ ಸದಾ ನಿಮ್ಮ ಮನಸ್ಸಿನಲ್ಲಿ ಅದರ ನೆನಪು ಜೀವಂತವಾಗಿರಲಿ. ನಿಮ್ಮ ಒಲವು, ನಿಮ್ಮ ಶಕ್ತಿ, ನಿಮ್ಮ ಹೃದಯದ ಆಸೆ—ಎಲ್ಲವನ್ನೂ ವಿನಿಯೋಗಿಸಿ ಅದನ್ನು ನಿಮ್ಮ ಮಕ್ಕಳಿಗಾಗಿ ರಕ್ಷಿಸಿಕೊಳ್ಳಿ. ದೇವರ ಪ್ರೀತಿ ನಮ್ಮೆಲ್ಲರಿಗೂ ಸಲ್ಲುವಂತೆ ನಿಮ್ಮ ಪ್ರೀತಿ ಅದಕ್ಕೆ ಸಲ್ಲಲಿ. ಒಂದು ಸತ್ಯವನ್ನು ನಾವು ಕಂಡಿದ್ದೇವೆ. ನಮ್ಮ ದೇವರೇ ನಿಮ್ಮ ದೇವರು. ಈ ಭೂಮಿ ಅವನಿಗೆ ಅಮೂಲ್ಯವಾದದ್ದು, ಪ್ರಿಯವಾದದ್ದು, ಮಾನವ ಕುಲವೆಲ್ಲಕ್ಕೂ ಅನ್ವಯಿಸುವ ನಿಯತಿಗೆ ಬಿಳಿಯ ಜನ ಹೊರತಲ್ಲ!"

ಎಲ್ಲ ಮಾನವರ, ಎಲ್ಲ ಪ್ರಾಣಿಗಳ, ಸೃಷ್ಟಿಯಲ್ಲಿರುವ ಎಲ್ಲ ವಸ್ತುಗಳ

ಏಕತ್ವವನ್ನು ಕಂಡವನು, ಈ 'ಅನಾಗರಿಕ ಅಸಂಸ್ಕೃತ' ಜನಾಂಗದ ನಾಯಕ. ತನ್ನ ಜನವನ್ನು ಮೂಲೆಗುಂಪು ಮಾಡಿದ ಬಿಳಿಯರ ಅನ್ಯಾಯವನ್ನೂ ಕ್ರೌರ್ಯವನ್ನೂ ಅರಿತವನಾದರೂ ಅವರನ್ನು ಶಪಿಸಲಿಲ್ಲ ಮಾತ್ರವಲ್ಲ; ಅವನ ಕಾಗದದ ಕೊನೆಯ ಭಾಗದಲ್ಲಿ ಪ್ರಾರ್ಥನೆಯ ದನಿಯ ಜೊತೆಗೆ ಹರಕೆಯ ದನಿಯೂ ಹೊಂದಿಕೊಂಡಿದೆ. ಅವನ ಸಂಸ್ಕೃತಿಯ ಎದುರಿಗೆ ನಾವು ನಾಚಿ ತಲೆತಗ್ಗಿಸಿ ನಿಲ್ಲಬೇಕು. ಹೃದಯದಿಂದ ನೇರವಾಗಿ ನಿರಾಭರಣ ಸುಂದರವಾಗಿ ಉಕ್ಕಿ ಬಂದಿರುವ ಅವನ ಬರಹವೊಂದು ಕವಿತೆ. ಈ ಬಗೆಯ ಘನತೆಯುಳ್ಳ, ಆದರೆ ಅದಕ್ಕೆ ಅಭಿವ್ಯಕ್ತಿ ಕೊಡಲಾರದ, ಎಷ್ಟು ಜನರಿದ್ದಾರೊ, ಇಂಡಿಯನ್ ಜನಾಂಗದಲ್ಲಿ!

## ಮೌಂಟ್ ರಷ್‌ಮೋರ್ ಸ್ಮಾರಕ; ರವಿಶಂಕರರನ್ನು ಕುರಿತ ಟೀವಿ ಕಾರ್ಯಕ್ರಮ

ಯೆಲ್ಲೊಸ್ಟೋನ್ ಪಾರ್ಕನ್ನು ಬಿಟ್ಟು ಕೋಡಿಗೆ ಬರುವ ವೇಳೆಗೆ ನಮ್ಮ ಪರ್ವತಪ್ರಾಂತದ ಪ್ರವಾಸ ಮುಗಿಯಿತು ಎಂಬ ಭಾವನೆ ಬಂದಿತ್ತು. ಆದರೆ ವಾಸ್ತವವಾಗಿ ನಾವು ಜೇನ್ಸ್‌ವಿಲ್‌ಗೆ ಹಿಂದಿರುಗುವಾಗ ಬ್ಲ್ಯಾಕ್ ಹಿಲ್ಸ್ (Black Hills) ಪಾರ್ಕಿನ ಮೂಲಕ ಹೋಗುವ ರಸ್ತೆಯನ್ನು ಹಿಡಿಯಬೇಕಾಗಿತ್ತು. ಅದೂ ಪರ್ವತ ಪ್ರಾಂತವೇ. ಆ ದಾರಿಯಲ್ಲಿ ರ್‍ಯಾಪಿಡ್ ಸಿಟಿ ಸಿಕ್ಕುತ್ತದೆ. ಅದಕ್ಕೆ ಹತ್ತಿಪ್ಪತ್ತು ಮೈಲಿ ದೂರದಲ್ಲಿ ರಷ್‌ಮೋರ್ ಬೆಟ್ಟದ ಸ್ಮಾರಕವಿದೆ. (Mount Rushmore Monument) ಅದರ ಶಿಖರದ ಜೀವಗಲ್ಲಿನಲ್ಲಿ ವಾಷಿಂಗ್ಟನ್, ಜೆಫರ್ಸನ್, ಥಿಯಡೋರ್, ರೂಸ್‌ವೆಲ್ಟ್, ಮತ್ತು ಏಬ್ರಹಮ್ ಲಿಂಕನ್—ಈ ನಾಲ್ಕು ಜನ ರಾಷ್ಟ್ರಾಧ್ಯಕ್ಷರ ರುಂಡಗಳನ್ನು ಕೆತ್ತಿಸಿದ್ದಾರೆ. ಕೆತ್ತಿದವನು ಬೋರ್ಗ್‌ಲಮ್ ಎಂಬ ಶಿಲ್ಪಿ. ನನಗೆ ತೋರುವ ಮಟ್ಟಿಗೆ ಈ ಸ್ಮಾರಕವನ್ನು ಮೆಚ್ಚಬೇಕಾದದ್ದು ಲಲಿತಕಲೆಯ ದೃಷ್ಟಿಯಿಂದಲ್ಲ, ಅಷ್ಟು ಎತ್ತರದಲ್ಲಿ ಆ ದೈತ್ಯಪ್ರಮಾಣದ ಮೂರ್ತಿಗಳನ್ನು ಕೆತ್ತಿದ ಶಿಲ್ಪ ಸಾಹಸಕ್ಕಾಗಿ. ಬೋರ್ಗ್‌ಲಂ 465 ಅಡಿ ಎತ್ತರದ ಮನುಷ್ಯರನ್ನು ಗಮನದಲ್ಲಿಟ್ಟುಕೊಂಡು ಆ ಕಲ್ಪನೆಗೆ ಹೊಂದುವಂಥ ಮುಖಗಳನ್ನು ಕೆತ್ತಿದನಂತೆ. ನೆತ್ತಿಯಿಂದ ಗಲ್ಲದ ತುದಿಯವರೆಗೆ ಆ ತಲೆಗಳ ಅಳತೆ 60 ಅಡಿ, ಮೂಗಿನ ಉದ್ದ 20 ಅಡಿ, ಬಾಯಿನ ಅಗಲ 18 ಅಡಿ! ಈ ಪ್ರಮಾಣದ ಮೂರ್ತಿಶಿಲ್ಪ ಮತ್ತೆಲ್ಲಿಯೂ ಇಲ್ಲವಂತೆ.

ರ್‍ಯಾಪಿಡ್ ಸಿಟಿಯ ಹತ್ತಿರದಲ್ಲಿ ನೋಡಬೇಕಾದ ಸ್ಥಳಗಳು ಇನ್ನೆರಡಿವೆ.

ಒಂದು: 'ರೆಪ್ಟೈಲ್ಸ್ ಗಾರ್ಡನ್' (Reptiles' garden—ಸರೀಸೃಪಗಳ ತೋಟ). ನನಗೆ ಬಹಳ ಹಿಂದಿನಿಂದಲೂ ಹಾವು ಎಂದರೆ—ಪ್ರೀತಿ ಎಂದು ಹೇಳಲಾರೆ, ವಿಷದ ಹಾವಲ್ಲದಿದ್ದರೂ ಅದನ್ನು ಮುಟ್ಟಲು ಹಿಂಜೆಗೆವೇನು—ಒಂದು ಬಗೆಯ ವಿಚಿತ್ರ ಆಕರ್ಷಣೆ. ಇಂಗ್ಲಿಷಿನ ಫ್ಯಾಸಿನೇಷನ್ (fascination) ಎಂಬ ಪದ ಅದಕ್ಕೆ ಸರಿಯಾದ ಅಭಿವ್ಯಕ್ತಿ ಕೊಟ್ಟೀತು. ಇಂದಿಗೂ ಬೀದಿಯಲ್ಲಿ ಹಾವಾಡಿಗನ ಆಟ ನಡೆಯುತ್ತಿದ್ದರೆ ನನ್ನಲ್ಲಿರುವ ಮರ್ಯಾದೆ ರಾಮಣ್ಣನನ್ನು ಅದುಮಿಟ್ಟು ನಿಂತು ಹೆಡೆಬಿಟ್ಟ ಹಾವಿನ ತೂಗಾಟವನ್ನು ನೋಡುತ್ತೇನೆ. ಆ ಸರೀಸೃಪಗಳ ತೋಟದಲ್ಲಿ ಬಗೆಬಗೆಯ ಹಾವುಗಳು—ಅಮೆರಿಕದ ಕಾಪರ್‌ಹೆಡ್, ರ್‍ಯಾಟ್ಲ್ ಹಾವು (rattle snake) ಮುಂತಾದು ವಲ್ಲದೆ ನಮ್ಮ ಕಾಳಿಂಗನಾಗರ, ಗೋಧಿನಾಗರ, ಹೆಬ್ಬಾವು, ಮುಂತಾದುವು; ಮೊಸಳೆಗಳು, ಅ್ಯಲಿಗೇಟರ್‌ಗಳು, ಮೂರುನಾಲ್ಕಡಿ ಉದ್ದ ಅಗಲಗಳುಳ್ಳ ದೊಡ್ಡ ಆಮೆಗಳು, ಎಲ್ಲವನ್ನೂ ಸಾಕಿದ್ದಾರೆ. ತಜ್ಞನೊಬ್ಬ ಅಲ್ಲಿದ್ದು ಹಾವುಗಳ ವಿಷಯ ಪ್ರಶ್ನೆಹಾಕಿದರೆ ಉತ್ತರ ಕೊಡುತ್ತಾನೆ; ಮಾತ್ರವಲ್ಲ, ಹಾವು—ಮುಖ್ಯವಾಗಿ ರ್‍ಯಾಟ್ಲ್ ಹಾವು—ಕಚ್ಚಿದರೆ ಏನು ಮಾಡಬೇಕೆಂಬುದನ್ನು ಕುರಿತು ಸಣ್ಣ ಉಪನ್ಯಾಸವನ್ನೂ ಕೊಡುತ್ತಾನೆ. ಸುನೀಲನಿಗೆ ಇವೆಲ್ಲಕ್ಕಿಂತ ಹೆಚ್ಚು ಸಂತೋಷಕೊಟ್ಟದ್ದೆಂದರೆ ಆನೆಯೊಂದರ ಮೇಲೆ ನಾಲ್ಕಾರು ಗಜ ದಷ್ಟು ದೂರ ಸವಾರಿಮಾಡಿದ್ದು.

ಅಲ್ಲಿದ್ದ ಇನ್ನೊಂದು ಆಕರ್ಷಣೆ, ವನ್ಯಮೃಗಗಳನ್ನು—ಕರಿ ಕರಡಿ, ಗ್ರಿಸ್ಲಿಕರಡಿ, ಪ್ಯೂಮ, ಜಾಗುವರ್ ಮುಂತಾದುವನ್ನು— ಮನಬಂದಂತೆ ಸಂಚರಿಸಲೆಂದು ಬಿಟ್ಟಿರುವ ಪಾರ್ಕ್. ನಾವು ಕಾರಿನಲ್ಲಿ ಬಾಗಿಲು ಮುಚ್ಚಿ ಕೊಂಡು ಕುಳಿತರೆ ಆ ಪ್ರಾಣಿಗಳು ನಮ್ಮ ಮಗ್ಗುಲಲ್ಲೇ ಹೋಗುವುದನ್ನು ನೋಡಬಹುದು. ನಾವು ಅವುಗಳಿಗೆ ತೊಂದರೆ ಕೊಡದಿದ್ದರೆ ಸಾಮಾನ್ಯವಾಗಿ ಅವೂ ನಮಗೆ ತೊಂದರೆ ಕೊಡುವುದಿಲ್ಲ. ಆದರೂ ಅಟ್ಟಣೆಯಮೇಲೆ ಬಂದೂಕ ವನ್ನು ಹಿಡಿದು ಒಬ್ಬ ಕಾದಿರುತ್ತಾನೆ.

ಅದೇ ದಿನ ಅಪರೂಪಕ್ಕೆ ಟೀವಿ ಕಾರ್ಯಕ್ರಮವೊಂದನ್ನು ನೋಡಿದೆ. ಅಕಸ್ಮಾತ್ ಯಂತ್ರವನ್ನು ತಿರುಗಿಸಿದಾಗ ಅನೌನ್ಸರು ಪಂಡಿತ ರವಿಶಂಕರ ರನ್ನು ಕುರಿತು ಮಾತಾಡುತ್ತಿದ್ದ. "ಇವರು ಪ್ರಪಂಚದ ಪ್ರಮುಖ ಸಂಗೀತ ಗಾರರಲ್ಲೊಬ್ಬರು, ಅಮೆರಿಕದ ರಾಕ್ ಸಂಗೀತದ ಮೇಲೆ ಇವರು ಬಹಳ ಪ್ರಭಾವ ಬೀರಿದ್ದಾರೆ" ಎಂದು ಮುಂತಾಗಿ ಹೊಗಳಿ ಪರಿಚಯಮಾಡಿಕೊಟ್ಟ. ಆದಾದ ಮೇಲೆ ರವಿಶಂಕರರು ಸಿಂಧುಭೈರವಿ ರಾಗವನ್ನು ಬಹು ಸೊಗಸಾಗಿ

ಬಾರಿಸಿದರು. ಅಲ್ಲಿಯವರೆಗೆ ಕಾರ್ಯಕ್ರಮ ಬಹಳ ಚೆನ್ನಾಗಿತ್ತು. ಅನಂತರ ಪಂಡಿತರೊಡನೆ ಇಬ್ಬರು ಅಮೆರಿಕನ್ನರ ಸಂದರ್ಶನ. ಆ ಭಾಗ ನನಗೆ ಏನೇನೂ ಹಿಡಿಸಲಿಲ್ಲ.

## ಮತ್ತೆ ಜೇನ್ಸ್‌ವಿಲ್ ; ಫ್ಲಾಸ್‌ಮೂರ್

ರ್‍ಯಾಪಿಡ್ ಸಿಟಿಯ ಸುತ್ತಮುತ್ತ ನೋಡಬೇಕಾದ್ದನ್ನೆಲ್ಲ ನೋಡಿ ಮುಗಿಸುವ ವೇಳೆಗೆ ನಮಗೆಲ್ಲ ಆಯಾಸವಾಗಿತ್ತು. ಉತ್ಸಾಹವನ್ನು ಉಳಿಸಿಕೊಂಡಿದ್ದವನು ಸುನೀಲನೊಬ್ಬನೇ. ಕಾರಿನಲ್ಲಿ ಕೂತೊಡನೆ ಅವನು ಎಂದಿನಂತೆ ಕಲಿತ ಹಾಡುಗಳನ್ನೆಲ್ಲ ಹಾಡಲಾರಂಭಿಸಿದ. The bear went over the mountain (ಕರಡಿ ಬೆಟ್ಟಕೆ ಹೋಯ್ತು), Old Mcdonnel (ಮುದಿ ಮೆಕ್‌ಡಾನಲ್) Lonndo Bridge is falling down (ಲಂಡನ್ ಸೇತುವೆ ಉರುಳುತ್ತಲಿಹುದು), Yankee Doodle ಇವೆಲ್ಲ ನಾನು ಕೇಳಿದ್ದದ್ದೇ. ನನ್ನನ್ನು ಚಕಿತಗೊಳಿಸಿ ರೋಮಾಂಚ ತಂದದ್ದೆಂದರೆ ಹಠಾತ್ತಾಗಿ ಅವನ ಕಂಠದಿಂದ 'ತುಳಸೀದಳಮುಲಚೇ ಸಂತೋಷಮುಗಾ' ಹೊರ ಹೊರಟದ್ದು! ಉಚ್ಚಾರ ಸ್ವಲ್ಪ ವಿಲಕ್ಷಣ; ಮಾಯಾಮಾಳವಗೌಳ ಊಹೆಗೆ ಬಿಟ್ಟದ್ದು, ಸ್ವಲ್ಪ ಆಧಾರವಿತ್ತಾದರೂ ; ಆದರೆ ಅದು ತುಳಸೀದಳಮುಲಚೇ—ಸಂದೇಹವಿಲ್ಲ. ಆಂಗ್ಲ ತಾಯಿಯ ಮಗನಾಗಿ ಇಂಗ್ಲೆಂಡಿನಲ್ಲಿ ಹುಟ್ಟಿ, ಅಮೆರಿಕದಲ್ಲಿ ಬೆಳೆದು, ಭಾರತೀಯ ಭಾಷೆಗಳ ಪರಿಚಯ ('ಸಾಕು' ಎಂಬ ಪದದ ಅಪಪ್ರಯೋಗ ವಿನಾ) ಏನೇನೂ ಇಲ್ಲದ ಮಗುವಿನ ಬಾಯಿಂದ ತ್ಯಾಗರಾಜರ ಕೃತಿ ಹೊರಟರೆ ರೋಮಾಂಚವಾಗಬೇಡವೆ? ಅದು ರಾಮು ಹಾಡುತ್ತಿದ್ದುದರ ಅನುಕರಣವಿರಬೇಕು, ನಮ್ಮ ಮನೆಯಲ್ಲಿ ಅದು 'ಹಿರಿಯಕ್ಕನ ಚಾಳಿ.'

ಡಯಾನ ಆಗಾಗ ಸ್ವಲ್ಪ ದೂರ ಕಾರನ್ನು ನಡೆಸಿದಳಾದರೂ ಆ ಕೆಲಸದಲ್ಲಿ ನೂರಕ್ಕೆ ತೊಂಬತ್ತು ಭಾಗವನ್ನು ರಾಮುವೇ ವಹಿಸಿಕೊಳ್ಳಬೇಕಾಯಿತು. ಜೇನ್ಸ್‌ವಿಲ್‌ಗೆ ವಾಪಸು ಬರುವ ಹೊತ್ತಿಗೆ ನಾವು 5000 ಮೈಲಿ ಪ್ರಯಾಣ ಮಾಡಿದ್ದೆವು. ಮೇಲುನೋಟಕ್ಕೆ ಅಮೆರಿಕದ ರಾಷ್ಟ್ರೀಯ ಹೆದ್ದಾರಿಗಳಲ್ಲಿ ಕಾರ್ ನಡಸುವುದು ಸುಲಭ ಎನ್ನಿಸಬಹುದು. ತಿರುವುಗಳಿಲ್ಲ, ಅಡ್ಡ ರಸ್ತೆಗಳಿಲ್ಲ, ಮನೆಯೊಳಗಿನ ನೆಲದಂತೆ ಸಮತಲವಾದ ಸಿಮೆಂಟ್ ಕಾಂಕ್ರೀಟ್ ರಸ್ತೆ, ಜೀವಕ್ಕೆ ಸಂಚಕಾರ ಬಂದೀತು ಎಂಬ ಭಯದಿಂದ ಕಟ್ಟುನಿಟ್ಟಾಗಿ ನಿಯಮಗಳನ್ನು ಪಾಲಿಸುವ ಜನ, ಇವೆಲ್ಲ ನಿಜ. ಆದರೂ ಅಲ್ಲಿ ಅಪಘಾತಗಳ ಸಂಖ್ಯೆ ದಿಗಿಲುಗೊಳಿಸುವಂಥಾದ್ದು. ರಸ್ತೆಯಲ್ಲಿ ವೈವಿಧ್ಯವಿಲ್ಲ; ಸಂತತವಾಗಿ ಕಣ್ಣು

ರಸ್ತೆಯ ಮೇಲೆ ನೆಟ್ಟಿರಬೇಕು; ಯಾವುದಾದರೊಂದು ಊರಿನ ಕಡೆಗೆ ತಿರುಗ ಬೇಕಾದರೆ ಅಲ್ಲಿಗೆ ಹೋಗುವ ಎಕ್ಸಿಟ್ (exit–ಹೊರದಾರಿ) ನಲ್ಲೇ ತಿರುಗ ಬೇಕು. ಅಜಾಗರೂಕತೆಯಿಂದ ಐದು ಅಡಿ ಮುಂದೆ ಹೋದರೆ ಸರಿ—ಮತ್ತೆ 30–40 ಮೈಲಿ ಹೋಗುವವರೆಗೆ ಎಲ್ಲೂ ತಿರುಗುವಂತಿಲ್ಲ! ಚಾಲಕನ ಗಮನ ಕ್ಷಣ ಮಾತ್ರವೂ ಚಲಿಸುವಂತಿಲ್ಲ. ಆದ್ದರಿಂದ ನಡಸುಚಕ್ರ (steering wheel) ವನ್ನು ಹಿಡಿದು ಕೂತಕಡೆ ಕೂತಿದ್ದರೂ ಮೈಮನಗಳ ಬಿಗುಪಿ ನಿಂದಾಗಿ ವಿಪರೀತ ಆಯಾಸವಾಗುತ್ತದೆ. ರಾಮು ಚೇತರಿಸಿಕೊಳ್ಳುವುದಕ್ಕೆ ಎರಡು ದಿನ ಬೇಕಾಯಿತು.

ಪ್ರವಾಸದಲ್ಲಿದ್ದಾಗ ಆಗಾಗ ಇಂಗ್ಲೆಂಡಿಗೆ ಫೋನ್ ಮಾಡಿ ಅರುಣನ ಯೋಗಕ್ಷೇಮ ವಿಚಾರಿಸುತ್ತಿದ್ದೆವು. ಜೇನ್ಸ್‌ವಿಲ್‌ಗೆ ಮರಳಿದ ಮೇಲೆ ಮೊದಲನೇ ಶನಿವಾರವೇ ಆ್ಯನ್ (ಡಯಾನಳ ಅಕ್ಕ) ಮಗುವನ್ನು ಕರೆದು ಕೊಂಡು ಓಹೇರ್ ವಾಯುಬಂದರನ್ನು ತಲಪಬೇಕೆಂದು ಏರ್ಪಾಡಾಗಿತ್ತು. ಅವರಿಬ್ಬರನ್ನೂ ಎದುರುಗೊಂಡು ಕರೆತರುವುದಕ್ಕೆ ಮತ್ತೆ ಪ್ರಯಾಣ.

ಸುನೀಲನಿಗೂ ಅರುಣನಿಗೂ ಗಮನಾರ್ಹವಾದ ವ್ಯತ್ಯಾಸವಿದೆ. ಸುನೀಲ ಮರ್ಯಾದಸ್ಥ, ವಿಚಾರಪರ. ತನ್ನ ಸಹವಾಸವನ್ನು ದಯಪಾಲಿಸಬೇಕಾದರೆ ಮೊದಲು ನಿಮ್ಮನ್ನು ಒರೆಗಲ್ಲಿಗೆ ಹಚ್ಚಿ ನಿಮ್ಮ ಯೋಗ್ಯತೆಯೆಷ್ಟು ಎಂದು ನಿರ್ಧರಿಸಿಕೊಳ್ಳುತ್ತಾನೆ. ಲಗುಬಿಗು ನೋಡಿಕೊಳ್ಳದೆ ಸ್ನೇಹ ಬೆಳಸಲೊಲ್ಲ. ಅರುಣನಿಗಾದರೋ, ತಾನು ಅಶೇಷ ಭೂಮಂಡಲಕ್ಕೆ ಸಾರ್ವಭೌಮನೆಂಬ ವಿಷಯ ಮಂದಟ್ಟಾಗಿದೆ. ಆದ್ದರಿಂದ ಯಾರು ಸೇವೆಯನ್ನರ್ಪಿಸಿದರೂ ಅದು ತನಗೆ ಸಲ್ಲತಕ್ಕದ್ದೇ ಎಂಬ ವಿಶ್ವಾಸದಿಂದ ಅದನ್ನು ಸ್ವೀಕರಿಸುತ್ತಾನೆ. ಪ್ರಪಂಚ ವೆಲ್ಲ ಇರುವುದು ಅವನ ಸೇವೆಗೆ ತಾನೆ! ಕಿರು ಅಲೆಗಳ ಚಂಚಲ ಹೊಳಪಿನಂತೆ ಥಳಥಳಿಸುತ್ತ ಅವನ ಕಣ್ಣುಗಳು ನಮ್ಮೆಲ್ಲರ ಮೇಲೂ ಆಡಿದವು. ಡಯಾನ ರಾಮು ಅವನನ್ನು ಮುದ್ದಿಸಿದ ನಂತರ ಸಾಮಾನು ಸಾಗಿಸುವುದಕ್ಕೆ ಹೋಗಿದ್ದ ರಾದ್ದರಿಂದ ಮೊದಲು ತೋಳು ಚಾಚಿದವನು ನಾನು; ಬಳಕೆಗಾಗಿ ಕಾಯದೆ ಒಡನೆಯೇ ಆ್ಯನ್‌ಳ ಕೈಯಿಂದ ಹಾರಿಬಂದ.

ಬೆಳಗ್ಗೆ ನಾನು ಮುಖ ತೊಳೆದುಕೊಂಡು ಮತ್ತೆ ಮಲಗಿ, ಏಳದಿರುವು ದಕ್ಕೆ ಏನೇನು ಕಾರಣಗಳಿವೆ ಎಂದು ಯೋಚಿಸುತ್ತಿದ್ದಾಗ ಎಳೆಯ ದನಿ ಕೇಳಿ ಬಂತು: 'ತಾ ತಾ!' ಅರುಣ ಕೈಹಿಡಿದೆಳೆದು ಎಬ್ಬಿಸಿದ. ಅವನೊಡನೆ ಹಿಡಿಯುವ ಆಟ ಆಡುವುದಕ್ಕೆ ನಾನು ಬೇಕಾಗಿತ್ತು! ಈಗ ನನಗೆ ದೊಡ್ಡ ಸಮಸ್ಯೆ ಬಂದೊದಗಿದೆ. ಅರುಣ ಸುನೀಲರಿಬ್ಬರಲ್ಲಿ ಯಾರಿಗೂ ಮತ್ಸರ ಬರದಂತೆ ನನ್ನ

ಗಮನವನ್ನು ಇಬ್ಬರಿಗೂ ಹಂಚಿಕೊಡಬೇಕು. ಆ್ಯನ್‌ಳ ಮತ್ತು ಡಯಾನಳ ಸಹಾಯವಿದ್ದರೂ ಈ ಸಮಸ್ಯೆಯನ್ನು ಬಗೆಹರಿಸುವುದು ಕಷ್ಟದ ಕೆಲಸವೇ! ಆ್ಯನ್‌ಗೆ ಮಕ್ಕಳು ಬೇಗ ಒಲಿಯುತ್ತವೆ. ಆಕೆಯದು ಬಹಳ ಒಳ್ಳೆಯ ಸ್ವಭಾವ, ಬಾಯಿತುಂಬ ಮಾತಾಡುತ್ತಾಳೆ. ಎರಡು ಮೂರು ದಿನಗಳಲ್ಲೇ ಡಯಾನಳೊಡನೆ ಇರುವಷ್ಟು ಸಲಿಗೆಯಿಂದಲೇ ಆಕೆಯೊಡನೆಯೂ ಮಾತಾಡುವುದು ಸಾಧ್ಯವಾಯಿತು.

ಇವತ್ತು ಗುರುವಾರ. '9 ಘಂಟೆಗೆ ಸರಿಯಾಗಿ ಲಾರ (Laura) ಬರುತ್ತಾಳೆ. ಅವಳಿಗೆ ಈ ಚೀಟಿ ಕೊಡಬೇಕು' ಎಂದು ಹೇಳಿ ಆ್ಯನ್ ಡಯಾನ ಇಬ್ಬರೂ ಸಾಮಾನು ತರಲು ಹೊರಟರು. ಅದು ಮೂರು ನಾಲ್ಕು ಘಂಟೆಯ ಕೆಲಸ. ಲಾರ (ಅವಳ ನಿಜವಾದ ಹೆಸರನ್ನು ಮರಸಿದ್ದೇನೆ) ಬಂದಾಗ ಅವಳ ಕಾಲಿಗೆ ಸುತ್ತಿಕೊಳ್ಳಬಾರದೆಂದು ಡಯಾನ ಗುರುವಾರವನ್ನು ಅಂಗಡಿಗೆ ಹೋಗುವ ಕೆಲಸಕ್ಕೆ ಮೀಸಲು ಮಾಡಿದ್ದಾಳೆ. ಲಾರ ನಮ್ಮ ಮನೆಯ ಹತ್ತಿರದಲ್ಲೇ ಇರುವಾಕೆ. ಅವಳ ಗಂಡನಿಗೆ ವರ್ಷಕ್ಕೆ 25-30 ಸಾವಿರ ಡಾಲರಿನ ಸಂಪಾದನೆಯಿದೆಯಂತೆ. ಅಮೆರಿಕದಲ್ಲಿ ಕೂಡ ಅದು ಒಳ್ಳೆಯ ವರಮಾನವೆಂದೇ ಹೇಳಬಹುದು. ಲಾರ ಯಾವುದೋ ಕಸಬು ಕಲಿಯಲು ಶಾಲೆಗೆ ಸೇರಿದ್ದಾಳೆ. ಅದಕ್ಕೆ ತಗಲುವ ಖರ್ಚು ಮೇಲು ಸಂಪಾದನೆಯಿಂದಾಗಬೇಕೆಂದು ಅವಳ ನಿರ್ಧಾರ. ಪ್ರತಿ ಗುರುವಾರ ನಮ್ಮ ಮನೆಗೆ ಬಂದು ಅಡಿಗೆ ಮನೆಯಿಂದ ಶೌಚಾಗಾರದವರೆಗೆ ಮನೆಯೆಲ್ಲಕ್ಕೂ ಶೂನ್ಯಶುಭ್ರಕವನ್ನು (ಅಥವಾ 'ಸೊನ್ನೆ ಸುದ್ದ' ಎನ್ನೋಣವೊ?—vacuum cleaner)ಪ್ರಯೋಗಿಸಿ, ರೆಫ್ರಿಜಿರೇಟರನ್ನು ಶುದ್ಧಮಾಡಿ ಸಾಮಾನುಗಳನ್ನೆಲ್ಲ ಮತ್ತೆ ಒಳಗಿಟ್ಟು, ಪಾತ್ರೆಪರಟಿಗಳನ್ನೆಲ್ಲ ಓರಣವಾಗಿಟ್ಟು ಮೇಜುಗಳನ್ನೆಲ್ಲ ಒರಸಿ, ಸ್ನಾನ ಮತ್ತು ಶೌಚಗೃಹಗಳನ್ನೂ ಶುದ್ಧಿಮಾಡಿ, ಹಾಸಿಗೆ ಬಟ್ಟೆಗಳನ್ನು ಕೊಡವಿ ಮತ್ತೆ ಹಾಸಿ—ಎಲ್ಲ ಅಚ್ಚುಕಟ್ಟಾಗಿದೆಯೆ ಎಂದು ಎಲ್ಲದರಮೇಲೂ ಕಣ್ಣುಹಾಯಿಸಿ ಅನಂತರ ಹೊರಡುತ್ತಾಳೆ. ಅವಳ ಕೆಲಸ ಮುಗಿದಮೇಲೆ ಮನೆಯೆಲ್ಲ ಮಿರಮಿರನೆ ಮಿಂಚುತ್ತಿರುತ್ತದೆ. ಅವಳಿಗೆ ಕೊಡಬೇಕಾದ್ದು ಘಂಟೆಗೆ ನಾಲ್ಕು ಡಾಲರು. ನಮ್ಮ ಮನೆ ಕೆಲಸ ಸುಮಾರು ನಾಲ್ಕು ಘಂಟೆ ಹಿಡಿಯುತ್ತದೆ.

ಒಂಬತ್ತು ಘಂಟೆಗೆ ಸರಿಯಾಗಿ 24-25 ಅಡಿ ಉದ್ದದ ಷೆವ್ರೊಲೆ ಇಂಪ್ಯಾಲ ಕಾರು ಮನೆಯ ಮುಂದೆ ನಿಂತಿತು. 'ಹಲ್ಲೋ ಟಾಟ' (ತಾತ) ಎನ್ನುತ್ತ ಲಾರ ಒಳಕ್ಕೆ ಬಂದಳು. ಇವರೆಲ್ಲರಿಗೂ ನಾನು ತಾತ ಆಗಿಬಿಟ್ಟಿದ್ದೇನೆ! "ನೀವು ಈಗಲೇ ಸ್ನಾನ ಮಾಡುವುದಾದರೆ ನಾನು ಸ್ನಾನದ ಮನೆ

ಶುಭ್ರ ಮಾಡುವುದನ್ನು ಕೊನೆಗಿಟ್ಟುಕೊಳ್ಳುತ್ತೇನೆ. ನಿಮ್ಮ ಅನುಕೂಲ ಹೇಗೆ ಎಂಬುದನ್ನು ತಿಳಿಸಿ" ಎಂದು ಕೇಳಿ ನನ್ನ ಸಮ್ಮತಿ ಪಡೆದು ಸ್ನಾನದ ಮನೆಯಿಂದ ಕೆಲಸ ಪ್ರಾರಂಭಿಸಿದಳು. ಎರಡು ಘಂಟೆ ಒಂದೇ ಸಮ ಕೆಲಸ ನಡೆಯಿತು. ಆಗ ನನಗೆ ಕಾಫಿ ಬೇಕೆನ್ನಿಸಿತು. "Shall I put your name too in the coffee-pot?" ("ನಿಮ್ಮ ಹೆಸರನ್ನೂ ಕಾಫಿ ಪಾತ್ರೆಯಲ್ಲಿ ಹಾಕಲೆ?"—ಈ ಪ್ರಯೋಗವನ್ನು ಅಮೆರಿಕದಲ್ಲಿ ಹೊರತು ಬೇರೆ ಎಲ್ಲೂ ನಾನು ಕೇಳಿಲ್ಲ) ಎಂದು ಕೇಳಿದೆ.

"ನೀವು ತೆಪ್ಪನೆ ಕೂತುಕೊಳ್ಳಿ, ನಾನು ಮಾಡಿಕೊಡುತ್ತೇನೆ. ಅಮೆರಿಕನ್ನರಿಗೆ, ಕಾಫಿ ತಜ್ಞರಿಗೆ, ನೀವು ಕಾಫಿ ಮಾಡಿಕೊಡುತ್ತೇನೆ ಅನ್ನುತ್ತೀರಲ್ಲ? ನೀವು ಧೈರ್ಯಸ್ಥರು!"

"ನೀವು ಯಾರೊಡನೆ ಮಾತಾಡುತ್ತಿದ್ದೀರಿ ಗೊತ್ತೆ? ನಾನು ದಕ್ಷಿಣ ಇಂಡಿಯದವನು. ಕಾಫಿ ವಿಷಯದಲ್ಲಿ ನನ್ನೊಡನೆ ಸ್ಪರ್ಧೆ ಹೂಡಲಾರಿರಿ."

ನಾನೇ ಮಾಡಿಕೊಟ್ಟೆ. ಪಾಪ, ಮರುಮಾತಿಲ್ಲದೆ 'ಬಹಳ ಚೆನ್ನಾಗಿದೆ, ಬಹಳ ಚೆನ್ನಾಗಿದೆ' ಎನ್ನುತ್ತ ಕುಡಿದಳು. ಅಮೆರಿಕದ ರಾಜಕೀಯ, ಪ್ರೆಸಿಡೆಂಟರ ಚುನಾವಣೆಯಲ್ಲಿ ರಿಪಬ್ಲಿಕನ್ನರು ಗೆಲ್ಲುತ್ತಾರೋ ಡೆಮೊಕ್ರ್ಯಾಟರೋ—ಎಂದು ಮುಂತಾಗಿ ಚರ್ಚೆ ನಡೆಸಿದಳು. ಕೆಲಸ ಮುಗಿದ ಮೇಲೆ 16 ಡಾಲರ್ ತೆಗೆದುಕೊಂಡು 'ಬೈ' ಹೇಳಿ ಹೊರಟಳು.

ಲಾರಳ ನೆನಪಿನ ಜೊತೆಗೆ ಹದಿಮೂರು ವರ್ಷದ ಇನ್ನೊಬ್ಬ ಹುಡುಗನ ನೆನಪೂ ಬರುತ್ತದೆ. ಅವನ ಹೆಸರನ್ನು ಮರೆತಿದ್ದೇನೆ. ಅವನ ತಂದೆಗೂ 30–35 ಸಾವಿರ ಡಾಲರಿನ ವರಮಾನವುಂಟು. ಆತ ತನ್ನ ಮಗನಿಗೆ ಹುಲ್ಲುಗತ್ತರಿ (lawn-mower) ಯಂತ್ರವೊಂದನ್ನು ಕೊಂಡುಕೊಟ್ಟಿದ್ದಾನೆ. ವಾರಕ್ಕೊಂದು ಸಲವೋ ಹತ್ತು ದಿನಕ್ಕೊಂದು ಸಲವೋ ಆ ಹುಡುಗ ನಮ್ಮ ಹುಲ್ಲುಗಾವಲನ್ನು ಸರಿಮಾಡುವುದಕ್ಕೆ ಬರುತ್ತಾನೆ. ಅದಕ್ಕೆ ಒಂದೋ ಎರಡೋ ಡಾಲರು ಕೊಡಬೇಕು. ಹಾಗೆ ಸಂಪಾದನೆ ಮಾಡಿದ್ದರಲ್ಲಿ ಅರ್ಧಭಾಗವನ್ನು ತನಗೆ ಯಂತ್ರವನ್ನು ಕೊಂಡುಕೊಟ್ಟಿದ್ದಕ್ಕಾಗಿ ತಂದೆಗೆ ಕೊಡಬೇಕು. ಇನ್ನರ್ಧ ಅವನ ಸ್ವಂತ ಉಪಯೋಗಕ್ಕೆ. 'ನಾನು ನನ್ನ ತಂದೆಯ ಕೃಪೆಗಾಗಿ ಕಾದಿರಬೇಕಾದ್ದಿಲ್ಲ' ಎಂದು ಹೆಮ್ಮೆಯಿಂದ ಹೇಳುತ್ತಾನೆ. ಅವನಿಗೂ ಅವನ ತಂದೆಗೂ ಇದ್ದ ಸಂಬಂಧ ಆರ್ಥಿಕ ವ್ಯವಹಾರದ್ದು! ಅಮೆರಿಕದಲ್ಲಿ ಬಹಳ ಜನರ ಮನಸ್ಸಿಗೆ ಚಿಂತೆ ತಂದಿರುವ 'ಹದಿವಯಸ್ಕರ ಸಮಸ್ಯೆ'ಗೂ ಹುಡುಗರ ಆರ್ಥಿಕ ಸ್ವಾತಂತ್ರ್ಯಕ್ಕೂ ಸಂಬಂಧವಿದೆಯೆಂದು ಅಲ್ಲಿಯ ಜನ ಹೇಳುವುದನ್ನು ಕೇಳಿ

ದ್ದೇನೆ. ಅನೇಕ ವೇಳೆ ಆ ವಯಸ್ಸಿನ ಹುಡುಗರಿಗೆ ಆರ್ಥಿಕ ಸ್ವಾತಂತ್ರ್ಯವೂ ಕೈಯಲ್ಲಿ ಹಣವೂ ಇದ್ದರೆ, ಆ ಸ್ವಾತಂತ್ರ್ಯವನ್ನು ಆಲ್ಕೊಹಾಲ್ ಮತ್ತೂ ಅಮಲು ಮದ್ದುಗಳು ಕಸಿದುಕೊಳ್ಳುತ್ತವೆ. ಈ ಬಗೆಯ ದಾಸ್ಯ (ಮದ್ಯದ ಮತ್ತು ಅಮಲುಮದ್ದಿನ ದಾಸ್ಯ) ಅಮೆರಿಕದಲ್ಲೂ ಯೂರೋಪಿನಲ್ಲೂ ವಿಪರೀತ ಹೆಚ್ಚುತ್ತಿದೆಯಂತೆ. "ತಂದೆಯಿಂದ ನನಗಾಗಬೇಕಾದ್ದು ಏನೂ ಇಲ್ಲ; ನನ್ನ ಕಾಲ ಮೇಲೆ ನಾನು ನಿಲ್ಲುತ್ತೇನೆ" ಎಂಬ ಭಾವನೆಗಿಂತ "ತಂದೆ ನನ್ನನ್ನು ಅಕ್ಕರೆಯಿಂದ ನೋಡಿಕೊಳ್ಳುತ್ತಾನೆ, ಬೇಕಾದ್ದನ್ನೆಲ್ಲ ತಂದುಕೊಡುತ್ತಾನೆ" ಎಂಬ ಭಾವನೆಯಿದ್ದರೇ ಒಳ್ಳೆಯದೇನೊ. ತಂದೆಗೆ ಹೊರೆಯಾಗಬಾರದು ಎಂಬ ಭಾವನೆ ಮೆಚ್ಚತಕ್ಕದ್ದು. ಅದು ಹುಟ್ಟುವುದು ಪ್ರೀತಿಯಲ್ಲಿ. ತಂದೆಯಿಂದ ತನಗಾಗಬೇಕಾದ್ದೇನೂ ಇಲ್ಲ, ಎಂಬ ಭಾವನೆ ಹುಟ್ಟುವುದು ಅಹಂಕಾರದಲ್ಲಿ. ಆರ್ಥಿಕ ಸ್ವಾತಂತ್ರ್ಯ ಮುಂದೆ ಎಂದೋ ಒಂದು ದಿನ ಬರಲೇಬೇಕು, ಬರುತ್ತದೆ. ಹದಿವಯಸ್ಸಿನಲ್ಲೇ ಬರಲೆಂದು ಆತುರಪಡಬೇಕಾದ್ದಿಲ್ಲ.

ಲಾರ ನಮ್ಮ ಮನೆಯಲ್ಲಿ ಕೆಲಸ ಮಾಡಿದ್ದನ್ನು ನೆನೆದಾಗಲೂ ನನ್ನ ಮನಸ್ಸಿನಲ್ಲಿ ಹಿತ ಅಹಿತಗಳ ಬೆರಕೆ. ಸಮಾಜದಲ್ಲಿ ಒಳ್ಳೆಯ ಸ್ಥಾನಮಾನಗಳಿದ್ದರೂ ಆಕೆಗೆ ಮನೆಗೆಲಸ ಮಾಡುವುದು—ಅದೂ ಮತ್ತೊಬ್ಬರ ಮನೆಯಲ್ಲಿ—ಹೀನಾಯ ಎನ್ನಿಸಲಿಲ್ಲ. ಅಲ್ಲದೆ "ಇವರು ನನಗೆ ಕೆಲಸ ಹೇಳುವವರು, ನಾನು ಅವರು ಹೇಳಿದಂತೆ ನಡೆಯುವವಳು" ಎಂಬ ಕೀಳರಿವು ಅವಳಲ್ಲಿ ಲವಲೇಶವೂ ಇರಲಿಲ್ಲ. ಅಯತ್ನತಃ ಅವಳು ನಮ್ಮೊಡನೆ ಸಮಭಾವದಿಂದ ವ್ಯವಹರಿಸುತ್ತಿದ್ದಳು. ನಮ್ಮಂತೆಯೇ ಆಕೆಗೂ ಆರ್ಥಿಕ ಭದ್ರತೆಯಿದ್ದದ್ದರಿಂದ ಈ ಸಮಭಾವ ಅವಳಿಗೆ ಸಾಧ್ಯವಾಯಿತು, ನಮಗೆ ಅನಿವಾರ್ಯವಾಯಿತು. ಆ ಭದ್ರತೆಯಿಲ್ಲದೆ ಸೇವೆಗೆ ಪ್ರತಿಫಲವಾಗಿ ಬರುವ ಹಣದಿಂದಲೇ ಅವಳ ಜೀವನ ನಡೆಯಬೇಕಾಗಿದ್ದಿದ್ದರೆ ಒಂದು ಕಡೆ ನಮ್ಮಲ್ಲಿ 'ದಾತಭಾವ'ವೂ ಮತ್ತೊಂದು ಕಡೆ ಅವಳಲ್ಲಿ 'ದಾಸಭಾವ'ವೂ ಕುಟ್ಟಿಹುಳುವಿನಂತೆ ಕೊರೆದು ನಮ್ಮಿಬ್ಬರ ಸ್ವಭಾವದಲ್ಲೂ ಕೀಳ್ತನಕ್ಕೆ ಎಡೆಯಾಗುತ್ತಿತ್ತು. ಮೇಲೆ ಹೇಳಿದ ಸಮಭಾವ ನನ್ನಲ್ಲಿರುವ ಸಮಾಜವಾದಿಗೆ ಬಹು ಹಿತವಾದದ್ದು. ಆದರೆ ಅದೇ ಸಮಾಜವಾದಿ ಇನ್ನೊಂದು ದೃಷ್ಟಿಯಿಂದ "ಈಕೆ ಈಗಾಗಲೇ ಹಣವಂತಳಾಗಿರುವವಳು; ಹಣವಂತರಲ್ಲದ ಇನ್ನೊಬ್ಬರಿಗೆ ಸಲ್ಲಬೇಕಾದ ಕೆಲಸವನ್ನು ತಾನು ಕಸಿದುಕೊಳ್ಳುತ್ತಿದ್ದಾಳಲ್ಲ!" ಎಂದು ಆಕ್ಷೇಪಣೆ ಎತ್ತಿದ! ಅಮೆರಿಕದಲ್ಲೂ ಬಡವರಿದ್ದಾರೆ, ನಿರುದ್ಯೋಗಿಗಳಿದ್ದಾರೆ.

* * *

ನನ್ನ ಬದುಕು ಭಾರತದಲ್ಲಿ ಹೇಗೋ ಇಲ್ಲೂ ಹೆಚ್ಚು ಕಡಮೆ ಹಾಗೇ ಏರುಪೇರುಗಳಿಲ್ಲದೆ ಸಮತಲದಲ್ಲಿ ಸಾಗುತ್ತಿದೆ. ಮೊನ್ನೆ ರಾಮುವಿನ ಸಹೋದ್ಯೋಗಿ ಡಾಕ್ಟರರೊಬ್ಬರು ತಾವೇ ಬೆಳೆದ ಸ್ಟ್ರಾಬೆರಿಯನ್ನು ತಂದುಕೊಟ್ಟರು. ಅವರು ರಾಮುವನ್ನು ಹೊಗಳಿದ್ದನ್ನು ಕೇಳಿ ಆನಂದವಾಯಿತು.... ನಿನ್ನೆ ಇಲ್ಲಿಗೆ 17–18 ಮೈಲಿ ದೂರದಲ್ಲಿರುವ ಡೆಲವರ್‌ಗೆ ಹೋಗಿದ್ದೆವು. ಅಲ್ಲಿ ರಾಮುವಿನ ಸ್ನೇಹಿತರಾದ ಶ್ರೀ ಪ್ರಕಾಶ್‌ರವರ ಆತಿಥ್ಯ. ಲ್ಯಿನ್ ಮತ್ತು ಡಯಾನ ಅಲ್ಲಿಗೆ ಹೋದೊಡನೆ ಅಡುಗೆಮನೆಗೆ ಪ್ರವೇಶಿಸಿ ಶ್ರೀಮತಿ ಪ್ರಕಾಶ್‌ರೊಡನೆ ಸಲಿಗೆ ಬೆಳೆಸಿ ತಾವೂ ಆ ಮನೆಯವರೇ ಎಂಬಂತೆ ಎಲ್ಲ ಕೆಲಸಗಳಲ್ಲೂ ನೆರವಾದದ್ದನ್ನು ನೋಡಿ ನನಗೆ ನಮ್ಮ ಅಕ್ಕಿಹಬ್ಬಾಳಿನ ಮಹಿಳೆಯರ ನೆನಪಾಯಿತು.... ವಿಸ್ಕಾನ್ಸಿನ್ ವಿಶ್ವವಿದ್ಯಾಲಯದ ಜೇನ್ಸ್‌ವಿಲ್ ಕೇಂದ್ರದಲ್ಲಿ ಗಣಿತಶಾಸ್ತ್ರದ ಪ್ರಾಧ್ಯಾಪಕರಾಗಿರುವ ಲೂಥರ್ ಅವರು ಆಗಾಗ ಬರುತ್ತಿರುತ್ತಾರೆ. ಅಥವಾ ನಾವು ಅವರಲ್ಲಿಗೆ ಹೋಗುತ್ತೇವೆ. ಈ ಲೂಥರರು ಪ್ರಾಟೆಸ್ಟೆಂಟ್ ಸುಧಾರಣೆಯ ನಾಯಕನಾಗಿದ್ದ ಮಾರ್ಟಿನ್ ಲೂಥರನ (Martin Luther) ವಂಶಸ್ಥರಲ್ಲ. ಅವರು ಕ್ರೈಸ್ತರೂ ಅಲ್ಲ; ನಮ್ಮ ಪಂಜಾಬಿನಿಂದ ಬಂದ ಅಚ್ಚ ಹಿಂದೂ. ಅವರ ನಿಜವಾದ ಹೆಸರು—ಲೂಥ್ರ—ಲೂಥರ ಆಗಿ ಅನಂತರ ಲೂಥರ್ ಆಯಿತು. ಅವರು ಬಹಳ ಸ್ನೇಹಪರರು, ಆಲೋಚನಾಪರರು. ಆಗಿಂದಾಗ ಅವರೊಡನೆ ಎಲ್ಲ ವಿಷಯಗಳ ಚರ್ಚೆ ನಡೆಯುತ್ತಿರುತ್ತದೆ.... ಒಂದು ದಿನ ಷಿಕಾಗೋವಿಗೆ ಹೋಗಿ ಬಂದೆವು. ನನ್ನ ಶಿಷ್ಯರೂ ಸಹೋದ್ಯೋಗಿಗಳೂ ಪ್ರಿಯಮಿತ್ರರೂ ಆದ ಪ್ರೊ. ನಾ. ನಾಗಪ್ಪನವರ ಮಗಳು ಶ್ರೀಮತಿ ಪ್ರಭಾ ಅಲ್ಲಿದ್ದಾಳೆ. ಆಕೆಯ ಗಂಡ ಪರಮೇಶ್ವರನ್ ನನ್ನ ಸ್ನೇಹಿತರಾದ ಪ್ರೊ. ಪರಮೇಶ್ವರನ್‌ರ ಮೊಮ್ಮಗ. ಅವರೊಡನೆ ಒಂದು ದಿನ ಕಳೆದದ್ದಾಯಿತು.

ಫ್ಲಾಸ್‌ಮೂರಿನ ಗವರ್ನರ್ಸ್ ಸ್ಟೇಟ್ ವಿಶ್ವವಿದ್ಯಾಲಯದ 'ಕಮ್ಯೂನಿಕೇಷನ್ಸ್' ಶಾಖೆಯಲ್ಲಿ ಪ್ರಾಧ್ಯಾಪಕರಾಗಿರುವ ಡಾ. ಕೊ. ಸು. ಸೀತಾರಾಂ ಅವರ ವಿಷಯ ಹಿಂದೆಯೇ ಹೇಳಿದ್ದೇನೆ. ಅವರು ತಮ್ಮ ಶಾಖೆಯ ಸ್ನಾತಕೋತ್ತರ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಭಾಷಣ ಮಾಡಬೇಕೆಂದು ಕೊಟ್ಟಿದ್ದ ಆಹ್ವಾನವನ್ನು ಒಪ್ಪಿಕೊಂಡಿದ್ದೆ. "ನಮ್ಮ ಸಿಮೆಸ್ಟರ್ ಮುಗಿಯುತ್ತ ಬಂದಿದೆ, ಬೇಗ ಬನ್ನಿ" ಎಂದು ಅವರು ಫೋನ್ ಮಾಡಿದರು. ಸಾಧಾರಣ ದಿರಿಸಿನಲ್ಲಿ, ಅಂದರೆ ಅರೆತೋಳಿನ ಬುಷ್ ಷರ್ಟು ಷರಾಯಿಗಳನ್ನು ಧರಿಸಿ, ಬರಬಹುದೆ ಎಂದು ನಾನು ಮೊದಲೇ ಅವರನ್ನು ಕೇಳಿದ್ದೆ. ಅವರು

"ಬರಬಹುದು, ಅದಕ್ಕೇನು!........ಬರಬಹುದು........ಇಲ್ಲೇನೊ ಉಪನ್ಯಾಸಕರು ಕೋಟು, ಟೈ ಸಮೇತ ಬರುವುದು ಪದ್ಧತಿ........" ಎಂದು ಅಡ್ಡಗೋಡೆಯ ಮೇಲೆ ದೀಪ ಇಟ್ಟಂತೆ ಮಾತಾಡಿದರು. ನನಗೆ ಅರ್ಥವಾಯಿತು: 'ರೋಮ್‌ನಲ್ಲಿ ಇರುವಾಗ ರೋಮನ್ನರು ನಡೆಯುವಂತೆ ನಡೆದುಕೊ.' ನಾನು ನನ್ನಂತೆಯೇ ಅಪರವಯಸ್ಸಿನ ನೌಕಾನೀಲಿಯ (navy blue) ಅಂಗಿಯೊಂದನ್ನು ಇಟ್ಟಿದ್ದೇನೆ. ಕೀಟಗಳಿಗೂ ಅದನ್ನು ಕಂಡರೆ ತಿರಸ್ಕಾರ—ಆದ್ದರಿಂದ ಅದು ಉಳಿದುಕೊಂಡಿದೆ. ಅದನ್ನು ಹೊಲಿಸಿದಿಂದೀಚೆಗೆ ಕಳೆದಿರುವ ಕಾಲು ಶತಮಾನದಲ್ಲಿ ಫ್ಯಾಷನ್ ಎಷ್ಟು ಬದಲಾಯಿಸಿದೆಯೋ ಏನೊ. ಆ ಕೋಟಿನ ಜೊತೆಗೆ ಕಂದು ಬಣ್ಣದ ಷರಾಯಿ. ಈ ವೇಷವನ್ನು ತಾಳಿ ರಾಮುವಿನ ಮುಂದೆ ನಿಂತು "ನೀನು ಇಂದಿನ ಫ್ಯಾಷನ್ ತಿಳಿದವನು, ಈ ಕೋಟು ಷರಾಯಿ 'ಮ್ಯಾಚ್' ಆಗುತ್ತವೆಯೇ ಹೇಳು" ಎಂದು ಕೇಳಿದೆ. 'ಮ್ಯಾಚಿಂಗ್' (matching) ಎಂದರೆ ಹೊಂದಿಕೆ. ಉದಾಹರಣೆ: ಕೆಂಪು ಬಣ್ಣದ ಕಾಲುಚೀಲಕ್ಕೂ ಬಿಳಿಯ ಬಣ್ಣದ ಜೋಡಿಗೂ ಹೊಂದಿಕೆಯಿಲ್ಲ, ಬಿಳಿಯ ಅಂಗಿಗೆ ಕರಿಯ ಷರ್ಟು ಹೊಂದುವುದಿಲ್ಲ, ಆದರೆ ಕರಿಯ ಅಂಗಿಗೆ ಬಿಳಿಯ ಷರ್ಟು ಹೊಂದಬಹುದು; ದಟ್ಟನೀಲಿಯ ಅಂಗಿಗೆ ತಿಳಿ ನೀಲಿಯ ಷರ್ಟು ಉತ್ತಮ, ಬಿಳಿಯ ಷರ್ಟು ಮಧ್ಯಮ, ಕೆಂಪು ಷರ್ಟು ಅಧಮ.

ಈ ಮ್ಯಾಚಿಂಗ್ ರೋಗದ ಅಣು ಸೌಂದರ್ಯದ ಕಲ್ಪನೆಯಲ್ಲೇ ಅಡಗಿದೆ, ಸುಖದ ಕಲ್ಪನೆಯಲ್ಲಿ ಅಸುಖ ಅಡಗಿರುವಂತೆ. ನಮ್ಮ ತಲೆಯಲ್ಲಿ ಮೆದುಳಿನ ದ್ರವ್ಯವೇನಾದರೂ ಇದ್ದರೆ ಈ ರೋಗಾಣು ಕ್ಯಾನ್ಸರಿನಂತೆ ಬೆಳೆಯಲಾರದು. ಒಂದು ಪ್ರಮಾಣದಲ್ಲಿ ಒಂದು ಮಿತಿಯಲ್ಲಿ, ಅಸುಖ ಸುಖಕ್ಕೆ ಕಳೆ ಕೊಡುವಂತೆ ಅದೂ ಸೌಂದರ್ಯಕ್ಕೆ ಕಳೆ ಕೊಡಬಹುದು. ಆದರೆ ಮೆದುಳು ಇಲ್ಲದೆ ಶೂನ್ಯಸ್ಥಾನ ಸಿಕ್ಕಿದಾಗ ಅದು ತಾನೇ ತಾನಾಗಿ ಬೆಳೆದು ಸೌಂದರ್ಯದ ಕಲ್ಪನೆ ನಾಶವಾಗಿ, ಮ್ಯಾಚಿಂಗ್ ಒಂದೇ ಉಳಿಯುತ್ತದೆ.

ರಾಮುವಿಗಾಗಲಿ ಡಯಾನಳಿಗಾಗಲಿ ಮ್ಯಾಚಿಂಗ್ ವಿಷಯದಲ್ಲಿ ವೀರಶ್ರದ್ಧೆಯೇನೂ ಇಲ್ಲ. ಆದರೆ ಅವರಿಗೆ ನನ್ನ ವಿಷಯದಲ್ಲಿ ರಾಜನಿಗಿರುವುದಕ್ಕಿಂತ ಹೆಚ್ಚು ರಾಜಭಕ್ತಿ—'more loyal than the king'! ತಾತ ಹಾಕಿದ ದಿರಸು ಅನವದ್ಯವಾಗಿರಬೇಕು! ಆದ್ದರಿಂದ ಕುಶಪಿಷ್ಟಿಯನ್ನು (finicality) ಬೆಳೆಸಿಕೊಂಡರು. ರಾಮು ನನ್ನ ದಿರಸು ನೋಡಿ "ಮ್ಯಾಚ್ ಆಗವೇ ಏನು! ಆಗುತ್ತೆ....ಹೂ, ಆಗುತ್ತೆ. ಆದರೆ ಇಂಥ ವಿಷಯದಲ್ಲೆಲ್ಲ ಡಯಾನಳ ಅಭಿಪ್ರಾಯ ಪ್ರಮಾಣ. ಅವಳನ್ನು ಕೇಳೋಣ" ಎಂದ.

ಅವಳ ವಾಕ್ಯಕ್ಕೂ ವೇದವಾಕ್ಯಕ್ಕೂ ಸ್ವಲ್ಪ ಅಂತರವಿರಬಹುದೆಂಬ ಸಂಶಯ ರಾಮುವನ್ನು ಬಾಧಿಸದಿದ್ದರೂ ನನ್ನನ್ನು ಬಾಧಿಸಿತು. ನನ್ನ ಪ್ರಸ್ಥಾನ ತ್ರಯದಲ್ಲಿ ಡಯಾನೋಪನಿಷತ್ತು ಸೇರಿರಲಿಲ್ಲ. ಆದರೂ ಅವಳ ಅಭಿಪ್ರಾಯ ವನ್ನು ಕೇಳಲು ಒಪ್ಪಿದೆ. ಅದು ನನಗೆ ವಿರೋಧವಾದರೆ ನನ್ನಲ್ಲಿ ಪ್ರತ್ಯಸ್ತ್ರ ವಿದೆಯೆಂಬ ವಿಶ್ವಾಸವಿತ್ತು.

ಡಯಾನ ಆಪಾದಮಸ್ತಕ ನನ್ನನ್ನು ನೋಡಿದಳು—ನಿಜವಾಗಿ ಈ ಅಂಗಿ ಈ ಷರಾಯಿ ಒಟ್ಟಿಗೆ ಸೇರಿವೆಯೋ ಅಥವಾ ಇದೊಂದು ಕೆಟ್ಟಕನಸೋ ಎಂದು ಆಶ್ಚರ್ಯಪಟ್ಟಂತಿತ್ತು, ಅವಳ ನೋಟ. ಆಮೇಲೆ ವಿಷಾದದಿಂದ, ಕನಿಕರದಿಂದ, ಗಿಣಿಗೆ ಹೇಳುವಂತೆ ಹೇಳಿದಳು :

"ಇಲ್ಲ, ತಾತ. ಇಲ್ಲ. ಇವೆರಡೂ ಹೊಂದುವುದಿಲ್ಲ. ನಿಮ್ಮ ಸಮಾಧಾನ ಕ್ಕಾಗಿ ನಾನು ಸುಳ್ಳು ಹೇಳಲಾರೆ. ಇವೆರಡೂ ಹೊಂದುವುದಿಲ್ಲ!"

ನಾನು ಧೂಳು ಹೊಡೆದು ಸಿದ್ಧವಾಗಿಟ್ಟಿದ್ದ ಬ್ರಹ್ಮಾಸ್ತ್ರವನ್ನು ಬಿಟ್ಟೆ :

"ಹಾಗೊ? ಈಗ ನನ್ನ ಪ್ರಶ್ನೆಗೆ ಉತ್ತರ ಹೇಳು, ನೋಡೋಣ. 73 ರಲ್ಲಿ ನಾವೆಲ್ಲ ಮೊದಲ ಸಲ ಲಿಂಕನ್‌ಗೆ ಹೋದೆವಲ್ಲ, ನೆನಪಿದೆಯೊ? ಆಗ ನಾನು ಇದೇ ಕೋಟು ಇದೇ ಷರಾಯಿ ಹಾಕಿಕೊಂಡು ಹೊರಟೆ. ನೀನಾ ಗಿಯೇ—ನಾನೇನೂ ನಿನ್ನ ಅಭಿಪ್ರಾಯ ಕೇಳಲಿಲ್ಲ—'Tata, you do look smart' (ನೀವು ಬಹಳ ನೀಟಾಗಿ ಕಾಣುತ್ತೀರಿ) ಎಂದೆ. ಆಗ ಹೊಂದಿದ್ದು ಈಗೇಕೆ ಹೊಂದುವುದಿಲ್ಲ? ಅಪ್ಪಣೆ ಕೊಡಿಸೋಣವಾಗಲಿ!"

ಆಂಜನೇಯನಿಗೆ ಬ್ರಹ್ಮಾಸ್ತ್ರ ತಟ್ಟದಂತೆ ವರವಿತ್ತಲ್ಲ, ಹಾಗೆ ಈ ಮಹ ರಾಯಿತಿಯೂ ವರ ಪಡೆದಿದ್ದಳೇನೊ. ರೆಪ್ಪೆ ಸಹ ಅಲುಗಿಸದೆ ಹೇಳಿದಳು :

"ತಾತ, ಸ್ವಲ್ಪ ಯೋಚನೆ ಮಾಡಿ, ಆಗ ನೀವು ಹೊರಟದ್ದು ಬಂಧು ಗಳ ಮನೆಗೆ, ಅವಿಧ್ಯುಕ್ತ ಉಡುಪು ಆ ಸಂದರ್ಭಕ್ಕೆ ಸರಿ. ಈಗ ನೀವು ಹೋಗು ತ್ತಿರುವುದು ವಿಶ್ವವಿದ್ಯಾಲಯಕ್ಕೆ, ವೇದಿಕೆಯ ಮೇಲೆ ನಿಂತು ಉಪನ್ಯಾಸ ಕೊಡುವುದಕ್ಕೆ. ಅದು formal (ವಿಧ್ಯುಕ್ತವಾಗಿ ನಡೆದುಕೊಳ್ಳಬೇಕಾದ) ಸಂದರ್ಭ. ಅದಕ್ಕೆ ನೀವು ಹಾಕಿರುವ ದಿರಸು ಒಪ್ಪುವುದಿಲ್ಲ ರಮೂ (= ರಾಮು), 'ಬಿಗಿಯಾಗುತ್ತೆ ನನಗೆ ಬೇಡ' ಅಂತ ಬಿಟ್ಟುಬಿಟ್ಟಿದ್ದೆಯಲ್ಲ, ಕರಿ ಗಂದು ಬಣ್ಣದ ಸೂಟು, ಅದು ತಾತನಿಗೆ ಸರಿಹೋಗುತ್ತೆ. ಅದನ್ನು ಕೊಡು."

ಡಯಾನ ಯುದ್ಧರಂಗವನ್ನು ಬದಲಾಯಿಸಿದ್ದಳು. ನನ್ನ ಪ್ರಶ್ನೆ 'ಕೋಟು ಷರಾಯಿ ಒಂದಕ್ಕೊಂದು ಹೊಂದುತ್ತವೆಯೆ' ಎಂದು. ಅವಳು ಹೇಳಿದ್ದು ಅವೆರಡೂ ಸಂದರ್ಭಕ್ಕೆ ಹೊಂದುವುದಿಲ್ಲವೆಂದು. ನಾನು ಸೋಲನ್ನೊಪ್ಪಿ

ರವೂ ತಂದುಕೊಟ್ಟ ಸೂಟಿನ್ನೇ ಹಾಕಿಕೊಂಡು ಹೋದೆ. ಹಿಂದೆ ನಾನು ಬೇಡವೆಂದು ಬಿಟ್ಟಿದ್ದನ್ನು ಮಕ್ಕಳಿಗೆ ಕೊಡುತ್ತಿದ್ದೆ. ಈಗ ಅವರು ಬೇಡವಾದದ್ದನ್ನು ನನಗೆ ಕೊಡುತ್ತಾರೆ. ನಾನು ಬೂಮರಾಂಗ್* ಎಸೆದರೆ ಅದು ನನ್ನ ಬಳಿಗೇ ವಾಪಸು ಬರಬೇಕಷ್ಟೆ!

ನನ್ನ ಭಾಷಣವನ್ನು ಏರ್ಪಡಿಸಿದ್ದದ್ದು ಸಂಸರ್ಗ (ಕಮ್ಯೂನಿಕೇಷನ್ಸ್) ಶಾಖೆಯ ಸ್ನಾತಕೋತ್ತರ ವಿದ್ಯಾರ್ಥಿಗಳಿಗಾಗಿ. ಆದ್ದರಿಂದ ಸಾಹಿತ್ಯವನ್ನು ಕುರಿತು ಮಾತಾಡುವುದು ಉಚಿತವೆನ್ನಿಸಲಿಲ್ಲ. ಭಾರತದ ಬೇರೆ ಬೇರೆ ಪ್ರಾಂತಗಳ ಮತ್ತು ವಿವಿಧ ವರ್ಗಗಳ ನಡುವಣ ಸಂಸರ್ಗ ಬ್ರಿಟಿಷರ ಆಡಳಿತಕ್ಕಿಂತ ಮುಂಚೆ ಹೇಗಿತ್ತು; ಒಂದು ಪ್ರಾಂತದಲ್ಲಿ ನಡೆದ ವಿಚಾರಮಥನದ ಫಲ ಎಲ್ಲ ಪ್ರಾಂತಗಳಿಗೂ (ಪಾಂಡಿತ್ಯದ ಮಟ್ಟದಲ್ಲಿ) ದೊರೆಯುವಂತೆ ಸಂಸರ್ಗವನ್ನು ಏರ್ಪಡಿಸುವುದರಲ್ಲಿ ಸಂಸ್ಕೃತ ಭಾಷೆ ವಹಿಸಿದ ಪಾತ್ರ; ಬ್ರಿಟಿಷರ ಕಾಲದಲ್ಲಿ ಇಂಗ್ಲಿಷಿನ ಪ್ರಭಾವದಿಂದಾಗಿ ನಮ್ಮ ಮಾನಸಿಕ ಕ್ಷೇತ್ರ ವಿಸ್ತಾರವಾದರೂ ಸಮಾಜದ ವರ್ಗಗಳ ನಡುವೆ ಮೊದಲೇ ಇದ್ದ ತಡೆಗೋಡೆಗಳು ಇನ್ನೂ ಎತ್ತರವಾದದ್ದು; ಆ ತಡೆಗಳನ್ನು ನಿವಾರಿಸಲು ಮಾಡಿದ ಪ್ರಯತ್ನ—ಈ ವಿಷಯಗಳನ್ನು ಕುರಿತು ಮಾತಾಡಿದೆ. ಭಾಷಣ ಮುಗಿದ ಮೇಲೆ ಸ್ವಲ್ಪ ಹೊತ್ತು ಚರ್ಚೆ ನಡೆಯಿತು. ಎಲ್ಲವನ್ನೂ ಟೇಪು (tape) ಮಾಡಿ ನನಗೂ ಒಂದು ಪ್ರತಿ ಕೊಟ್ಟರು. ಚರ್ಚೆ ನಡೆಯುತ್ತಿದ್ದಾಗ ಅವರು ಭಾರತದ ವಿಷಯದಲ್ಲಿ ತೋರಿಸಿದ ಕುತೂಹಲವೂ ನಾನು 1942ರ ಆಂದೋಲನವನ್ನು ಬಣ್ಣಿಸಿದಾಗ ಅವರಲ್ಲಿ ಕಂಡುಬಂದ ಸಹಾನುಭೂತಿಯೂ ನನಗೆ ಬಹಳ ಸಂತೋಷ ಕೊಟ್ಟವು.

ಆ ವಿಶ್ವವಿದ್ಯಾಲಯ ಇನ್ನೂ ಹೊಸದು—ನಾಲ್ಕಾರು ವರ್ಷಗಳ ಹಿಂದೆ ಸ್ಥಾಪಿಸಿದ್ದು. ಕ್ಷೇತ್ರಸೌಂದರ್ಯದ ವಿಷಯದಲ್ಲಿ ಅದು ನಮ್ಮ ಮಾನಸಗಂಗೋತ್ರಿಯೊಡನೆ ಸ್ಪರ್ಧಿಸಲಾರದು. ಪುಸ್ತಕಭಂಡಾರ ಇನ್ನೂ ಶೈಶವಾವಸ್ಥೆಯಲ್ಲಿದೆಯಾದರೂ ಅದರ ವ್ಯವಸ್ಥೆ ನಮ್ಮದಕ್ಕಿಂತ ಉತ್ತಮ. ಕೇಳಿಕೆ ಟೇಪಿನ ಮತ್ತು ನೋಟದ ಟೇಪಿನ (Video tape) ಭಂಡಾರವೂ ಒಂದಿದೆ. ರಾಜಕೀಯದ ವಿಷಯದಲ್ಲಿ ಅದು ನಮ್ಮ ವಿಶ್ವವಿದ್ಯಾಲಯಗಳಿಗಿಂತ ಹಿಂದೆ ಬಿದ್ದಂತೆ ತೋರಲಿಲ್ಲ. ಬಿಳಿಯರ ರಾಜಕೀಯ, ವರ್ಣೀಯರ ರಾಜಕೀಯ, ಎರಡೂ

---

* ಬೂಮರಾಂಗ್: ಆಸ್ಟ್ರೇಲಿಯದ ಆದಿನಿವಾಸಿಗಳು ಈ ಹೆಸರಿನ ಆಯುಧವನ್ನು ಉಪಯೋಗಿಸುತ್ತಿದ್ದರಂತೆ. ಅದು ಎಸೆದವನ ಬಳಿಗೇ ಮರಳಿ ಬರುತ್ತವಂತೆ.

ಬೆಳೆದ ರಾಜಕೀಯ—ಇವೆಲ್ಲದರ ವಿಷಯವೂ ಕಿವಿಗೆ ಬಿತ್ತು. ಆದರೆ ನಾನು ಅಲ್ಲಿದ್ದದ್ದು ಅತ್ಯಲ್ಪ ಕಾಲ; ಆದ್ದರಿಂದ ನನ್ನ ಅನುಭವವೂ ಅತ್ಯಲ್ಪ; ಅಲ್ಲದೆ ಮೇಲಿನ ಮಾತಿಗಿರುವ ಆಧಾರ ಕೇವಲ ಕೇಳಿಕೆಯ ಮಾತು.

ಅಲ್ಲಿ ನಾನು ಕಂಡ ವಿಶೇಷವೊಂದು ಅಲ್ಲಿಯವರಿಗೆ ವಿಶೇಷವಲ್ಲದಿರ ಬಹುದು: ಶೌಚಾಗಾರದ ಬಳಿಯಲ್ಲಿ ಒಬ್ಬಾತ ಕೈಕಾಲುಗಳನ್ನು ಅಸ್ತವ್ಯಸ್ತ ವಾಗಿ ಚಾಚಿಕೊಂಡು ಪ್ರಜ್ಞೆಯಿಲ್ಲದೆ ಬಿದ್ದಿದ್ದ—ಬಹುಶಃ ಅವನು ಅಮಲು ಮದ್ದನ್ನು ಸೇವಿಸಿದ್ದ. ಅದನ್ನು ಯಾರ ಗಮನಕ್ಕಾದರೂ ತರಬೇಕು ಎಂದು ಕೊಳ್ಳುವಷ್ಟರಲ್ಲೇ ಇಬ್ಬರು ಮೂವರು ಶೌಚಾಗಾರಕ್ಕೆ ಹೋಗಲು ಬಂದರು, ಪ್ರಜ್ಞೆಯಿಲ್ಲದೆ ಬಿದ್ದಿದ್ದ ಆ ಮನುಷ್ಯನನ್ನು ನೋಡಿದರು. ಅವರ ಮುಖದಲ್ಲಿ ಆಶ್ಚರ್ಯವಾಗಲಿ ಚಿಂತೆಯಾಗಲಿ ಕಾಣಲಿಲ್ಲ. ಸೀತಾರಾಂರವರಿಗೆ ಈ ವಿಷಯ ವನ್ನು ತಿಳಿಸಿದಾಗ ಅವರು "ಇಲ್ಲಿ ಅಮಲುಮದ್ದಿನ ಬಳಕೆಯಿಲ್ಲ ಎನ್ನುವಂತಿಲ್ಲ. ಆದರೆ ಅದು ಅಷ್ಟೇನೂ ಹೆಚ್ಚಿಲ್ಲ" ಎಂದರು.

ಫ್ಲಾಸ್‌ಮೂರಿನಲ್ಲಿದ್ದ ಭಾರತೀಯ ಮಿತ್ರರೊಡನೆ ಬೇಕಾದಷ್ಟು ಚರ್ಚೆ ನಡೆಯಿತು. ಅವರಿಗೆಲ್ಲ ನಮ್ಮ ದೇಶದ ವಿಷಯದಲ್ಲಿ ತೀವ್ರ ಅಸಮಾಧಾನವಿದ್ದಂತೆ ತೋರಿತು. ಒಬ್ಬರು "ಇದನ್ನೆಲ್ಲ ಮೂರ್ತಿರಾಯ ರೆದುರಿಗೆ ಹೇಳಬಾರದೇನೊ" ಎಂದದ್ದರಿಂದ ನನಗೆ ಆ ಭಾವನೆ ಬಂತು, ನಾನು ಕೇಳಿದೆ:

"ಅದೇಕೆ ಹಾಗೆನ್ನುತ್ತೀರಿ? ನನ್ನಂತೆ ನೀವೂ ಭಾರತೀಯರು, ಭಾರತ ವನ್ನು ಟೀಕಿಸಿದರೆ 'ನಮ್ಮ ದೇಶ ಹೀಗಾಯಿತಲ್ಲ' ಎಂಬ ನೋವಿನಿಂದ ಟೀಕಿಸುತ್ತೀರಿ."

"ನಿಜ, ನಿಜ."

ಮತ್ತೊಬ್ಬ ಮಿತ್ರರು ಹೇಳಿದರು: "ಟೀಕಿಸುವುದರಲ್ಲಿ ತಪ್ಪೇನೂ ಇಲ್ಲ. ಆದರೆ ನಮ್ಮ ಮಾತೇನಿದ್ದರೂ ವಸ್ತುನಿಷ್ಠವಾಗಿರಬೇಕು. ನಮ್ಮ ದೇಶ ಎಂಬ ಅಭಿಮಾನ ಸತ್ಯವನ್ನು ಮುಸುಕುಮಾಡಬಾರದು. ಭಾರತದಿಂದ ದೂರ ಇರು ವವರ ಕಣ್ಣಿಗೆ ಅಲ್ಲಿಯ ವಿದ್ಯಮಾನಗಳು ಹೇಗೆ ಕಾಣುತ್ತವೆ ಎಂಬುದನ್ನು ನಾವು ನಿರ್ದಾಕ್ಷಿಣ್ಯವಾಗಿ ಹೇಳುತ್ತೇವೆ—ನಮ್ಮ ಸ್ವಂತ ಅಭಿಪ್ರಾಯ ಏನೇ ಇರಲಿ. ಭಾರತದಲ್ಲೇ ಇರುವವರ ಭಾವನೆಯೇನು ಎಂಬುದನ್ನು ನೀವು ತಿಳಿಸಿ. ಅಂಧಾಭಿಮಾನದಿಂದ ಭಾರತವನ್ನು ಸಮರ್ಥಿಸುತ್ತೀರೆಂದು ನಾವು ಭಾವಿಸುವು ದಿಲ್ಲ; ನೀವೂ ಕೂಡ ನಾವು ಭಾರತದ ಶತ್ರುಗಳೆಂದು ಭಾವಿಸಬೇಡಿ."

ಇದೇನೋ ಎಲ್ಲರೂ ಒಪ್ಪಬಹುದಾದ ಮಾತು. ವಾಸ್ತವವಾಗಿ ಮೊದ

ಮೊದಲು ನನಗೆ ಚರ್ಚೆಯ ವಾತಾವರಣ ಸ್ವಲ್ಪ ಕೃತಕ ಎನ್ನಿಸಿತು. ನಾವೆಲ್ಲ ನಾಟಕವೊಂದರಲ್ಲಿ ಪಾತ್ರವಹಿಸಿದವರಂತೆ ಮಾತಾಡಿದೆವು. ಆದರೆ ನಾಲ್ಕೈದು ನಿಮಿಷ ಕಳೆಯುವುದರೊಳಗೆ ಎಲ್ಲರೂ ತಡೆಹಿಡಿದಿದ್ದ ಪೂರ್ವಗ್ರಹಗಳು ಕಡಿವಾಣ ಸಡಿಲಿಸಿಕೊಂಡವು. ವೈಚಾರಿಕತೆ ಕಡಮೆಯಾದರೂ ಮಾತಿಗೆ ಒಂದು ಬಗೆಯ ಕಳೆ ಬಂತು.

ನನ್ನ ಮನಸ್ಸಿನಲ್ಲೂ ಪೂರ್ವಗ್ರಹವಿತ್ತೆಂದು ಈಗ ತೋರುತ್ತಿದೆ. ಅಮೆರಿಕಕ್ಕೆ ಹೋಗಿ ಅಲ್ಲೇ ನೆಲೆಸುವವರಲ್ಲಿ ನಾನು ಎರಡು ಬಗೆಯ ಮನೋವೃತ್ತಿಯನ್ನು ಕಂಡಿದ್ದೇನೆ. (ಕೇವಲ ಜ್ಞಾನಾರ್ಜನೆಗಾಗಿ, ಜ್ಞಾನದ ವಿಸ್ತರಣಕ್ಕಾಗಿ, ಅಥವಾ ಮಾನವಕುಲದ ಕಲ್ಯಾಣಕ್ಕಾಗಿ ವಿದೇಶದಲ್ಲಿ ನೆಲೆಸುವವರು ಈ ಚರ್ಚೆಗೆ ಹೊರತು. ಅವರಿಗೆ ಇಡೀ ಪ್ರಪಂಚ ಒಂದೇ ದೇಶ.) ಕೆಲವರು ಸಂಕೋಚವೇನೂ ಇಲ್ಲದೆ ನಿರ್ವಂಚನೆಯಾಗಿ ಹೇಳುತ್ತಾರೆ: "ನೋಡಿ, ಇಲ್ಲಿ ನಮಗೆ ಬೇಕಾದ ಅನುಕೂಲವೆಲ್ಲ ಸಿಕ್ಕಿದೆ. ಜೀವನ ಸುಖಕರವಾಗಿ ಸಾಗುತ್ತಿದೆ. ಭಾರತದಲ್ಲಿ ನಮಗೆ ಇಷ್ಟು ವರಮಾನ ಬರುವುದಿಲ್ಲ. ಸುಖಸಾಮಗ್ರಿಗಳು ಇಷ್ಟು ಸುಲಭವಾಗಿ ಸಿಕ್ಕುವುದಿಲ್ಲ. ಇಲ್ಲಿ ಯಾವುದಕ್ಕೂ ಕ್ಯೂ ನಿಲ್ಲಬೇಕಾಗಿಲ್ಲ. ಒಂದು ಕಿಲೊ ಸಕ್ಕರೆ ಬೇಕಾದರೆ, ರೈಲಿನಲ್ಲಿ ಒಂದು ಬರ್ತ್ ಬೇಕಾದರೆ, ಕಚೇರಿಗೆ ಅಲೆದು ಗುಮಾಸ್ತರ ಮೇಜಿನ ಮುಂದೆ ನಿಂತು ಅವರ ಜುಜಬಿ ದರ್ಪವನ್ನೂ ಲಂಚಕೋರತನವನ್ನೂ ಸಹಿಸಬೇಕಾಗಿಲ್ಲ. ಇಲ್ಲಿ ಲಂಚ ರುಷವತ್ತುಗಳು ಇಲ್ಲವೆಂದಲ್ಲ. ಆದರೆ ಸಾಮಾನ್ಯ ಮಾನವನ ದಿನದಿನದ ಜೀವನ ಸುಗಮವಾಗಿ ಸಾಗುತ್ತದೆ. ಭಾರತವನ್ನು ಬಿಟ್ಟುಬಂದೆವಲ್ಲ ಎಂದು ನಮಗೇನೂ ಸಂಕಟವಿಲ್ಲ. ಎರಡು ಮೂರು ವರ್ಷಕ್ಕೊಮ್ಮೆ ಅಲ್ಲಿಗೆ ಹೋಗಿ ಬಂಧುಮಿತ್ರರನ್ನು ನೋಡಿಕೊಂಡು ಬರುತ್ತೇವೆ. ನಮ್ಮ ವರಮಾನದ ದೃಷ್ಟಿಯಿಂದ ಅದು ಸುಲಭ—ಡೆಲ್ಲಿಯಲ್ಲಿದ್ದು ಬೆಂಗಳೂರು ಮೈಸೂರುಗಳಿಗೆ ಹೋಗಿ ಬರುವುದಕ್ಕಿಂತ ಇಲ್ಲಿಂದ ಹೋಗಿ ಬರುವುದೇ ಸುಲಭ !"

ಈ ಜನರಿಗೆ ಮೆಚ್ಚಿಕೆಯನ್ನಲ್ಲದಿದ್ದರೂ ಸಹಾನುಭೂತಿಯನ್ನಾದರೂ ಸಲ್ಲಿಸಬಹುದು. ಅವರು ಹೇಳುವುದರಲ್ಲಿ ಬಹುಭಾಗ ನಿಜ. ನಮ್ಮ ಕಚೇರಿಗಳಲ್ಲಿ ರೆಡ್ಟೇಪಿನ ಸುರಳಿಯನ್ನು ಸುತ್ತುತ್ತ ಬಿಚ್ಚುತ್ತ ಅಂಗೈಯೊಡ್ಡಿ ಕುಳಿತಿರುವ ಕ್ಷುದ್ರದೇವತೆಗಳನ್ನು ಯಾವ ಶಿವನೂ ಭಸ್ಮಮಾಡಲಿಲ್ಲವಲ್ಲ ಎಂದು ನಾನೂ ಪರಿತಪಿಸಿದ್ದೇನೆ. ಅವರ ಕೋಟಲೆಯನ್ನು ತಪ್ಪಿಸಿಕೊಳ್ಳಲು ಅಮೆರಿಕದಲ್ಲೇ ನೆಲಸುತ್ತೇವೆ ಎನ್ನುವವರಲ್ಲಿ ಇನ್ನೇನಿರಲಿ ಇಲ್ಲದಿರಲಿ ಪ್ರಾಮಾಣಿಕತೆಯಿದೆ, ಆತ್ಮವಂಚನೆಯಿಲ್ಲ. ಆದರೆ ಭಾರತೀಯರೆಲ್ಲ ಅಮೆರಿಕಕ್ಕೆ ಹೋಗಿ ನೆಲಸುವುದು

ಸಾಧ್ಯವಲ್ಲವಷ್ಟೆ. ಸಾಧ್ಯವಾದರೂ, ಆಗ ಅಮೆರಿಕವು ಭಾರತವಾಗಿ ಪರಿವರ್ತನೆಗೊಳ್ಳುತ್ತದೆ!

ಇನ್ನೊಂದು ಬಗೆಯ ಜನ ತಾವು ('ಭಾರತೀಯರೆಲ್ಲರಂತೆ' ಎಂದು ಅವರು ಬಾಯಿಬಿಟ್ಟು ಹೇಳುವುದಿಲ್ಲ!) ಅನಾಗರಿಕರಲ್ಲ; ('ಅಮೆರಿಕದವರಂತೆ'?) ನಾಗರಿಕತೆಯ ಮೆರಗು ತಳೆದವರು, ಎಂದು ತೋರಿಸಿಕೊಳ್ಳಲು ವಿಶ್ವಪ್ರಯತ್ನ ಮಾಡುತ್ತಾರೆ. 'ನಮಗೆ ಕನ್ನಡ ಮರೆತುಹೋಗಿದೆ' ಎಂದು ಹೇಳಿಕೊಳ್ಳುವುದು ಅವರಿಗೆ ಹೆಮ್ಮೆ. ಭಾರತೀಯ ಸಂಗೀತ ಅವರಿಗೆ ರುಚಿಸದು. ಇದಕ್ಕಿಂತ ಹೆಚ್ಚಾಗಿ ಅವರಲ್ಲಿ ಇನ್ನೊಂದು ಪ್ರವೃತ್ತಿ ಬೆಳೆದಂತೆ ತೋರುತ್ತದೆ: ತಾವು ಭಾರತವನ್ನು ಬಿಟ್ಟು ಬಂದವರು, ಅಲ್ಲಿಗೆ ಮತ್ತೆ ಹೋಗಲು ಇಷ್ಟವಿಲ್ಲದವರು. ಆದರೆ ತಾಯಿತಂದೆ ಬಂಧುಮಿತ್ರರು ಎಲ್ಲರನ್ನೂ ಬಿಟ್ಟು ಅಮೆರಿಕದಲ್ಲಿ ನೆಲಸುವುದನ್ನು ಜನ ಮೆಚ್ಚುವುದಿಲ್ಲ ಎಂಬ ಚಿಂತೆ ಅವರನ್ನು ಕಾಡುತ್ತದೆ. ಆದ್ದರಿಂದ ಅವರು ತಮ್ಮನ್ನು ತಾವು ಸಮರ್ಥಿಸಿಕೊಳ್ಳಬೇಕು. ಸಮರ್ಥನೆಯನ್ನು ಬಹುಶಃ ಹೀಗೆ ಸಂಗ್ರಹಿಸಬಹುದು: "ಈ ಭಾರತ ನಮಗೆ ಏನು ಮಾಡಿದೆ! ನಾವು ಮನುಷ್ಯರು ಎನ್ನಿಸಿಕೊಂಡದ್ದು ನಮ್ಮ ದೇಶ ಬಿಟ್ಟು ಇಲ್ಲಿಗೆ ಬಂದ ಮೇಲೆ. ನಮ್ಮ ಸಂಸ್ಕೃತಿಯ ವಿಷಯದಲ್ಲಿ ನಾವು ಹೇಳುವುದೆಲ್ಲ ಒಣ ಬಡಾಯಿ. ನಮ್ಮ ಬಡತನವೋ, ಭಿಕ್ಷುಕ ಮನೋವೃತ್ತಿಯೋ, ಜನರ ಅನಕ್ಷರತೆಯೋ, ಪಟ್ಟಣಗಳ ಹೊಲಸೋ, ಮಂತ್ರಿಗಳ ದುರಾಸೆಯೋ, ರಾಜಕೀಯ ಅಂತಃಕಲಹಗಳೋ, ಪಾಶ್ಚಾತ್ಯರೆದುರಿಗೆ ನಾವು ತೋರಿಸುವ ಗುಲಾಮ ಬುದ್ಧಿಯೋ (ಈ ಮಾತನ್ನು ಅವರು ಹೇಳಬಾರದು! ಅದರ ಐರನಿ ಅವರಿಗೆ ಹೊಳೆದೇ ಇಲ್ಲ)... ಇಂಥ ಭಾರತದಲ್ಲಿ ನಾವೇಕಿರಬೇಕು!" ಬ್ರಿಟಿಷರು ಹೊರಟುಹೋದ ಮೇಲೆ ಈ ಬಗೆಯ ಜನರ ಸಂಖ್ಯೆ ಕಡಮೆಯಾಗಿರಬಹುದು. ಆದರೆ ಇನ್ನೂ ಅಂಥವರಿದ್ದಾರೆ.

ನನ್ನ ಫ್ಲಾಸ್‌ಮೂರಿನ ಮಿತ್ರರು ಬಹುಶಃ ಅಂಥವರಲ್ಲ—ಒಂದೆರಡು ಸಾರಿ ಅವರ ಟೀಕೆ ಬಹಳ ಕಟುವಾಗಿ ಕಂಡಿತಾದರೂ, ಆದರೆ ಆ ಮನೋವೃತ್ತಿಯ ವಿಷಯದಲ್ಲಿ ನನಗಿದ್ದ ಅಸಹನೆ ಇವರೊಡನೆ ಆಡಿದ ಮಾತಿನಲ್ಲೂ ಕಂಡಿರಬೇಕು. ಆಗ ತುರ್ತು ಪರಿಸ್ಥಿತಿಯಿದ್ದ ಕಾಲ, ಸಹಜವಾಗಿಯೇ ಚರ್ಚೆ ಅಲ್ಲಿಂದ ಮೊದಲಾಯಿತು:

"ನಾವು ಬ್ರಿಟಿಷರೊಡನೆ ಹೋರಾಡಿದ್ದು ಸ್ವಾತಂತ್ರ್ಯಕ್ಕಾಗಿ, ಪ್ರಜಾಪ್ರಭುತ್ವ ಬರಲೆಂದು. ಈಗ ಏನಾಗಿದೆ ನೋಡಿ! ಶ್ರೀಮತಿ ಇಂದಿರಾಗಾಂಧಿಯವರು ಸರ್ವಾಧಿಕಾರಿಯಾಗಿ ಸಿಂಹಾಸನ ಏರಿದ್ದಾರೆ!"

ಈ ಟೀಕೆಗೆ ನಾನು ಸಮರ್ಪಕವಾದ ಉತ್ತರ ಕೊಟ್ಟೆನೆಂದು ಹೇಳ ಲಾರೆ. ತುರ್ತು ಪರಿಸ್ಥಿತಿಯಲ್ಲಿ ಬೇಕಾದಷ್ಟು ಅನ್ಯಾಯ ನಡೆಯಿತೆಂಬ ವಿಷಯ ನನಗೆ ಅಷ್ಟಾಗಿ ತಿಳಿದಿರಲಿಲ್ಲ. ಕಿವಿಗೆ ಬಿದ್ದ ವದಂತಿಗಳಲ್ಲಿ ನಿಜವೆಷ್ಟೋ ಸುಳ್ಳೆಷ್ಟೋ! ಈ ರಾಜಕಾರಿಣಿಗಳ ಹೇಳಿಕೆಗಳನ್ನು ನಂಬುವುದು ಕಷ್ಟ. ಅಲ್ಲದೆ, ಪೂರ್ವಬಂಗಾಳ (ಈಗಿನ ಬಾಂಗ್ಲಾದೇಶ) ಸ್ವಾತಂತ್ರ್ಯಕ್ಕಾಗಿ ಹೋರಾಟ ನಡಸಿದಾಗಲೂ ಅದರ ಪರಿಣಾಮವಾಗಿ ನಮಗೆ ಪಾಕಿಸ್ತಾನದೊಡನೆ ಯುದ್ಧ ಸಂಭವಿಸಿದಾಗಲೂ ಶ್ರೀಮತಿ ಗಾಂಧಿಯವರು ಪರಿಸ್ಥಿತಿಯನ್ನು ಎದುರಿಸಿದ್ದು— ಸರಿಯಾದ ಕಾಲದಲ್ಲಿ ಯುದ್ಧಕ್ಕೆ ಅನುವಾದದ್ದು, ಸರಿಯಾದ ಕಾಲದಲ್ಲಿ ಯುದ್ಧವನ್ನು ನಿಲ್ಲಿಸಿದ್ದು, ಪ್ರಬಲ ರಾಷ್ಟ್ರಗಳ ಬೆದರಿಕೆಗೆ ಮಣಿಯದಿದ್ದದು, ಇದೆಲ್ಲದರಿಂದಾಗಿ ಆಗ ಅನೇಕರಿಗೆ ಪ್ರಧಾನಿಯ ವಿಷಯದಲ್ಲಿ ಸದಭಿಪ್ರಾಯವೇ ಇತ್ತು.

"ಅಧಿಕಾರವೆಲ್ಲ ಪ್ರಧಾನಿಯೊಬ್ಬರಲ್ಲಿ ಕೇಂದ್ರೀಕೃತವಾಗಿದೆ. ನಮ್ಮ ಸ್ವಾತಂತ್ರ್ಯ ಹೋಯಿತು", ಎಂಬ ಟೀಕೆ ಬಂದಾಗ ನನಗೆ ಅದರ ಮೊದಲ ಭಾಗ ನಿಜ ಎನ್ನಿಸಿತು. ಅಧಿಕಾರ ಕೇಂದ್ರೀಕೃತವಾದದ್ದು ಅಪ್ರಿಯ ಸತ್ಯ. ಅದು ನಿಜವಾದರೆ ಟೀಕೆಯ ಎರಡನೆಯ ಭಾಗ—ಸ್ವಾತಂತ್ರ್ಯ ಹೋಯಿ ತೆಂಬುದು—ಕೂಡ ನಿಜವಾಗಲೇಬೇಕಷ್ಟೆ. ಈ ಯೋಚನೆ ಆಗ ನನ್ನ ಮನ ಸ್ಸಿನ ಮೇಲೆ ಸಾಕಾದಷ್ಟು ಪರಿಣಾಮವುಂಟುಮಾಡಲಿಲ್ಲ. ಅದಕ್ಕೆ ಕಾರಣ ಆಗ ದೇಶದಲ್ಲಿದ್ದ ಪರಿಸ್ಥಿತಿ. ಸ್ವಾತಂತ್ರ್ಯದ ಜೊತೆಗೆ ಬರಲೇಬೇಕಾದ ಕರ್ತವ್ಯ ಜ್ಞಾನ, ಹಕ್ಕಿನ ಜೊತೆಗೆ ಬರಲೇಬೇಕಾದ ಬಾಧ್ಯತೆಯ ಜ್ಞಾನ, ನಮ್ಮಲ್ಲಿ ಬರಲಿಲ್ಲ. ಆ ಜ್ಞಾನ ಬರದಿದ್ದರೆ ಸ್ವಾತಂತ್ರ್ಯಕ್ಕೆ ಅರ್ಥವೇ ಇಲ್ಲದಂತಾಗುತ್ತದೆ. ದೂರದ ಕನಸು ಮಾತ್ರವಾಗಿದ್ದಾಗ ಪ್ರಚಂಡ ಸಂಘಟನ ಶಕ್ತಿಯಾಗಿದ್ದ ಸ್ವಾತಂತ್ರ್ಯದೇವಿ ಕರಗತಳಾದಾಗ ವಿಘಟನ ಶಕ್ತಿಯಾಗುತ್ತಾಳೆ. ಆತ್ಮನಾಶದ ದಾರಿ ಹಿಡಿಯುತ್ತಾಳೆ. ನಮ್ಮ ದೇಶದಲ್ಲಿ ಬ್ರಿಟಿಷರು ಹೋದಮೇಲೆ ಛಿದ್ರ ಹೆಚ್ಚಿತು. ಪ್ರಾಂತ ಪ್ರಾಂತಗಳ ನಡುವೆ ವಾದವಿವಾದಗಳೆದ್ದವು. ಮಾತ್ರವಲ್ಲ, ಬ್ರಿಟಿಷರ ನೊಗಕ್ಕಿಂತ ಹೆಚ್ಚು ಹೊಲ್ಲವೂ ನಾಶಕರವೂ ಆದ ಅನೀತಿಯ ನೊಗ ಕತ್ತಿನ ಮೇಲೆ ಹೇರಿಕೊಂಡಿತು. ಅದರಿಂದ ಬಿಡುಗಡೆ ಪಡೆಯಲು ನಾವು ಪ್ರಯತ್ನಿಸಲೇ ಇಲ್ಲ. ರಾಮರಾಜ್ಯವಾಗಬೇಕಾಗಿದ್ದದ್ದು ಕೇಡಿಗರ ರಾಜ್ಯ ವಾಯಿತು. ನಮ್ಮ ದೇಶದಲ್ಲಿ ಆಡಳಿತವೇ ಇಲ್ಲ ಎನ್ನಿಸಿತು—ನಮ್ಮಲ್ಲನೇಕರ ಮನಸ್ಸಿನಲ್ಲಿ ನಿರಾಶೆ ಕವಿದಿತ್ತು. ಸರಿಯೋ ತಪ್ಪೋ—ಇದು ಆಗ ನನ್ನ ಮನಸ್ಸಿನ ಸ್ಥಿತಿ.

ತುರ್ತುಪರಿಸ್ಥಿತಿಯಲ್ಲಿ ಜನಕ್ಕೆ ಸರ್ಕಾರವೆಂಬುದೊಂದು ಇದೆ ಎಂಬುದರ ಅರಿವಾಯಿತು. ನೌಕರರು ಹೊತ್ತಿಗೆ ಸರಿಯಾಗಿ ಕಚೇರಿಗೆ ಬರಲಾರಂಭಿಸಿದರು. ಬಸ್ ಕಂಡಕ್ಟರುಗಳು ಪ್ರಯಾಣಿಕರಿಂದ ಪಡೆದ ಹಣಕ್ಕೆ ಪ್ರತಿಯಾಗಿ ಟಿಕೆಟ್ ಕೊಡಲಾರಂಭಿಸಿದರು, ಅಧ್ಯಾಪಕರು ಪಾಠ ಹೇಳಲಾರಂಭಿಸಿದರು, ಕಳ್ಳಸಾಗಾಣಿಕೆ ಮಾಡುತ್ತಿದ್ದವರಿಗೆ ಬಿಸಿ ತಟ್ಟಿದಂತೆ ತೋರಿತು (ತೋರಿತು!) ....ಇವೆಲ್ಲದರ ಜೊತೆಗೆ ನನ್ನ ಮನಸ್ಸಿನಲ್ಲಿ ಪ್ರಶ್ನೆಗಳೂ ಎದ್ದವು: ಸಿದ್ಧವಾಗಿಯೇ ಇದ್ದ ಕಾನೂನುಗಳನ್ನು ಅನ್ವಯಿಸಿದ್ದರೆ ಈ ಸುಧಾರಣೆಗಳನ್ನು ತರಲಾಗುತ್ತಿರಲಿಲ್ಲವೇ? ತುರ್ತುಪರಿಸ್ಥಿತಿ ಅವಶ್ಯಕವಾಗಿತ್ತೆ? ಯಾರೊಬ್ಬರ ಕೈಯಲ್ಲಾದರೂ ಅಷ್ಟೊಂದು ಅಧಿಕಾರ ಸೇರಿದರೆ ಅದರಿಂದ ಅವರ ಸ್ವಭಾವ ಕೆಡುತ್ತದಲ್ಲವೆ? ಅಲ್ಲದೆ ಈಗಿನ ವಿದ್ಯಮಾನಗಳಿಂದಾಗಿ ಅಧ್ಯಕ್ಷರೂ ಪ್ರಧಾನಿಯೂ ಕಾನೂನಿಗಿಂತ ಉನ್ನತರಾದಂತಾಯಿತಲ್ಲ....ಪರಿಸ್ಥಿತಿ ಎಷ್ಟು ಹದಗೆಟ್ಟಿತ್ತೆಂಬುದರ ಅರಿವು ಇನ್ನೂ ಇರಲಿಲ್ಲವಾದರೂ ಮನಸ್ಸು ಹೊಯ್ದಾಟದಲ್ಲಿತ್ತು. ನಮ್ಮ ರೋಗಕ್ಕೆ ಮದ್ದು ಇದಲ್ಲ ಎಂಬ ಪರಿಜ್ಞಾನ ಖಚಿತವಾಗಿರಲಿಲ್ಲ. ನಾನು ಫ್ಲಾಸ್‌ಮೂರಿನ ಮಿತ್ರರಿಗೆ ಕೊಟ್ಟ ಉತ್ತರದಲ್ಲೂ ಮೇಲೆ ಕಾಣುವ ಅನಿಶ್ಚಿತತೆಯಿತ್ತು. ಅದರಿಂದ ನನಗಾಗಲಿ ಅವರಿಗಾಗಲಿ ತೃಪ್ತಿ ಬರಲಿಲ್ಲ! ಮಿತ್ರರೊಬ್ಬರು ಮಾತನ್ನು ಬೇರೆ ಕಡೆಗೆ ತಿರುಗಿಸಿದರು. ಅವರ ಆಕ್ಷೇಪಣೆಯನ್ನೂ ನನ್ನ ಉತ್ತರಗಳನ್ನೂ ಕೆಳಗೆ ಕಾಣಿಸಿದ್ದೇನೆ.

"ನಮಗೆ ಭಾರತೀಯರೆಂದು ಹೇಳಿಕೊಳ್ಳಲೂ ನಾಚಿಕೆಯಾಗುತ್ತೆ. ನಾವು ಭಿಕ್ಷುಕರು. ದಿನ ಬೆಳಗೆದ್ದರೆ 'ಹೊಟ್ಟೆಗಿಲ್ಲ, ನಮಗೆ ಅನ್ನ ಕೊಡಿ' ಎಂದು ಬೇಡಬೇಕು. ನಮ್ಮ ಕಾಲಮೇಲೆ ನಾವು ನಿಲ್ಲಲಾರದೆ ಹೋದರೆ ಆತ್ಮಗೌರವ ಉಳಿಯುತ್ತದೆಯೆ? ಅಮೆರಿಕನ್ನರಿಗೇನೊ ನಮ್ಮನ್ನು ಕಂಡರೆ ತಿರಸ್ಕಾರ. ನಾವು ಅವರನ್ನು ಆಕ್ಷೇಪಿಸುವಂತಿಲ್ಲ!"

"ಪ್ರಪಂಚದ ಉಳಿದ ದೇಶಗಳೆಲ್ಲ ಸ್ವಾವಲಂಬಿಗಳಾಗಿವೆಯೇನು? ಕೆಲವು ದೇಶಗಳಿಗೆ ಹಾಗಿರುವುದು ಸಾಧ್ಯವೇ ಇಲ್ಲದಿರಬಹುದು—ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯೇ ಕಡಮೆಯಿರಬಹುದು. ಕಾಲಕಾಲಕ್ಕೆ ಮಳೆಯಾಗದಿರಬಹುದು. ಅದಂತಿರಲಿ. ಭಾರತ ಆಮದುಮಾಡಿಕೊಂಡಿರುವ ಆಹಾರದ ಪ್ರಮಾಣ ಮೊತ್ತದಲ್ಲಿ ಹೆಚ್ಚಾಗಿ ಕಾಣಬಹುದು. ಆದರೆ ದೇಶದ ವಿಸ್ತೀರ್ಣ ಜನಸಂಖ್ಯೆಗಳೆರಡನ್ನೂ ಪರಿಗಣಿಸಿ ತಲಾ ಆಮದುಮಾಡಿಕೊಂಡಿರುವ ಆಹಾರ ಎಷ್ಟೆಂದು ನೋಡಿದರೆ ಫ್ರಾನ್ಸ್ ಇಂಗ್ಲೆಂಡ್ ಜಪಾನ್ ದೇಶಗಳು ಆಮದು ಮಾಡಿಕೊಂಡಿರುವುದೇ ಹೆಚ್ಚು ಎಂದು ಯಾವುದೋ ಮಾಸಪತ್ರಿಕೆಯಲ್ಲೋ

ದಿನಪತ್ರಿಕೆಯಲ್ಲೋ ಓದಿದ ನೆನಪಿದೆ. ಅಮೆರಿಕ ಇಂಗ್ಲೆಂಡನ್ನಾಗಲಿ ಫ್ರಾನ್ಸ ನ್ನಾಗಲಿ ಏಕೆ ತಿರಸ್ಕರಿಸುವುದಿಲ್ಲ?"

"ಅದು ಸ್ವಾಭಾವಿಕ. ಅವರೆಲ್ಲ ಯುದ್ಧಕಾಲದಲ್ಲಿ ಒಬ್ಬರಿಗೊಬ್ಬರು ನೆರವಾಗಿದ್ದರಷ್ಟೆ."

"ನಾವೂ ನೆರವಾಗಿದ್ದೆವು, ಸ್ವಂತ ಇಚ್ಛೆಯಿಂದಲ್ಲದಿದ್ದರೂ. ಅಲ್ಲದೆ ಜಪಾನ್ ನೆರವಾಗಿರಲಿಲ್ಲ, ಶತ್ರುವಾಗಿತ್ತು. ಅದನ್ನೇಕೆ ಅಮೆರಿಕ ತಿರಸ್ಕಾರ ದಿಂದ ಕಾಣುವುದಿಲ್ಲ?"

"ಅದೂ ಸ್ವಾಭಾವಿಕ. ಜಪಾನ್ ಸ್ವತಂತ್ರದೇಶ. ಭಾರತೀಯರು ಬ್ರಿಟಿಷರ ಗುಲಾಮರಾಗಿದ್ದವರು."

"ಆ ಮಾತು ಹೇಳಿ, ಒಪ್ಪುತ್ತೇನೆ. ನಾವು ಅವರ ಹಿಡಿತದಿಂದ ತಪ್ಪಿಸಿ ಕೊಂಡದ್ದು ಅಪರಾಧ. ಅದಕ್ಕಾಗಿ ಅವರು ನಮ್ಮನ್ನು ಕ್ಷಮಿಸಿಲ್ಲ."

"ನಾವು ಅವರ ಗುಲಾಮರಾದದ್ದೇಕೆ? ನಮ್ಮಲ್ಲಿ ಐಕಮತ್ಯವಿಲ್ಲದ್ದರಿಂದ. ಅದು ನಮ್ಮಲ್ಲಿ ದೋಷವಲ್ಲವೆ? ಎಂದಿನಿಂದಲೂ—ಪೃಥ್ವೀರಾಜ ಜಯಚಂದ್ರರ ಕಾಲದಿಂದಲೂ—ನಮ್ಮಲ್ಲಿ ಜಗಳಗಳಿದ್ದೇ ಇವೆ. ಸಾಲದ ಕಡಮೆಗೆ ಅವರಿಬ್ಬರೂ ಬಂಧುಗಳು! (ಬಂಧುಗಳಾದ ರೀತಿಯಿಂದಲೇ ಜಗಳ ಬಂದದ್ದು!) ನಾವು ಒಂದು ಎಂಬ ಭಾವನೆಯೇ ಬೇಡವೆ? ಐಕಮತ್ಯ ಭಾರತೀಯರಿಗೆ ಹೇಳಿದ್ದಲ್ಲ!"

"ಒಂದು ಎಂಬ ಭಾವನೆ ಹೇಗೆ ಬಂದೀತು, ಈ ವಿಶಾಲವಾದ ಉಪ ಖಂಡದಲ್ಲಿ? ನಮ್ಮ ಸಂಸ್ಕೃತಿ ಒಂದಾದರೂ ರಾಜಕೀಯ ದೃಷ್ಟಿಯಿಂದ ನಾವು ಹಿಂದೆಂದೂ ಒಂದಾಗಿರಲಿಲ್ಲ. ಹರ್ಷನಿಗೆ ಪುಲಿಕೇಶಿಯ ರಾಜ್ಯ 'ನಮ್ಮದೇಶ' ವಲ್ಲ—ಪರರಾಜ್ಯವೇ! ಅದರಲ್ಲಿ ನಮ್ಮ ವೈಶಿಷ್ಟ್ಯವೇನೂ ಇಲ್ಲ. ಯೂರೋಪಿ ಗೆಲ್ಲ ಸಾಮಾನ್ಯವಾದದ್ದು—ಗ್ರೀಸ್ ರೋಮ್‌ಗಳ ಸಂಸ್ಕೃತಿಯ ಆಧಾರದ ಮೇಲೆ ರೂಪುಗೊಂಡ ನಾಗರಿಕತೆ. ಆದರೆ ಯೂರೋಪು ರಾಜಕೀಯ ದೃಷ್ಟಿ ಯಿಂದ ಒಂದಾಗಿತ್ತೆ, ಈಗ ಇದೆಯೆ? ಯೂರೋಪು ಹಾಗಿರಲಿ, ಇಟಲಿ ಜರ್ಮನಿಗಳು ಒಂದಾಗಿ ಎಷ್ಟು ದಿನವಾಯಿತು! (ಜರ್ಮನಿ ಮತ್ತೆ ಒಡೆದಿದೆ!) ಇಂಗ್ಲೆಂಡಿನಂಥ ಸಣ್ಣ ದೇಶದಲ್ಲಿ ಹಿಂದೆ ಹೆಪ್ಟಾರ್ಕಿ (heptarchy–ಏಳು ರಾಜ್ಯಗಳು)ಯಿತ್ತು. ಸ್ಕಾಟ್ಲೆಂಡಿನವರ ಪ್ರಾಂತಾಭಿಮಾನ ಇನ್ನೂ ಜೀವಂತ ವಾಗಿದೆ. ಇನ್ನು ಬಂಧುತ್ವದ ಮಾತು: ಮೊದಲನೆಯ ಪ್ರಪಂಚಯುದ್ಧದಲ್ಲಿ ಇಂಗ್ಲೆಂಡಿನ ಪರಮಶತ್ರುವಾಗಿದ್ದ ಜರ್ಮನಿಯ ಚಕ್ರವರ್ತಿ—ಕೈಸರ್ ವಿಲಿಯಮ್—ವಿಕ್ಟೋರಿಯಾ ರಾಣಿಯ ಸ್ವಂತ ಮಗಳ ಮಗ! ಅಂತರರಾಷ್ಟ್ರ

ರಾಜಕೀಯದಲ್ಲಿ ಬಂಧುತ್ವ ನೆನಪಿಗೆ ಬರುವುದಿಲ್ಲ. ಅನೈಕಮತ್ಯ ನಮ್ಮ ದೇಶಕ್ಕೆ ಮೀಸಲಾದದ್ದಲ್ಲ. ನಮ್ಮನ್ನು ಮಾತ್ರ ಏಕೆ ಎತ್ತಿ ಆಡುತ್ತೀರಿ?"

ಮಿತ್ರರೊಬ್ಬರು ನಸುನಗುತ್ತ "ನಮ್ಮನ್ನು ನಮ್ಮನ್ನು ಅಂತ ಎರಡು ಮೂರು ಸಲ ಹೇಳಿದಿರಿ. ನಾವೂ ನಿಮ್ಮವರಲ್ಲವೆ ?" ಎಂದರು.

"ನಿಜ. ನಾನು ಹಾಗಂದದ್ದು ತಪ್ಪು, ಕ್ಷಮಿಸಿ."

ಮಾತಿನಲ್ಲಿ ಕ್ಷಮೆ ಬೇಡಿದೆ ; ಮನಸ್ಸಿನಲ್ಲಿ 'ಹಾಗೆ ಬನ್ನಿ' ಎಂದುಕೊಂಡೆ. ನನ್ನ ದನಿಯಲ್ಲಿ ಅನವಶ್ಯಕವಾದ ತೀವ್ರತೆಯಿತ್ತೆಂದು ಈಗ ತೋರುತ್ತದೆ ನಾನು ಮೊದಲೇ ಹೇಳಿರುವಂತೆ ಯಾರೋ ನನ್ನ ಮನಸ್ಸಿನಲ್ಲಿ ಮೂಡಿಸಿದ ಕಹಿಯನ್ನು ಇಲ್ಲಿಯ ಮಿತ್ರರಿಗೆ ಹಂಚುತ್ತಿದ್ದೆ !

ಬಹುಶಃ ಅವರು 'ನಾವೂ ನಿಮ್ಮವರಲ್ಲವೆ' ಎಂದದ್ದು ಸತ್ಯಕ್ಕಿಂತ (ಸತ್ಯ ವಿರಲಿಲ್ಲವೆಂದಲ್ಲ) ಹೆಚ್ಚಾಗಿ ಆದರದ ಮಾತು. ಅವರಲ್ಲಿ ಅನೇಕರು—'ಎಲ್ಲರೂ' ಎಂದರೂ ಎನ್ನಬಹುದೇನೊ—ಭಾರತದ ಪೌರತ್ವವನ್ನು ಬಿಟ್ಟುಕೊಟ್ಟು ಅಮೆರಿಕದ ಪೌರರಾದವರು. ಅವರು ಈಗ ಅಮೆರಿಕದ ದತ್ತುಪುತ್ರರು. ಆದ್ದ ರಿಂದ ಅವರ ಭಕ್ತಿ, ಪ್ರೇಮ, ಸೇವೆ, ಎಲ್ಲ ಮೊದಲು ಅಮೆರಿಕಕ್ಕೆ ಸಲ್ಲಬೇಕು. ಆದರೂ ಅವರು ಭಾರತದ ವಿಷಯದಲ್ಲಿ ಅಭಿಮಾನವನ್ನು ಉಳಿಸಿಕೊಂಡಿ ದ್ದಾರೆ. ಅದು ಸ್ವಾಭಾವಿಕ, ನಮ್ಮ ಮನಸ್ಸಿಗೆ ಹಿತ, ಅವರ ಮಕ್ಕಳು ಮೊಮ್ಮ ಕ್ಕಳ ಕಾಲಕ್ಕೆ ಅಂತರರಾಷ್ಟ್ರೀಯ ವಿವಾಹಗಳಿಂದಾಗಿ ಅವರಲ್ಲಿ ಭಾರತೀಯ ರಕ್ತದ ಅಂಶ ಕಡಮೆಯಾಗಿರುತ್ತದೆ. ಅಲ್ಲದೆ ಭಾರತದ ಸ್ಥಳ ಸಂಪರ್ಕ ಜನ ಸಂಪರ್ಕಗಳೂ ಇರುವುದಿಲ್ಲ. ಅವರಲ್ಲಿ ಭಾರತ ಪ್ರೇಮ ಉಳಿದರೆ ಅಭಿನಂದ ನೀಯ ; ಆದರೆ ಅದನ್ನು ನಿರೀಕ್ಷಿಸಲಾಗುವುದಿಲ್ಲ.

ಈಗ ಇಲ್ಲಿ ನೆಲಸಿರುವ ಭಾರತೀಯರಲ್ಲಿ 100ಕ್ಕೆ 90ರಷ್ಟು ಜನ ಭಾರ ತೀಯ ತಂದೆತಾಯಿಯರ ಮಕ್ಕಳಾಗಿ ಭಾರತದಲ್ಲೇ ಹುಟ್ಟಿ, ಬಾಲ್ಯಯೌವನ ಗಳನ್ನು ಇಲ್ಲೇ ಕಳೆದು, ಭಾರತೀಯ ಹೆಣ್ಣನ್ನೇ ಮದುವೆಯಾಗಿ ಅಮೆರಿಕಕ್ಕೆ ಪ್ರವೇಶಿಸಲು ಅವಶ್ಯವಾದ ವಿದ್ಯಾಭ್ಯಾಸವನ್ನು ಭಾರತದಲ್ಲೇ ಪಡೆದು— ಅನಂತರ ಆರ್ಥಿಕ ಪ್ರಯೋಜನಕ್ಕಾಗಿ ಅಮೆರಿಕಕ್ಕೆ ಹೋದವರು. ಅವರಲ್ಲಿ ಭಾರತಪ್ರೇಮವನ್ನು ನಿರೀಕ್ಷಿಸುವುದು ತಪ್ಪಲ್ಲ. ಭಾರತದ ದೋಷಗಳನ್ನು ಗಮನಿಸಬಾರದೆಂದಲ್ಲ. ಭಾರತದ ಇಂದಿನ ಸ್ಥಿತಿಯನ್ನು ನೋಡಿದರೆ; ನಮ್ಮ ಸಂಸ್ಕೃತಿಯ ಆದರ್ಶಕ್ಕೂ ವಸ್ತುಸ್ಥಿತಿಗೂ ಇರುವ ಅಂತರವನ್ನೂ ಅನೀತಿಯ ತಾಂಡವವನ್ನೂ ಗಮನಿಸಿದರೆ—ಇಲ್ಲಿರುವ ನಮಗೂ ತಲೆತಗ್ಗಿಸುವಂತಾಗು ತ್ತದೆ. ಎಷ್ಟೋ ವೇಳೆ ನಿರಾಶೆ ಕವಿಯುತ್ತದೆ. ನಾನು ಕೋಡಿಯಲ್ಲಿ ಕಂಡ

ಸಿಂಧಿಮಿತ್ರರೂ ಭಾರತವನ್ನು ಟೀಕಿಸಿದರು, ತೀವ್ರವಾಗಿಯೇ ಟೀಕಿಸಿದರು. ಆದರೆ ಅವರ ಮಾತಿನಲ್ಲಿ ತಿರಸ್ಕಾರವಿರಲಿಲ್ಲ. ಭಾರತ ಈ ಸ್ಥಿತಿಗೆ ಇಳಿಯಿತಲ್ಲ ಎಂಬ ಸಂಕಟವಿತ್ತು. ಆ ಸಂಕಟ ಭಾರತೀಯರಲ್ಲದವರು ಕೂಡ ಅನುಭವಿಸ ಬಹುದಾದದ್ದು, ಅನುಭವಿಸಬೇಕಾದದ್ದು. ಪ್ರಪಂಚದ ಯಾವುದೊಂದು ದೇಶದವರಾದರೂ ಹೀನಸ್ಥಿತಿಗೆ ಇಳಿದರೆ ಅದು ಎಲ್ಲ ದೇಶದವರಿಗೂ ಸಂಕಟದ ವಿಷಯವಾಗಬೇಕು.

## ಜೇನ್ಸ್‌ವಿಲ್‌ನಲ್ಲಿ ಕಳೆದ ಕೊನೆಯ ದಿನಗಳು

ನಾನು ಎರಡು ಸಾರಿ ಅಮೆರಿಕಕ್ಕೆ ಬಂದಾಗಲೂ ದಿನಚರಿ ಬರೆಯಬೇಕೆಂಬ ನಿರ್ಧಾರವನ್ನು ಕೈಕೊಂಡೆ. ಒಂದು ದಿನವೂ ಆ ನಿರ್ಧಾರವನ್ನು ಮರೆಯಲಿಲ್ಲ. ಜಿತವಾಗಿ ಕೂತು ಬರೆಯಲೂ ಇಲ್ಲ! ಹುಚ್ಚು ತೋರಿದಾಗ ಒಂದೊಂದು ದಿನ ಕೂತು ಹಿಂದಿನ ಒಂದೆರಡು ವಾರಗಳ ಅನುಭವವನ್ನು ಸಣ್ಣ ಟಿಪ್ಪಣಿಗಳ ರೂಪದಲ್ಲಿ ಗುರುತು ಹಾಕಿಕೊಳ್ಳುವುದರಲ್ಲೇ ಪರ್ಯವಸಾನವಾಯಿತು, ನನ್ನ ನಿರ್ಧಾರ. ಫ್ಲಾಸ್‌ಮೂರಿನಿಂದ ಬಂದ ಮೇಲೆ ಅದೇನು ಸದ್ಬುದ್ಧಿ ಬಂತೋ ಕಾಣೆ—ಎರಡು ದಿನ, ತಾರೀಖನ್ನು ಕೂಡ ಕಾಣಿಸಿ (!) ಸ್ವಲ್ಪ ವಿಸ್ತಾರ ವಾಗಿಯೇ 'ದಿನಚರಿ' ಎನ್ನಬಹುದಾದ್ದನ್ನು ಬರೆದೆ. ಮಾತ್ರವಲ್ಲ, ಬರೆದ ಹಾಳೆಗಳು ನಷ್ಟವಾಗದೆ ಉಳಿದವು. ನನ್ನ ಕೈಗೆ ಸಿಕ್ಕಿವೆ! ಪವಾಡಗಳಲ್ಲಿ ನಂಬಿಕೆಯಿಲ್ಲದವರು ಇದನ್ನು ಗಮನಿಸಿ ಬುದ್ಧಿ ಕಲಿತುಕೊಳ್ಳಲಿ.

**ಸೆಪ್ಟಂಬರ್ 21, 1976**

ಇವತ್ತಿನ ವೃತ್ತಪತ್ರಿಕೆಯಲ್ಲಿ ವಿಚಿತ್ರ ಸಂಗತಿಯೊಂದು ಕಣ್ಣಿಗೆಬಿತ್ತು. ಅದನ್ನು ಓದಿ ಆಶ್ಚರ್ಯವಾಯಿತು, ಅಸಹ್ಯವೂ ಆಯಿತು. ಯಾವನೋ ಪ್ರತಿಭಾಶಾಲಿ ಮಕ್ಕಳಿಗಾಗಿ ಹೊಸ ಆಟವೊಂದನ್ನು ಕಲ್ಪಿಸಿ ಅದಕ್ಕೆ ಬೇಕಾದ ಸಾಧನಗಳನ್ನು ಮಾರುತ್ತಿದ್ದಾನಂತೆ. ಆಟದ ವಿವರಗಳು : ಒಂದು ಯಂತ್ರ. ಅದರ ಮುಖದಲ್ಲಿರುವ ರಂಧ್ರಕ್ಕೆ 25 ಸೆಂಟಿನ ನಾಣ್ಯ ಹಾಕಿದರೆ ಟೀವಿ ಪಟ ದಂಥ ಪಟದ ಮೇಲೆ ಒಂದು ಕಾರೂ ಪಾದಚಾರಿಗಳೂ (ಕಡ್ಡಿಗೊಂಬೆಗಳು) ಕಾಣಿಸಿಕೊಳ್ಳುತ್ತವೆ. ಕಾರನ್ನು ನಡೆಸುವುದಕ್ಕೆ ಬೇಕಾದ ಆ್ಯಕ್ಸಿಲರೇಟರ್ (accelerator) ಮತ್ತು ನಡಸುಚಕ್ರ ಆಟಗಾರನಿಗೆ ಸಿಕ್ಕುವಂತೆ ಹೊರಗೇ ಇರುತ್ತವೆ. ಅವನು ಕಾರನ್ನು ನಡಸಿ ಪಾದಚಾರಿಗಳ (ಕಡ್ಡಿಗೊಂಬೆಗಳ)

ಮೇಲೆ ಹರಿಸಿ ಅವರನ್ನು ಉರುಳಿಸಬೇಕು. ಅವರು ಅಘಾತಕ್ಕೆ ಸಿಕ್ಕಿ ಉರುಳು ವುದು ಪಟದ ಮೇಲೆ ಕಾಣುತ್ತದೆ. ಉರುಳಿದಾಗ ಮಕ್ಕಳು ಭಯನೋವು ಗಳಿಂದ ಚೀರಿದಂತೆ ಸದ್ದು ಹೊರಡುತ್ತದೆ; ಮತ್ತು ಉರುಳಿ 'ಸತ್ತ' ಪಾದ ಚಾರಿ ಗೊಂಬೆ ಕೂಡಲೆ ಶಿಲುಬೆ (ಗೋರಿಯ ಮೇಲಿಡುವ ಶಿಲುಬೆ)ಯಾಗಿ ಮಾರ್ಪಡುತ್ತದೆ. ಯಾವ ಆಟಗಾರ ಹೆಚ್ಚು ಪಾದಚಾರಿಗಳನ್ನು 'ಕೊಲ್ಲು' ತ್ತಾನೋ ಅವನೇ ವಿಜೇತ!

ಇದನ್ನು ಓದಿ ನನ್ನ ಮೈ ನಡುಗಿತು. ಮಕ್ಕಳು ಕಲಿಯುವುದಕ್ಕೆ, ಅವರ ಮನಸ್ಸು ವಿಕಾಸವಾಗುವುದಕ್ಕೆ, ಆಟವೂ ಒಂದು ದಾರಿ—'The play way'. ಮೇಲೆ ಬಣ್ಣಿಸಿರುವಂಥ ಆಟದಿಂದ ಆ ಎಳೆಯ ಮನಸ್ಸುಗಳ ಮೇಲೆ ಆಗುವ ಪರಿಣಾಮ ಎಂಥಾದ್ದಿರಬಹುದು! ಅವರಲ್ಲಿ ಬೆಳೆಯುವುದು ಕ್ರೂರಮೃಗಗಳ ಮನೋವೃತ್ತಿ ತಾನೆ? ಅಥವಾ ಹಾಗೆಂದರೆ 'ಕ್ರೂರ'ಮೃಗ ಗಳಿಗೆ ಅನ್ಯಾಯ ಮಾಡಿದಂತಾಗುತ್ತದೇನೊ. ಆ ಮೃಗಗಳು ಕೊಲ್ಲುವುದು ಆಟಕ್ಕಲ್ಲ, ಆನಂದಕ್ಕಲ್ಲ, ಕೇವಲ ಹಸಿವನ್ನು ಇಂಗಿಸಿಕೊಳ್ಳುವುದಕ್ಕೆ.

ಷಿಕಾಗೋವಿನಲ್ಲಿ ಸಗಟು ವ್ಯಾಪಾರಿಯೊಬ್ಬ ಹೇಳಿದನಂತೆ, "ಈ ಆಟದ ಯಂತ್ರವನ್ನು ನನ್ನ ಅಂಗಡಿಗೆ ಬರಗೊಡಲಾರೆ" ಎಂದು. ಇನ್ನೊಬ್ಬ— ಇಲೆಕ್ಟ್ರಾನಿಕ್ ಆಟಗಳ ಕೈಗಾರಿಕೆಯೇ ಅವನ ವೃತ್ತಿ—"ನನ್ನ ಮಕ್ಕಳು ಈ ಆಟವನ್ನು ಆಡಕೂಡದು, ಅದು ನನಗೆ ಸರ್ವಥಾ ಇಷ್ಟವಿಲ್ಲ. ಮಕ್ಕಳು ಹೀಗೆ ಜನರನ್ನು ಕೊಲ್ಲಲು ಪ್ರಯತ್ನಿಸುವುದುಂಟೆ! ಅಪಘಾತ ನಡೆದದ್ದಕ್ಕೆ ಅವರು ಪಶ್ಚಾತ್ತಾಪ ಪಡಲಿ ಎಂಬ ಉದ್ದೇಶವೇನೂ ಇಲ್ಲ, ಈ ಆಟದ ವ್ಯವಸ್ಥೆಯಲ್ಲಿ" ಎಂದನಂತೆ.

ಇದನ್ನೆಲ್ಲ ಪ್ರಕಟಿಸಿದ ವೃತ್ತಪತ್ರಿಕೆ ಆ ಆಟವನ್ನು ಸ್ವಾಗತಿಸಲಿಲ್ಲ. ನಿರ್ದಾಕ್ಷಿಣ್ಯವಾಗಿ ಖಂಡಿಸಿತು. "ಹಿಂಸ್ರಪಶುಗಳ ('ಶಾಕಿನಿ ಡಾಕಿನಿಯರ' ಎನ್ನಬಹುದೇನೊ!) ಮನೋವೃತ್ತಿಯನ್ನು ಬೆಳೆಸುವ ಇಂಥ ಆಟದ ಕಲ್ಪನೆ ಸಮಾಜದಲ್ಲಿ ಮೂಡಿಬರುವುದುಂಟೆ! ಇದನ್ನು ಎದುರಿಸಿ ನಮ್ಮ ಮಕ್ಕಳನ್ನು ರಕ್ಷಿಸಿಕೊಳ್ಳುವುದು ಹೇಗೆ? ಇಂಥ ಕಲ್ಪನೆಗಳಿಗೆ ಅವಕಾಶಕೊಡುವ ಸಮಾಜ ಭಯಂಕರ ಮನೋರೋಗದಿಂದ ನರಳುತ್ತಿರಬೇಕು" ಎಂದು ಪತ್ರಿಕೆ ಪರಿತಪಿ ಸಿತು. ಅದರ ಮಾನವೀಯ ದೃಷ್ಟಿ ನನಗೂ ಸ್ವಲ್ಪ ಸಮಾಧಾನ ತಂದಿತು.

ಏಳೆಂಟು ದಿನಗಳ ಕೆಳಗೆ ಕಿಟ್ಟು (ನನ್ನ ತಮ್ಮ) ಬರೆದ ಕಾಗದದಲ್ಲಿ ಸ್ವಾನ್ಸಿ ಸದ್ಯದಲ್ಲೇ ಅಮೆರಿಕಕ್ಕೆ ಬರುತ್ತಾಳೆಂಬ ವರ್ತಮಾನವಿತ್ತು. ನಾನು ಭಾರತದಿಂದ ಹೊರಟಾಗ ಅವಳ ಪ್ರಯಾಣದ ಮಾತೇ ಇರಲಿಲ್ಲ. ಅವಳಾಗಲಿ

ರಾಜುವಾಗಲಿ ಅದರ ವಿಷಯ ಕಾಗದವನ್ನೂ ಬರೆದಿರಲಿಲ್ಲ. ಆದ್ದರಿಂದ ಅವಳ ತಂದೆತಾಯಿಯರ ಆರೋಗ್ಯದ ವಿಷಯದಲ್ಲಿ ಚಿಂತೆಯಾಗಿ ಅವರಿಗೆ ಫೋನ್ ಮಾಡಿದೆವು. ಗ್ರಾಮಡೆಟ "ನಾನೇ ನಿಮ್ಮನ್ನು ಕರೆಯುವುದರಲ್ಲಿದ್ದೆ. ನ್ಯಾನ್ಸಿಯನ್ನು ಬರಹೇಳಿದ್ದೇನೆ. ಅವಳು, ಆಶಾ, ಇಬ್ಬರೂ 16ನೇ ತಾರೀಖು ಬರುತ್ತಾರೆ. ನೀವೂ ಓಹೇರ್‌ಗೆ ಬನ್ನಿ. ಅಲ್ಲಿಂದ ಎಲ್ಲರೂ ಒಟ್ಟಿಗೆ ಲಿಂಕನ್‌ಗೆ ಹೋಗೋಣ" ಎಂದರು. ಅವರ ದನಿಯಲ್ಲಿ ಕಳವಳ ಆತಂಕಗಳೇನೂ ಇರಲಿಲ್ಲವಾದ್ದರಿಂದ ಎಲ್ಲ ಕ್ಷೇಮವೆಂದು ಖಚಿತವಾಯಿತು. ನಾವು ಓಹೇರ್‌ಗೆ ಹೋಗಲಿಲ್ಲ. ಮೆಕ್‌ಮಿಲನ್ ದಂಪತಿಗಳು ದೂರದಿಂದ ಬಂದ ಮಗಳು ಮೊಮ್ಮಗಳೊಡನೆ ತಾವು ತಾವೇ ಸ್ವಲ್ಪ ಕಾಲ ಕಳೆಯಲಿ, ಆನಂದಪಡಲಿ ಎನ್ನಿಸಿತು. ಎರಡು ದಿನ ಬಿಟ್ಟುಕೊಂಡು 18ನೇ ತಾರೀಖು ಲಿಂಕನ್‌ಗೆ ಹೋದೆವು.

ಅಲ್ಲಿಗೆ ತಲಪಿದ್ದು ಸಂಜೆಯ ಹೊತ್ತಿಗೆ, ನ್ಯಾನ್ಸಿಯ ತಮ್ಮ ಫ್ರೆಡರಿಕ್, ಅವನ ಹೆಂಡತಿ ಬಾರ್ಬರ, ಮಗಳು ಏಪ್ರಿಲ್, ಎಲ್ಲರೂ ಸ್ಪ್ರಿಂಗ್‌ಫೀಲ್ಡ್‌ನಿಂದ ಬಂದಿದ್ದರು; ಪೆಯ್ಸನ್‌ನಿಂದ ನ್ಯಾನ್ಸಿಯ ತಂಗಿ ಲಿಂಡಳೂ ಬಂದಿದ್ದಳು. ರಾತ್ರಿ ಎಂಟೊಂಬತ್ತು ಘಂಟೆಯವರೆಗೂ ಮಾತುಕಥೆ, ಯೋಗಕ್ಷೇಮ. ಮಾರನೆಯ ದಿನ ಅಲ್ಲಿ ಏನೋ ಒಂದು ಫೇರ್ (fair)—ಸ್ವಲ್ಪಮಟ್ಟಿಗೆ ನಮ್ಮ ತೇರು ಜಾತ್ರೆಗಳ ಸಂದರ್ಭದಲ್ಲಿ ನಡೆಯುವ ಸಂತೆಯ ವಾತಾವರಣ, ತೇರನ್ನೆಳೆಯುವ ಸಂಭ್ರಮ ವಿನಾ. ನಮಗೆ ಅದರಲ್ಲಿ ಆಸಕ್ತಿಯಿಲ್ಲದಿದ್ದರೂ ಗ್ರಾಮಡೆಟರ ಹುಕುಮನ್ನು ಪಾಲಿಸುವುದಕ್ಕಾಗಿ ಅದನ್ನು ಒಂದು ಸುತ್ತುಹಾಕಿ, ಆಶಾ ಸುನೀಲರ ಹೆಸರು ಹೇಳಿಕೊಂಡು ಐಸ್‌ಕ್ರೀಮ್ ಪಾಪ್‌ಕಾರ್ನ್‌ಗಳನ್ನು ತಿಂದು ಮನೆಗೆ ಹಿಂದಿರುಗಿದೆವು.

ಆ ವೇಳೆಗೆ ನ್ಯಾನ್ಸಿಯ ಬಂಧು—ಬಂಧುವಿಗಿಂತ ಹೆಚ್ಚಾಗಿ ಆಪ್ತ ಸ್ನೇಹಿತೆ, ಅವಳನ್ನು ಎಮಿಲಿ ಎಂದು ಕರೆಯೋಣ—ಅವಳನ್ನು ನೋಡಲು ಬಂದಿದ್ದಳು. ಎಮಿಲಿಯನ್ನು ನಾನು 1973ರಲ್ಲೇ ನೋಡಿದ್ದೆ. ಆಕೆ ಇತರರೊಡನೆ ಆಡಿದ ಮಾತುಗಳನ್ನು ಕೇಳಿ 'ಈಕೆ ಬಹಳ ಒಳ್ಳೆಯ ಸ್ವಭಾವದವಳು' ಎಂದುಕೊಂಡಿದ್ದೆ. ನಾನೇ ಸ್ವತಃ ಅವಳೊಡನೆ ಹೆಚ್ಚು ಮಾತಾಡಿರಲಿಲ್ಲ; ಅಲ್ಲದೆ ಆಗ ನನ್ನ ಗಮನವೆಲ್ಲ ನ್ಯಾನ್ಸಿಯ ತಂದೆತಾಯಿ ತಮ್ಮ ತಂಗಿ ಚಿಕ್ಕಮ್ಮಂದಿರಿಗೇ ಮೀಸಲಾಗಿತ್ತು. ಆದ್ದರಿಂದ ಎಮಿಲಿಯ ನೆನಪು ಉಳಿದಿರಲಿಲ್ಲ. ಅವಳು ಈಗ ಬಂದು ಹತ್ತಿರ ಕುಳಿತು "ನಾನು ಎಮಿಲಿ, ನೆನಪಿದೆಯೆ?" ಎಂದಾಗ ನೆನಪೇನೋ ಮರಳಿ ಬಂತು. ಆದರೆ ಅವಳಲ್ಲಿ ಬಹಳ ಬದಲಾವಣೆ

ಯಾಗಿದ್ದಂತೆ ತೋರಿತು. ಅವಳು ಬಹಳ ಚೆಲುವೆ. ಸರಳವಾಗಿ ಮಾತಾಡು ತ್ತಾಳೆ. ಹಾಸ್ಯಪ್ರವೃತ್ತಿಯ ಜೊತೆಗೆ ಆಲೋಚನಾಪರತೆ ಹದವಾಗಿ ಬೆಳೆದಿವೆ —ಇದು ನೆನಪಿನ ಚಿತ್ರ. ಆದರೆ ಕಳೆದ ಮೂರು ವರ್ಷಗಳು ಅವಳ ಪಾಲಿಗೆ ಕಾಲು ಶತಮಾನವಾಗಿ ಪರಿಣಮಿಸಿದಂತೆ ತೋರಿತು. ಮುಖ ಸುಕ್ಕುಗಟ್ಟಿ ದಂತಿತ್ತು, ಈಗ ಅವಳು ತಾಯಿಯಾಗಿದ್ದಾಳೆ. ಅವಳ ಮಗುವನ್ನಾಡಿಸುತ್ತಿದ್ದ ನ್ಯಾನ್ಸಿ "ನೋಡಿ, ನಮ್ಮ ಎಮಿಲಿಯ ಮಗ, ಚಾರ್ಲಿ" ಎಂದಾಗ ನಾನು "ಬಲು ಮುದ್ದಾಗಿವೆ ನಿಮ್ಮ ಮಗು!" ಎಂದು ಹೊಗಳಿದೆ. ಎಮಿಲಿಯ ಮುಖದ ಮೇಲೆ ನಗೆಯ ನೆರಳು ಸುಳಿದುಹೋದಂತಾಯಿತು—ಪ್ರಯತ್ನ ಪಟ್ಟು ತಂದುಕೊಂಡ ವಿಷಾದದ ನಗೆ. ನನಗೆ ಏನು ಮಾತಾಡಬೇಕೋ ತೋರಲಿಲ್ಲ. ಏನೋ ಸಂಕಟದಲ್ಲಿದ್ದಾಳೆ, ಇದೇಕೆ ಹೀಗೆ ಇಳಿದುಹೋಗಿದ್ದೀರಿ ಎಂದು ಕೇಳಬೇಕು, ಏನಾದರೂ ಸಮಾಧಾನದ ಮಾತು ಹೇಳಬೇಕು, ಎನ್ನಿಸಿತು. ಆದರೆ ಇವರ ಸಮಾಜದಲ್ಲಿ ಅದೆಲ್ಲ ಸಲ್ಲದು. "ಹಿಂದೆ ಕಂಡದ್ದಕ್ಕಿಂತ ಈಗ ಎಷ್ಟೋ ಪಟ್ಟು ಚೆಲುವಾಗಿದ್ದೀರಿ" ಎಂದು ಹೊಗಳಬಹುದೇ ಹೊರತು ಆಕೆ ಕೃಶವಾಗಿರುವುದನ್ನೂ ಸಂಕಟದಲ್ಲಿರುವುದನ್ನೂ ಗಮನಿಸಬಾರದು. ಅದನ್ನು ಗಮನಿಸುವುದು ಸರಿಯಲ್ಲವೆಂದು ಒಪ್ಪಲೇಬೇಕು, ನನಗೂ ಆಕೆಗೂ ಇದ್ದ ಪರಿಚಯ ಅಲ್ಪವೆಂಬುದನ್ನು ನೆನೆದರೆ. ಎಮಿಲಿ 'ಯಾವಾಗ ಬಂದಿರಿ' ಎಂದು ಲೋಕಾಭಿರಾಮವಾಗಿ ಒಂದೆರಡು ಪ್ರಶ್ನೆ ಕೇಳಿ ಸುಮ್ಮನೆ ಅನ್ಯ ಮನಸ್ಕಳಾಗಿ ಕುಳಿತಳು.

ಅವಳು ಎದ್ದು ಹೋದಮೇಲೆ ನ್ಯಾನ್ಸಿಯನ್ನು ಕೇಳಿದೆ: "ಇದೇಕೆ ಎಮಿಲಿ ಹೀಗಿದ್ದಾಳೆ? ಹಿಂದೆ ಅಷ್ಟು ಗೆಲುವಾಗಿದ್ದಳು, ಬಾಯಿ ತುಂಬ ಮಾತಾಡುತ್ತಿದ್ದಳು."

"ನಿಮಗೆ ಗೊತ್ತಿಲ್ಲವೇ....ಹೇಗೆ ಗೊತ್ತಾಗಬೇಕು! ಎಮಿಲಿಯ ಮಾತು ಬರುವಂಥ ಸಂದರ್ಭವೇ ಇರಲಿಲ್ಲ. ಅವಳ ಮದುವೆ ಮುರಿದುಹೋಯಿತು. ಹೆನ್ರಿ (ಅವಳ ಗಂಡ) ಮತ್ತೊಬ್ಬಳೊಡನೆ ಪ್ರಣಯ ಬೆಳಸಿದ. ಆ ಪ್ರೇಯಸಿ ಗರ್ಭಿಣಿಯಾದಳು 'ನನಗೆ ಅವಳ ಮೇಲೇ ಹೆಚ್ಚು ಪ್ರೇಮ. ಅವಳನ್ನು ಮದುವೆಯಾಗಬೇಕು, ವಿಚ್ಛೇದಕ್ಕೆ ಒಪ್ಪು' ಎಂದು ಹೆಂಡತಿಯನ್ನು ಕೇಳಿದ, ಎಮಿಲಿಗೆ ಹೆನ್ರಿಯ ಮೇಲಿನ ವ್ಯಾಮೋಹ ಅಳಿದಿಲ್ಲ. ಅಲ್ಲದೆ ಅವನು ತನ್ನ ಮಗು ಚಾರ್ಲಿಯ ತಂದೆ! ಅವನ ವ್ಯಭಿಚಾರವನ್ನೂ ಕ್ಷಮಿಸಿ ದಾಂಪತ್ಯವನ್ನು ಉಳಿಸಿಕೊಳ್ಳಲು ಸಿದ್ಧವಾಗಿದ್ದಳು. ಆದರೆ ಹೆನ್ರಿ ವಿಚ್ಛೇದವಾಗಲೇಬೇಕೆಂದು ಹಟ ಹಿಡಿದ. ಚಾರ್ಲಿಗೆ ಇನ್ನೂ ಎಂಟು ತಿಂಗಳಾಗಿದ್ದಾಗ ವಿಚ್ಛೇದವಾಯಿ

ತಂತೆ. 'ನನ್ನಲ್ಲಿ ಏನೋ ಕೊರತೆಯಿರಬೇಕು. ಇಲ್ಲದಿದ್ದರೆ ಅವನು ಮತ್ತೊಬ್ಬಳನ್ನೇಕೆ ಬಯಸುತ್ತಿದ್ದ!' ಎಂದು ಕೊರಗುತ್ತಿದ್ದಾಳೆ."

ಅಷ್ಟು ಹೊತ್ತಿಗೆ ಮೆಕ್‌ಮಿಲನ್ ಬಂದರು. ಮಾತು ಎಮಿಲಿಯನ್ನು ಕುರಿತದ್ದೆಂದು ತಿಳಿದಾಗ ಅವರ ಮುಖ ಗಂಭೀರವಾಯಿತು. ನಿಟ್ಟುಸಿರುಬಿಟ್ಟು ಹೇಳಿದರು: "ನೋಡಿ, ಮಿ. ರಾವ್, ನಮ್ಮ ಎಮಿಲಿಯ ಸಂಸಾರದಲ್ಲಿ ಹೀಗಾಗುತ್ತೆ ಅಂತ ನಾನು ಕನಸಿನಲ್ಲೂ ಎಣಿಸಿರಲಿಲ್ಲ. ಪಾಪ, ಸಂಕಟದಲ್ಲಿ ಸೊರಗುತ್ತಿದೆ, ಆ ಹುಡುಗಿ. ತಕರಾರು ಮಾಡದೆ ಮಗುವನ್ನೇನೊ ಅವಳ ವಶಕ್ಕೇ ಬಿಟ್ಟಿದ್ದಾನೆ, ಆ ಕೇಡಿಗ."

ಎಮಿಲಿಯ ಮನೆತನದವರೂ ಮೆಕ್‌ಮಿಲನ್ ದಂಪತಿಗಳಂತೆಯೇ ಸಂಪ್ರದಾಯ ನಿಷ್ಠರು; ಆಧುನಿಕ ಪಾಶ್ಚಾತ್ಯನಾಗರಿಕತೆಯ ನವನವನೀತವನ್ನೇ ಸೇವಿಸಿ ಬೆಳೆದ ಶಿಷ್ಟಾತಿ ಶಿಷ್ಟರಲ್ಲ; 'ಸೊಫಿಸ್ಟಿಕೇಟೆಡ್' (sophisticated) ಜನರಲ್ಲ. ಎಮಿಲಿ ತಮ್ಮ ಮನೆತನದವಳೇ ಎನ್ನುವಂತೆ ಮೆಕ್‌ಮಿಲನ್ ಅನುಕಂಪದಿಂದಲೂ ಆತ್ಮೀಯತೆಯಿಂದಲೂ ಮಾತಾಡಿದ್ದನ್ನು ನಾನು ಬಹಳ ಮೆಚ್ಚಿಕೊಂಡೆ.

ನ್ಯಾನ್ಸಿ ಅವಳ ಕಥೆಯನ್ನೆಲ್ಲ ವಿವರವಾಗಿ ಹೇಳಿದಳು. ಎಮಿಲಿ ಹೆನ್ರಿ ಇಬ್ಬರೂ ಒಂದೇ ಊರಿನಲ್ಲಿ, ಆದರೆ ಬೇರೆ ಬೇರೆ ಶಾಲೆಗಳಲ್ಲಿ ಅಧ್ಯಾಪಕವೃತ್ತಿ ನಡೆಸುತ್ತಿದ್ದಾರೆ. ಹೆನ್ರಿ ತನ್ನ ಶಾಲೆಯ ಮುಖ್ಯೋಪಾಧ್ಯಾಯ; ಅವನು ಪ್ರಣಯ ಬೆಳಸಿದ್ದು ತನ್ನ ಶಿಷ್ಯೆಯೊಬ್ಬಳೊಡನೆ. ಅವಳು ಗರ್ಭಿಣಿಯೆಂದು ತಿಳಿದಾಗ ಹೆನ್ರಿ "ಮದುವೆಗೆ ಪ್ರೀತಿಯೇ ಆಧಾರ. ಈಗ ನಾನು ಅವಳನ್ನು ಪ್ರೀತಿಸುತ್ತಿದ್ದೇನೆ. ಅಂದಮೇಲೆ ನನ್ನ–ನಿನ್ನ ಮದುವೆ ಮುರಿದಂತೆಯೇ, ಮದುಮುರಿವು (ವಿವಾಹ ವಿಚ್ಛೇದ) ವಿಧ್ಯುಕ್ತವಾಗಿಯೂ ಆಗಿ ಹೋಗಲಿ" ಎಂದು ಹೆಂಡತಿಯನ್ನು ಪೀಡಿಸಿ ಒಪ್ಪಿಗೆ ಪಡೆದ. ಈ ಸಮಾಜದಲ್ಲಿ ಗಂಡ ಹೆಂಡತಿಯರಿಗೆ 'ಸಮಾನ ಹಕ್ಕು' (equal rights) ಇವೆಯಷ್ಟೆ. ಆದರೆ ಇಬ್ಬರಲ್ಲಿ ಒಬ್ಬರು ವಿಚ್ಛೇದ ಬೇಕು ಎಂದಾಗ ಇನ್ನೊಬ್ಬರು ಬೇಡ ಎಂದರೆ 'ಸಮಾನ ಹಕ್ಕು' ಪ್ರಯೋಜನಕ್ಕೆ ಬರುವುದಿಲ್ಲ. ಒಂದು ವೇಳೆ ಕಾನೂನಿನ ದೃಷ್ಟಿಯಿಂದ ಆ ಟಂಕಗಳನ್ನೊಡ್ಡಬಹುದಾದರೂ ಸಂಸಾರದ ಒಡಕನ್ನು ಬೆಸೆದಂತಾಗುವುದಿಲ್ಲ. ಈಗ ಎಮಿಲಿ ಆರ್ಥಿಕ ದೃಷ್ಟಿಯಿಂದ ಸ್ವತಂತ್ರಳಾಗಿದ್ದಾಳೆ, ಮನಸ್ಸಿಗೆ ಮಾತ್ರ ನೆಮ್ಮದಿಯಿಲ್ಲ. ಆ ಊರನ್ನೇ ಬಿಟ್ಟು ಮತ್ತೆಲ್ಲಿಗಾದರೂ ಹೋಗುವ ಯೋಚನೆಯಲ್ಲಿದ್ದಾಳೆ. ಆದರೆ ಬೇರೆ ಕಡೆ ಕೆಲಸ ಸಿಕ್ಕುವುದು ಸುಲಭವಲ್ಲ.

ಮೆಕ್‌ಮಿಲನ್ ನ್ಯಾನ್ಸಿ ಮೊದಲಾದವರು (ಎಮಿಲಿ ಇರಲಿಲ್ಲ) ಈ ವಿಷಯ ಮಾತಾಡುತ್ತಿದ್ದಾಗ ನಾನೂ ಸ್ವಲ್ಪ ಭಾಗವಹಿಸಿದೆ—ಚರ್ಚೆ ವೈಯಕ್ತಿಕ ಮಟ್ಟದಿಂದ ತಾತ್ವಿಕ ಮಟ್ಟಕ್ಕೆ ಏರಿದ್ದರಿಂದ ಅದು ಸಾಧ್ಯ ವಾಯಿತು. ಮೆಕ್‌ಮಿಲನ್ "ನಮ್ಮ ಎಮಿಲಿಯ ಸಂಸಾರದಲ್ಲಿ ಹೀಗಾಗುತ್ತದೆ ಎಂದು ಕನಸಿನಲ್ಲೂ ಎಣಿಸಿರಲಿಲ್ಲ" ಎಂದಾಗ ನನಗೆ "ಇಲ್ಲಿಯ ವಾತಾವರಣ ದಲ್ಲಿ ಇದು ನಿರೀಕ್ಷಿಸಬೇಕಾದದ್ದೇ. ಯಾವುದೊಂದು ಸಂಸಾರವೂ ತನಗೆ ಅಪಾಯವಿಲ್ಲ ಎಂದು ಧೈರ್ಯವಾಗಿರಲಾಗುವುದಿಲ್ಲ" ಎಂದು ತೋರಿತು. ಅದನ್ನು ಬಾಯಿಬಿಟ್ಟು ಹೇಳಲಿಲ್ಲ. ಇಲ್ಲಿಯ ಜನ (ಎಲ್ಲರೂ ಅಲ್ಲ) ಸಾಮಾನ್ಯ ವಾಗಿ ವ್ಯಕ್ತಿಸ್ವಾತಂತ್ರ್ಯಕ್ಕೆ ಪ್ರಾಧಾನ್ಯಕೊಡುವ ತಮ್ಮ ಸಮಾಜಪರಿಸ್ಥಿತಿಗೂ ಲೈಂಗಿಕ ಸ್ವಾಚ್ಛಂದ್ಯಕ್ಕೂ ಇರುವ ಸಂಬಂಧವನ್ನು ಕಣ್ಣುಬಿಟ್ಟು ನೋಡ ಲೊಲ್ಲರು. ನಮ್ಮ ಜನಕ್ಕೆ ಶಿವಪಾರಮ್ಯ ವಿಷ್ಣುಪಾರಮ್ಯ ಇರುವ ಹಾಗೆ, ಈ ಜನರಲ್ಲಿ ವ್ಯಕ್ತಿಪಾರಮ್ಯ 'This is the age of the individual' (ಇದು ವ್ಯಕ್ತಿಯ ಯುಗ) ಎಂಬ ಮಾತನ್ನು ಇಲ್ಲಿ ಅನೇಕ ವೇಳೆ ಕೇಳಿದ್ದೇನೆ. "ವ್ಯಕ್ತಿ ಪಾರಮ್ಯವನ್ನು ಎತ್ತಿಹಿಡಿಯುವುದರಲ್ಲಿ ಅಪಾಯವುಂಟು. ವ್ಯಕ್ತಿತ್ವದ ವಿಕಾಸ ವಾಗುವುದು ಸಮಾಜದಲ್ಲಿ. ಸಮಾಜ ಕಲ್ಯಾಣವನ್ನು ಸಾಧಿಸುವುದಕ್ಕೂ ಸಮಾಜಸಂಸ್ಕೃತಿಯ ಸಂಪತ್ತನ್ನು ಹೆಚ್ಚಿಸುವುದಕ್ಕೂ ಎಷ್ಟು ವ್ಯಕ್ತಿ ಸ್ವಾತಂತ್ರ್ಯ ಬೇಕೋ ಅಷ್ಟನ್ನು ಮಾತ್ರ ಎತ್ತಿ ಹಿಡಿಯಬಹುದು" ಎಂದು ವಾದಿಸಿದರೆ ಮರ್ಯಾದೆಗಾಗಿ 'ಹೌದು ಹೌದು' ಎನ್ನುತ್ತಾರೆ. ಆದರೂ ಅವರ ಒಲವು ಇರುವುದೆಲ್ಲ ವ್ಯಕ್ತಿಪಾರಮ್ಯದ ಕಡೆಗೇ. ಮೆಕ್‌ಮಿಲನ್‌ರು ಕೂಡ ಬಹುಮಟ್ಟಿಗೆ ವ್ಯಕ್ತಿಪಾರಮ್ಯವಾದಿಗಳೇ.

ನನ್ನ ಸ್ನೇಹಿತರಲ್ಲಿ ಕೆಲವರು—ಅಮೆರಿಕದಲ್ಲಿ ಒಂದೆರಡು ವರ್ಷ ಇದ್ದು ಬಂದವರು—"ಇವೆಲ್ಲ (ಅಂದರೆ ವ್ಯಕ್ತಿಸ್ವಾತಂತ್ರ್ಯದ ಕೂಗು, ಕುಡಿತ, ಲೈಂಗಿಕ ಅನಾಚಾರ, ಮದುಮುರಿವಿನ ಸಮಸ್ಯೆ—ಇತ್ಯಾದಿಗಳು) ಒಳನಾಡಿನ ಜನರನ್ನು ಅಷ್ಟಾಗಿ ಕಾಡುವುದಿಲ್ಲ. ಅವುಗಳ ಹಾವಳಿ ಹೆಚ್ಚಾಗಿರುವುದು ದೊಡ್ಡ ನಗರ ಗಳಲ್ಲಿ ಮಾತ್ರ. ಅಮೆರಿಕದ ವಿಷಯ ನಮಗೆ ತಿಳಿಯುವುದು ಬಹುಮಟ್ಟಿಗೆ ಪತ್ರಿಕೆಗಳ ಮತ್ತು ಪುಸ್ತಕಗಳ ಮೂಲಕ, ಅವು ಪಟ್ಟಣಗಳ ಅತಿನಾಗರಿಕ ಸಮಾಜದ ಮೇಲ್ಪದರವನ್ನು ಚಿತ್ರಿಸುತ್ತವೆ" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ನಾನು ಅಮೆರಿಕದಲ್ಲಿ ದೀರ್ಘಕಾಲ ಇದ್ದವನಲ್ಲ. ಆದರೆ ಇದ್ದಷ್ಟು ಕಾಲವನ್ನು ಕಳೆದದ್ದು ಸಣ್ಣ ಊರುಗಳಲ್ಲಿ; ದೊಡ್ಡ ನಗರಗಳಲ್ಲಲ್ಲ; ವಿಶ್ವವಿದ್ಯಾಲಯಗಳ ವಾತಾವರಣದಲ್ಲೂ ಅಲ್ಲ—ಅಲ್ಲಿ ಕುಡಿತ, ಅಮಲು

ಮದ್ದುಗಳ ಸೇವನೆ, ಲೈಂಗಿಕ ಅನಾಚಾರ ಅತ್ಯಾಚಾರಗಳು, ಇವೆಲ್ಲ ಭಯಂಕರ ಪ್ರಮಾಣದಲ್ಲಿವೆಯೆಂದು ಕೇಳಿದ್ದೇನೆ. ನನ್ನ ಅಲ್ಪಾನುಭವದ ಆಧಾರದ ಮೇಲೆ ಹಿಂದೆ ಹೇಳಿದ ನನ್ನ ಮಿತ್ರರ ಅಭಿಪ್ರಾಯವನ್ನು ವಿರೋಧಿಸುವುದು ಸಾಹಸದ ಕೆಲಸ—ಆದರೂ ಅದಕ್ಕೆ ಕೈಹಾಕುತ್ತೇನೆ.

ಒಳನಾಡಿನಲ್ಲೂ ಸಣ್ಣ ಊರುಗಳಲ್ಲೂ ಇರುವ ಅಮೆರಿಕನ್ನರೇ ಈ ಅಭಿಪ್ರಾಯವನ್ನು ಒಪ್ಪುವಂತೆ ತೋರಲಿಲ್ಲ. ನೈಲ್ಸ್‌ನಲ್ಲಿ ನನಗೆ ಅಲ್ಪಸ್ವಲ್ಪ ಪರಿಚಿತಳಾಗಿದ್ದ ಒಬ್ಬಾಕೆ (ಬಾರ್ಬರ?) "ಅಮೆರಿಕದ ಜನ ನಿಂತಲ್ಲಿ ನಿಲ್ಲುವುದಿಲ್ಲ. ಪಟ್ಟಣದಿಂದ ಹಳ್ಳಿಗೆ ಹಳ್ಳಿಯಿಂದ ಪಟ್ಟಣಕ್ಕೆ, ಹಳ್ಳಿಯಿಂದ ಹಳ್ಳಿಗೆ ಸುತ್ತುತ್ತಲೇ ಇರುತ್ತಾರೆ. ಇಲ್ಲಿ ಸಂಚಾರಸೌಲಭ್ಯ ಹೆಚ್ಚು. ಆದ್ದರಿಂದ ಪಟ್ಟಣಗಳಿಗೂ ಹಳ್ಳಿಗಾಡಿಗೂ ವ್ಯತ್ಯಾಸವಿಲ್ಲವೇ ಇಲ್ಲ ಎನ್ನಲಾಗದಿದ್ದರೂ ಅದು ನಾವು ಭಾವಿಸುವಷ್ಟು ಹೆಚ್ಚಿನ ಪ್ರಮಾಣದ್ದಲ್ಲ" ಎಂದು ಹೇಳಿದ್ದು ನೆನಪಿದೆ. ನನ್ನ ಯೆಹೂದ್ಯ ಮಿತ್ರ ಸ್ಕಿನರರೂ ಕೋಡಿಯಲ್ಲಿ ನನಗೆ ಸಿಕ್ಕಿದ ಸಿಂಥಿಮಹರ್ನೀಯರೂ ಅದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ನ್ಯಾನ್ಸಿ ತಾನು ಹುಡುಗಿಯಾಗಿದ್ದಾಗಲೇ ಲಿಂಕನ್‌ನ (ಲಿಂಕನ್ ಸಣ್ಣ ಊರು) ಸುತ್ತ ಮುತ್ತ ವಿವಾಹವಿಚ್ಛೇದ–ಅದೂ ಅವಳ ತಂದೆತಾಯಿಯರ ತಲೆಮಾರಿನವರಲ್ಲಿ–ಸರ್ವಸಾಧಾರಣವಾಗಿತ್ತೆಂದು ಹೇಳುತ್ತಾಳೆ. ಒಟ್ಟಿಗೆ ಕಾಣಿಸಿಕೊಳ್ಳುತ್ತಿದ್ದ ಗಂಡ ಹೆಂಡಿರು ಈಗ ಒಟ್ಟಿಗೆ ಇಲ್ಲವಲ್ಲ, ಅದೇಕೆ, ಎಂದು ಅವಳು ಆಶ್ಚರ್ಯಪಡುತ್ತಿದ್ದಳಂತೆ. ನ್ಯಾನ್ಸಿಯ ಮನೆತನಕ್ಕೆ ಹಿಂದಿನ ಕಾಲದಿಂದಲೂ ಆಪ್ತರಾದವರೊಬ್ಬರು ವಿಸ್ಕಾನ್ಸಿನ್ ರಾಜ್ಯದ ಸಣ್ಣ ಊರೊಂದರಲ್ಲಿ ನೆಲಸಿದ್ದಾರೆ. ಅವರಿಗೆ ಹನ್ನೆರಡು ಮಕ್ಕಳು. ಅವರಲ್ಲಿ ಏಳು ಜನಕ್ಕೆ ವಿವಾಹವಿಚ್ಛೇದವಾಗಿದೆ: ಐದಾರು ಜನ ಮದ್ಯಪಿಶಾಚಿಗೆ ತುತ್ತಾಗಿ ಸಂಕಟಪಡುತ್ತಿದ್ದಾರೆ. ಮದ್ಯದ ಚಟಕ್ಕೂ ಮದುಮುರಿವಿಗೂ ಕಾರ್ಯಕಾರಣ ಸಂಬಂಧವಿರುವುದೂ ಉಂಟು. ಕಾರಣವೇನಾದರೂ ಆಗಲಿ ಮದುಮುರಿವಿನ ಸಂಖ್ಯೆ ವಿಪದಂತೆ ಏರುತ್ತಿದೆಯಂತೆ. ಸಂಸಾರದಲ್ಲಿ ಗಂಡಹೆಂಡಿರಿಗಾಗಲಿ ಮಕ್ಕಳಿಗಾಗಲಿ 'feeling of stability' (ಭದ್ರತೆಯಿದೆ ಎಂಬ ಭಾವನೆ) ಇಲ್ಲವೇ ಇಲ್ಲ ಎಂಬ ಮಾತು ಮತ್ತೆ ಮತ್ತೆ ಕಿವಿಗೆ ಬಿದ್ದಿದೆ. ಈ ಭಾವನೆ ಸ್ತ್ರೀಯರಲ್ಲೇ ಹೆಚ್ಚಾಗಿರುವಂತೆ ತೋರುತ್ತದೆ.

ಇಲ್ಲಿಯ ಸಾಮಾಜಿಕ ವಾತಾವರಣದಿಂದಾಗಿ—ಡೇಟಿಂಗ್ ಪದ್ಧತಿ; ಗಂಡಸರು ಹೆಂಗಸರು (ವಿವಾಹ ಸಂಬಂಧವುಳ್ಳವರಾಗಲಿ ಇಲ್ಲದವರಾಗಲಿ) ತಾವು ತಾವೇ ಎಲ್ಲೆಂದರೆ ಅಲ್ಲಿಗೆ ಯಾವಾಗಲೆಂದರೆ ಆವಾಗ ಹೋಗುವುದು,

ಒಟ್ಟಿಗೆ ಇರುವುದು ; ಜೊತೆಯಾಗಿ ನರ್ತಿಸುವುದು; ಯುವಕ ಯುವತಿಯರು ಡಾರ್ಮಿಟರಿಗಳಲ್ಲಿ ಒಟ್ಟಿಗೆ ಇರುವುದು (ಈಚೆಗೆ ಕೆಲವು ವಿಶ್ವವಿದ್ಯಾಲಯಗಳವರು ಇದಕ್ಕೆ ಪರವಾನಗಿ ಕೊಟ್ಟಿದ್ದಾರೆಂದೋ ಕೊಡುವ ಯೋಚನೆ ಮಾಡಿದ್ದಾರೆಂದೋ ಕೇಳಿದ್ದೇನೆ)—ಇವೆಲ್ಲದರಿಂದಾಗಿ ಲೈಂಗಿಕ ಸ್ವಾಚ್ಛಂದ್ಯಕ್ಕೆ ಹೆಚ್ಚು ಅವಕಾಶ ಸಿಕ್ಕಿದಂತಾಗುತ್ತದೆ. ಇಂದ್ರನು ಋಷಿಗಳ ತಪಸ್ಸು ಕೆಡಿಸುವುದಕ್ಕೆ ಅಪ್ಸರೆಯರ ಜೊತೆಗೆ ವಸಂತಮಲಯಾನಿಲರನ್ನು ಕಳಿಸುತ್ತಿದ್ದನೆಂದು ಪುರಾಣಗಳು ಹೇಳುತ್ತವೆ. ಹಾಗೇ ಇಲ್ಲಿ ಮೇಲೆ ಹೇಳಿದ ಸೌಲಭ್ಯಗಳ ಜೊತೆಗೆ ಮಧ್ಯ ಮೋಟಾರುಗಳಿವೆ. ಇಲ್ಲಿಯ ಜನ ತಪಸ್ಸು ಮಾಡುವ ಋಷಿಗಳೂ ಅಲ್ಲ !

"ಇಂಥ ಸ್ವತಂತ್ರ ವಾತಾವರಣವಿದ್ದರೆ ಲೈಂಗಿಕ ಅತ್ಯಾಚಾರ ನಡೆಯುವುದಿಲ್ಲ—ಅಡಚಣೆಯಿಲ್ಲದ್ದರಿಂದ ಅತ್ಯಾಚಾರ ಅನಾವಶ್ಯಕ" ಎಂಬ ವಾದವನ್ನು ಕೆಲವು ವರ್ಷಗಳ ಹಿಂದೆಯೇ ಕೇಳಿದ್ದೆ. ವಾಸ್ತವವಾಗಿ ಲೈಂಗಿಕ ಅತ್ಯಾಚಾರ ಕಡಮೆಯಾಗುವುದಂತಿರಲಿ, ಶೇಕಡ 190ರಷ್ಟು ಹೆಚ್ಚಿದೆಯಂತೆ; ಇದು 1975ರಲ್ಲಿ ಯಾವುದೋ ಪತ್ರಿಕೆಯಲ್ಲಿ ನನ್ನ ಕಣ್ಣಿಗೆ ಬಿದ್ದದ್ದು—ಅಂಕಿ ಅಂಶಗಳಿಗೆ ಆಧಾರವನ್ನೇನಾದರೂ ಕೊಟ್ಟಿದ್ದರೋ ಇಲ್ಲವೋ ನೆನಪಿಲ್ಲ.

ಲೈಂಗಿಕ ಸುಖಕ್ಕೆ ಮದುವೆಯ ಅವಶ್ಯಕತೆಯಿಲ್ಲ; ಅದಕ್ಕೂ ನೀತಿಗೂ ಸಂಬಂಧವಿಲ್ಲ ಎಂದು ವಾದಿಸುವವರೂ ಇದ್ದಾರಷ್ಟೆ. "ಪದೇ ಪದೇ ಮದು ಮುರಿವು ಮಾಡಿಕೊಂಡು ಮತ್ತೆ ಮದುವೆಯಾಗುವುದೆಂದರೆ ನಿಜವಾಗಿ ಕಾನೂನಿದ ಮುದ್ರೆ ಒತ್ತಿಸಿಕೊಂಡ ಸ್ವೈರವೃತ್ತಿ. ಗಂಡಹೆಂಡಿರು ದೀರ್ಘಕಾಲ ಒಟ್ಟಿಗೆ ಇದ್ದರೆ, ಸುಖದುಃಖಗಳನ್ನು ಒಟ್ಟಿಗೆ ಅನುಭವಿಸಿದರೆ, ಒಬ್ಬರನ್ನೊಬ್ಬರು ಚೆನ್ನಾಗಿ ಅರಿತುಕೊಳ್ಳುವುದು ಸಾಧ್ಯವಾಗುತ್ತದೆ; ಪ್ರೇಮಪರಿಣತವಾಗುತ್ತದೆ. ಅಂಥ ಪ್ರೇಮವೇ ನಿಜವಾದ ಪ್ರೇಮ" ಎಂದು ಮುಂತಾಗಿ ವಾದಿಸಿದರೆ ಸ್ವಾತಂತ್ರ್ಯ ಪಂಥದವರು ಅವನ್ನು ರೊಮ್ಯಾಂಟಿಕ್ ನಾನ್ಸೆನ್ಸ್ (romantic nonsense) ಎಂದು ತಳ್ಳಿಹಾಕಿಯಾರು. ಒಬ್ಬ ಯುವತಿ ತನ್ನ ತಾಯಿಯನ್ನೇ ಕೇಳಿದಳಂತೆ : "ಒಬ್ಬನನ್ನೇ ಕಟ್ಟಿಕೊಂಡಿರುವ ಬದಲು ಬೇರೆ ಬೇರೆ ಗಂಡಸರೊಡನೆ ಸಂಬಂಧವಿಟ್ಟುಕೊಳ್ಳಬಾರದೇಕೆ ? ಈಗ ನನಗೆ ಒಬ್ಬ ಇಷ್ಟನಾಗಿದ್ದಾನೆ. ಮುಂದೆ ಇನ್ನೊಬ್ಬ ಇಷ್ಟನಾಗಬಹುದು."

ಈ ಪ್ರಶ್ನೆಯ ಜೊತೆಗೇ ಅವಳ ತಾಯಿ ಕೊಟ್ಟ ಉತ್ತರವೂ ವರದಿಯಾಗಿತ್ತು : "ಬದಲಾವಣೆಯಾಗದೆ ಸ್ಥಿರವಾಗಿರುವ ಅಂಶವೊಂದು ನಮ್ಮ ಬದುಕಿನಲ್ಲಿರಬೇಕು. ಇನ್ನೊಬ್ಬರ ಸೌಖ್ಯಕ್ಕೂ ನಾವು ಜವಾಬ್ದಾರಿ ವಹಿಸಿ

ಕೊಳ್ಳಬೇಕು.” ನನಗೆ ಈ ಉತ್ತರ ಕೊಟ್ಟಷ್ಟೇ ಸಂತೋಷವನ್ನು ಮಹಿಳೆಯೊಬ್ಬಳು ಬರೆದ ಮತ್ತೊಂದು ಲೇಖನವೂ ಕೊಟ್ಟಿತು : “ಹೆಂಗಸು ದಾಂಪತ್ಯ ಜೀವನದಲ್ಲಿ ಸುಖವಾಗಿರಬಲ್ಲಳು, ಅದು ಸಾಧ್ಯವಾಗಿರುವಾಗ ಆ ಸುಖವನ್ನು ಅನುಭವಿಸದಿರುವುದು ಮೂರ್ಖತನ. ಮಕ್ಕಳನ್ನು ಮುದ್ದಿಸುವಂತೆ ಗಂಡ ತನ್ನನ್ನು ಮುದ್ದಿಸಲಿ, ಹಾಗಲ್ಲ ಹೀಗೆ ಎಂದು ಬುದ್ಧಿ ಹೇಳಲಿ ಎಂಬ ಬಯಕೆ ನಮ್ಮೆಲ್ಲರಲ್ಲೂ ಇದೆ. ಅದು ನಮಗೆ ಹಿತ. ಹಾಗೆಯೇ ಗಂಡನಿಗೆ ಕೂಡ ತನ್ನ ಹೆಂಡತಿ ತನ್ನಲ್ಲಿ ತಾಯ್ತನಕ್ಕೆ ಸಹಜವಾದ ವಾತ್ಸಲ್ಯ ತೋರಿಸಲಿ ಎಂಬ ಬಯಕೆ ಇರುತ್ತದೆ. ದಾಂಪತ್ಯಜೀವನ ಇದಕ್ಕಿಂತ ಹೆಚ್ಚಿನ ವ್ಯಾಪ್ತಿಯುಳ್ಳದ್ದು, ನಿಜ; ಆದರೆ ಅದು ಇದನ್ನೂ ಒಳಗೊಂಡದ್ದು....ಸಂಭೋಗಕ್ಕಿಂತ ‘ಇವನಿಗೆ (ಇವಳಿಗೆ) ನನ್ನಲ್ಲಿ ಗಾಢವಾದ ಪ್ರೀತಿಯಿದೆ’ ಎಂಬ ವಿಶ್ವಾಸ ಮುಖ್ಯ. ಮದುವೆಯೆಂದರೆ ಲೈಂಗಿಕ ಸುಖದ ವಿನಿಮಯ ಮಾತ್ರವಲ್ಲ....ಲೈಂಗಿಕ ಜೀವನದಲ್ಲಿ ವ್ಯಕ್ತಿವೈವಿಧ್ಯವೂ ಬಾಹುಳ್ಯವೂ ಆದರ್ಶವಾಗಬೇಕೆ ? ಇವೇ ಮುಖ್ಯವಾದರೆ ಅಂತಃಕರಣಕ್ಕೆ, ಪ್ರೀತಿಗೆ, ಸಂಗಾತಿಗಾಗಿ ಮರುಗುವ ಮನಸ್ಸಿಗೆ ಸ್ಥಾನವೆಲ್ಲಿ ! ಅವಕ್ಕೆ ಸ್ಥಾನವಿಲ್ಲದಿದ್ದರೆ ಲೈಂಗಿಕ ಜೀವನ ಕೇವಲ ವೇಶ್ಯಾವ್ಯವಹಾರ !”

ವ್ಯಕ್ತಿಪಾರಮ್ಯದ ನಾಡಿನಲ್ಲಿ ಈ ಬಗೆಯ ಮಾತು ಎಷ್ಟು ಪರಿಣಾಮಕಾರಿಯಾದೀತೋ ಕಾಣೆ. ಸಮ್ಮತಿಸಮಾಜ “ಪ್ರವೃತ್ತಿರೇಷಾ ಭೂತಾನಾಂ. ಆ ಪ್ರವೃತ್ತಿಗೆ ಸಹಜವಾದ ತೃಪ್ತಿ ಯಾವ ಮಟ್ಟದಲ್ಲಿರಬೇಕೆಂಬುದನ್ನು ವ್ಯಕ್ತಿ ನಿರ್ಣಯಿಸಿಕೊಳ್ಳಲಿ” ಎನ್ನುತ್ತದೆ. ನಾವು ನಮ್ಮಲ್ಲಿ ಆಂತರಿಕವಾಗಿ ಸಂಯಮ ಶಕ್ತಿಯನ್ನು ಬೆಳಸಿಕೊಳ್ಳಬೇಕೆಂಬುದು ನಿಜ. ಆದರೆ ಸಮಾಜ ಸ್ವೈರವೃತ್ತಿಗೆ ಅವಕಾಶ ಹೆಚ್ಚದಂತೆ ನೋಡಿಕೊಳ್ಳಬೇಕೆನ್ನುವುದೂ ಸ್ವಾಚ್ಛಂದ್ಯಕ್ಕೆ ವಿರುದ್ಧವಾಗಿ ಜನಾಭಿಪ್ರಾಯವನ್ನು ರೂಪಿಸಬೇಕೆನ್ನುವುದೂ ಅಷ್ಟೇ ನಿಜವಲ್ಲವೆ ?

ನಾನು ಭಾರತಕ್ಕೆ ಮರಳಿ ಬಂದು ಕೆಲವು ತಿಂಗಳಾದ ಮೇಲೆ ನ್ಯಾನ್ಸಿ, ತನ್ನ ಗೆಳತಿ ಮ—ಳಿಂದ ಬಂದ ಪತ್ರವೊಂದನ್ನು ತೋರಿಸಿದಳು. ಅದರಲ್ಲಿ ಪ್ರಕೃತ ವಿಷಯಕ್ಕೆ ಸಂಬಂಧಪಟ್ಟ ವಾಕ್ಯಗಳನ್ನು ಇಲ್ಲಿ ಉದ್ಧರಿಸಿದ್ದೇನೆ : “ಎಮಿಲಿಗೆ ಒದಗಿಬಂದಿರುವ ಸಂಕಟದ ವಿಷಯ ತಿಳಿದು ಬಹಳ ವ್ಯಸನವಾಯಿತು. ಇಂಥ ಅನುಭವ ದಿನದಿನಕ್ಕೂ ಹೆಚ್ಚುತ್ತಿದೆ. ನೀನು ನಂಬುತ್ತಿಯೋ ಇಲ್ಲವೊ—ಇಲ್ಲಿ ನಮ್ಮ ಎಡಬಲದಲ್ಲಿರುವವರು, ನಮ್ಮ ಮನೆಯ ಹಿಂದಿನ ಮನೆಯಲ್ಲಿರುವವರು, ನೆರೆಯವರೆಲ್ಲರಿಗೂ ಕಳೆದ ಆರು ತಿಂಗಳಲ್ಲಿ ವಿವಾಹ ವಿಚ್ಛೇದವಾಗಿದೆ ! ಇದನ್ನು ನೆನೆದರೆ ಹೆದರಿಕೆಯಾಗುತ್ತದೆ (It is rather frightening). ವಿವಾಹ ವಿಚ್ಛೇದದ ವಿಷಯದಲ್ಲಿ ಭಾರತೀಯರ ದೃಷ್ಟಿ

ಯೇನು ? ಅದನ್ನು ಅವರು ತಿರಸ್ಕಾರದಿಂದ ಕಾಣುತ್ತಾರೆಂದು ಓದಿದ ನೆನಪು, ಅದು ನಿಜವೆ ?"

ಎಮಿಲಿಯ ವಿಷಯದಲ್ಲಿ ಇತ್ತೀಚೆಗೆ ಬಂದ ವರ್ತಮಾನವನ್ನೂ ನ್ಯಾನ್ಸಿ ನನಗೆ ತಿಳಿಸಿದ್ದಾಳೆ. ಅವಳ ಗಂಡ ತನ್ನ ಹೊಸ ಹೆಂಡತಿಯನ್ನು ಬಿಟ್ಟುಬಿಟ್ಟಿದ್ದಾನೆ. ವಿಚ್ಛೇದವಾದ ಮೇಲೆ ಮತ್ತೆ ಎಮಿಲಿಯನ್ನೇ ಮದುವೆಯಾಗುವ ಇಚ್ಛೆಯನ್ನು ವ್ಯಕ್ತಪಡಿಸಿದ್ದಾನೆ. ಎಮಿಲಿ 'ಇವನನ್ನು ಹೇಗೆ ನೆಚ್ಚುವುದು' ಎಂದು ಯೋಚನೆ ಮಾಡುತ್ತಿರುವಷ್ಟರಲ್ಲೇ ಆವನು ಮತ್ತೆ ಉದಾಸೀನನಾಗಿದ್ದಾನೆ ! ಎಮಿಲಿಗೆ ಬೇರೆ ಮದುವೆ ಮಾಡಿಕೊಳ್ಳುವ ಯೋಚನೆ ಬಂತು. ಆದರೆ ಅವಳಿಗೆ ಪರಿಚಿತರಾದ ಗಂಡಸರೆಲ್ಲ ಈಗಾಗಲೇ ಒಂದು ಸಲವೋ ಹೆಚ್ಚು ಸಲವೋ ವಿಚ್ಛೇದ ಪಡೆದವರು !

## ಸೆಪ್ಟೆಂಬರ್ 22

ನಿನ್ನೆ ರಾಮು ಪ್ರಾಸಂಗಿಕವಾಗಿ ಅವನ ಆಸ್ಪತ್ರೆಯಲ್ಲಿ ನಡೆದ ವಿಷಯವೊಂದನ್ನು ಬಹಳ ಉತ್ಸಾಹದಿಂದ ತಿಳಿಸಿದ. ಭಾರತೀಯ ಮಹಿಳೆಯೊಬ್ಬಳಿಗೆ ಏನೋ ಒಂದು ವಿಚಿತ್ರ ಖಾಯಿಲೆ ಬಂತು. ಅದರ ವಿವರಗಳು ನನಗೆ ಅರ್ಥವಾಗಲಿಲ್ಲ; ಅದನ್ನು ಇಲ್ಲಿ ಕಾಣಿಸುವುದು ಪ್ರಕೃತವೂ ಅಲ್ಲ. ಒಟ್ಟಿನಲ್ಲಿ ಕಷ್ಟತರವಾದ ಶಸ್ತ್ರಚಿಕಿತ್ಸೆ ಮಾಡಬೇಕಾಗಿತ್ತು. ಅದಕ್ಕೆ ಬೇಕಾದ ಸಾಮಗ್ರಿ ಭಾರತದಲ್ಲಿರಲಿಲ್ಲವೋ ಅಥವಾ ಇದ್ದ ಒಂದೆರಡು ಕಡೆ ಚಿಕಿತ್ಸೆ ಪಡೆಯಲು ಆಕೆಗೆ ಜನಸಹಾಯವಿರಲಿಲ್ಲವೋ—ಅಂತೂ ಭಾರತದಲ್ಲಿ ಚಿಕಿತ್ಸೆ ಸಾಧ್ಯವಿಲ್ಲವೆಂದು ಖಚಿತವಾಗಿತ್ತು. ಆಕೆಗೆ ಬಂಧು (ಅಣ್ಣ ?) ಜೇನ್ಸ್‌ವಿಲ್‌ನ ಹತ್ತಿರದಲ್ಲಿದ್ದರು. ಇವರಿಗೆ ಆಪ್ತರಾದ ಡಾಕ್ಟರರೊಬ್ಬರು "ಆಕೆಯನ್ನು ಇಲ್ಲಿಗೇ ಕರೆಸಿ. ಚಿಕಿತ್ಸೆ ನಡಸುವ ಯೋಚನೆ ಮಾಡೋಣ. ನನ್ನ ಮಟ್ಟಿಗೆ ಹೇಳಬಹುದಾದರೆ, ನನ್ನ ಫೀಜನ್ನು ಬಿಟ್ಟುಕೊಡುತ್ತೇನೆ" ಎಂದು ಸಲಹೆ ಕೊಟ್ಟರು. ಆಸ್ಪತ್ರೆಯ ಇತರ ಡಾಕ್ಟರುಗಳೊಡನೆ ಮಾತಾಡಿದಾಗ ಅವರೆಲ್ಲ—ಔಷಧಿ ಕೊಡುವವರು, ಶಸ್ತ್ರವೈದ್ಯರು, ವೇದನಾಂತಕವನ್ನು ಕೊಡುವವರು, ದಾದಿಯರು, ಎಲ್ಲರೂ ತಮತಮಗೆ ಬರಬೇಕಾದ ಹಣವನ್ನು ಬಿಟ್ಟುಕೊಡಲೊಪ್ಪಿದರು. ವಾರ್ಡ್‌ಗೆ ಕೊಡಬೇಕಾದ ಹಣವನ್ನೂ ಆಸ್ಪತ್ರೆಯವರು ಬಿಟ್ಟುಕೊಟ್ಟರು. ಆಕೆಯ ಚಿಕಿತ್ಸೆಯ ಅವಧಿ ಸುಮಾರು ಎರಡು ತಿಂಗಳು, ಆಗಬೇಕಾಗಿದ್ದ ವೆಚ್ಚ ಸುಮಾರು 25000 ಡಾಲರು. ಆಕೆ ಇಡೀ ಜೀವಮಾನದಲ್ಲಿ ಅಷ್ಟು ಹಣ ಸಂಪಾದಿಸಲಾಗುತ್ತಿರಲಿಲ್ಲ. 'ಹಣವಿಲ್ಲದೆ ಚಿಕಿತ್ಸೆಯಿಲ್ಲ' ಎಂದಿದ್ದರೆ

ಆಕೆಗೆ ಸಾಯುವುದೊಂದೇ ದಾರಿ!

ಅಮೆರಿಕದಲ್ಲಿ ಇದೇನೂ ದಿನಗಟ್ಟಲೆ ನಡೆಯುವ ಪ್ರಸಂಗವಲ್ಲ. ನಾನು ಕೇಳಿರುವುದೆಲ್ಲ ನಿಜವಾದರೆ ಅಲ್ಲಿ ವೈದ್ಯವೃತ್ತಿ ಧನಪಿಶಾಚದ ವಿಹಾರಕ್ಷೇತ್ರ. ಲಕ್ಷ ಡಾಲರುಗಳನ್ನು ಕೂಡಿಟ್ಟಿರುವವರು ಕೂಡ ಖಾಯಿಲೆಯೆಂದರೆ ನಡುಗುತ್ತಾರೆ. ಎರಡು ತಿಂಗಳು ಆಸ್ಪತ್ರೆಯಲ್ಲಿದ್ದರೆ ಅವರ ಆಸ್ತಿಯಲ್ಲಿ ಅರ್ಧಭಾಗ ಕರಗಿಹೋಗಬಹುದು! ಮೇಲಿನ ಮಾತಿಗೆ ವಿನಾಯಿತಿಯೆನ್ನಬಹುದಾದ ಡಾಕ್ಟರುಗಳಿಲ್ಲವೇ ಇಲ್ಲವೆಂದಲ್ಲ; ಇದ್ದಾರೆ, ಆದರೆ ಅವರು ವಿನಾಯಿತಿಗಳು ಮಾತ್ರ. ಈಗ ನಮ್ಮಲ್ಲಿ (ಭಾರತದಲ್ಲಿ) ವೈದ್ಯವೃತ್ತಿ ನಡೆಸುವವರು (ದೈವಾಂಶ ಸಂಭೂತರೆನ್ನಬಹುದಾದ ಕೆಲವರನ್ನು ವಿನಾಯಿಸಿ—ಅಂಥ ಕೆಲವರ ಸ್ನೇಹ ನನಗೆ ಲಭ್ಯವಾಗಿದೆ) ರೋಗಿಗಳ ಸಂಕಟವನ್ನು ಬಳಸಿಕೊಂಡು ಲಕ್ಷಾಧೀಶರಾಗಬೇಕೆಂದು ಸ್ಪರ್ಧೆ ನಡೆಸುತ್ತಿದ್ದಾರೆ. ಇಂಥ ಕಾಲದಲ್ಲಿ ಮೇಲೆ ಹೇಳಿದ ಪ್ರಸಂಗ ಅಮೆರಿಕದಲ್ಲಿ ನಡೆಯಿತೆಂದರೆ ಅದಕ್ಕೆ ಮೊಣಕಾಲೂರಿ ಕೃತಜ್ಞತೆ ಸಲ್ಲಿಸಬೇಕು!

**ಸೆಪ್ಟೆಂಬರ್ 24 (?)**

ಅಮೆರಿಕದಲ್ಲಿ ಇದು ಅಧ್ಯಕ್ಷ ಚುನಾವಣೆಯ ವರ್ಷ. ರಿಪಬ್ಲಿಕನ್ ಪಾರ್ಟಿಯವರಾಗಿ ಹಾಲಿ ಅಧ್ಯಕ್ಷ ಫೋರ್ಡರೂ ಡೆಮೊಕ್ರಾಟ್ ಪಾರ್ಟಿಯವರಾಗಿ ಮಿ. ಕಾರ್ಟರರೂ ಸ್ಪರ್ಧಿಗಳಾಗಿದ್ದಾರೆ. ಇವರಿಬ್ಬರಿಗೂ ಮೂರು ದಿನ ಚರ್ಚೆ ನಡೆಯಬೇಕೆಂದು ಏರ್ಪಾಡಾಗಿವೆ. ಆ ಚರ್ಚೆಯನ್ನು ಕೇಳಬೇಕೆಂದು ರಾಷ್ಟ್ರಾದ್ಯಂತ ಎಲ್ಲರಿಗೂ ಕುತೂಹಲ. ಮೊದಲ ಚರ್ಚೆ ನಿನ್ನೆ (23ನೇ ತಾರೀಖು?) ನಡೆಯಿತು. ಯಾರಿಗೆ ವೋಟು ಮಾಡಬೇಕು ಎಂದು ನಿಶ್ಚಯಿಸಲು ಈ ಚರ್ಚೆ ನೆರವಾಗಬಹುದು ಎಂದು ಅದನ್ನು ಏರ್ಪಡಿಸಿದವರ ನಿರೀಕ್ಷೆ.

ಜೇನ್ಸ್‌ವಿಲ್‌ನಲ್ಲಿ ಕೆಲವರು "ಮತದಾನವೆಲ್ಲ ಪಾರ್ಟಿಯ ಆಧಾರದ ಮೇಲೆ ನಡೆಯುತ್ತದೆ. ಚರ್ಚೆಯಿಂದ ಅಷ್ಟೇನೂ ಪರಿಣಾಮವಾಗಲಾರದು" ಎಂದುಕೊಳ್ಳುತ್ತಿದ್ದರು. ರಾಷ್ಟ್ರದ ಅಧ್ಯಕ್ಷ ಪದವಿಗೆ ಚುನಾವಣೆ ನಡೆಸುವಾಗ ಸ್ಪರ್ಧಿಗಳ ಅರ್ಹತೆಯನ್ನು ಇಂಥ ಚರ್ಚೆಯಿಂದ ನಿರ್ಧರಿಸಬಹುದೆ ಎಂಬ ಪ್ರಶ್ನೆಯನ್ನು ನಾನೂ ಹಾಕಿಕೊಂಡಿದ್ದೆ. ಚರ್ಚೆಯಲ್ಲಿ ಗೆಲ್ಲುವವನು ಒಳ್ಳೆಯ ವಾಚಾಳಿಯಿರಬಹುದು; ಎದುರಾಳಿಯ ವಾದದಲ್ಲಿರುವ ಹುಳುಕನ್ನು ಬಯಲಿಗೆಳೆಯುವ ಶಕ್ತಿಯುಳ್ಳವನಾಗಿರಬಹುದು; ಭಾವಾವೇಶದಿಂದ(ಆವೇಶ ಕೃತ್ರಿಮವಾಗಲಿ ಪ್ರಾಮಾಣಿಕವಾಗಲಿ) ಮಾತಾಡಿ ಜನರನ್ನು ಮರುಳು ಮಾಡ

ಬಹುದು; ಸವಯಸ್ಫೂರ್ತಿಯಿಂದ ಹಾಸ್ಯ ಚತುರೋಕ್ತಿಗಳನ್ನು ಪ್ರಯೋಗಿಸಿ ಎದುರಾಳಿಯ ಬಾಯಿ ಕಟ್ಟಬಹುದು. ಈ ಬಗೆಯ ಶಕ್ತಿಯಿದ್ದ ಮಾತ್ರಕ್ಕೆ ಆತ ಒಳ್ಳೆಯ ದಕ್ಷ ಅಧ್ಯಕ್ಷನಾಗುತ್ತಾನೆಂಬ ಭರವಸೆಯುಂಟೆ?

ಆದರೆ ಸ್ಪರ್ಧಿಗಳಿಬ್ಬರನ್ನೂ ತೂಗಿ ನೋಡಲು ಇರುವ ಸಾಧನ ಇದೊಂದೇ ಅಲ್ಲವಷ್ಟೆ. ಚರ್ಚೆಯನ್ನು ಕೇಳಿದವರಿಗೆ ಈ ಮನುಷ್ಯ ಎಂಥವನು ಎಂಬುದರ ಅರಿವು ಸ್ವಲ್ಪಮಟ್ಟಿಗಾದರೂ ಆಗುತ್ತದೆ. ಸ್ಪರ್ಧಿಗಳು ತಾವು ಅಧಿಕಾರಕ್ಕೆ ಬಂದರೆ ಯಾವ ಸುಧಾರಣೆಗಳನ್ನು ಮಾಡಬೇಕೆಂದಿದ್ದಾರೆ, ತಮ್ಮ ವಿದೇಶ ನೀತಿಯೇನು, ಯಾವ ಯಾವ ಕೆಲಸಕ್ಕೆ ಆದ್ಯತೆ ಕೊಡಬೇಕೆಂದಿದ್ದಾರೆ, ಮುಂತಾದ್ದನ್ನೆಲ್ಲ ವಿವರಿಸುತ್ತಾರೆ; ಆ ವಿವರಣೆ ಕೂಡಲೇ ಟೀಕೆಗೆ ಗುರಿಯಾಗುತ್ತದೆ. ಇದರಿಂದ ಮತದಾರರಿಗೆ ಪ್ರಯೋಜನವಾಗಬಹುದು.

(ನನ್ನ ಟಿಪ್ಪಣಿಗಳಲ್ಲಿ ಕಾಣದ ವಿಷಯವೊಂದು ನೆನಪಿಗೆ ಬರುತ್ತಿದೆ. ಚರ್ಚೆ ನಡೆಯುತ್ತಿದ್ದಾಗ ಮೂರು ನಾಲ್ಕು ಜನ (ಪತ್ರಿಕಾ ಪ್ರತಿನಿಧಿಗಳು?) ಸಾಕ್ಷಿಗಳಾಗಿದ್ದರು; ಅವರು ನಿರ್ದಾಕ್ಷಿಣ್ಯವಾಗಿ ಸ್ಪರ್ಧಿಗಳಿಬ್ಬರಿಗೂ ಪ್ರಶ್ನೆಮರು ಪ್ರಶ್ನೆಗಳನ್ನು ಹಾಕಿದರು ಎಂದು ನೆನಪು. ಸಾರ್ವಜನಿಕರ ಪ್ರತಿನಿಧಿಗಳೂ ಹೀಗೆ ಭಾಗವಹಿಸಿದ್ದರಿಂದ ಹೆಚ್ಚು ಪರಿಣಾಮವಾಗಿರಬೇಕು.)

ನಿನ್ನೆಯ ಚರ್ಚೆಯಲ್ಲಿ ಮೊದಮೊದಲು ಪೀಠಸ್ಥ ಅಧ್ಯಕ್ಷರ (ಫೋರ್ಡರ) ಕಡೆಗೇ ಜನಾಭಿಪ್ರಾಯ ಒಲೆಯಬಹುದೇನೊ ಎಂದುಕೊಳ್ಳಲು ಅವಕಾಶವಿತ್ತು. ಅವರು ಧೈರ್ಯದಿಂದ, ಆತ್ಮವಿಶ್ವಾಸದಿಂದ ಮಾತಾಡಿದರು. ಕಾರ್ಟರ್ ಮಹಾಶಯರು ಸ್ವಲ್ಪ ಸಭಾಕಂಪಕ್ಕೆ ಒಳಗಾಗಿದ್ದಿರಬಹುದು. ಆದರೆ ಕಾಲು ಘಂಟೆ ಕಳೆಯುವುದರೊಳಗೆ ಅವರು ತಮ್ಮ ಹಿಂಜರಿಕೆಯನ್ನು ಜಯಿಸಿದಂತೆ ತೋರಿತು.

ಚರ್ಚೆಯ ವಿವರಗಳು ನನ್ನಲ್ಲಿ ಅಷ್ಟೇನೂ ಆಸಕ್ತಿಯನ್ನು ಕೆರಳಿಸಲಿಲ್ಲ. ಇವತ್ತು ನನಗೆ ಗುರುತಿದ್ದ ಒಬ್ಬರನ್ನು ಕೇಳಿದೆ—"ಚರ್ಚೆಯಿಂದ ನಿಮ್ಮ ಮನಸ್ಸಿನ ಮೇಲೆ ಆದ ಪರಿಣಾಮವೇನು?" ಎಂದು. ಅವರು "ಮೊದಲೇ ನಾನು ಡೆಮೊಕ್ರಾಟ್ ಪಕ್ಷದ ಪ್ರತಿನಿಧಿಗೆ ವೋಟು ಕೊಡಬೇಕೆಂದು ನಿಶ್ಚಯಿಸಿದ್ದೆ. ಆ ನಿರ್ಣಯ ಬದಲಾಗಲಿಲ್ಲ" ಎಂದು ಉತ್ತರಕೊಟ್ಟರು. ವ್ಯಾಖ್ಯಾನಕಾರರೊಬ್ಬರು "ಚರ್ಚೆಯಲ್ಲಿ ಅಂಕಿ ಅಂಶಗಳ ಸುರಿಮಳೆ. ಕಾವು ಏರಲಿಲ್ಲ, ಬೆಳಕು ಹೊಳೆಯಲಿಲ್ಲ" ಎಂದರು.

## ಮರಳಿ ಭಾರತಕ್ಕೆ

ಸೆಪ್ಟೆಂಬರ್ ಕೊನೆಯ ವಾರದಲ್ಲಿ ಜೇನ್ಸ್‌ವಿಲ್‌ನಿಂದ ಹೊರಟು ಡೇಟನ್‌ನಲ್ಲಿ ಗಿರಿಜಾ ಗೋಪಾಲಸ್ವಾಮಿಯವರೊಡನೆ ಮೂರು ನಾಲ್ಕು ದಿನ ಕಳೆದೆ. ಬಹುಮಟ್ಟಿಗೆ ಗಾನಮುದ್ರಿಕೆಗಳನ್ನು ರಿಕಾರ್ಡ್ ಮಾಡಿಕೊಳ್ಳುವುದರಲ್ಲೇ ಕಾಲ ಕಳೆಯಿತು. ಮುಂದಿನ ಮಜಲು ನ್ಯೂಯಾರ್ಕ್. ಅಕ್ಟೋಬರ್ 3ನೇ ತಾರೀಖು ಅಲ್ಲಿಗೆ ಬರುತ್ತೇನೆಂದು ಆಗಲೇ ಶೇಖರಿಗೆ ಫೋನ್ ಮಾಡಿದ್ದೆ. ಅಲ್ಲಿ ಪ್ಲೇನಿಂದ ಇಳಿದು ಲೌಂಜಿನ ಕಡೆಗೆ ಹೋಗುತ್ತಿದ್ದಾಗಲೇ ಶೇಖರಿ ಎದುರುಗೊಂಡ. ಅವನ ಮಗ್ಗುಲಲ್ಲಿ....ಡಾ. ಪ್ರಭುಶಂಕರ! ಶೇಖರಿಯ ತಂದೆ ಆಸ್ಪತ್ರೆಯಲ್ಲಿದ್ದಾಗ ಅಲ್ಲಿ ಡಾಕ್ಟರಾಗಿದ್ದ ಶ್ರೀಮತಿ ಶಾಂತಿ (ಪ್ರಭುಶಂಕರರ ಪತ್ನಿ) ಅವರನ್ನು ಬಹಳ ಆದರದಿಂದ ನೋಡಿಕೊಂಡರು. ಆಗಿನಿಂದ ಎರಡು ಮನೆತನದವರಿಗೂ ಗಾಢ ಸ್ನೇಹ. ಶೇಖರಿ ಶ್ರೀದೇವಿಯವರ ಜೊತೆಗೆ ಶ್ರೀಮತಿ ಶಾಂತಿಯವರೂ ಪ್ರಭುಶಂಕರರೂ ಅಡಿಗೆಯ ಕೆಲಸದಲ್ಲೂ ಭಾಗವಹಿಸಿದರು. ಪರಿಣಾಮ ಸೊಗಸಾಗಿತ್ತು. ಆ ದಿನವೆಲ್ಲ ಮನೆಯಲ್ಲೇ ಕುಳಿತು ಹರಟೆ ಬಡಿದೆವು. ನ್ಯೂಯಾರ್ಕ್‌ನ ಅನುಭವದ ವಿಷಯ ಹೊಸದಾಗಿ ಬರೆಯುವ ಬದಲು ನನ್ನ ಪ್ರಿಯ ಮಿತ್ರರಾದ ಶ್ರೀ ಜೆ. ಆರ್. ಲಕ್ಷ್ಮಣರಾಯರಿಗೆ ಅದನ್ನು ಕುರಿತು ಬರೆದ ಪತ್ರದ ಅನುವಾದವನ್ನು—ಭಾವಾನುವಾದವನ್ನು—ಇಲ್ಲಿ ಉದ್ಧರಿಸುತ್ತೇನೆ. ಪ್ರಭುಶಂಕರರು ಈಗಾಗಲೇ ತಮ್ಮ 'ಅಮೆರಿಕದಲ್ಲಿ ನಾನು, ಶಾಂತಿ' ಎಂಬ ಪುಸ್ತಕದಲ್ಲಿ ಆ ಪತ್ರದ ಚಿಕ್ಕಣೆಯನ್ನು ಕೊಟ್ಟಿದ್ದಾರೆ. ಅವರು ನನ್ನಂತೆ ಸೋಮಾರಿಗಳಲ್ಲ. ಅವರು ಅಮೆರಿಕಕ್ಕೆ ಹೋದದ್ದು ನನ್ನ ಎರಡನೆಯ ಭೇಟಿ ಮುಗಿದ ಕಾಲಕ್ಕೆ. ಅವರು ತಮ್ಮ ಅಮೆರಿಕಾ ಪ್ರವಾಸವನ್ನು ಕುರಿತ ಪುಸ್ತಕವನ್ನು ಬರೆದು ಮುಗಿಸಿ ಅಚ್ಚುಮಾಡಿ ಪ್ರಕಟಿಸಿದ್ದು ನಾನು ಇದನ್ನು ಬರೆಯುತ್ತಿರುವ ಕಾಲಕ್ಕೆ ಒಂಬತ್ತು ತಿಂಗಳ ಹಿಂದೆ! ನಾನು ಕುಂಟಿಕೊಂಡು ಹಿಂದೆ ಬರುತ್ತಿದ್ದೇನೆ. ನನ್ನ ಪತ್ರ ನಾನು ಭಾರತಕ್ಕೆ ಬಂದ ಮೇಲೆ ದೆಹಲಿಯಿಂದ ಬರೆದದ್ದು:

ಪ್ರಿಯ ಲಕ್ಷ್ಮಣರಾಯರೇ,

ಈ ತಿಂಗಳು 3ನೇ ತಾರೀಖು ಡೇಟನ್‌ನಿಂದ ಬಂದು ನ್ಯೂಯಾರ್ಕ್ ವಾಯು ಬಂದರಿನಲ್ಲಿ ಇಳಿದೆ. ನನ್ನ ಸ್ನೇಹಿತ ಎಚ್.ಸಿ.ಕೆ. ಭಟ್ಟರ ಮಗ

ಡಾ. ಚಂದ್ರಶೇಖರರೊಡನೆ ನನ್ನನ್ನು ಸ್ವಾಗತಿಸಲು ಬಂದವರು ಯಾರಿರ ಬಹುದು, ಹೇಳಿ! ಪ್ರಭುಶಂಕರ! ಸ್ವತಃ ಪ್ರಭುಶಂಕರ. ನಮ್ಮ ಬಾಬಾಗಳು ಭಕ್ತರ ಸಹಾಯಕ್ಕಾಗಿ ಕಳಿಸುವ ಬಯಲು ಚೇತನ ವ್ಯಕ್ತಿಯಲ್ಲ, ರಕ್ತಮಾಂಸ ಗಳುಳ್ಳ ಗಟ್ಟಿಮುಟ್ಟಾದ ಪ್ರಭುಶಂಕರ!

ಏಕಕಾಲದಲ್ಲಿ ಎರಡು ಬಾಯಿಗಳಿಂದ ಉದ್ಗಾರ ಹೊರಟಿತು: "ಅಮೆರಿಕಕ್ಕೆ ಓಡಿದರೆ ನನ್ನಿಂದ ತಪ್ಪಿಸಿಕೊಳ್ಳಬಹುದೆಂದು ಭಾವಿಸಿದಿರ? ಅಯ್ಯೋ ಮರುಳೆ!" ನಾನಾಗಲಿ ಅವರಾಗಲಿ

ಸಿಕ್ಕಿದೆಯಾ ಎಲೆ ಜೀವ
ನಿನ್ನ ಕುಕ್ಕಿ ಕೊಲ್ಲದೆ ಬಿಡೆನು

ಎಂದು ಯಮದೂತ ಗೀತೆಯನ್ನು ಹಾಡಲಿಲ್ಲ—ಬಾಯಿಬಿಟ್ಟು ಹಾಡಲಿಲ್ಲ!

ಪ್ರಭುಶಂಕರರು "ನನಗೂ ನನ್ನ ಶ್ರೀಮತಿಯವರಿಗೂ ಇಲ್ಲಿಯ ಅನುಭವ ಹಿತಕರವಾಗಿದೆಯೆಂದು ನಮ್ಮ ಪ್ರಸಾರಾಂಗದ ಮಿತ್ರರಿಗೆಲ್ಲ ತಿಳಿಸಿ" ಎಂದು ಹೇಳಿದ್ದಾರೆ. ನಾನು ಮೈಸೂರಿಗೆ ಬರುವುದು ಇನ್ನೂ ನಾಲ್ಕೈದು ತಿಂಗಳು ಆಗುತ್ತೆ. ಆದ್ದರಿಂದ ಕಾಗದದಲ್ಲೇ ಅವರ ಸಂದೇಶವನ್ನು ತಿಳಿಸುತ್ತಿದ್ದೇನೆ— ಸಮಾಚಾರ ತಂಗಳಾಗಬಾರದಷ್ಟೆ.

ಅವತ್ತು ನ್ಯಾಯವಾಗಿ ನಾವೆಲ್ಲ ನ್ಯೂಯಾರ್ಕ್ ನಗರವನ್ನು ನೋಡಲು ಹೋಗಬೇಕಾಗಿತ್ತು. ಆದರೆ ಆ ನಗರ 'ನನ್ನನ್ನು ನೋಡಲು ಎಷ್ಟೊಂದು ಜನ ಬರುತ್ತಾರೆ'! ಎಂದು ಹೆಮ್ಮೆಯಿಂದ ಉಬ್ಬಿಹೋಗಿದೆ. ಕೆಲವರಾದರೂ ಅದರ ಕಡೆಗೆ ತಿರಸ್ಕಾರ ದೃಷ್ಟಿಯನ್ನು ಬೀರಿದರೆ ಅದರ ಮೈಗೊಳ್ಳೆಯದು! ಹೀಗೆಂದುಕೊಂಡು ಹಾಸಿಗೆಯಲ್ಲಿ ಉರುಳಿ ಒಂದೇ ಸಮ ಹರಟಿದೆವು. ಭಾರತ, ಮೈಸೂರು, ವಿಶ್ವವಿದ್ಯಾಲಯದಲ್ಲಿ ನಮಗೆ ಪರಿಚಿತರಾದ ವ್ಯಕ್ತಿಗಳು, ನಡೆದ ಘಟನೆಗಳು—ಎಲ್ಲವನ್ನೂ ನೆನಪಿನಿಂದ, ಹೊರಗೆಳೆದೆವು. ಮಾತೆಲ್ಲ ಒಳ್ಳೆಯದು, ಕೆಟ್ಟದ್ದು ಮೊದಲಾದ ದ್ವಂದ್ವಗಳನ್ನು ಮೀರಿದ ಗಂಭೀರವಾದ ಮಟ್ಟದಲ್ಲಿ ನಡೆಯಿತು. ನನ್ನಂಥ ಪ್ರಭುಶಂಕರರಂಥ ಲಘು ಪ್ರಕೃತಿಯ ಜನ ಗಂಭೀರವಾಗಿ ಮಾತಾಡಿದರೆಂದರೆ ನಂಬುತ್ತೀರ? ಅಂತೂ ನನಗೆ 40 ವರ್ಷಗಳ ಕೆಳಗೆ ನನ್ನ ಸಮವಯಸ್ಕರಾದ ಹಳೆಯ ಮಹಾರಾಜಾ ಕಾಲೇಜಿನ ಮಿತ್ರರ ಜೊತೆಯಲ್ಲಿ ಕಾಲ ಕಳೆದಂತೆಯೇ ಅನುಭವವಾಯಿತು, ಅಂದಿನ ಮಾತಿನಿಂದ.

ಮಾರನೆಯ ದಿನ ಬೆಳಗ್ಗೆ ಎದ್ದು ಕಣ್ಣು ತೆರೆದ ಕೂಡಲೆ ನಾನು ಕಂಡ

ದೃಶ್ಯ—ಮತ್ತೆ ಪ್ರಭುಶಂಕರ, ಉಠ್‌ಸ್ಪೈಸ್, ದಂಡೆ ಇತ್ಯಾದಿ ಕಸರತ್ತು ಮಾಡುತ್ತಿದ್ದ, ಮಹಾರಾಯ! "ನನ್ನ ಸ್ನೇಹಿತರಿಗೆಲ್ಲ—ಮುಖ್ಯವಾಗಿ ಆ ಸಂದೇಹಪ್ರಕೃತಿಯ ಲಕ್ಷ್ಮಣರಾಯರಿಗೆ—ಹೇಳಿ, ನಾನು ವ್ಯಾಯಾಮ ಮಾಡುತ್ತಿದ್ದೇನೆಂದು" ಎಂದು ಬೇಡಿಕೆ ಸಲ್ಲಿಸಿದರು. ಅವರು ನಿಜವಾಗಿಯೂ ವ್ಯಾಯಾಮ ಮಾಡುತ್ತಿದ್ದರು; ಇದು ವದಂತಿ ಮಾತ್ರವಲ್ಲ. ನಿಮ್ಮಂಥ ಕುಹಕ ಬುದ್ಧಿಯ ಜನ 'ಅದು ಪ್ರದರ್ಶನಕ್ಕಾಗಿ ಮಾಡಿದ್ದು' ಎನ್ನುತ್ತೀರೇನೊ. ನಂಬ ದಿದ್ದರೆ ಬಿಡಿ. ಪ್ರದರ್ಶನಕ್ಕಲ್ಲದೆ ಆತ್ಮಸಂತೋಷಕ್ಕಾಗಿ ವ್ಯಾಯಾಮಮಾಡುವ ಜನರನ್ನು ಎಲ್ಲಾದರೂ ಕಂಡಿದ್ದೀರ?

ಅವತ್ತು ಪು. ತಿ. ನರಸಿಂಹಾಚಾರ್ಯರ ಮಗಳನ್ನು ನೋಡಿಕೊಂಡು ಬರೋಣವೆಂದು ಫಿಲಡೆಲ್ಫಿಯದ ಹತ್ತಿರ ಇರುವ ಚೆರಿಹಿಲ್‌ಗೆ ಹೋಗಿದ್ದೆವು. (ಅಲ್ಲಿಗೆ ಶ್ರೀ ಎಲ್. ಗುಂಡಪ್ಪನವರ ಮಗಳು ಮತ್ತು ಅವರ ಪತಿ ಬಂದರು—ನಾವು ಅವರಿದ್ದ ಸ್ಥಳಕ್ಕೆ ಹೋಗುವಷ್ಟು ಪುರಸತ್ತಿರಲಿಲ್ಲವಾದ್ದರಿಂದ). ಫಿಲಡೆಲ್ಫಿಯಕ್ಕೂ ಹೋಗಿ ಜಗತ್ಪ್ರಸಿದ್ಧವಾದ 'ಸ್ವಾತಂತ್ರ್ಯ ಘಂಟೆ' (Liberty Bell)ಯನ್ನು ನೋಡಿಕೊಂಡು ಬಂದೆವು. ಘಂಟೆ ಆಕಳಿಸು ತ್ತದೆಯೋ ಎಂಬಂತೆ ಭಾರಿ ಬಿರುಕುಬಿಟ್ಟಿದೆ. ಆ ಬಿರುಕು ಇಪ್ಪತ್ತನೆಯ ಶತಮಾನದಲ್ಲಿ ನಮಗೆ ದೊರೆತಿರುವ ಸ್ವಾತಂತ್ರ್ಯದ ಸಂಕೇತವಿರಲಾರದು!

ಮೂರನೆಯ ದಿನ ಸಂಜೆ ಶ್ರೀದೇವಿ ಚಂದ್ರಶೇಖರರು ಶಾಂತಿ ಪ್ರಭು ಶಂಕರರು, ನಾಲ್ಕು ಜನವೂ ವಾಯುಬಂದರಿಗೆ ಬಂದು ನನ್ನನ್ನು ಭಾರತಕ್ಕೆ ಸಾಗಹಾಕಿದರು. ಒಂದು ಪ್ಯಾಕೆಟ್ ಚಾಕೊಲೆಟ್ಟನ್ನು ಲಂಚವಾಗಿ ಕೊಟ್ಟು—ನನಗೆ ಈಗ ದ್ವಿತೀಯ ಶೈಶವವಷ್ಟೆ!

* * *

ಡೆಲ್ಲಿಗೆ ತಲಪಿದ್ದು ಬೆಳಗಿನ ಜಾವ ಮೂರು ಘಂಟೆಗೆ ತೆರಿಗೆಯ ಕೌಂಟ ರಿನ ಬಳಿ ಕ್ಯೂನಲ್ಲಿ ನನ್ನ ಮುಂದಿದ್ದವನೊಬ್ಬ ಸುಂಕಕ್ಕೊಳಪಡುವ ಏನೇನೋ ಎಲೆಕ್ಟ್ರಾನಿಕ್ ಸಾಮಾನುಗಳನ್ನು ತಂದಿದ್ದ. ಅವನ ರಗಳೆ ಮುಗಿದು, ನನ್ನ ಸರದಿ ಬಂದು, ನಾನು ಹೊರಕ್ಕೆ ಹೊರಡುವ ಹೊತ್ತಿಗೆ ನಾಲ್ಕು ಘಂಟೆ ಯಾಯಿತು. ಸುಬ್ಬರಾಮು ಕಾಯುತ್ತಿದ್ದ.

ಮನೆಗೆ ಹೋದೊಡನೆ ಕೋಟು, ಟೈ, ಷರಾಯಿ, ಬೂಟ್ಸ್ ಎಲ್ಲವನ್ನೂ ಕಿತ್ತೊಗೆದು "ಇನ್ನು ಎರಡುಮೂರುವರ್ಷ ನನ್ನ ಕಣ್ಣಿಗೆ ಬಿದ್ದೀರಿ, ಜೋಕೆ" ಎಂದು ಅವಕ್ಕೆ ಎಚ್ಚರಿಕೆ ಕೊಟ್ಟು, ಲುಂಗಿ ಸುತ್ತಿಕೊಂಡು ಹಾಯಾಗಿ